ಸಂಚಿಕೆ ೭ ಸಂಪುಟ ೩೪

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಏ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಜುಲೈ ೧೯೬೦.

ಓಂ ನಮಃ ಶಿವಾಯ

# ವಿ ಷ ಯಾ ನು ಕ್ರ ಮ ಣಿ ಕೆ


೧. ಪ್ರತಿಯೊಬ್ಬ ಮಾನವನ ಕಲ್ಯಾಣವೇ ಈ ನಮ್ಮ ಬಸವಕಲ್ಯಾಣ. ೨೧೭
—ಕಾವ್ಯಪ್ರೇಮಿ, ಮಲ್ಲಿಕಾಪುರದ ಶ್ರೀ ಅಂಬಣ್ಣ ರಾಯಚೂರ.

೨. ಭಗವಾನ್ ಬಸವೇಶ್ವರ ಸ್ತವನಂ ೨೨೬
— ಶ್ರೀ ರೇವಮಾಸುತ ನಾಗರಹಾಳು.

೩. ಹಿತವಚನಗಳು .... ೨೨೭
— ಶ್ರೀ ವೇ. ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ, ರಾಮಪೂರ.

೪. ಮಾಚಿದೇವರ ಸಾಹಿತ್ಯ .... .... ೨೩೪
— ಶ್ರೀ ಎನ್. ಎಮ್ ಬಸವರಾಜಯ್ಯ ನಾಗರಹಾಳು.

೫. ಆಧ್ಯಾತ್ಮ ಅನ್ವೇಷಣೆ .... ೨೩೬
—ಶ್ರೀ ನಾ. ಮ. ಸಿದ್ಧರಾಮಯ್ಯ ಬಿ. ಎಸ್ ಸಿ. (ಸಿ. ಬಿ. ಝೊಡ್ )

ದಾರಿಗಾಣದ ಜನೆಯು ಬಸವೇಶ್ವರನ ಆದರ್ಶ ಅನುಸರಿಸಲಿ. ೨೩೯
—ಶ್ರೀ ಮಹಂತೇಶ-ಹೊನವಾಡ, ಗಜೇಂದ್ರಗಡ.

ಮ್ಮವ್ವೆ ಅಥವಾ ಬಿಜ್ಜ ಮಹಾದೇವಿ (ಏಕಾಂಕ ನಾಟಕ) ೨೪೪
-ಶ್ರೀ ನಾ. ಮ. ಬಸವರಾಜ ನಾಗರಹಾಳು, ಮು. ಶಿರಗುಪ್ಪ.

ಠಾಧಿಪತಿಗಳು ಒಂದಾಗಲಿ. ೨೫೧
ಶ್ರೀ ಸದಾಶಿವ ಬಡಿಗಣ್ಣವರ, ಗದಗ.

ನೇ ಶತಮಾನದ ವೀರಶೈವ. .... .... ೨೫೨
ಶ್ರೀ ಜಿ. ಎನ್. ಭಸ್ಮಾಂಗದೇವರು, ಎಲ್. ಈ. ಈ. ಭಸ್ಮಾಂಗಿಮಠ

ಗೀತೆ (ಪದ್ಯ) ೨೫೪
ಪಧಾನ ಪತ್ರಿಕೆ ಸಂಪಾದಕರಿಂದ.

ಹಾಸಿಮಾರ್ಯರ ಕಥೆ. ....
ಾದಕರಿಂದ.

ಕಳದೇ ಪರಿಪೂರ್ಣ ಯೋಗ .... ೫೬
ವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.


ಥಿರಿ ! ——————— ಚಂದಾದಾರರಾಗಿ



# ಪ್ರತಿಯೊಬ್ಬ ಮಾನವನ ಕಲ್ಯಾಣವೇ ಈ ನಮ್ಮ ಬಸವ ಕಲ್ಯಾಣ.

(ಲೇಖಕ— ಕಾವ್ಯಪ್ರೇಮಿ ಮಲ್ಲಿಕಾಪುರದ ಅಂಬಣ್ಣ ರಾಯಚೂರು.)

---

ಬಸವ ಕಲ್ಯಾಣದ ವೈಭವವನ್ನು ಪ್ರಭುದೇವರು ಸೊನ್ನಲಾಪುರದ ಶಿದ್ಧರಾಮಯ್ಯಗಳಿಗೆ ತೋರಿಸಿದ ಪ್ರಸ್ತಾಪದ ವಚನ.

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಗೆ । ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಕಾಶ, । ಆ ಬೆಳಗಿನೊಳಗೊಪ್ಪುತಿರ್ದುದಯ್ಯಾ ಸಂಖ್ಯಾತ ಭಕ್ತಮಹಾಗಣಂಗಳು, । ಶಿವಭಕ್ತರಿಲ್ಲದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೋ, ಶಿವಭಕ್ತರಿರ್ದದೇಶ ಪಾವನವೆಂಬುದು ಹುಸಿಯೇ, ಗುಂಡೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆನು ಕಾಣಾ ಶಿದ್ಧರಾಮಯ್ಯಾ ॥೧॥

(ನಿರಂಜನ, ಪ್ರಭುದೇವರು)

ಮೇಲಣ ವಚನವೇ ಈ ಪ್ರಸ್ತಾವನೆಗೆ ಮೂಲ ಕಾರಣವಾಗಿದೆ. ಯಾವ ಸಾಕ್ಷಾತ ನಿರಂಜನ ಪ್ರಭುದೇವರು, ಸೊನ್ನಲಾಪುರದ ಶಿದ್ಧರಾಮಯ್ಯ ದೇವರನ್ನು ವಡಗೂಡಿ ಬಸವ ಕಲ್ಯಾಣಕ್ಕೆ ದಯಮಾಡಿಸಿದಾಗ ಅಂದಿನ ವೈಭವವನ್ನು ಶಿದ್ದರಾಮಯ್ಯಗಳಿಗೆ ತೋರಿಸಿ, ಅನೇಕ ಶರಣರನ್ನು ಶ್ಲಾಘಿಸಿ, ತಮ್ಮ ಗುಹೇಶ್ವರ ಲಿಂಗದಲ್ಲಿ ಪರಮಾರಾಧ್ಯ ಸಂಗನಬಸವಣ್ಣನನ್ನು ಕಂಡು ಬದುಕಿದೆನುಕಾಣಾ ಶಿದ್ಧರಾಮಯ್ಯಾ ಎಂದು ಒಳ್ಳೇ ಭಾವನೆಯ ಪರವಶತೆಯಲ್ಲಿ ಅವರ ಹೃದಯಾಂತರಾಳದಿಂದ ಹೊರಟಿದ್ದ ಯಾವ ಕಲ್ಯಾಣದ ಶಿವಭಕುತರ ಶಿರಿಯ ಸೌಭಾಗ್ಯವು ಇಂದಿನ ಕಲ್ಯಾಣದಲ್ಲಿ ಮಾಯವಾಗಿರುವಂತೆ ಕಂಡರೂ ಅದು ತನ್ನ ಸ್ವಪ್ರಕಾಶದ ವೈಭವವೆಲ್ಲವನ್ನೂ ತನ್ನಲ್ಲಿಯೇ ಅಡಗಿಸಿಕೊಂಡು ಗುಪ್ತರೂಪವಾಗಿ ಬೆಳಗುತ್ತಿದೆ ಎಂಬತೆ ಭಾಸವಾಗುತ್ತಿದೆ. ಈ ರೀತಿಯಾಗಿ ತನ್ನೊಳಗೆ ತಾ ಬೆಳಗುವ ಬಸವ ಕಲ್ಯಾಣದ ಪುಣ್ಯಕ್ಷೇತ್ರವನ್ನು ಕಣ್ಣಾರೆ ನೋಡುವ ಭಾಗ್ಯವನ್ನು ವದಗಿಸಿ ಕೊಟ್ಟ ನನ್ನ ಪರಮ ಮಿತ್ರರಾದ ಶ್ರೀಮಾನ್ ಷಣ್ಮುಖಪ್ಪ ವಕೀಲ ನೀಲಕಂಠ ಹಾಗೂ ಅಲ್ಲಿಯ ಪ್ರಸಿದ್ಧ ವ್ಯಾಪಾರಿಗಳಾದ ಕಲ್ಲಪ್ಪಾ ಪಾವಟೆಯವರು ಮತ್ತು ರಾಮಣ್ಣಾ ಧಾವಲಜೆ ಇವರ ಸವಿ ನೆನಹಿನಿಂದ ಹೊರಬಿದ್ದ ಹಾಗೂ ನನ್ನ ಹೃದಯದ ಬಾನುಲಿಯಾಗಿ ಹೆಂದ "ಪ್ರತಿಯೊಬ್ಬ ಮಾನವನ ಕಲ್ಯಾಣವೇ ಈ ನಮ್ಮ ಬಸವ ಕಲ್ಯಾಣ." ಇದನ್ನು ಸಾರ್ಥಕ ಮಾಡುವ ಭಾರವೂ ಕೂಡಾ ತಮ್ಮನ್ನೇ ಕೂಡಿದೆ.

ಅಂದಿನ ಕಲ್ಯಾಣ ಮತ್ತು ಇಂದಿನ ಕಲ್ಯಾಣ ಇವುಗಳ ಸಾರಾಸಾರ ವಿಚಾರವೇ ಈ ಲೇಖನದ ಮೂಲವಾಗಿದೆ.

ಇಲ್ಲಿಗೆ ೧೨ ನೇ ಶತಮಾನದಲ್ಲಿ ಅಂದರೆ ಸುಮಾರು ೮೦೦ ವರ್ಷಗಳ ಹಿಂದೆ ಬಸವಕಲ್ಯಾಣದಲ್ಲಿ ಬಸವಾದಿ ಪ್ರಮಥರು ತಮ್ಮ ಮಹಿಮಾ ಪ್ರಕಾಶದಿಂದ ಅನಂತಾನಂತ ಶಿವಶರಣ ಶರಣೆಯರಿಂದೊಡಗೂಡಿ ವೀರಶೈವ ಮತವನ್ನು ಉದ್ಧರಿಸಿ ವೀರಶೈವ ಮತೋದ್ಧಾರಕರೆಂಬ ಬಿರುದನ್ನು ಸಂಪಾದಿಸಿರುವರೆಂಬುದು ಸರ್ವರಿಗೂ ವಿದಿತವಾದ ವಿಷಯವಾಗಿದೆ. ಶಿವಭಕ್ತಿಯೇ ಈ ಶಿವಮತದ ಅಡಿಗಲ್ಲು. ಶಿವಭಕ್ತರೆಲ್ಲರೂ ಸಮಾನರು. ಅವರಲ್ಲಿ ಜಾತಿ ಕುಲಕ್ಕೆ ಉಚ್ಚ ನೀಚರೆಂಬ ಭೇದ ಭಾವನೆ ಇಲ್ಲಾ ಎಂಬುದು ಈ ಶಿವಮತದ ಪ್ರಚಾರದ ಮುಖ್ಯ ತತ್ವ; ಮತ್ತು ಆಚರಣೆ. ಸ್ವಯಂ ಬಸವೇಶ್ವರನ ಮುಖದಿಂದ ಆಯಾ ಸಂದರ್ಭಗಳಲ್ಲಿ ಹೊರ ಹೊಮ್ಮಿದ ಅನಂತ

ಸಂಕಲಿತವಾದ ವಚನಗಳನ್ನು ಪರೀಕ್ಷಿಸಿದರೆ, ವೀರಶೈವ ಧರ್ಮದ ಮೂಲ ಸ್ಫೂರ್ತಿಯ ವಿಚಾರವಾಗಿ ನಮಗೆ ಅನಂತ ಬೆಳಕು ದೊರೆಯುತ್ತದೆ. ಆದಿ ಅನಾದಿಯಿಂದಲೂ ತನಗಾಗಿ ಪಟ್ಟಿಗಟ್ಟಿದ ಈ ಮಹಾ ಕಾರ್ಯವನ್ನು ಕೈಕೊಂಡ ಬಸವಣ್ಣನವರಿಗೆ ಸಹಾಯ ಮಾಡುವ ಉದ್ದೇಶಕ್ಕಾಗಿ ಅನಂತ ಶಿವ ಶರಣರು ಅಲ್ಲಲ್ಲಿ ಉದ್ಭವಿಸಿ ಕಲ್ಯಾಣಕ್ಕೆ ವಿಜಯಂಗೈಸಿ ಸದಾಶಿವನ ಸಧರ್ಮ ಸ್ವರೂಪರಾದ ಬಸವರಸರಿಗೆ ಅವಯವ ಸ್ವರೂಪವಾಗಿ ಸಹಾಯವನ್ನು ಸಲ್ಲಿಸಿ ಯಾವ ಕಲ್ಯಾಣವನ್ನು ಮಾನವ ಕಲ್ಯಾಣದ ಮಂಗಳವಾಡವನ್ನಾಗಿ ಮಾಡಿ ವೀರಶೈವ ಮತಾಧಿಕ್ಯದ ಯಶೋ ದುಂದುಭಿಯ ನಾದವು ದೇಶ ದೇಶಗಳಲ್ಲೆಲ್ಲಾ ಪಸರಿಸುವ ಹಾಗೆ ಮಾಡಿದದು ಪುರಾಣ ಪ್ರಸಿದ್ಧವಾದ ಮಾತಾಗಿದೆ. ಹಾಗೂ ಬಸವಾದಿ ಪ್ರಮಥರು ಈ ಪವಿತ್ರವಾದ ಹೊಸ ಮತದ ಪ್ರಚಾರ ಕಾರ್ಯವನ್ನು ಯಾವ ರೀತಿಯಾಗಿ ಜಗತ್ತಿಗೆ ಬೋಧಿಸಿದರು, ತಾಮಸವೆಂಬ ಕತ್ತಲೆಯ ಕಾವಳದಲ್ಲಿ ಅಲೆದಾಡುತ್ತಲಿರ್ದ ಮರ್ತ್ಯದ ಮಾನವರನ್ನು ಅದು ಹೇಗೆ ಎತ್ತಿ ಹಿಡಿದರು, ಯಾವ ಸತ್ಯ ಸ್ವರೂಪವಾದ ಚಿದ್ಬೆಳಕಿನ ಆವರಣದಲ್ಲಿ ಅದು ಹೇಗೆ ತಂದು ನಿಲ್ಲಿಸಿದರು ಎಂಬುವ ಬಗ್ಗೆ ಅವರು ಅನುಭವದಿಂದ ಕಂಡು ಹಿಡಿದ ಮತ್ತು ಪ್ರತಿ ನಿತ್ಯವೂ ಆಚರಣೆಯಲ್ಲಿ ತಂದಂಥಾ ಅನೇಕಾನೇಕ ಶಿವಶರಣರ ಅನುಭವಾಮೃತದ ಸುಧೆಯ ಸೋನೆಯನ್ನು ಸುರಿಸುವ ಮಧುರವಾದ ಸಂದೇಶಗಳಿಂದ ತುಂಬಿ ತುಳುಕುವ ಆಳವಾದ ಅವರ ವಚನ ಗ್ರಂಥಗಳೇ ನಮ್ಮೆಲ್ಲರಿಗೂ ಸಾಕ್ಷಿಭೂತವಾಗಿ ಸಾರಿ ಸಾರಿ ಹೇಳುತ್ತಲಿವೆ. ಇಂಥಾ ಮಹತ್ ಪ್ರಕಾಶವುಳ್ಳ ಎರಡೆಂಬತ್ತು ಕೋಟಿ ವಚನ ರತ್ನಗಳ ರಾಶಿಯ ಮೇಲೆ ಶಿವಾನುಭವ ಮಂಟಪದ ಮೂಲ ಪೀಠವು ಅನಂತ ಕೋಟಿ ಪ್ರಕಾಶ ಮಾನವಾಗಿ ಥಳಥಳಿಸಿ ಬೆಳಗುತ್ತಿತ್ತು. ಅದೇ ಶೂನ್ಯ ಸಿಂಹಾಸನವು ಈ ಸಧರ್ಮ ಸಿಂಹಾಸನದ ಮೂಲಪೀಠಾಚಾರ್ಯರೇ ಸಾಕ್ಷಾತ ನಿರಂಜನ ಪರಾಪರ ವಸ್ತು ಸ್ವರೂಪರಾದ ಅಲ್ಲಮ ಪ್ರಭುದೇವರು. ಈ ಮಹನಿಯರ ಸಮ್ಮುಖದಲ್ಲಿಯೇ ಅನೇಕ ಶಿವಶರಣರ ಶಿವಶರಣೆಯರ ಅನುಭವ ಪೂರಿತವಾದ ವಚನಗಳು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲನೆ ಹೊಂದಿ ನವ ಚೈತನ್ಯ ಭರಿತವಾಗಿ ವಚನ ಗ್ರಂಥಗಳ ರೂಪದಿಂದ ಜಗತ್ತಿನಲ್ಲೆಲ್ಲಾ ಪ್ರಚಾರ ಪೂರ್ವಕವಾಗಿ ವ್ಯವಹರಿಸಲ್ಪಡುತ್ತಿದ್ದವು. ಇಂಥಾ ಮಹಾನ್ ಮಹಾನ್ ವ್ಯಕ್ತಿಗಳಿಗೆ ಆಶ್ರಯ ಸ್ಥಾನವಾದ ಕಲ್ಯಾಣವಿಂದು ಕನವರಿಕೆಯು ಗೂಡಾಗಿದೆ.

ಯಾವ ಸಚರಾಚರ ಸಂಜೀವನ ಸ್ವರೂಪನಾದ ಶಿವನನ್ನು ತಮ್ಮ ಕಾಯವೆಂಬ ಕೈಲಾಸದಲ್ಲಿರಿಸಿಕೊಂಡು ಕಾಯಕದ ಕರ್ಮಭೂಮಿಯಲ್ಲಿ ಆಡಿಸಿ ನಗಿಸಿ ಅಕ್ಕರೆಯಿಂದ ಆಲಂಗಿಸಿಕೊಂಡ ಅನೇಕ ಪವ್ಮಾಡ ಪುರುಷರಿಂದೊಡಗೂಡಿದ ಕಲ್ಯಾಣವಿಂದು ಕೇಡಿಗರ ಬೀಡಾಗಿದೆ. ಯಾವ ಕನ್ನಡಿಗರ ಗಂಡುಮೆಟ್ಟಿನ ಸ್ಥಾನವಾದ ಕಲ್ಯಾಣವಿಂದು ಕಿರುಕುಳ ಕನ್ನಡದ ಕಾಡಾಗಿದೆ. ಅಂದಿನ ಶಿವಶರಣರ ಪರಿಪೂರ್ಣ ಶಕ್ತಿಯಿಂದ ಕೂಡಿ ಇಡೀ ವಿಶ್ವದ ಜನಜೀವನದ ಪಾವನತೆಯ ಪರಿಪಕ್ವವಾದ ಅಮರ ಫಲಗಳನ್ನು ನೀಡಲು ಕೈಬೀಸಿ ಕರೆಯುವ ಪ್ರಸಿದ್ಧವಾದ ಕಟ್ಟಡಗಳಿಂದು ತಮ್ಮ ಅವಯವ ಸ್ವರೂಪವಾದ ಶಕ್ತಿಯಲ್ಲವನ್ನೂ ಕಳೆದುಕೊಂಡು ಈಗಿನ ನಿರ್ವೀರ್ಯವಾದ ವೀರಶೈವ ಸಮಾಜದ ದುರ್ದೆಶೆಯನ್ನು ನೋಡಲಾರದೆ ಭೂಮಿಯಲ್ಲಿ ವಿತ್ತುಕೊಂಡಿವೆಯೊ ಏನೋ ಎನ್ನುವ ಹಾಗೆ ಅಲ್ಲಲ್ಲಿ ಅಳಿದುಳಿದ ಪುರಾತನ ಗವಿಗಳು ಮನೆಗಳು ಮಠಗಳು ಮಂದಿರಗಳು ನೋಡುವವರ ದೃಷ್ಟಿಯಲ್ಲಿ ದುಃಖಾಸ್ಪದವಾಗಿ ಕಂಡರೂ ಒಂದು ರೀತಿಯ ಆನಂದವಾಗುತ್ತದೆ. ಯಾವ ಮಹಿಮಾಪುರುಷರ ಪಾದಸ್ಪರುಷದಿಂದ ಪುನೀತವಾದ ಸ್ಥಾನವು ಮನದ ಮಂದಬುದ್ಧಿಯಲ್ಲವನ್ನೂ ಕಳೆದು ಜಾಗ್ರತಾವಸ್ಥೆಯಲ್ಲಿ ತಂದು ಮನಕ್ಲೇಶಧ ಪರಿತಾಪಗಳೆಲ್ಲವನ್ನೂ ಮರೆಯಿಸಿ ಬೇರೊಂದುತರದ ನವಸೃಷ್ಟಿಯೇ ನಿರ್ಮಾಣವಾಗುತ್ತಿದೆ. ಇನ್ನೂ ಹಲಕೆಲವು ಶಿವಶರಣರಿಂದ ಪೋಷಿಸಲ್ಪಟ್ಟ ಶಿವಾನುಭವದ ಮಹಾಮನೆಗಳು ಪ್ರೇಕ್ಷಕರಿಲ್ಲದ ಹಾಳು ಗವಿಗಳಾಗಿ ತಮ್ಮ ವಡೆಯರಿಲ್ಲದೆ ಇನ್ನೊಬ್ಬರಗೊಡವೆ ನಮಗೇಕೆಂದು ಪುಣ್ಯಪ್ರಕಾಶದಾವರಣದಲ್ಲಿ ಬೆಳಗಿಬಂದ ನಾವು ಈ ಪ್ರಕಾಶವನ್ನು ಕಾಣದ ಗೂಗೆಗಳಂತಿರುವ ಈ ದುರ್ಭಾಗ್ಯ ಸಮಾಜದ ಮಾನವರ ಕಣ್ಣಿಗೆ ಕಾಣಿಸುವುದೇ ಬೇಡವೆಂದು ಕಂದಿಕುಂದಿದಂಥವುಗಳಾಗಿ ಶಾಂತಿಯ ಮೂಲ ಸ್ವರೂಪಳಾದ ಭೂದೇವಿಯ ಪವಿತ್ರ ಗರ್ಭವೇ ವಡಲುರಿದ ನಮ್ಮಗಳ ಬೀಡೆಂದು ಅಲ್ಲಲ್ಲಿ ಭೂಮಿಯಲ್ಲಿ ಮುಚ್ಚಲ್ಪಟ್ಟು ಬಯಲಾಗಿವೆಯೋ ಏನೋ ಎನ್ನುವ ಹಾಗೆ ಪ್ರೇಕ್ಷಕರ ಭಾವನೆಯಲ್ಲಿ ಈ ರೀತಿ ಪರಿಣಾಮಗಳನ್ನುಂಟು ಮಾಡುತ್ತಲಿವೆ. ಇಷ್ಟೆಲ್ಲ ದೃಶ್ಯಗಳನ್ನು ಆ ಹಿಂದಿನ ದೃಷ್ಟಿಯನ್ನಿಟ್ಟು ನೋಡಿದರೆ ಯಾವ ವೀರಶೈವನ ಹೃದಯವೂ ಜರ್ಝರಿತವಾಗದೆ ಇರಲಾರದು. ಆಗಿನ ಕಲ್ಯಾಣದಲ್ಲಿ ಬಸವಾದಿ ಪ್ರಮಥರೇ ಮೊದಲ್ಗೊಂಡು ಪ್ರತಿಯೊಬ್ಬ ಶಿವಶರಣರು ತಮ್ಮ ಕಾಯದ ಕಷ್ಟವನ್ನು ಸಲ್ಲಿಸಿ ಪ್ರತಿಯೊಬ್ಬ ಮಾನವನ ಕಲ್ಯಾಣವೇ ಈ ನಮ್ಮ ಕಲ್ಯಾಣವೆಂದು

ಈ ಕಲ್ಯಾಣಕ್ಕಾಗಿ ದುಡಿಯುವ ನಮ್ಮ ಕಾಯವೂ ಕೈಲಾಸ ಮತ್ತು ಕಾಯಕವೂ ಕೈಲಾಸವೆಂದು ಈ ಕೈಲಾಸಕ್ಕೆ ಬಲವಾದ ಕೋಟೆಯೇ ನಮ್ಮ ವೀರಶೈವ ಧರ್ಮವೆಂದು ನಮ್ಮೆಲ್ಲರಲ್ಲಿ ಅಡಕವಾದ ಆ ಪರಾಪರ ವಸ್ತುವೇ ಈ ಕೋಟೆಯ ಮೂಲ ಬುನಾದಿಯೆಂದು ಆ ವಸ್ತುವಿನ ಅನಂತ ಪ್ರಕಾಶದಿಂದ ಥಳಥಳಿಸಿ ಹೊಳೆಯುವ ಚಿದ್ಬೆಳಗೇ ಹೊನ್ನಕಲಶನು ಈ ರೀತಿಯಿಂದ ನಿರ್ಮಿಸಲ್ಪಟ್ಟ ಕೋಟೆಗೆ ಶಿವಾನುಭವ ಮಂಟಪವೇ ಆಧಾರವೆಂದು ಅದಕ್ಕೆ ಶೂನ್ಯ ಶಿಂಹಾಸನವೇ ನಿದರ್ಶನವೆಂದು, ಆ ನಿದರ್ಶನಕ್ಕೆ ನಿರಂಜನ ಪ್ರಭುದೇವರೇ ಸಾಕ್ಷಿಯೆಂದು ತನ್ನ ಪ್ರಭಾವಪೂರ್ಣವಾದ ಪ್ರಕಾಶದ ಕಿರಣಗಳಿಂದ ಕೂಡಿ ಕನ್ಯಾಕುಮಾರಿಯಿಂದ ಹಿಡಿದು ಕಾಶ್ಮೀರದ ವರೆಗೂ ಕೈಬೀಸಿ ಕರೆಯುವ ಆಗಿನ ಕಲ್ಯಾಣದ ಕೋಟೆಯೆತ್ತ, ಈಗಿನ ಕಲ್ಯಾಣದ ಕೋಟೆಯತ್ತ? ಆಗಿನ ವೀರಶೈವ ಧರ್ಮವೆತ್ತ, ಈಗಿನ ವೀರಶೈವ ಧರ್ಮವೆತ್ತ? ಈಗಿನ ವೀರಶೈವ ಧರ್ಮವನ್ನು ಆ ಹಿಂದಿನ ದೃಷ್ಟಿಯನ್ನಿಟ್ಟು ನೋಡಿದರೆ ಅದರ ಬುನಾದಿಯ ಕಲ್ಲುಗಳೆಲ್ಲವೂ ಒಂದಕ್ಕೊಂದು ಸಂಬಂಧವಿಲ್ಲದೆ ಎತ್ತೆತ್ತಲೋ! ಬಿದ್ದು ಅನೇಕ ಅನೇಕ ಹೋಳುಗಳಾಗಿ ಸಂಗಡಗಳ ರೂಪಗಳನ್ನು ತಾಳಿ ಪಕ್ಷಾಂತರೇಕಗಳಿಂದ ಕಾಣಲ್ಪಡುವ ಆ ಕೋಟೆಯ ಸ್ವರೂಪವನ್ನು ಪರಿಚಯ ಮಾಡಿಕೊಳ್ಳುವುದೇ ಕಷ್ಟವಾಗಿದೆ. ಯಾಕಂದರೆ ವೀರಶೈವ ಧರ್ಮದ ಬಳಕೆಯಲ್ಲಿ ಬಂದ ಅನೇಕ ಕೈಕಸಬುಕಾಯಕಗಳೆಲ್ಲವುಗಳು ಒಂದೇ ಒಂದು ಕೋಟೆಯ ಬುನಾದಿ ಕಲ್ಲುಗಳಾಗಿ ಮಾರ್ಪಟ್ಟಿದ್ದವು. ಅವುಗಳೆಲ್ಲವನ್ನು ಈಗ ಕುಲಗಳನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಎಂಥಾ ಅನ್ಯಾಯ ಕಾಯಕವೇ ಕುಲವಾದ ಮೇಲೆ ನಾವು ವೀರಶೈವರೂ ಎಂಬ ಭಾವನೆಯೇ ಉಳಿಯದಂತಾಯಿತು ಧರ್ಮ ಮತ್ತು ಕುಲ ಒಂದೇ ಒಂದಾದ ಇವೆರಡರಲ್ಲಿ ಭಿನ್ನಭೇದವನ್ನು ಮಾಡಿದಂತಾಗಲಿಲ್ಲವೇ ಕಾಯಕವೇ ಕುಲವಾದ ಪಕ್ಷದಲ್ಲಿ ಅದೇ ಶಿವಮತಸ್ಥಾಪಕರಾದ ಬಸವ ಮಹಾನುಭಾವರು ತಮ್ಮ ವಚನಗಳಲ್ಲಿ ಆವಕುಲದಲ್ಲಿ ಹುಟ್ಟಿದರೇನು ಏನನೋದಿ ಏನ ಕೇಳಿ ಏನಫಲ ಲಿಂಗಸ್ಥಲವನರಿಪ ಲಿಂಗಾಂಗಿಯೇ ಕುಲಜನು ಎಂದು ಅದೇಕೆ ಹೇಳುತ್ತಿದ್ದರು ಇದು ಅಲ್ಲದೆ ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಮ್ಮರಾಣೀವಾಸದಾಣೆ ಎಂದು ಘಂಟಾಘೋಷವಾಗಿ ಅದೇಕೆ ಸಾರಿದರು? ಕ್ಕಾಯಕವು ಕುಲಕ್ಕೆ ಸಮ್ಮಂಧವಿಲ್ಲವೆಂಬುದಕ್ಕಾಗಿಯಲ್ಲವೇ ಇನ್ನು ಕಾಯಕಗಳಲ್ಲಿಯೇ ಇದು ಮೇಲು, ಇದು ಕೀಳು ಎಂದು ನೀವು ಭಾವಿಸಿ ಕಾಯಕ-

ಗಳಿಂದಲೇ ಕುಲಗಳನ್ನು ಅಳೆಯುವದಾದರೆ ಇದೇ ವಿಷಯವನ್ನು ಮಹಾತ್ಮಾ ಬಸವಣ್ಣನವರು ತಮ್ಮ ಅಮೃತವಾಣಿಯಿಂದ ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿಯಾದರೆಯೂ ನಿಮ್ಮ ನಿಲು ಹಿಂಗೆ ನಿಲುವೆನಲ್ಲದೆ ಎನ್ನೊಡಲವಸರಕ್ಕೆ ಮಡದಿಮಕ್ಕಳಿಗೆಂದು ಕುದಿದೆನಾದೊಡೆ ನೀನಂದೇ ಮೂಗ ಕೊಯ್ಯಿ ನಿನ್ನಾಣೆ ತಲೆದಂಡ ತಲೆದಂಡ ಎಂದು ಬಹು ಕಠೋರವಾಗಿ ನುಡಿದಿದ್ದಾರೆ. ಅದೇಕೆ ನುಡಿದರು? ಇಂಥ ವೀರಶೈವ ಧರ್ಮದ ಉದಾತ್ತ ತತ್ವದಿಂದೊಡಗೂಡಿದ ಮಧುರ ವಚನಗಳ ಸಂದೇಶವನ್ನು ತಿಳಿಯಲಾರದೆ ಕುಲಕುಲವೆಂದು ಕುಲದ ಹವ್ಯಾಸದಲ್ಲಿಯೇ ಮುಖ್ಯವಾದ ನಮ್ಮ ಕರ್ತವ್ಯಗಳೆಲ್ಲವನ್ನು ಮರೆತು ನಮ್ಮ ನಮ್ಮಲ್ಲಿ ವಳಸಂಗಡಗಳುಂಟಾಗಿ ಈ ಸದ್ಧರ್ಮ ಕೋಟೆಯು ಕಳಚಿ ಹೇಳಲು ಹೆಸರೇ ಇಲ್ಲದಂತಾಗಿದೆ. ಇದರ ಮುಖ್ಯ ಅವಯವ ಸ್ವರೂಪವಾದ ಅಷ್ಟಾವರ್ಣಗಳೆಲ್ಲವನ್ನೂ ಮರೆತು ಅವುಗಳ ಶಕ್ತಿಯಲ್ಲವನ್ನೂ ಕುಂದಿಸಿ ಪರಧರ್ಮದವರ ವಿಕಟ ಹಾಸ್ಯಕ್ಕೊಳಗಾಗಿ ಮಧ್ಯವನ್ನು ಕುಡಿದ ಕಪಿಗಳೋಪಾದಿಯಲ್ಲಿ ಚರಿಸ್ಯಾಡ ಹತ್ತಿದ್ದೇವೆ. ಕಾರಣದ ಗುಣಗಳೆಲ್ಲವನ್ನೂ ಮರೆತು ಕಪಿಯ ಗುಣಗಳೇ ಸ್ಥಿರವಾಗಿ ಉಳಿದುಬಿಟ್ಟವೆ.

ನಂದನವನ ಸ್ವರೂಪವಾದ ಯಾವ ನಮ್ಮ ವೀರಶೈವ ಧರ್ಮವು ಇಂದು ಅನೇಕ ಮುಳ್ಳು ಗಂಟಿಗಳಿಂದಲೂ ಕಲ್ಮರಗಳಿಂದಲೂ ಕೂಡಿದ ಕಾಡಾಗಿದೆ. ಯಾವ ಕಾಮಧೇನುವಿನ ಅಮೃತಸುಧೆಯನ್ನು ಪಾನಮಾಡಿ ಕಲ್ಪವೃಕ್ಷದ ನೆರಳಲ್ಲಿ ಬ್ರಹ್ಮಾನಂದವೆಂಬ ಸುರತಸುಖವನ್ನು ಅನುಭವಿಸುತ್ತಿದರೋ ಅದನ್ನು ಮರೆತು ಕಾಡುಮೋಡಗಳಲ್ಲಿ ಅಲೆದಾಡುತ್ತ ಗಿಡಗಂಟಿಗಳಲ್ಲಿಯೇ ವಾಸ ಮಾಡುವ ಮರ್ಕಟ ವೃತ್ತಿಯೇ ಬಳಕೆಯಲ್ಲಿ ಬಂದುಬಿಟ್ಟದೆ. ಇಷ್ಟೆಲ್ಲಕ್ಕೂ ಕಾರಣಸ್ವರೂಪವಾದದ್ದೇ ಅಹಂಕಾರ. ಈ ಅಹಂಕಾರದಿಂದಲೇ ಮಿಥ್ಯಾಭಿಮಾನವು ಬೆಳೆದು ನಾನು ಕುಲಜ, ಪಂಡಿತ, ನಾನು ಶ್ರೇಷ್ಠ, ಲಿಂಗಾಂಗಿ, ನಮ್ಮ ಹಿಂದಿನವರು ಶ್ರೇಷ್ಠರೆನಿಸಿ ಈ ಪಟ್ಟವನ್ನು ನನಗೇನೇ ಕಟ್ಟಿ ಹೋಗಿದ್ದಾರೆ. ನನಗಿಂತಲೂ ಈ ಜಗತ್ತಿನಲ್ಲಿ ಯಾರೂ ಹೆಚ್ಚಿನವರಿಲ್ಲವೆಂಬ ಉದ್ಗಾರವನ್ನು ಹೊರಡಿಸಿ ತಾನು ಯಾರೆಂಬುದನ್ನೇ ಮರೆಯಿಸಿ ಬಿಡುವ ಈ ಮಿಥ್ಯಾಭಿಮಾನವು ನಮ್ಮ ವೀರಶೈವ ಸಮಾಜದಿಂದ ಎಂದು ಬಿಡುಗಡೆಯಾಗುವದೋ ಅಂದೇ ಪುನಃ ಮತ್ತೊಂದು ನೂತನವಾದ ವಸ್ತು ಮೊದಲಿನಕ್ಕಿಂತಲೂ ಬಲವಾದ ಕೋಟೆಯು ನಿರ್ಮಾಣವಾಗಿ ಇದರ ಕೀರ್ತಿಯು

ಧ್ವಜಗಳು ಸಪ್ತ ಸಾಗರಗಳ ಆಚೆಯ ವರೆಗೂ ಹಾರಿಸಬಹುದೆಂಬ ನಂಬು ಗೆಯು ಪ್ರತಿಯೊಬ್ಬರಲ್ಲಿಯೂ ಬಿಂಬಿಸದೆ ಇರಲಾರದು. ಈ ವಿಷಯವನ್ನು ಪ್ರತಿಯೊಬ್ಬ ಲಿಂಗಾಂಗಿಯೂ ತನ್ನ ವಿಚಾರವೆಂಬ ಒರೆಗಲ್ಲಿಗೆ ಹಚ್ಚಿ ನೋಡ ಬಹುದು. ಇದೇ ವಿಷಯವನ್ನು ತತ್ವ ಶಿಖಾಮಣಿಗಳಾದ ಹಾಗೂ ಮಹಾತ್ಮಾ ಬಸವಣ್ಣನವರಿಗೆ ಅವಯವ ಸ್ವರೂಪವಾದ ಶಿವಶರಣ ಹಡಪದಪ್ಪಣ್ಣಗಳ ವರು ತಮ್ಮ ಅಮೃತವಾಣಿಗಳಿಂದ ವಿಷದಪಡಿಸಿದ್ದೇನಂದರೆ ತನ್ನ ತಾನ ರಿಯದೆ, ತನ್ನ ತಾ ನುಡಿಯದೆ, ತನ್ನ ತಾ ನೋಡದೆ, ತನ್ನ ನಿಲುಕಡೆಯ ತಾ ನರಿಯದೆ ಅನ್ಯರ ಸುದ್ದಿಯ ನುಡಿದಾಡುವ ಕುನ್ನಿಗಳಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ. ಅವನು ಸರ್ವಾ ಪರಾಧಿ, ಅವನ ಮುಖವನ್ನೇ ನೋಡಲಾಗದೆಂದು ನಿರ್ದಾಕ್ಷಿಣ್ಯವಾಗಿ ನುಡಿ ದಿದ್ದಾರೆ. ಇಂಥಾ ಉದಾತ್ತ ತತ್ವಗಳಿಂದೊಡಗೂಡಿದ ಅವರ ಮಧುರ ಸಂದೇಶವನ್ನು ತಿಳಿದರೆ ಆಗಿನ ಶಿವಶರಣರ ಯೋಗ್ಯತೆಯು ಅವರ ನಿರ್ದಾ ಕ್ಷಿಣ್ಯವಾದ ವಚನಗಳಿಂದಲೇ ಕಾಣಬಹುದಾಗಿದೆ. ಆಗಿನ ಆ ಭವ್ಯ ಪ್ರಕಾ ಶವೆಲ್ಲಾ ಮಾಯವಾಗಿ ಕಾಣಲಾರದ ಅಜ್ಞಾನವೆಂಬ ಕತ್ತಲೆಯಲ್ಲಿ ಕಂಡ ಕಡೆಗೆ ಅಲೆದಾಡಹತ್ತಿದ್ದೇವೆ. ಇದಕ್ಕೆ ಕಾರಣವು ನಮ್ಮನ್ನು ನಾವು ಕಾಣದ ಮಂದ ಬುದ್ಧಿಯೇ ಇದರ ಮೂಲ ವಸ್ತುವಾಗಿದೆ. ಹಿಂದಿನ ವೀರ ಶೈವರ ನಡೆ ನುಡಿಗಳಿಗೂ ಈಗಿನ ವೀರಶೈವರ ನಡೆ ನುಡಿಗಳಿಗೂ ಆಕಾಶ ಪಾತಾಳದಷ್ಟು ಅಂತರವಾಗಿದೆ. ಇದೇ ವೀರಶೈವ ಧರ್ಮದ ವಂಶೋದ್ಧಾ ರಕ ಸಂಬಂಧ ಬಸವಣ್ಣನವರು ಪ್ರತಿಯೊಂದು ಕಾಯಕಗಳಲ್ಲಿ ನಿರುತ ರಾದ ಶಿವಶರಣರನ್ನು ಹಾಗೂ ಅಂಗದ ಮೇಲೆ ಲಿಂಗ ಧಾರಣ ಮಾಡಿದ ಪ್ರತಿಯೊಬ್ಬ ಲಿಂಗಾಂಗಿಯನ್ನು ತಾವು ಮನಮುಟ್ಟಿ ನಂಬುಗೆಯನ್ನಿಟ್ಟ ಕೂಡಲ ಸಂಗನ ಸ್ವರೂಪರೆಂದೇ ಕಾಣುತ್ತಿದ್ದರು. ಅವರ ವಿಶಾಲ ಭಾವನೆಯ ಮಹತ್ ಪ್ರಕಾಶದೀದಲೇ ಅನೇಕ ರೂಪವಾಗಿ ಬೆಳೆದು ಪರ ಧರ್ಮದ ಮಹಾನ್ ಮಹಾನ್ ವ್ಯಕ್ತಿಗಳು ಪಂಡಿತರು ಪಾಮರರು ಮೊದಲ್ಗೊಂಡು ತಮ್ಮ ತಮ್ಮೊಳಗೆ ಪರಿವರ್ತನೆಯನ್ನು ಹೊಂದುತ್ತ ಕೆಲವರು ಕಾಣದ ಜಗ ತ್ತಿನಲ್ಲಿಯೇ ಬಯಲಾದರು. ಮತ್ತು ಕೆಲವರು ಈ ಶಿವ ಮತದ ಪ್ರಚಾರ ಕಾರ್ಯವನ್ನು ಪ್ರಚಾರ ರೂಪದಲ್ಲಿ ಜಗತ್ತಿನಲ್ಲೆಲ್ಲಾ ಪ್ರಸಾರಗೊಳಿಸಿ ಜಯ ವನ್ನು ಸಂಪಾದಿಸಿ ಈ ಜಯಭೇರಿಯ ನಾದವು ದಿಕ್ಕು ದಿಕ್ಕುಗಳಲ್ಲಿಯೂ ಹರಡುವಂತೆ ಮಾಡಿ ಕಡೆಗೆ ಆ ನಾದದಲ್ಲಿಯೇ ಬಯಲಾದರು.

ಇಂಥಾ ಮಹಿಮಾ ಪುರುಷರ ಆಧಾರಗ್ರಂಥಗಳೇ ನಮಗೆ ನಾದ ಸ್ವರೂಪವಾಗಿ ಸಾರಿ ಸಾರಿ ಹೇಳುತ್ತಲಿವೆ ಆದ್ದರಿಂದ ಹೊಸ ರವಿಯು ಉದಯವಾಗಿದ್ದಾನೆ. ಹಿಂದಿನ ಕತ್ತಲೆಯು ಕಳೆದು ಹೋಗಿ ಬೆಳಕುಬಿದ್ದಿದೆ. ನಿಮ್ಮ ಬಾಳ ಬೆಳಕಿನಲ್ಲಿ ಬಾಳಬಯಲಾಗಿರಿಯೆಂದು ತಮ್ಮ ವಚನಗಳ ಉಗಮಸ್ಥಾನವಾದ ಜ್ಞಾನ ಪ್ರಕಾಶದ ಮಾಧುರ್ಯವನ್ನು ಸರ್ವರಿಗೂ ತಿಳಿಯುವ ಹಾಗೆ ಸುಲಭವಾದ ಕನ್ನಡದಲ್ಲಿ ಸರಳವಾದ ಶೈಲಿಯಲ್ಲಿಯೇ ನುಡಿದು ಅದರಂತೆ ನಡೆದು ತೋರಿಸಿದ್ದಾರೆ ಇವುಗಳೆಲ್ಲವು ವೀರಶೈವ ಧರ್ಮದ ಊರುಗೋಲಿನಂತಿದ್ದರೂ ಕೂಡಾ ಅವುಗಳಾವುದನ್ನು ಲಕ್ಷಿಸದೆ ಆಳವಾದ ಕಂಧರದಲ್ಲಿ ಬೀಳಲು ಹವಣಿಸಹತ್ತಿದ್ದೇವೆ. ಲಿಂಗದ ಆಯತವನ್ನು ತಿಳಿಯಲಾರದೆ ಲಿಂಗಾಯತರಾಗಿ ಶ್ರೇಷ್ಠ ಪದವಿಗಳಿಂದ ಬಾಳಲು ಬಯಸಹತ್ತಿದ್ದೇವೆ. ಹಿಂದಿನ ವೀರಶೈವ ಧರ್ಮದ ಬುನಾದಿಕಲ್ಲುಗಳಂತಿದ್ದ ಹಳಬ ಲಿಂಗಾಯತರ ಹಿತಚಿಂತನೆಯನ್ನು ಮರೆತು ಆ ಜನ್ಮ ಪರಿಯಂತರದಿಂದಲೂ ಹಿಡಿದು ಇಲ್ಲಿಯವರೆಗೂ ಮಧ್ಯ ಮಾಂಸ ಆ ಭಕ್ಷ ಭಕ್ಷಣದಿಂದ ವಡಲನ್ನು ಹೊರೆಯುತ್ತಾ ಬಂದ ಅನೇಕ ಜಾತಿಯವರಿಗೂ ಲಿಂಗಧಾರಣೆಯನ್ನು ಮಾಡಿ ಕಂಡ ಕಂಡ ಜಂಗಮರೆನಿಸಿಕೊಂಡವರೆಲ್ಲರೂ ಕೂಡಿ ತಮ್ಮ ಬಾಯ್ತುಂಡಿಯೆಲ್ಲವನ್ನೂ ತೀರಿಸಿಕೊಂಡು ಸರ್ವರಿಗೂ ವಿದಿತವಾಗುವ ಹಾಗೆ ತಮ್ಮ ಹೊಸ ಶಿಷ್ಯರ ಪರಿಚಯವನ್ನು ಈ ರೀತಿಯಾಗಿ ಮಾಡುವರು. ಅದೇನಂದರೆ, ಇಂದಿನಿಂದ ಅಂದರೆ ಈ ಹೊತ್ತಿನಿಂದ ಇವರು ಶುದ್ಧಿಯಾದರು ಇವರ ಹಿಂದಿನ ಮೂಲ ಜಾತಿಯ ದೋಷಗಳೆಲ್ಲವೂ ಮಾಯವಾಗಿ ಶ್ರೇಷ್ಠ ಲಿಂಗಾಂಗಿಗಳಾದರು. ಇಂದಿನಿಂದ ಸರಿಗನ ಸ್ವರೂಪರಾದ ಜಂಗಮರು ಭಕ್ತರು ಮಹೇಶ್ವರರಾದಿಯಾಗಿ ಸರ್ವರೂ ಊಟ ಉಪಚಾರ ಶರೀರ ಸಂಬಂಧಾದಿಗಳನ್ನು ಮಾಡಲು ಸಹ ಯಾವ ಆತಂಕವಿಲ್ಲವೆಂದು ಇದಕ್ಕೆ ಬಸವಾದಿ ಪ್ರಮಥರ ವಚನಗಳೇ ಸಾಕ್ಷಿಯೆಂದು ಒಳ್ಳೇ ಅಧಿಕಾರವಾಣಿಯಿಂದ ಕೈಯ್ಯೆತ್ತಿ ಪ್ರಮಾಣಪೂರ್ವಕವಾಗಿ ಹೇಳಿ ತಮ್ಮ ದೊಡ್ಡಸ್ತನದ ಪ್ರಭಾವನ್ನು ಅಲ್ಲಲ್ಲಿ ಬಿತ್ತಿ ಬೆಳೆದು ಅದರ ಫಲವನ್ನು ಶಿಷ್ಯ ರೂಪದ ಬೆಳೆಯಿಂದ ಉಂಡುಟ್ಟು ನಾವು ಗುರುಗಳು, ಸ್ವಾಮಿಗಳು, ಎಂಬುವ ಅಹಂಭಾವವನ್ನು ಪ್ರತಿಷ್ಠೆಯ ರೂಪದಿಂದ ಜಗತ್ತಿನಲ್ಲೆಲ್ಲಾ ಪ್ರಚಾರ ಮಾಡಲು ತವಕವುಳ್ಳವರಾಗಿ ಹೋಗಿದ್ದಾರೆ. ಶತಮಾನಗಳಿಂದಲೂ ಬೆಳೆದು ಬಂದ ಹಳಬ ಲಿಂಗಾಯತರಾದ ಹಡಪದವರೂ ಮತ್ತು ಮಡಿವಾಳರೂ ಇವರ ವಿಷಯವು ಧರ್ಮ ಪ್ರಚಾರಕರು ಮತ್ತು ಧರ್ಮದ ಗುರುಗಳೆಂದೆನಿ

ಸಿದವರ ಮನಸ್ಸಿನಲ್ಲಿ ಬಂದಿರುವದೋ ಇಲ್ಲವೋ ಯಾವದೂ ತಿಳಿಯದಂತಾಗಿದೆ. ಎಂಥಾ ಅನ್ಯಾಯದ ಸಮಾಜ ಲಿಂಗ ಧಾರಣ ಮಾಡಿದ ಒಂದೇ ದಿವಸದಲ್ಲಿ ಶುದ್ಧರಾದ ಲಿಂಗಾಂಗಿಗಳಿಗಿಂತಲೂ ೮೦೦ ವರ್ಷಗಳ ಆಚೆಯಿಂದಲೂ ಗುರುಲಿಂಗ ಜಂಗಮದ ಪಾದದಲ್ಲಿ ದೃಷ್ಟಿಯನ್ನಿಟ್ಟು ವೀರಶೈವರಲ್ಲದವರು ಅವರು ಯಾರೇ ಆಗಲಿ ಅವರು ಮನೆಯಲ್ಲಿ ಒಂದು ಗುಟುಕು ನೀರನ್ನು ಸಹ ಮುಟ್ಟದೆ ಕಟ್ಟಾ ಸನಾತನಿಗಳಾಗಿ ವಳ್ಳೇ ಭಕ್ತಿ ಭಾವನೆಯಿಂದ ಇಲ್ಲಿಯು ವರೆಗೂ ನಡೆಯುತ್ತಾ ಬಂದ ಈ ಹಳಬ ಲಿಂಗಾಯತರು ಕೀಳೆಂದೇ ನಿಮ್ಮ ಕೆಟ್ಟ ಭಾವನೆಯಲ್ಲಿ ಅಡಕವಾದಂತೆ ಕಾಣುತ್ತದೆ. ತಾಯ್ಬೇರಿನಿಂದ ರಸವೇರಿ ಹುಟ್ಟಿ ಬಂದ ವೃಕ್ಷದ ಮೂಲವನ್ನು ಬಿಟ್ಟು ಶಾಖೆಗಳಲ್ಲಿಯೇ ಫಲಗಳನ್ನರಸುವ ಮರ್ಕಟ ವೃತ್ತಿಯೇ ಈಗಿನ ನಮ್ಮ ವೀರಶೈವ ಧರ್ಮದ ಪ್ರಮುಖರೆಂದೆನಿಸಿದವರಲ್ಲಿ ಬೆಳೆದು ಬಂದಂತೆ ಕಾಣುತ್ತದೆ. ಹೊಟ್ಟೆಯ ಮಕ್ಕಳನ್ನು ಬಿಟ್ಟು ಪರರ ಮಕ್ಕಳಿಗೆ ಪಟ್ಟವನ್ನು ಕಟ್ಟುವ ಹವ್ಯಾಸದಿಂದ ಹೊರಟ ಅತತಾಯಿಗಳಂತೆಯೇ ಭಾಸವಾಗುತ್ತದೆ. ವೀರಶೈವ ಧರ್ಮದ ಮೂಲ ವಂಶಸ್ಥರಾದ ಹಳಬ ಲಿಂಗಾಯರು ತಾಯಿಯನ್ನು ಕಳೆದುಕೊಂಡ ತಬ್ಬಲಿಗಳಂತೆ ತಮ್ಮದೇ ಆದ ಈ ಸಮಾಜದಾವರಣದಲ್ಲಿ ಬಾಳಿ ಬದುಕಲು ಸ್ಥಳವೇ ಇಲ್ಲದಂತಾಗಿದೆ ಇದೆಂಥಾ ಅನ್ಯಾಯ, ಇಷ್ಟೆಲ್ಲಕ್ಕೂ ವೀರಶೈವ ಮುಖಂಡರೆಂದೆನಿಸಿಕೊಂಡವರ ಅಸರದೃಷ್ಟಿಯೇ ಕಾರಣವಾಗಿದೆ. ಇನ್ನಾದರೂ ಸಮಾಜದ ಹಿತೈಷಿಗಳಾದ ಧರ್ಮ ಪ್ರಚಾರದ ಅಧ್ಯಕ್ಷಸ್ಥಾನವನ್ನು ವಹಿಸಿದ ಮಹಿಸೀಯರೆಲ್ಲರೂ ಮನಸ್ಸಿನ ಮೇಲೆ ತೆಗೆದುಕೊಂಡು ಸ್ವಾರ್ಥಿಗಳ ಕುಹಕತನಕ್ಕೊಳಗಾಗಿ ಇದುವರೆಗೂ ಆವದೊ ಒಂದು ಮೂಲೆಯಲ್ಲಿ ಬಿದ್ದು ಬಳಲುತ್ತಿರುವ ಅನೇಕ ಕೈ ಕಸಬು ಕಾಯಕಗಳಿಂದಲೇ ಉಪಜೀವಿಸುವ ಪವಿತ್ರ ಕಾಯಕ ಜೀವಿಗಳಾದ ಹಳಬ ಲಿಂಗಾಯತರನ್ನು ತಮ್ಮ ಕಲ್ಯಾಣ ಪ್ರದವಾದ ಅಧಿಕಾರ ವಾಣಿಯಿಂದ ಎಚ್ಚರಿಸಿ ಉಚ್ಚ ಮಟ್ಟದಲ್ಲಿ ಬೆಳೆದು ಬಂದ ಯಾವ ವೀರಶೈವ ಧರ್ಮದ ಬಾವುಟವನ್ನು ಎತ್ತಿ ಹಿಡಿದು ಹಿಂದಿನ ಬಸವಾದಿ ಪ್ರಮಥರ ಸಾಂಪ್ರದಾಯವನ್ನು ಅನುಸರಿಸಿ ಪ್ರತಿಯೊಂದು ಕಾರ್ಯಕ್ರಮಗಳಲ್ಲಿ ಪಾಲುಗಾರರಾಗುವಂತೆ ಮಾಡಿ ಇದು ವರೆಗೂ ಕಳಚಿ ಬಿದ್ದ ಸದ್ಧರ್ಮಕೋಟೆಯ ಬುನಾದಿ ಕಲ್ಲುಗಳೆಲ್ಲವನ್ನೂ ಜೋಡಿಸಿ ಮೊಗದೊಮ್ಮೆ ಬಲವಾದ ಕೋಟೆಯನ್ನು ಕಟ್ಟಿ ಪ್ರಯಾಸವಾಗಿ ಕಟ್ಟಿದ ಕೋಟೆಯು ಪುನಃ ನಾಶವಾಗದಂತೆ ಜೀರ್ಣೋದ್ಧಾರದ ಪವಿತ್ರ

ಕಾರ್ಯವನ್ನು ನಿರ್ವಹಿಸುವ ಶಿವಾನುಭವ ಮಂಟಪವನ್ನು ರಚಿಸಿ ಅದಕ್ಕೆ ತಕ್ಕ ಶೂನ್ಯ ಸಿಂಹಾಸನವನ್ನು ಸ್ಥಾಪಿಸಿ ಅಲ್ಲಲ್ಲಿ ಅಳಿದುಳಿದು ಬಾಳಿ ಬದುಕಲು ಸಾಧ್ಯವಿಲ್ಲದೆ ಗುಹೆಗುಹಾಂತರಗಳಲ್ಲಿ ವಾಸಮಾಡಿಕೊಂಡಿರುವ ಶಿದ್ಧರು ಸಾಧ್ಯರು ಮೊದಲಾದ ಶಿವಶರಣನ್ನು ಪುನಃ ಕಲ್ಯಾಣದತ್ತ ಕೈಬೀಸಿ ಕರೆಯುವ ಹಾಗೆ ಮಾಡಿ ಬೆಳಗಿನೊಳಗಣ ಮಹಾ ಬೆಳಗಿನಲ್ಲಿ ಬಯಲಾದ ಯಾವ ನಿರಂಜನ ಸ್ವರೂಪರಾದ ಪ್ರಭುದೇವರನ್ನು ಮತ್ತೊಮ್ಮೆ ಶೂನ್ಯ ಸಿಂಹಾಸನದಲ್ಲಿ ಕಂಡು ಮಾನವರ ಕಲ್ಯಾಣದ ಮಾರ್ಗವನ್ನೇ ಬಯಸುವ ಬಯಕೆ ಹೊತ್ತ ಜೀವ ಬಸವಕಲ್ಯಾಣದ ಹೆಸರನ್ನು ಸಾರ್ಥಕಗೊಳಿಸುವಿರೆಂದು ಬಲವಾಗಿ ನಂಬಿದ ತಮ್ಮ ಹಳಬ ಲಿಂಗಾಯತ ಬಂಧುವಿನ ಅನಂತ ವಂದನೆಗಳು.

---

## ಭಗವಾನ್ ಬಸವೇಶ್ವರ ಸ್ತವನಂ.

ಲೇ:— ಶ್ರೀ "ರೇವಮಾಪುತ" ನಾಗರಹಾಳು. ಶಿರುಗುಪ್ಪ (ತಾ) ಬಳ್ಳಾರಿ(ಜಿ)

ಪುಣ್ಯದ ಪುಂಜವೆ ಶ್ರೀ ಬಸವಾರ್ಯ । ಶ್ರೀ ಜಗವಣ್ಣನೇ
ಬೇಡುವೆ ನಿನ್ನನು । ಭಕ್ತಿಯ ವರವ
ಭಕ್ತರ ಬೇಡಿಕೆ ಪರಿಹರಿಸುತಲಿ । ಭವ ಭಂಧನವ ತೊಲಗಿಸು ಆರ್ಯ
ಪಾದ ಕಮಲದೊಳು ಪುಷ್ಪ ವರ್ಷದಿ । ಪೂಜಿಪೆ ನಿನ್ನ ॥೧॥
ಜಗದಲಿ ಶಾಂತಿಯು ನೆಲಸುವದೆಂದೂ
ನಿನ್ನ ಯೋಗವು ಅದು ಶಿವಯೋಗವು
ನಿನ್ನ ಸೇರಲು ಆನಂದ ಸಾಗರ ! ಶ್ರೀ ಬಸವೇಶ ॥೨॥
ಜಗದಂತರಂಗದ ಜ್ಯೋತಿ ನೀನಾಗಿ
ಬೆಳಗುತಿರುವೆನೀ ಅಪರಂಜ್ಯೋತಿ
ಭಕ್ತಿಯ ಭಾಂಡಾರಿ ಎನಿಸಿಯು ನೀನು । ಭಕ್ತಪುಂಗವನೆ ॥೩॥
ವೇದಾಗಮಗಳ ಸಾರವ ಮಥಿಸಿ
ವಚನ ವಾಙ್ಮಯದಲಿ ಜನಮನತಣಿಸಿ
ವಚನದ ವೃಕ್ಷವು ವೃದ್ಧಿಸಿ ಜಗದಿ
ವಚನದ ಫಲವನು ಸವಿದರು ಮುದದಿ । ಶ್ರೀ ಬಸವೇಶ ॥೪॥

---

# ಹಿತವಚನಗಳು.

(ಲೇಖಕರು:— ವೇ. ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ-ರಾಮಪೂರ)



೧. ಶ್ರೀ ಗುರುವಿನಲ್ಲಿ ಸದ್ಭಾವನೆಯನ್ನೂ ಲಿಂಗದಲ್ಲಿ ನಿಷ್ಠೆಯನ್ನೂ ಜಂಗಮದಲ್ಲಿ ತ್ರಿವಿಧಮಲ ಸೂರಸ್ತನಾಗಿರುವದು ಅದುವೇ ಸದ್ಭಕ್ತನ ಅಂಗ. ಚಿದ್ಘನ ವಸ್ತುವಿನ ಸಂಗ. ಸಜ್ಯೋಜಾತ ಲಿಂಗಕ್ಕೆ ಇದುವೇ ಸುಸಂಗ ವಿರುವದು.

೨. ಆತ್ಮಾನಂದವೇ ಪ್ರಾಣಿಮಾತ್ರರ ಪರಮಾವಧಿ ಸುಖವು. ಈ ಸುಖಕ್ಕೆಯೇ ಮೋಕ್ಷವೆಂದು ಹೆಸರು.

೩. ಹೊನ್ನು, ಹೆಣ್ಣು, ಮಣ್ಣು, ಪುತ್ರ, ಪುತ್ರಿಯರ ಮೇಲಿರಿಸಿದಷ್ಟು ಮಮತಾ (ಪ್ರೀತಿ) ವನ್ನು ಲಿಂಗದಲ್ಲಿ ಅಳವಡಿಸಿದ್ದಾದರೆ ಅದುವೇ ಲಿಂಗಾಂಗಿಯ ಮೂಲ ಮೆಟ್ಟಿಲವನ್ನು ಏರಿ ಲಿಂಗಸಿದ್ಧಿಯನ್ನು ಪಡೆದು ಮೀರಿದುನ್ಮಣಿಯನ್ನು ಕಾಣುವನು.

೪. ಆಶೆ ಎಂಬ ಕೂಸನ್ನು ಎತ್ತಿಕೊಂಡರೆ ನಮ್ಮ ಮುಂದೆ ಅಕ್ಷಣವೇ ರೋಕ್ಷವೆಂಬ ತಾಯಿಯು ನಿಂತುಕೊಳ್ಳುವಳು. ಅದುವೇ ನಮ್ಮ ಸುಕರ್ಮಗಳಿಗೆ ನೀರಿನಲ್ಲಿ ಈಸುವ ಮನುಷ್ಯನ ಕಾಲಿಗೆ ಬಳ್ಳಿ ತೊಡಕಿದಂತೆ ಅಡ್ಡಾಗುವದು. ಕಾರಣ ಆಶೆಯನ್ನು ಬದಿಗೊತ್ತಿ ಈಶನ ಚರಣದಲ್ಲಿ ಸಿಕ್ಕವಿರಿಸುವದೇ ನಮ್ಮ ಮುಖ್ಯ ಕರ್ತವ್ಯ.

೫. ಕ್ರೋಧನ ಕೈಕಟ್ಟಿ ಕೂಡ್ರಿಸಲು ನಮ್ಮಲ್ಲಿ ಮುಖ್ಯವಾಗಿ ಸಮತಾ ಭಾವನೆಯು ಶಾಂತಿಯು ಬಲವಾಗಿ ಬೇಕು.

೬. ಇನ್ನು ಲೋಭವನ್ನು ಕಿತ್ತಬೇಕಾದರೆ ಉದಾರ ಮನಸ್ಸೆಂಬ ಉದ್ದವಾದ ಹಗ್ಗಬೇಕು.

೭. ಮತ್ಸರವನ್ನು ಎದುರಿಸಲು ಸಹಿಷ್ಣುತೆಯ ಶಸ್ತ್ರ ಧರಿಸಬೇಕು.

೮. ಸರ್ವಲಿಂಗಾಂಗಿಗಳು ಸದಾಚಾರಿಗಳಾಗಿ ಸತ್ಯವನ್ನೇ ನುಡಿಯುತ್ತಿರಬೇಕು. ಕಳವು ಜೀವ ಹಿಂಸೆಯನ್ನು ಮಾಡದೇ ಎಲ್ಲರೂ ಸಮಾನರೆಂದೂ ಜ್ಞಾನಿಯೇ ಶ್ರೇಷ್ಠನೆಂದೂ ಭಾವಿಸಿ ಸಮಾಧಾನಿಯಾಗಿರಬೇಕು.

೯. ಲೋಭಿಯಾಗಬಾರದು. ನಿಷ್ಕಪಟಿಯಾಗಿರಬೇಕು. ದಾನ, ಧರ್ಮ ಪರೋಪಕಾರ ಅತಿಥಿ ಸತ್ಕಾರ ಇವುಗಳಿಂದ ಕೂಡಿದವನಾಗಿರಬೇಕು.

೧೦. ಸಭ್ಯ ವರ್ತನದಿಂದಲೂ ದೈನ್ಯಭಾವನೆಯಿಂದಲೂ ಸಜ್ಜನರ ಸಂಗದಲ್ಲಿ ಇರಬೇಕು.

೧೧. ತನ, ಮನ, ಭಾವದಲ್ಲಿ ಯಾವಾಗಲೂ ಶುದ್ಧನಾಗಿರಬೇಕು.

೧೨. ಶ್ರದ್ಧೆಯುಳ್ಳವನಾಗಿ ಗುರುಕರುಣಿಸಿದ ಲಿಂಗವನ್ನು ತ್ರಿಕರ್ಣ ಪೂರ್ವಕ ಪೂಜಿಸುತ್ತ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳನ್ನು ಮನಸಾ ಪೂಜಿಸುತ್ತ ಸಾಮರಸ್ಯವನ್ನು ಹೊಂದಬೇಕು.

೧೩. ಅನುಭವ ಉಳ್ಳವನಾಗಿ, ಪರಮಾತ್ಮನನ್ನು ಮೋಹಿಸುತ್ತಿರಬೇಕು.

೧೪. ಸಂಸಾರವು ಅತೀ ದುಃಖಮಯವು. ಆದ್ದರಿಂದ ಅದನ್ನು ಬಹು ದೂರಮಾಡಲು ದೀರ್ಘಪ್ರಯತ್ನದಿಂದ ದೂರೀಕರಿಸಿ ಮಾಯೆಯನ್ನು ಹೋಗಲಾಡಿಸಬೇಕು.

೧೫. ಸದಾ ಸದಾಚಾರದಿಂದ ನಡೆದು ಮೋಕ್ಷಪದವಿಯನ್ನು ಬಯಸುತ್ತಾ ಪರಮಾತ್ಮನ ಐಕ್ಯಭಾವವನ್ನು ಬೇಡಿಕೊಳ್ಳುತ್ತಿರಬೇಕು.

೧೬. ಗುರುವಿಗೆ ಶರಣುಹೋಗಿ ಸದ್ವರ್ತನೆಯನ್ನೂ ಶುದ್ಧಮನಸ್ಸನ್ನೂ ಕರುಣಿಸಲು ಆತನನ್ನು ಕಿಂಕರನಾಗಿ ಬೇಡಿಕೊಳ್ಳುತ್ತಿರಬೇಕು.

೧೭. ಸದ್ರೂಪವಾದ ಲಿಂಗ, ಚಿದ್ರೂಪವಾದ ಅಂಗ, ಆನಂದ ಸ್ವರೂಪವಾದ ಭಕ್ತಿ ಇವುಗಳನ್ನು ವಿಚಾರಿಸಿ ನಡೆಯುವದೇ ಲಿಂಗಾಂಗಿಯ ಕರ್ತವ್ಯ.

೧೮. ಶರಣನು ಜ್ಞಾನಯುಕ್ತನು ಆತನ ಜ್ಞಾನವು ಪೃಥ್ವಿ ಆಕಾಶದ ಮಧ್ಯದಲ್ಲಿ ತೋರುವ ತೋರಿಕೆಗಳು. ಸ್ವರ್ಗ, ಮೃತ್ಯ, ಪಾತಾಳಗಳೆಂಬ ತ್ರೀಲೋಕದ ಮಧ್ಯದಲ್ಲಿ ಪುಣ್ಯ, ಪಾಪ, ಮೊದಲಾದ ಸರ್ವ ಕರ್ಮಂಗಳು. ಪಂಚತತ್ವ, ಮಿಶ್ರವಾದ ದೇಹದ ಪ್ರಕೃತಿ, ಮನ ಮೊದಲಾದ ಅರವತ್ತಾರುಕೋಟಿ ಕರಣಂಗಳು ಇವೆಲ್ಲವೂ ಆ ಪರಶಿವಲಿಂಗದಿಂದ ಉದಯವಾದವುಗಳಾಗಿ ತೋರಿ ತೋರಿ ಅಡಗುವವು ಅಲ್ಲದೆ ನಿಜವಲ್ಲವು. ಆದರೆ ಪರತತ್ವ ಒಂದೇ ನಿಜವಾದದ್ದು. ಇದನ್ನರಿಯುವುದೇ ಪರಮಜ್ಞಾನವು. ಈ ಪರಮಜ್ಞಾನವೆಂಬದನ್ನು ತಾನೆಂದು ತಿಳಿದಾತನೇ ಶಿವಜ್ಞಾನಿ ಶರಣನಾಗುವನು.

೧೯. ಸಜ್ಜನನೂ, ಶಿವಭಕ್ತನೂ, ಆದಂಥವನು ಯಾವಾಗಲೂ ತಾನು ಯಾವ ಮಾರ್ಗದಿಂದ ಸಂತೋಷಗೊಳ್ಳುವನೋ ಅದರಂತೇ ಎರಡನೇಯು ವರಕ್ಕೂ ತನ್ನ ಮಾರ್ಗದಲ್ಲಿರಿಸಿಕೊಂಡು ತನ್ನ ಹಿತವಚನಗಳನ್ನು ಅವರಿಗೆ ಬೀರಿ ಸುವಿಚಾರಿಗಳನ್ನಾಗಿ ಮಾಡಬೇಕು. ಇದು ಭಕ್ತನ ಕಾರ್ಯ.

೨೦. ವೀರಶೈವನು ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯಗಳೆಂಬ ಷಡರ್ಥಗಳನ್ನು ಸಂಗ್ರಹಿಸತಕ್ಕದ್ದು. ಶ್ರೀ ಗುರುವಿನಿಂದ ಪ್ರಾಪ್ತವಾದ ಲಿಂಗಾಂಗಸಾಮರಸ್ಯದ ಅರಿವೇ ಜ್ಞಾನ ಪತಿ, ಪಶು, ಪಾಶಗಳೆಂಬ ತ್ರಿಪದಾರ್ಥಗಳೇ ಜ್ಞೇಯು ! ಈ ಮತಕ್ಕೆ ಅಧಿದೈವತೆಗಳಾದ ಗುರು, ಲಿಂಗ, ಜಂಗಮರನ್ನು ಅನನ್ಯಭಾವದಿಂದ ಅರ್ಚಿಸುವದೇ ಅನುಷ್ಠೇಯು. ಭಸ್ಮ ರುದ್ರಾಕ್ಷಿಗಳಿಂದ ಅಲಂಕೃತನಾಗಿರುವದೇ ಅಧಿಕಾರ. ಶಿವ ಮಂತ್ರವೇ ಸಾಧನ. ಶಿವಸ್ವರೂಪವೇ ಸಾಧ್ಯ. ಷಟಸ್ಥಲದ ಆಚರಣೆಗೆ ಈ ಆರು ಅರ್ಥಗಳ ಸಂಗ್ರಹವಾದರೂ ಅತ್ಯವಶ್ಯವಿರಬೇಕು.

೨೧. ಮಂತ್ರ, ಹಠ,ಲಯ, ರಾಜಯೋಗಗಳೆಂಬ ನಾಲ್ಕೂ ಯೋಗಗಳನ್ನೊಳಗೊಂಡ ಮತ್ತೂ ಅರಿವು, ಅನುಸಂಧಾನ, ಅರ್ಚನ, ಭಕ್ತಿ, ವ್ರತಗಳೆನಿಪ ಐದು ಅಂಗಗಳಿಂದ ಅಂಗೀಕರಿಸಲ್ಪಟ್ಟವನಾಗಿರಬೇಕು.

೨೨. ಶಿವಭಕ್ತನು ಶಿವಸ್ವರೂಪನಾಗಿರುವನು. ಮತ್ತು ಅವನ ತೃಪ್ತಿಯಿಂದ ಶಿವನು ಸಂತುಷ್ಟನಾಗುವನು.

೨೩. ಭಕ್ತರಲ್ಲಿ ಕುಲವನೆಣಿಸಬಾರದು. ಭಕ್ತನೂ ಜಂಗಮನೂ ಒಂದೇ ಎಂದು ತಿಳಿಯುದೇ ಶ್ರೇಷ್ಟ ಯಾಕಂದರೆ, ಕರಣ ಪ್ರಸಾದ ಸೇವನೆಯಲ್ಲಿ ಮತ್ತೂ ಅದರ ಘಟನೆಯಲ್ಲಿ ವಿರಳವಾಗಿ ಕಂಡು ಬರುವದು. ಮತ್ತು ಬಸವಣ್ಣನವರು ಭಕ್ತರಲ್ಲವೇ ? ಆತನ ನೂರೆಂಟು ನಾಮಾವಳಿ ಮಂತ್ರವನ್ನು ಪೂಜಾ ಕಾಲದಲ್ಲಿ ಪಂಚಾಕ್ಷರ ಮಂತ್ರದ ನಡುವೆ ಅಥವಾ ಅಂತ್ಯಕ್ಕೆ ಪಠಿಸದ ವಿನಹ ಮನಃಶಾಂತಿ ಯಾಗಲಾರದು. ಅಂದಮೇಲೆ ಭಕ್ತನು ಶ್ರೇಷ್ಠನು. ಭಕ್ತನ ಮಹತ್ವ ಇಷ್ಟೇಯೆಂದು ಹೇಳಲು ಅಸಾಧ್ಯ. ಶಿವಭಕ್ತರಿಗೆ ವಂದಿಸಿ ನಡೆಯುವದೇ ವೀರಶೈವರ ಧರ್ಮ.

೨೪. ಗುರು ಕೊಟ್ಟ ಕಾಯಕ ವೃತ್ತಿಯನ್ನು ಪ್ರಾಮಾಣಿಕ ತನದಿಂದ ನಡಿಸಿ ಅದರಿಂದ ಪ್ರಾಪ್ತವಾದ ಧನವನ್ನು ಗುರುಲಿಂಗ ಜಂಗಮ

ಕ್ಕಾಗಿ ಖರ್ಚು ಮಾಡುವವನು ನಿಜವಾದ ಭಕ್ತನು. ಕೇವಲ ಶಿವಜ್ಞಾನ ಸಂಪನ್ನನಾಗಿ ಬಿಕ್ಷೆಯಿಂದ ತನ್ನ ಉಪಜೀವನವನ್ನು ಸಾಗಿಸುತ್ತಾ ಭಕ್ತರನ್ನು ತನ್ನ ಸದ್ಬೋಧೆಯಿಂದ ಉದ್ಧರಿಸ ತಕ್ಕವನು ಮಾತ್ರ ಜಂಗಮನೆನಿಸುವನು.

೨೫ ಈಗ ಗುರುಸ್ಥಲದವರು ಮಾಡತಕ್ಕ ಕಾರ್ಯಗಳನ್ನು ಅಂದರೆ ದೀಕ್ಷಾ ಉಪದೇಶ ಮೊದಲಾದವುಗಳನ್ನು ಬಸವಣ್ಣನವರ ಕಾಲಕ್ಕೆ ಆಗಿ ಹೋದ ಶಂಕರದಾಸಿಮಯ್ಯನು ಕಲಿಕೇತಬ್ರಹ್ಮಯ್ಯನಿಗೆ ಶಿವದೀಕ್ಷೆಯನ್ನು ಕೊಟ್ಟ ಸಂಗತಿಯು ಬಸವ ಪುರಾಣದಲ್ಲಿ ಹೇಳಿದೆ. ಮುಸುಡಿ ಚೌಡಯನೂ ಏಕಾಂತ ರಾಮಯ್ಯನೂ, ಪ್ರೇಮನಾರಾಧ್ಯನೂ ನಾಚಿ ದೇವನೂ ಮೊದಲಾದ ಶಿವಶರಣರು ಅನ್ಯ ಜಾತಿಯವರಿಗೆ ಶಿವ ದೀಕ್ಷೆಯನ್ನು ಕೊಟ್ಟು ಉದ್ಧರಿಸಿದ್ದಾರೆ. ಕಾರಣ ಭಕ್ತನು ಕಡಿಮೆ ಎಂದು ಭಾವಿಸಬಾರದು.

೨೬. ಶರೀರಕ್ಕೆ ಲಿಂಗವೆಂತಲೂ, ಪ್ರಾಣಕ್ಕೆ ಜಂಗಮವೆಂತಲೂ ಲಿಂಗ ಜಂಗಮ ಇವು ಎರಡರ ಐಕ್ಯರೂಪವೇ ಭಕ್ತನು.
ಉದಾ:— ಹೂವಿನ ರೂಪವೇ ಭಕ್ತ. ಹೂವಿನೊಳಗಿನ ಸುವಾಸಿಕವೇ ಜಂಗಮನು.

೨೭. ಸತ್ಕ್ರಿಯಾ ರೂಪವೇ ಲಿಂಗ, ಶಿವ ಜ್ಞಾನವೇ ಜಂಗಮ, ಕ್ರಿಯಾ ಜ್ಞಾನದ ಸಮುಚ್ಚಯವೇ ಭಕ್ತನು.

೨೮ ಆಗಮಕಾರರಿಗೆ ಇಷ್ಟ ಲಿಂಗವು ಪೂಜೆಗೆ ಅಹರ್ಯವಾದ ಲಿಂಗವೆನಿಸಿತ್ತು, ಆದರೆ ಅವರಿಗೆ ಅಂಗದೊಳಗಿನ ಲಿಂಗಕ್ಕೂ ಅಂಗದ ಮೇಲಿನ ಲಿಂಗಕ್ಕೂ ಯಾವ ಅಭ್ಯಂತರವಿರಲಿಲ್ಲ. ಅಂತೆಯೇ ಅಂಗದಲ್ಲಿರಲಿ, ಅಂಗದ ಮೇಲಿರಲಿ, ಅಂಗೈಯಲ್ಲಿರಲಿ ಲಿಂಗವು ಅವರ ಇಷ್ಟೆಗೆ ತಕ್ಕದಾಗಿತ್ತು.
ಶರಣರ ಇಷ್ಟ ಲಿಂಗದ ಕಲ್ಪನೆಯೇ ಬೇರೆ. ಅಂಗದೊಳಗಿನ ಲಿಂಗವ ಬಿಟ್ಟು ಕೊಟ್ಟು ಅಂಗದ ಮೇಲಿರಿಸಿ ಅಂಗೈಯೊಳಗೆ ಧರಿಸಿ ಪೂಜಿಸುವ ಲಿಂಗವನ್ನು ಅವರು ಧರಿಸುವವರಾಗಿದ್ದರೂ ಸರ್ವತ್ರ ವ್ಯಾಪಿಸಿದ ಅನಿಷ್ಟ ನಿವಾರಣೆಯೇ ಅವರಿಗೆ ಇಷ್ಟ ಲಿಂಗದ ಪೂಜೆಯಾಗಿತ್ತು.

೨೯. ಮಾತೆ ಜ್ಯೋತಿರ್ಲಿಂಗ ಎಂಬುದೊಂದು ಶ್ರೀ ಅಲ್ಲಮಪ್ರಭುವಿನ ಅನುಭವೋಕ್ತಿ ಇರುವದು. ಹಿತವಾಗಿ ಮತ್ತು ಮಿತವಾಗಿ ಬಳಸುವ ಅನುಭವದ ಮಾತು. ಪ್ರೌಢಿಮೆಯಿಂದ ಕೂಡಿ ಮಂತ್ರವಾಗುವಷ್ಟು ಹಿರಿದಾಗಿರುವದು. ("ಮನನಾತ್ ತ್ರಾಯತೆ ಇತಿ") ಮಂತ್ರವೆನಿಸಿದ ಮಾತಿಗೆ

ಜೋತಿರ್ಲಿಂಗವೆಂದು ಕರೆದಿದ್ದಾರೆ. ಮಾತು ಮಂತ್ರವಾಗುವಂತೆ ದುಡಿದುಕೊಳ್ಳಬೇಕಾದರೆ ಸುಳ್ಳು, ಠಕ್ಕು, ಚಾಡಿ, ಕುಹಕ, ಮೋಸತನ ಮೊದಲಾವುಗಳನ್ನು ಆಡದೇ ಸರ್ವದರಕ್ಷಯೂ ಒಳಿತನ್ನೇ ಬಳಸಬೇಕು. ಮಾತು ಮಾತಿಗೆ ಮಥಿಸಿ ವಿಧಿ ಬಂದು ಆತು ಕೊಳ್ಳದಂತೆ ಎಚ್ಚರದಿಂದ ನುಡಿಯಬೇಕು. (ನುಡಿದರೆ ಮುತ್ತಿನ ಹಾರದಂತಿರಬೇಕು.)

೩೦. ಭಕ್ತ, ಗುರು, ಜಂಗಮ ಈ ವರ್ಗಗಳಿಗೆ ಲಿಂಗವು ಅವಶ್ಯವಾಗಿ ಬೇಕೇ ಬೇಕು. ಯಾಕಂದರೆ — ಭಕ್ತನೂ ಲಿಂಗ ಭಕ್ತನೆ, ಗುರುವೂ ಲಿಂಗ ಭಕ್ತನೆ ಹಾಗು ಜಂಗಮನೂ ಲಿಂಗ ಭಕ್ತನೆ; ಲಿಂಗಾಚಾರವು ಎಲ್ಲರಿಗೂ ಮುಖ್ಯ ಬೇಕು. ಲಿಂಗದ ಆಚಾರವಿಲ್ಲದ ಭಕ್ತ ದುಷ್ಕರ್ಮಿ, ಆಚಾರವಿಲ್ಲದ ಗುರು ಭೂತಪ್ರಾಣಿ, ಆಚಾರವಿಲ್ಲದ ಜಂಗಮ ಮಾನವ. ಇದು ಕಾರಣ ಅಟ್ಟವನ್ನು ಏರುವದಕ್ಕೆ ನಿಚ್ಚಣಿಕೆಯೇ ಸೋಪಾನವು. ಹೀಗೆಂದು ತೋಂಟದಾರ್ಯರು ಎಚ್ಚರಿಸಿದ್ದಾರೆ.

೩೧. ಮನವನ್ನು ಇಷ್ಟಲಿಂಗದಲ್ಲಿಯೇ ಇರಿಸಿದ ಲಿಂಗದಂತನಿಗೆ ಭಕ್ತನೆಂದೂ ಅವನೇ ಸಾಮಾನ್ಯ ವೀರಶೈವನೆಂದೂ ಆ ಮನವು ಪ್ರಾಣಲಿಂಗದಲ್ಲಿ ಶಿಲುಕಿಸಿದ ಲಿಂಗವಂತನಿಗೆ ಗುರುವೆಂದೂ ಆತನೇ ವಿಶೇಷ ವೀರಶೈವನೆಂದೂ ಕರೆಯಲ್ಪಡುವದು. ಮತ್ತೂ ಅದೇ ಮನವು ಭಾವಲಿಂಗವಲ್ಲಿ ಬೆರೆತಾಗ ಆ ಲಿಂಗವಂತನಿಗೆ ಜಂಗಮವೆಂದೂ ಆತನೇ ನಿರಾಭಾರಿ ವೀರಶೈವನೆಂದೂ ಸಂಕೇತವಿರುತ್ತದೆ.

೩೨. ಶಿವಶರಣರ ದರ್ಶನದಲ್ಲಿ ಪರಿಪೂರ್ಣ ಅರಿವಿನ ಆದರ್ಶವಾದ ಅವ್ಯಕ್ತ ಪರಶಿವನೇ ಅಖಂಡ ಮಹಾಲಿಂಗವು ಈ ಅರವಿನ ಅನುಭವವನ್ನು ವ್ಯಕ್ತಗೊಳಿಸಿ ಅಂಗವಿಸಿಕೊಳ್ಳಲೋಸುಗ, ಈ ಅಖಂಡ ಲಿಂಗದ ಸಮರಸವನ್ನು ಹೊಂದಲೋಸುಗ, ಆ ಪರಶಿವನ ಚಿತ್‌ಶಕ್ತಿಯಿಂದ ಹೊರಹೊಮ್ಮಿ ಸತ್ಯವಾಗಿ ತೋರುವ ಸೃಷ್ಟಿಯಲ್ಲಿ ಪಿಂಡದ ನೆರವಿನಿಂದ ಅವರು ಕಂಡು ಹಿಡಿದ ಇಷ್ಟ, ಪ್ರಾಣ, ಭಾವ ಲಿಂಗಗಳ ಸಾಧನೆಯ ಕ್ರಮವು ಮೂದೆರನಾದದ್ದು ನೀತಿ. ಜೋತಿ ನಿಭೀತಿಗಳೇ ಲಕ್ಷಣವಾಗಿರುವ ಅವರ ಈ ಸಾಧನೆಯ ಕ್ರಮದಲ್ಲಿ ನೀತಿಯನ್ನು ಹಿಡಿದು ಇಷ್ಟಲಿಂಗ ಸಮರಸಿಯಾದ ಮಹಂತನೇ ನಿಜವಾದ ಭಕ್ತನು.

೩೩. ಜ್ಯೋತಿ ಹಿಡಿದು ಪ್ರಾಣಲಿಂಗ ಸಮರಸಿಯಾದ ಪ್ರಸನ್ನ ಪರಿಣಾಮಿಯೇ ಶ್ರೇಷ್ಟ ಗುರುವು.

೩೪. ನೀತಿ ಜ್ಯೋತಿಗಳ ಕವಲು ಇಲ್ಲದೆ ಭಾವಲಿಂಗ ಸಮರಸಿಯಾದ ನಿರ್ಭೀತ ನಿರಂಜನ ನಿರಾಭಾರಿಯೇ ಜಂಗಮವು.

೩೫. ಲಿಂಗವನ್ನು ಮುಟ್ಟಿದ ಕೈ ಮೀಸಲು. ಎಂದು ಶಿವಶರಣರ ಕಟ್ಟಾಚಾರದ ಅನುಭವ ನುಡಿಯೊಂದಿರುವದು ಇದನ್ನು ಅರಿಯುವದೇ ವೀರ ಶೈವರ ಗುರಿ.

೩೬. ಭಕ್ತನಾಗಿರುವ ಲಿಂಗವಂತನು ಎಂದೆಂದೂ ಅಗಲದಂತೆ ತನ್ನಂಗದ ಮೇಲೆ ಧರಿಸಿಕೊಂಡಿರುವ ಲಿಂಗವು ಅರುಹಿನ ಕುರುಹು ಆಗಿರುವದು.

೩೭. ಮಾನವನ ಕಾಯಕಕ್ಕೆ ಕುರುಹಿನ ಲಿಂಗವೆಂದು ಹೆಸರು. ಲಿಂಗವಂತನು ಕಲ್ಪಿಸಿಕೊಂಡ ಅಂಗದ ಮೇಲೆ ಧರಿಸಿದ ಅರುಹಿನ ಕುರುಹು (ಕುರುಹಿನ ಅಂಗ)ದ ಸ್ವರೂಪವನ್ನು ವ್ಯಕ್ತಗೊಳಿಸುವದು. "ಕುರುಹಿನ ಅಂಗ"ದ ಈ ಸ್ವರೂಪಕ್ಕೆ ಇಷ್ಟಲಿಂಗವೆಂದು ಪಾರಿಭಾಷಿಕ ಶಬ್ದವು. ಲಿಂಗವಂತನು ಈ ಕುರುಹಿನ ಅಂಗದ ಮೇಲಿರಿಸಿದ ಈ ಅರುಹಿನ ಕುರುಹನ್ನು ಅಂಗೈಯಲ್ಲಿರಿಸಿ ಅನುಸಂಧಾನ ಗೈಯ್ಯುವನಾದುದರಿಂದ ಇದಕ್ಕೆ ಕರಸ್ಥಲವೆಂದೂ ಹೆಸರು.

೩೮. ತನುವಳಿದು ಮಹಾತನು ಆದುದೇ ಗುರು. ಮನವಳಿದು ಘನಮನವಾದದ್ದೇ ಲಿಂಗ. ಭಾವವಳಿದು ನಿರ್ಭಾವವಾದದ್ದೇ ಜಂಗಮವು.

೩೯. ಷಡ್ವಿದ ಗುಣಾದಿಗಳು ಬೇಕು, ಬೇಡ, ಎಂಬುದರ ವಿವರ— ಶಿವಭಕ್ತಿಯುಳ್ಳವನಿಗೆ, ಕಾಮಬೇಕು, ಕ್ರೋಧಬೇಕು, ಲೋಭಬೇಕು, ಮೋಹಬೇಕು, ಮದಬೇಕು, ಮತ್ಸರಬೇಕು.

ಇವು ಯಾವ ಗುಣದಿಂದ ಬೇಕೆಂದರೆ—

ಕಾಮಬೇಕು ಲಿಂಗದಲ್ಲಿ, ಕ್ರೋಧಬೇಕು ಕರಣಂಗಳಲ್ಲಿ, ಲೋಭಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು. ಗುರು ಲಿಂಗ ಜಂಗಮದಲ್ಲಿ. ಮದಬೇಕು ಶಿವಾಚಾರ ಘನವೆಂಬಲ್ಲಿ ಮತ್ಸರಬೇಕು ಹೊನ್ನು, ಹೆಣ್ಣು, ಮಣ್ಣಿನಲ್ಲಿ, ಈ ಪ್ರಕಾರವಾಗಿ ಸದ್ಗುಣವಿರಬೇಕು. ಇಂಥ ಗುಣದಿಂದ ಈ ಷಡ್ವಿಧಗುಣಗಳು ಬೇಕು.

೪೦. ಇನ್ನು ಈ ಷಡ್ವಿಧಗುಣಗಳು ಬೇಡ ಎಂಬಪಕ್ಕೆ ಕಾರಣ—ಎಂಥದರಲ್ಲಿ ಬೇಡ?

ಪರಸ್ತ್ರೀಯರಲ್ಲಿ ಕಾಮಬೇಡ, ಗುರುವಿನಲ್ಲಿ ಕ್ರೋಧಬೇಡ, ತನುಮನದಲ್ಲಿ ಮತ್ತೂ ಧನದಲ್ಲಿ ಲೋಭಬೇಡ, ಸಂಸಾರದಲ್ಲಿ ಮೋಹಬೇಡ, ಶಿವಭಕ್ತರಲ್ಲಿ ಮದಬೇಡ, ಸಕಲ ಪ್ರಾಣಿಗಳಲ್ಲಿ ಮತ್ಸರಬೇಡ.

ಈ ಆರು ಗುಣಗಳನ್ನು ತಿಳಿದು ನಡೆದಾತನೇ ಶ್ರೇಷ್ಠ ಸದ್ಭಕ್ತನು. ಆತನೇ ಜ್ಞಾನಿಯು. ಒಳ್ಳೇ ಗುಣವಂತನು ಸುಮಾರ್ಗದರ್ಶಕನು.

೪೧. ಶ್ರೀ ಶಿವಶರಣರ ನುಡಿಗಳಲ್ಲಿ ಬೇಸರಪಡಬಾರದು. ಅದರಿಂದ ಕೆಡಕುಂಟು ಅಂತು ಆಚರಿಸುವದೇ ಮನುಷ್ಯತ್ವ ಯಾಕಂದರೆ—

ಶ್ರೀ ಪ್ರಭುವಿನ ವಾದದಲ್ಲಿ ವೈರಾಗ್ಯ ಸಂಪತ್ತು ದೊರೆಯುವದು.

ಶ್ರೀ ಬಸವಣ್ಣನವರಲ್ಲಿಯ ವಾದದಿಂದ ಭಕ್ತಿಯ ಸಂಪತ್ತು ದೊರೆಯುವದು.

ಶ್ರೀ ಚನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು ದೊರೆಯುವದು

ಶ್ರೀ ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು ದೊರೆಯುವದು.

ಶ್ರೀ ಸಕಳೇಶನ ವಾದದಿಂದ ಶಾಂತಿಯ ಸಂಪತ್ತು ದೊರೆಯುವದು,

ಶ್ರೀ ಮೋಳಿಗಯ್ಯನ ವಾದದಿಂದ ದಾಸೋಹದ ಸಂಪತ್ತು ದೊರೆಯುವದು.

ಶ್ರೀಮಾತೆ ನೀಲಮ್ಮನವರ ವಾದದಿಂದ ಲಿಂಗಪೂಜೆಯ ಸಂಪತ್ತು ದೊರೆಯುವದು.

ಶ್ರೀ ನಾಗಮ್ಮನವರ ವಾದದಿಂದ ಮಹತ್ವ ಸಂಪತ್ತು ಇದು ಕಾರಣ ಇಂಥಿಂಥ ಲಾಭವಿರುವವು ಕಾರಣ ಶರಣರ ನುಡಿಗಳಲ್ಲಿ ಬೇಸರಪಡಬಾರದು.

೩೪. ನೀತಿ ಜ್ಯೋತಿಗಳ ಕವಲು ಇಲ್ಲದೆ ಭಾವಲಿಂಗ ಸಮರಸಿಯಾದ ನಿರ್ಭೀತ ನಿರಂಜನ ನಿರಾಭಾರಿಯೇ ಜಂಗಮವು.

೩೫. ಲಿಂಗವನ್ನು ಮುಟ್ಟಿದ ಕೈ ಮೀಸಲು. ಎಂದು ಶಿವಶರಣರ ಕಟ್ಟಾಚಾರದ ಅನುಭವ ನುಡಿಯೊಂದಿರುವದು ಇದನ್ನು ಅರಿಯುವದೇ ವೀರ ಶೈವರ ಗುರಿ.

೩೬. ಭಕ್ತನಾಗಿರುವ ಲಿಂಗವಂತನು ಎಂದೆಂದೂ ಅಗಲದಂತೆ ತನ್ನಂಗದ ಮೇಲೆ ಧರಿಸಿಕೊಂಡಿರುವ ಲಿಂಗವು ಅರುಹಿನ ಕುರುಹು ಆಗಿರುವದು.

೩೭. ಮಾನವನ ಕಾಯಕಕ್ಕೆ ಕುರುಹಿನ ಲಿಂಗವೆಂದು ಹೆಸರು. ಲಿಂಗವಂತನು ಕಲ್ಪಿಸಿಕೊಂಡ ಅಂಗದ ಮೇಲೆ ಧರಿಸಿದ ಅರುಹಿನ ಕುರುಹು (ಕುರುಹಿನ ಅಂಗ)ದ ಸ್ವರೂಪವನ್ನು ವ್ಯಕ್ತಗೊಳಿಸುವದು. "ಕುರುಹಿನ ಅಂಗ"ದ ಈ ಸ್ವರೂಪಕ್ಕೆ ಇಷ್ಟಲಿಂಗವೆಂದು ಪಾರಿಭಾಷಿಕ ಶಬ್ದವು. ಲಿಂಗವಂತನು ಈ ಕುರುಹಿನ ಅಂಗದ ಮೇಲಿರಿಸಿದ ಈ ಅರುಹಿನ ಕುರುಹನ್ನು ಅಂಗೈಯಲ್ಲಿರಿಸಿ ಅನುಸಂಧಾನ ಗೈಯ್ಯುವನಾದುದರಿಂದ ಇದಕ್ಕೆ ಕರಸ್ಥಲವೆಂದೂ ಹೆಸರು.

೩೮. ತನುವಳಿದು ಮಹಾತನು ಆದುದೇ ಗುರು. ಮನವಳಿದು ಘನಮನವಾದದ್ದೇ ಲಿಂಗ. ಭಾವವಳಿದು ನಿರ್ಭಾವವಾದದ್ದೇ ಜಂಗಮವು.

೩೯. ಷಡ್ವಿದ ಗುಣಾದಿಗಳು ಬೇಕು, ಬೇಡ, ಎಂಬುದರ ವಿವರ— ಶಿವಭಕ್ತಿಯುಳ್ಳವನಿಗೆ, ಕಾಮಬೇಕು, ಕ್ರೋಧಬೇಕು, ಲೋಭಬೇಕು, ಮೋಹಬೇಕು, ಮದಬೇಕು, ಮತ್ಸರಬೇಕು.

ಇವು ಯಾವ ಗುಣದಿಂದ ಬೇಕೆಂದರೆ—

ಕಾಮಬೇಕು ಲಿಂಗದಲ್ಲಿ, ಕ್ರೋಧಬೇಕು ಕರಣಂಗಳಲ್ಲಿ, ಲೋಭ ಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು. ಗುರು ಲಿಂಗ ಜಂಗಮದಲ್ಲಿ. ಮದಬೇಕು ಶಿವಾಚಾರ ಘನವೆಂಬಲ್ಲಿ ಮತ್ಸರಬೇಕು ಹೊನ್ನು, ಹೆಣ್ಣು, ಮಣ್ಣಿನಲ್ಲಿ, ಈ ಪ್ರಕಾರವಾಗಿ ಸದ್ಗುಣವಿರಬೇಕು. ಇಂಥ ಗುಣದಿಂದ ಈ ಷಡ್ವಿಧಗುಣಗಳು ಬೇಕು.

೪೦. ಇನ್ನು ಈ ಷಡ್ವಿಧಗುಣಗಳು ಬೇಡ ಎಂಬವಕ್ಕೆ ಕಾರಣ—ಎಂಥದರಲ್ಲಿ ಬೇಡ.?

ಪರಸ್ತ್ರೀಯರಲ್ಲಿ ಕಾಮಬೇಡ, ಗುರುವಿನಲ್ಲಿ ಕ್ರೋಧಬೇಡ, ತನುಮನದಲ್ಲಿ ಮತ್ತೂ ಧನದಲ್ಲಿ ಲೋಭಬೇಡ, ಸಂಸಾರದಲ್ಲಿ ಮೋಹಬೇಡ, ಶಿವಭಕ್ತರಲ್ಲಿ ಮದಬೇಡ, ಸಕಲ ಪ್ರಾಣಿಗಳಲ್ಲಿ ಮತ್ಸರಬೇಡ.

ಈ ಆರು ಗುಣಗಳನ್ನು ತಿಳಿದು ನಡೆದಾತನೇ ಶ್ರೇಷ್ಠ ಸದ್ಭಕ್ತನು. ಆತನೇ ಜ್ಞಾನಿಯು. ಒಳ್ಳೇ ಗುಣವಂತನು ಸುಮಾರ್ಗದರ್ಶಕನು.

೪೧. ಶ್ರೀ ಶಿವಶರಣರ ನುಡಿಗಳಲ್ಲಿ ಬೇಸರಪಡಬಾರದು. ಅದರಿಂದ ಕೆಡಕುಂಟು ಅಂತು ಆಚರಿಸುವದೇ ಮನುಷ್ಯತ್ವ ಯಾಕಂದರೆ—

ಶ್ರೀ ಪ್ರಭುವಿನ ವಾದದಲ್ಲಿ ವೈರಾಗ್ಯ ಸಂಪತ್ತು ದೊರೆಯುವದು.

ಶ್ರೀ ಬಸವಣ್ಣನವರಲ್ಲಿಯ ವಾದದಿಂದ ಭಕ್ತಿಯ ಸಂಪತ್ತು ದೊರೆಯುವದು.

ಶ್ರೀ ಚನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು ದೊರೆಯುವದು

ಶ್ರೀ ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು ದೊರೆಯುವದು.

ಶ್ರೀ ಸಕಳೇಶನ ವಾದದಿಂದ ಶಾಂತಿಯ ಸಂಪತ್ತು ದೊರೆಯುವದು,

ಶ್ರೀ ಮೋಳಿಗಯ್ಯನ ವಾದದಿಂದ ದಾಸೋಹದ ಸಂಪತ್ತು ದೊರೆಯುವದು.

ಶ್ರೀಮಾತೆ ನೀಲಮ್ಮನವರ ವಾದದಿಂದ ಲಿಂಗಪೂಜೆಯ ಸಂಪತ್ತು ದೊರೆಯುವದು.

ಶ್ರೀ ನಾಗಮ್ಮನವರ ವಾದದಿಂದ ಮಹತ್ವ ಸಂಪತ್ತು ಇದು ಕಾರಣ ಇಂಥಿಂಥ ಲಾಭವಿರುವವು ಕಾರಣ ಶರಣರ ನುಡಿಗಳಲ್ಲಿ ಬೇಸರಪಡಬಾರದು.

# ಮಾಚಿದೇವರ ಸಾಹಿತ್ಯ.

(ಲೇಖಕಃ— ಎನ್. ಎಮ್. ಬಸವರಾಜಯ್ಯ ನಾಗರಹಾಳು.)



ವೀರಶೈವ ಸಾಹಿತ್ಯ ವಿಶ್ವಸಾಹಿತ್ಯವಾಗಲು ಸಾಧ್ಯವಿದೆ. ಅದನ್ನು ಸಾಧಿಸುವವರು ಈಗ ಬೇಕು. ಎಷ್ಟುಮಂದಿ ವೀರಶೈವ ಮಹಾತ್ಮರು ಕವಿಗಳೂ, ಸಾಹಿತಿಗಳೂ, ವಚನಕಾರರೂ ಆಗಿಹೋಗಿದ್ದಾರೋ ಅಷ್ಟುಮಂದಿಯಲ್ಲಿ ಒಬ್ಬೊಬ್ಬರಲ್ಲಿ ಒಂದೊಂದು ವಿಶಿಷ್ಟ ಸಾಹಿತ್ಯವಿದೆ. ಜಗತ್ತಿನಲ್ಲಿ ಎಲ್ಲಿಲ್ಲದ ಸಾಹಿತ್ಯ ಈ ವೀರಶೈವದಲ್ಲಿದೆ. ವೀರಶೈವ ಸಾಹಿತ್ಯವು ಪರಿಪೂರ್ಣ ಸಾಹಿತ್ಯವಾಗಿದೆ.

ಪ್ರಸ್ತುತ ಈ ಲೇಖನವು ಮಾಚಿದೇವರ ಸಾಹಿತ್ಯ ಕುರಿತು ಬಸವ ಸಾಹಿತ್ಯ, ಪ್ರಭುಸಾಹಿತ್ಯ, ಸಿದ್ಧರಾಮ ಸಾಹಿತ್ಯ, ಅಕ್ಕಮಹಾದೇವಿ ಸಾಹಿತ್ಯ ಹೀಗೆ ಶಿರೋನಾಮೆಗಳನ್ನು ಇಟ್ಟುಕೊಂಡು ಬರೆದರೆ ಶಿವಶರಣರ ಸಾಹಿತ್ಯ ಪರಿಪೂರ್ಣವಾಗುತ್ತದೆ.

ಶಿವಶರಣರಲ್ಲಿ ಮಾಚಿದೇವರು ಒಳ್ಳೇ ವೀರರಸಪ್ರಧಾನವಾಗಿದ್ದವರು.

"ಎತ್ತೆತ್ತ ನೋಡಿದತ್ತತ್ತ ಬಸವನೆಂಬ ಬಳ್ಳಿ; ಎತ್ತಿನೋಡಿದಡೆ ಲಿಂಗವೆಂಬ ಗೊಂಚಲು, ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯ."

ಎಂಬ ವಚನವು ತುಂಬಾ ಸೊಗಸಾಗಿದೆ. ಇದರಲ್ಲಿ ಉಪಮಾನ ಸಹಿತ ಎತ್ತಿಹಿಡಿದಿದ್ದಾನೆ. ಕೇವಲ ಈಗಿನ ನಾಟಕಕಾರರಾಗಲೀ ಇನ್ನಿತರ ಕವಿಗಳಂತೆ ಪ್ರಾಸಕ್ಕಾಗಿ ಬರೆದ ವಚನವಲ್ಲ. ಬಸವನೆಂಬ ಬಳ್ಳಿ, ಲಿಂಗವೆಂಬ ಗೊಂಚಲು, ಭಕ್ತಿಯೆಂಬ ರಸವಂತೆ. ಇವೇ ಗುರುಲಿಂಗಜಂಗಮವೆಂದು ಅರ್ಥವಾಗುವುದಲ್ಲವೆ! ಮಾಚಿದೇವರು ಅಧ್ಯಾತ್ಮದ ಅಡಿಗಲ್ಲು ಎಂದು ಹೇಳಬಹುದು.

ಅತಿ ಭೃತ್ಯರಾಗಿ ಆಚರಿಸುವವರೇ ಅತಿಭಕ್ತರು. ಮಾಡೆನೆಂಬ ನೇಮ ಬೇಡ. ಮಾಡಿಕೆನೆಂಬ ಕೃತ್ಯಬೇಡ ಶಿವನಿಮ್ಮ ಮುಟ್ಟಿದ ಮನವಿದ್ದಡೇನಯ್ಯ ತನುವಿನೊಳಗೆ?

ಭೃತ್ಯಾಚಾರಿಯಾಗಿರಬೇಕೆಂದು ಸಾರಿ ಸಾರಿ ಹೇಳಿದ್ದಾರೆ.. ಭೃತ್ಯರೇ ಭಕ್ತರು. ಅವರೇ ಕೈಲಾಸಾಧಿಪತಿಗಳು. ಆದರೆ ಮಾಡೆನೆಂಬ ನೇಮಬೇಡ, ಮಾಡಿಹೆನೆಂಬ ಕೃತ್ಯಬೇಡ ಎಂಬುದು ಮಾತ್ರ ಇರಕೂಡದು.

ವೇದ ವಿಪ್ರರ ಬೋಧೆ, ಶಾಸ್ತ್ರಸಂತೆಯ ಮಾತು, ಪುರಾಣಪುಂಡರ ಗೋಷ್ಠಿ, ಆಗಮ ಅನೃತದ ನುಡಿ, ತರ್ಕ ವ್ಯಾಕರಣ ಕವಿತ್ವ ಪ್ರಾಢಿಮೆ, ಇದುಕಾರಣ ತನ್ನೊಳಗರಿದ ಅನುಭವದಿಂದ ಘನವಿಲ್ಲೆಂದ ಕಲಿದೇವರದೇವಾ.

ಎಂಬ ವಚನ ಮಾಚಿದೇವರ ಬಾಯಿಂದ ಬರಬೇಕಾದರೆ, ಅನುಭವವೇ ಕಾರಣ. ಅನುಭವವೇ ಸಾಹಿತ್ಯ, ವೇದ, ಶಾಸ್ತ್ರ, ಪುರಾಣ, ಆಗಮ, ತರ್ಕ ವ್ಯಾಕರಣ ಕವಿತ್ವ ಇವೆಲ್ಲ ಅಭ್ಯಾಸಿಗಳಿಗೆ. ಅನುಭವಿಗಳಿಗಲ್ಲ. ಅನುಭವವೇ ಸಾಹಿತ್ಯವೆಂದಾಗ ಅನುಭವಿಗಳು ಅವುಗಳನ್ನೇಕೆ ನೋಡುವರು. ಅವು ಬಾಲ ಬೋಧೆಗಳವರಿಗೆ.

ಮಾಚಿದೇವರು ಸಾಹಿತಿಯೂ, ಧರ್ಮಜ್ಞನೂ, ಸದಾ ಆಚಾರಶೀಲನೂ, ಆಗಿದ್ದರು. ಇವರು ಸಕಲಶಾಸ್ತ್ರಗಳು ತಮ್ಮ ಅನುಭವವೇ ಆಗಿದೆ.

ಮಾಚಯ್ಯನವರ ಈ ಮೇಲಿನ ವಚನಗಳ ಅವಲೋಕನದಿಂದ ನಾವು ಅವರ ಸಾಹಿತ್ಯದ ಸವಿ ಅರಿಯಬಹುದಾಗಿದೆ. ಇವರ ವಚನಗಳಲ್ಲಿ ಸಂಸ್ಕೃತ ಪ್ರಮಾಣಗಳೂ ಶಿವಶರಣರ ಹೆಸರುಗಳೂ ಮೇಲಿಂದಮೇಲೆ ಬರುತ್ತವೆ ಎಂಬುದು ನೆನಪಿಡುವ ಸಂಗತಿ. ಇವರ ವಚನಗಳು ವೀರರ ಸಂವೇಶದಂತೆ ಸ್ಫೂರ್ತಿದಾಯಕವೆನಿಸಿವೆ. ಎಂಬ ಈ ಬಿ. ಶಿವಮೂರ್ತಿಶಾಸ್ತ್ರಿಗಳ ಮಾತು ಸಹಜವಾಗಿದೆ.

ಕಾರಣ ಲೇಖಕರು ಇನ್ನುಮೇಲೆ ಶರಣಸಾಹಿತ್ಯ ಬಗ್ಗೆ ಹೆಚ್ಚು ಆಸ್ಥೆ ವಹಿಸಿ ವಿಮರ್ಶಾತ್ಮಕವಾದ ಲೇಖನಗಳನ್ನು ಬರೆಯಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

# ಅಧ್ಯಾತ್ಮ ಅನ್ವೇಷಣೆ.

(ಲೇಖಕ— ನಾ. ಮ. ಸಿದ್ಧರಾಮಯ್ಯ ಬಿ. ಎಸ್ ಸಿ. [ಸಿ. ಬಿ ಝೆಡ್]
ವೀರಶೈವ ಕಾಲೇಜು ಬಳ್ಳಾರಿ )

ಮನುಷ್ಯನಾಗಿ ಹುಟ್ಟಿದ ಮೇಲೆ ತನ್ನನ್ನು ತಾನು ಚನ್ನಾಗಿ ತಿಳಿಯಬೇಕು. ಅಂದರೆ ತನ್ನ ನೈತಿಕ ಮಟ್ಟವು ಸುಸಂಸ್ಕೃತದಿಂದ ಸಾಗಿದೆಯೇ ? ಇದನ್ನರಿತು ಅದರಂತೆ ನಡೆದು ಆ ಮೇಲೆ ಸಮಾಜದ ಕಡೆ ಕಣ್ಣೊರಳಿಸಬೇಕು. ಸಮಾಜದಲ್ಲಿ ತಿಳಿಯದೆ ಮತ್ತು ತಿಳಿದೂ ನಡೆಯುತ್ತಿರುವ ನ್ಯೂನತೆಗಳನ್ನು ನಯವಾಗಿ ಬಿಡಿಸಲು ಅಣಿಯಾಗಬೇಕು. ಏಕೆಂದರೆ ವ್ಯಕ್ತಿಯು ತನ್ನ ಹಿತದೊಡನೆ ಸಮಾಜದ ಹಿತವೂ ಸಾಹಿತ್ಯವಾಗಬೇಕು. ಸಾಮಾನ್ಯವಾಗಿ ಪ್ರತಿಯೊಬ್ಬರು ಹೊನ್ನು, ಹೆಣ್ಣು, ಮಣ್ಣು ಇವುಗಳ ಬಗ್ಗೆ ಅನ್ವೇಷಣೆ ಮಾಡುತ್ತ ಕೊನೆಗೆ ಅವು ಯಾವುದರಿಂದ ಆತ್ಮಕ್ಕೆ ಶಾಂತಿ ಸಿಗದೆ ಭವ ಬಂಧನಕ್ಕೆ ಬಲಿಯಾಗುವರು. ಆದರೆ ಅಧ್ಯಾತ್ಮಕ್ಕಾಗಿ ಅನ್ವೇಷಿಸುವವರು ಅಲ್ಪ ಸಂಖ್ಯಾಕರು. ಮತ್ತು ಆಚರಣೆಯಲ್ಲಿ ತರುವಂಥವರು ಬಹಳ ವಿರಳ. ನನ್ನ ಮೊದಲ್ಗೊಂಡು ಇನ್ನಿತರರು ಸೇರಿ ಒಟ್ಟಿನಲ್ಲಿ ಸದೂಪದೇಶವನ್ನು ಸಂಬಳವಿಲ್ಲದೇ ಧಾರಾಳವಾಗಿ ಕೊಡುವರು. ಇದು ಅತ್ಯಂತ ಸುಲಭದ ಮಾರ್ಗ. ಸದೂಪದೇಶವನ್ನು ನೀಡಿದಂತೆ ನಡೆಯಲು ಶೂನ್ಯ ವಿಕ್ಕುತ್ತಾರೆ. ಯಾವುದು ದೇಹಾದಿ ಪ್ರಪಂಚಕ್ಕೆ ಮೂಲ ಸ್ವರೂಪವೋ ಅದರ ಬಗ್ಗೆ ತಿಳಿಯುವುದೇ ಅಧ್ಯಾತ್ಮ. ಮೂಲ ಸ್ವರೂಪವನ್ನು ನಿರಾಕಾರನೆಂದೂ ಮತ್ತು ಸಾಕಾರನೆಂದೂ ಹೇಳುವದೂ ಉಂಟು. ಆ ನಿರಾಕಾರ ಮತ್ತು ಸಾಕಾರದಿಂದ ಕೂಡಿರುವ ರುದ್ರ, ಶಿವ ಮುಂತಾದ ಹೆಸರುಗಳಿಂದ ಕರೆಯುವರು. ಇದಕ್ಕೆ ಚೈತನ್ಯ ರೂಪದ ಒಂದು ವಿಶಿಷ್ಟವಾದ ಶಕ್ತಿ ಕೂಡಿಕೊಂಡಿರುತ್ತದೆ. ಶಿವ ಬಿಟ್ಟು ಶಕ್ತಿಯಿಲ್ಲ, ಶಕ್ತಿ ಬಿಟ್ಟು ಶಿವನಿಲ್ಲ. ಶಿವ ಶಕ್ತಿ ಅಗಲದೆ ಒಂದೇ ಆಗಿವೆ. ವಾಯು ನಿರಾಕಾರ—ಸಾಕಾರ ಎರಡರಿಂದ ಕೂಡಿದೆ.

'ಸರ್ವಾಂತರ್ಯಾಮಿ' ಎಂದು ಹೇಳಿದಾಗ ಆತನನ್ನು ಕುರಿತು ಅನ್ವೇಷಿಸುವುದೇಕೆ ? ಎಂಬ ಪ್ರಶ್ನೆ ಬಂದೇ ಬರುವದು. ಯಾವುದು ದೇವ ಮಾನ

ವರ ಅಂತರಂಗವನ್ನು ಸುಲಭವಾಗಿ ಸಕ್ರಿಯವಾಗಿ ತಿಳಿಸುತ್ತದೆಯೋ ಅದುವೇ ಜೀವಂತ ಧರ್ಮ. ಯಾವುದೇ ಧರ್ಮ ತೆಗೆದು ಕೊಂಡರೂ ಬಾಹ್ಯದಲ್ಲಿ ದೇವರ ಸಾಕ್ಷಾತ್ಕಾರಕ್ಕೆ ಒಂದು ಕೊಟ್ಟಿದಾರೆ ಮತ್ತು ಧರ್ಮದ ಚಿನ್ಹಗಳು ಸಹ ಉಂಟು.

ಆಧುನಿಕದಲ್ಲಿ ಮತ್ತೊಂದು ವಿಷಯು ಹೊರಟಿದೆ. ಬೇಕಾದರೆ "ಶಿವಾನುಭವ ಸಂಚಿಕೆ ೪. ಸಂಪುಟ ೩೪. ಎಪ್ರೀಲ ೧೯೬೦ ನೇ ಮಾಸಿಕದಲ್ಲಿ 'ಶಿವಶರಣರದೇ ಪರಿಪೂರ್ಣ ಯೋಗ' ಎಂಬ ಲೇಖನದಲ್ಲಿ ಶ್ರೀ ಶಿವಾನಂದ ಸ್ವಾಮಿಗಳು ತೆಗ್ಗಿಹಳ್ಳಿ. ಇವರು ಮನಂಬುಗುವಂತೆ ಪ್ರತಿಪಾದಿಸಿದ್ದಾರೆ. (ಪುಟ. ೨೬.) ಹ್ಯಾಗೆ:— ಬಿ. ಎ, ಬಿ. ಬಿ ಎಲ್, ಎಮ್. ಎ, ಎಮ್. ಬಿ. ಬಿ ಎಸ್. ಮೊದಲಾದ ಡಿಗ್ರಿ ಸಂಪಾದನೆ ಮಾಡಿದ ದೊಡ್ಡ ದೊಡ್ಡ ನಾಕರಿಗಳೇ ಮೊದಲಾದವರು ಮಾತ್ರ ಬಹಿರಂಗ ಅಷ್ಟಾವರ್ಣದಂತೆ ಧರಿಸಲು ಇಷ್ಟವಿಲ್ಲದೆ ನಾಚಿಕೆ ಪಡುತ್ತಾರೆಂತಲೂ ಇವರು ಮಾತ್ರ ಅಂತರಂಗ ಅಷ್ಟಾವರಣ ( ಅರಿವೇ ಗುರುವು ) ಗಳನ್ನು ತಿಳಿದು ಕೊಂಡಿದ್ದರೆ ಸಾಕೆಂತಲೂ ಸುಧಾರಿಸಿದ ಜನಾಂಗಕ್ಕೆ ತಕ್ಕ ಬೋಧಪ್ರದವೆಂದೂ ತಿಳಿದು ಕೊಂಡು ಬರೆದಿರುವುದನ್ನು ಕಂಡರೆ ಸಖೇದ ಆಶ್ಚರ್ಯವೆನಿಸುತ್ತದೆ. ಮತ್ತು ಇನ್ನು ಪರದೇಶಕ್ಕೆ ಹೋಗಿ ಬಂದವರು ಅಂತರಾಂತರಂಗ ಅಷ್ಟಾವರಣ ಆಚರಿಸಲಿಕ್ಕೆ ಬರುತ್ತದೆಯಲ್ಲವೇ ? ಹೀಗೆ ಸಮಾಜದಲ್ಲಿ ಇಲ್ಲದ ಊಹಾಪೋಹಾದಿಗಳಿಂದ ಬರೆಯುವದೂ, ಬೋಧಿಸುವದೂ ಕಡೆಗೆ ಹುಟ್ಟಿದಾಗ ಮನುಷ್ಯನು ಯಾವ ರೀತಿಯಾಗಿರುತ್ತಾನೋ ಹಾಗೇ ನಡೆಯುವದಕ್ಕೆ ಬರುತ್ತದೆ. ಇದು ನಿಸರ್ಗ ಸಿದ್ಧವಾದದ್ದೆಂದು ಸಿದ್ಧಾಂತ ಮಾಡುವವರೂ ಹುಟ್ಟಬಹುದು. ಅದ್ದರಿಂದ ಇಂಥಾ ವಿಷಯದಲ್ಲಿ ಅನುಭಾವಿಗಳು ಶಾಸ್ತ್ರಗಳು ಹೇಳುವ ಮೇರೆಗೆ ನಡೆದು ಕೊಳ್ಳಬೇಕಲ್ಲದೆ ಬೌದ್ಧಿಕದ ಬಲದಿಂದ ಸಿದ್ಧ ಮಾಡಲಿಕ್ಕೆ ಹೋಗಬಾರದು. ಶಾಸ್ತ್ರವು ವಿಧಿವಾದ, ಅರ್ಥವಾದ ಎಂಬ ಎರಡು ಶಾಸನಗಳನ್ನು ಮಾಡುತ್ತಿದೆ ವಿಧಿವಾದವೇ ಪ್ರಬಲ ಪ್ರಮಾಣ ಭೂತವೆಂದು ಸಕಲ ತತ್ವಜ್ಞರು ಒಡಂಬಟ್ಟಿರುವರು. ಆದ್ದರಿಂದ ಲಘುವಾಗಲಿಕ್ಕೆ ಯತ್ನಿಸದೆ ಗುರುವಾಗಲು ಬಯಸಬೇಕಷ್ಟೇ; ಇಷ್ಟಲಿಂಗ ಬಿಟ್ಟರೆ ಲಘುವಾಗಬಹುದು; ಗುರು ಎಂದೂ ಆಗುವದಿಲ್ಲ. ಅನುಭವದಲ್ಲಿ ನೋಡಿದರೂ ಕೂಡಾ ತೂಕ ಇದ್ದ ಮನುಷ್ಯನೇ ಬಲವಂತನೆಂದು ಬೇರೆ ಹೇಳಬೇಗಾಗಿಲ್ಲ. ಪ್ರತಿ ಒಂದು ದಾರ್ಶನೀಕರಲ್ಲಿಯೂ, ಮತಾನುಯಾಯಿಗಳ

ಲ್ಲಿಯೂ ಇಷ್ಟಲಿಂಗವೆಂಬ ಪಾರಿಭಾಷಿಕ ಶಬ್ದವಿಲ್ಲದಿದ್ದರೂ ಬೇರೆ ರೂಪವಾಗಿ ಅದನ್ನೇ ಅನುಕರಣ ಮಾಡುತ್ತಿರುವರು. ಬ್ರಾಹ್ಮಣರಲ್ಲಿ ಜನಿವಾರ, ಕ್ರಿಶ್ಚನರಲ್ಲಿ ಶಿಲುಬೆಯ ಗುರ್ತು, ಮುಹಮ್ಮದೀಯರಲ್ಲಿ ಚಂದ್ರನ ಗುರ್ತು ಇರುವ ಹಾಗೆ ವೀರಶೈವರಲ್ಲಿ ಇಷ್ಟಲಿಂಗದ ಕುರುಹು ಇದೆ. ಇಷ್ಟಲಿಂಗವನ್ನು ದೇಹದ ಮೇಲೆ ಧರಿಸಿದವರೆಲ್ಲರೂ ಅಷ್ಟಾವರ್ಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಷಟಸ್ಥಲ ಮಾರ್ಗದಲ್ಲಿ ನಡೆದರೆ ದೇವರ ಸಾಕ್ಷಾತ್ಕಾರ ಸುಲಭದಲ್ಲಿ ದೊರಕುವದು. ಆತ್ಮದಲ್ಲಿ ಪ್ರಾಣ ಲಿಂಗವಿದೆ. ಇಷ್ಟಲಿಂಗವೇಕೆ ? ಎಲ್ಲಾ ಆತ್ಮದಲ್ಲಿದೆ ಬಾಹ್ಯ ಕ್ರಿಯಾಚರಣೆಯಲ್ಲೇನಿದೆ; ಎನ್ನುವವರೂ ಇದ್ದಾರೆ. ಉದಾಹರಣೆಗಾಗಿ:— ಅಕ್ಕಿ ಬೇಕಾದರೆ ಪಾತ್ರೆಯ ಹೊರಗಡೆಯಲ್ಲೋ 'ಮಾ' ಒಳಗಡೆಯಲ್ಲೋ? ಬಾಹ್ಯ ಕ್ರಿಯೆಗಳಿಂದ ಅಕ್ಕಿ ಬೇಯಿಸಿದಾಗ ಪರಿಪಕ್ವ ಅನ್ನ ಸಿಕ್ಕು ಅದರಿಂದ ನಮ್ಮ ಉದರಕ್ಕೆ ಶಾಂತಿ ಸಿಗುವುದಿಲ್ಲವೇ ? ಅದೇಕೆ ಶಿವಯೋಗಿ ಶಿದ್ಧರಾಮನು ಪ್ರಾಣಲಿಂಗವಿದ್ದರೆ ಸಾಕು, ಎಂದು ವಾದಿಸಿ ಕೊನೆಗೆ ಅಲ್ಲಮನೊಡನೆ ಚನ್ನಬಸವಣ್ಣನಲ್ಲಿಗೆ ಹೋಗಿ ಆತನಿಂದ ಇಷ್ಟಲಿಂಗ ಸ್ವರೂಪಜ್ಞಾನ ಚನ್ನಾಗಿ ಬೋಧಪ್ರದವಾಗುವಂತೆ ಮಾಡಿ 'ಇಷ್ಟಲಿಂಗವು ಪ್ರಾಣಲಿಂಗದ ನೆಲೆಯನರಿಯುವ ದಾರಿ' ಎಂದು ಹೇಳಿ ಇಷ್ಟಲಿಂಗ ಧಾರಣೆ ಮಾಡಿಸುತ್ತಾರೆ. ಅಂದ ಬಳಿಕ ಸಾಮಾನ್ಯರ ಸೈರಾಸ್ಯವಾದದಲ್ಲಿ ಹುರುಳಿಲ್ಲ. ದೇವರ ಸಾಕ್ಷಾತ್ಕಾರ ಹೊಂದಲಿಕ್ಕೆ ಸಂನ್ಯಾಸಿಯಾಗಿ ಗಿರಿ-ಗುಹೆಗಳಲ್ಲಿ ಮೂಗ ಹಿಡಿದು ತಪಸ್ಸು ಮಾಡುವ ಹಠಯೋಗಬೇಕಿಲ್ಲ. ಸಂಸಾರದಲ್ಲಿದ್ದು ಬಳಸಿ ಬ್ರಹ್ಮಚಾರಿಗಳಾಗಿ ದಾಸೋಹಂಭಾವ ಒಲಿತು ಗುರು-ಲಿಂಗ ಜಂಗಮರ ಸೇವೆ ಸತ್ಯ ಶುದ್ಧ ಕಾಯಕದಿಂದ ಮಾಡುತ್ತ ಮುನ್ನಡೆವವರಿಗೆ ದೇವರ ಸಾಕ್ಷಾತ್ಕಾರ ಕ್ಷಿಪ್ರದಲ್ಲಿಯೇ ಲಭಿಸುವದು. ಮಾಡುವಲ್ಲಿ, ನೀಡುವಲ್ಲ, ನಾನು ನೀಡಿದೆ ನಾನು ಮಾಡಿದೆ, ಎಂಬ ಅಹಂಕಾರ ವಿರಬಾರದು. ನಿರಹಂಕಾರ ಸುಜ್ಞಾನಿಗಳಿಗೆ ಪ್ರಭು ವಲಿಯುವನೇ ಹೊರ್ತು ತಾಮಸ ಗುಣದವರಿಗೆ ಎಂದೂ ಒಲಿಯನು. ಕಾರಣ ಮಾಡುವಲ್ಲಿ, ನೀಡುವಲ್ಲಿ ನಾ ನೀಡಿದೆ, ನಾ ಮಾಡಿದೆ ಎಂಬ ಮಮಕಾರ ಅಹಂಕಾರಗಳ ಕೋಡುಗಳಿರಬಾರದು. ಇದೇ ಮಾತನ್ನೇ

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ; ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ । ಮಾಡುವ ನೀಡುವ ನಿಜಗುವುಳ್ಳೊಡೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮದೇವ ॥ "ಭಗವಾನ್ ಬಸವೇಶ್ವರ"

# ದಾರಿಗಾಣದ ವಿಶ್ವದ ಜನೆಯು
# ಶ್ರೀ ಜಗಜ್ಜ್ಯೋತಿ ಬಸವೇಶ್ವರನ ಆದರ್ಶ ಅನುಸರಿಸಲಿ.

( ಲೇಖಕಃ— ಮಹಂತೇಶ ಹೊನವಾಡ ಗಜೇಂದ್ರಗಡ )



ಭಾರತ ಮಾತೆಯು ತನ್ನ ಹಿರಿದಾದ ಸಂಸ್ಕೃತಿಯಿಂದ ಮಾನವನಿಗೆ ನಿಜವಾದ ಶಾಂತಿಗೋಸ್ಕರ ಎಷ್ಟೋ ಯುಗಯುಗಾಂತರದಿಂದ ತನ್ನ ಸತ್ಪುತ್ರರನ್ನು ದಯಪಾಲಿಸುತ್ತ ಬಂದಿದ್ದಾಳೆ. ಇದನ್ನು ಆಳವಾಗಿ ವಿಚಾರಿಸಿದಲ್ಲಿ ಭಾರತ ಭೂಮಿಯು ಪ್ರತಿಯೊಂದು ಕಣಕಣದಲ್ಲಿ ಅದರ ತೇಜ ಕಂಡಬರದೆ ಇರದು, ಅಂತೆಯೇ ಮಾನವನ ನಿಜ ಶಾಂತಿಗಾಗಿ ಪ್ರತಿಯೊಬ್ಬ ರಾಷ್ಟ್ರ ಪುರುಷರು ಜನ್ಮವೆತ್ತುತ್ತಲೆ. ಭಾರತವನ್ನು ಬಾಳಿ ಬೆಳಗಿಸಿದ್ದಾರೆ. ಅದರಂತೆ ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಅಂಥಹ ರಾಷ್ಟ್ರ ಪುರುಷರಲ್ಲಿ ಒಬ್ಬರಾದ ಶ್ರೀ ಜಗಜ್ಜ್ಯೋತಿ ಬಸವೇಶ್ವರರೊಬ್ಬರಾಗಿದ್ದಾರೆ. ಅವರು ಬಾಲ್ಯ ಜೀವನದಿಂದಲೇ ಸಮಾಜಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಮತ್ತು ತಮ್ಮ ನಡತೆಯಿಂದಲೇ ಶಿಕ್ಷಾಗುರು, ಮೋಕ್ಷಗುರು, ರಾಷ್ಟ್ರಗುರು ವನ್ನು ಕಂಡುಕೊಂಡು ಅದರಂತೆ ನಡೆದು ತೋರಿಸಿದ್ದಾರೆ. ಅವರ ಎಷ್ಟೋ ವಚನ ವಾಙ್ಮಯದಿಂದ ನಾವು ತಿಳಿದುಕೊಳ್ಳಬಹುದು. ಸತ್ಯ ನುಡಿಯುವದೇ ದೇವಲೋಕ ಮಿಥ್ಯ ನುಡಿಯುವದೇ ಮೃತ್ಯು ಲೋಕವೆಂದು ಸಾರಿ ಸಮಾಜಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಒಂದೇ ಸಮಾಜದಲ್ಲಿ ಇದರ ಮೇಲಿಂದ ಪ್ರತಿಯೊಬ್ಬ ಮಾನವನಿಗೂ ಆಚರಿಸಲು ಹೇಳಿದಂತೆ ಎಷ್ಟೋ ತಮ್ಮ ಅನುಭವ ಪೂರ್ಣವಾಣಿಯಿಂದ ಎಚ್ಚರಿಸುತ್ತಲೇ ಬಂದಿದ್ದಾರೆ ಪ್ರತಿಯೊಂದು ಅವರ ಶಬ್ದದಲ್ಲಿ ನಾವು ಕಂಡುಕೊಳ್ಳಬಹುದು. " ಅಯ್ಯಾ ಸ್ವರ್ಗ ಎಲವೋ ಎಂದೊಡೆ ನರಕ " ಈ ವಚನದಿಂದ ಪ್ರತಿಯೊಬ್ಬರೂ ಪ್ರತಿಯೊಬ್ಬರಿಗೆ ಹೇಗೆ ಮಾತನಾಡುವದನ್ನು ಕಲಿತುಕೊಳ್ಳುವದಾಗಿದೆ. ಮತ್ತು ಅವರ ವ್ಯಕ್ತಿತ್ವದಿಂದ ಎಷ್ಟೋ ಶ್ರೇಷ್ಠ ಘನತೆಯನ್ನು ಪಡೆದಿದ್ದರೂ ತಾನು ಶ್ರೇಷ್ಠನೆಂದು ಅಹಂ ಭಾವವಿಲ್ಲದೇ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ"ವೆಂದು

ಒಂದು ವಚನದಲ್ಲಿ ಅಂದಿದ್ದಾರೆ. ಮತ್ತು ಅದರಂತೆ ಸಮಾಜದಲ್ಲಿ ಮೇಲು ಕೀಳೆಂಬ ಭೇಧಭಾವವನ್ನು ಹೊಡೆದೋಡಿಸಲು ಸತತವಾಗಿ ಪ್ರಯತ್ನಿಸಿ ಅದರಂತೆ ಪ್ರತ್ಯಕ್ಷ ಆಚರಿಸಿ ತೋರಿಸಿದ್ದಾರೆ. ಕೇವಲ ಸಂಘಟನೆ ಆಗಬೇಕೆಂದು ಈಗಿನವರಂತೆ ಠರಾವಿನ ಮೂಲಕವಲ್ಲ ಸಮಾಜದಲ್ಲಿ ಸಂಘಟನೆ ಮಾಡುವಾಗ್ಗೆ ಎಷ್ಟೋ ವಿರೋಧ ಬಂದರೂ ಅದನ್ನು ಸಹಿಸಿ ತಮ್ಮ ದೃಢತೆಯನ್ನು ತೋರಿಸಿದ್ದಾರೆ. ಸಮಾಜ ಸಂಘಟಿಸುವಾಗ್ಗೆ ರಾಜನಿಂದಾಗಲೀ ಸಮಾಜದವರಿಂದಾಗಲೀ ಅವರ ಮೇಲೆ ಆಪತ್ತನ್ನು ತಂದು "ಅಂಜಿಸುವವರಿಗಾಗಿ ಹರಿಯುವ ಹಾವಿಗಂಜೆ ಉರಿಯ ನಾಲಿಗೆಗಂಜೆ ಸರಿಗಯ ಮೊನೆಗಂಜೆ ಒಂದಕ್ಕಂಜುವೆ ಒಂದಕ್ಕಳಕುವೆ ಪರಸ್ತ್ರೀ ಪರಧನವೆಂಬೀ ಜೂಬಿಗಂಜುವೆ ಮುನ್ನಂಜಿದ ರಾವಣನೆ ವಿಧಿಯಾದ ಅಂಜುವೆನಯ್ಯ ಕೂಡಲ ಸಂಗಮದೇವಾ." ಎಂದು ಸಮಾಜಕ್ಕಾಗಲೀ ರಾಜನಿಂದಾಗಲೀ ಅಂಜದೇ ಯಾವ ಶಕ್ತಿಗೆ ಅಂಜುವನು ಅದನ್ನೇ ಹೇಳಿ ಕಾರ್ಯಮಾಡಿದ್ದು ಅವರ ಘನತೆಯನ್ನು ತೋರಿಸುತ್ತದೆ. ಅವರ ಇನ್ನೊಂದು ವಚನದಲ್ಲಿ ಹೀಗೆ ಅಂದಿದ್ದಾರೆ. "ಬ್ರಹ್ಮ ಪದವಿಯನೊಲ್ಲೆ ವಿಷ್ಣುಪದವಿಯನೊಲ್ಲೆ ರುದ್ರ ಪದವಿಯನೊಲ್ಲೆ ಮತ್ತಾವ ಪದವಿಯನೊಲ್ಲೆಯ್ಯಾ ಕೂಡಲ ಸಂಗಮದೇವಾ" ನಿಮ್ಮ ಸದ್ಭಕ್ತರ ಪಾದನನರಿದಪ್ಪ ಮಹಾ ಪದವಿಯನೆ ಕರುಣಿಸಯ್ಯಾ ಎಂದಿದ್ದಾರೆ.

ಈಗಿನ ರಾಷ್ಟ್ರದ ಮುಖಂಡರು ಕೇವಲ ಪದವಿಗಾಗಿ ಮಾನ ಸನ್ಮಾನಕ್ಕಾಗಿ ಕಾರ್ಯಮಾಡುವದು ನಮಗೆ ಕಂಡುಬರುತ್ತದೆ. ಇವರೆಲ್ಲರೂ ಇದನ್ನು ಸರಿಯಾಗಿ ತಿಳಿದುಕೊಂಡು ಸನ್ಮಾನಕ್ಕಾಗಿ ಬರುವ ಜನತೆಯ ಹಣವನ್ನು ಸತ್ಕಾರ್ಯಕ್ಕೆ ಸಲ್ಲಿಸುವಂತೆ ರಾಷ್ಟ್ರ ನಾಯಕರು ದಾರಿ ತೋರಲಿ ಬಸವಣ್ಣನವರು ಬಿಜ್ಜಳನ ರಾಜ್ಯದಲ್ಲಿ ಮಂತ್ರಿ ಪದವಿಯಲ್ಲಿ ಇದ್ದರು. ಅವರು ಸತ್ಯ ನ್ಯಾಯದಿಂದ ರಾಜ್ಯಕ್ಕೆಲ್ಲ ಆದರ್ಶ ಪುರುಷರಾಗಿದ್ದರು. ಇದಲ್ಲದೆ ಸಮಾಜಕ್ಕೆ ಯಾರಿಂದಲಾದರೂ ಅನ್ಯಾಯವಾದರೆ ಅದನ್ನು ತೀವ್ರವೇ ಪ್ರತಿಭಟಿಸುತ್ತಿದ್ದರು. ತನ್ನ ಸಮಾಜದ ಉತ್ಕರ್ಷಕ್ಕಾಗಿ ಸದಾ ಚಿಂತಿಸುತ್ತಲೇ ಇದ್ದರು ಅವರ ಆಪತ್ತು ತಮ್ಮ ಆಪತ್ತೆಂದು ತಿಳಿದುಕೊಂಡು ಅದರ ನಿವಾರಣೆಗಾಗಿ ಪ್ರಯತ್ನಿಸುತ್ತಿದ್ದರು. ಅದರಂತೆ ಅವರು ಮಂತ್ರ ಪದವಿಯಲ್ಲಿ ಇದ್ದಾಗಲೇ ಅವರ ಅನುಯಾಯಿಗಳಿಗೆ ರಾಜನಿಂದ ಶಿಕ್ಷೆಯಾಗಬೇಕೆಂದು ಶಿಕ್ಷೆ ವಿಧಿಸುವಾಗ್ಗೆ ಮಂತ್ರಿ ಪದವಿಯನ್ನೇ ಬಿಟ್ಟು ತನ್ನ ಅನುಯಾಯಿಗಳ

ಸಂಕಟದಲ್ಲಿ ತಾನೂ ಭಾಗಿಯಾಗಬೇಕೆಂದು ಮಂತ್ರಿ ಪದವಿಯನ್ನೇ ಬಿಟ್ಟು ಬಂದದ್ದು ಆದರ್ಶ ರಾಷ್ಟ್ರಪುರುಷನ ಲಕ್ಷಣಗಳಿವು ಅದರಂತೆ ಜನತೆಗಾಗಿ ತಮ್ಮ ವೈಭವಪೂರ್ಣ ಮಂತ್ರಿ ಪದವಿಯನ್ನು ತೃಣ ಸಮಾನವೆಂದು ಭಾವಿಸಿದ್ದು ಯೋಗ್ಯವಾಗಿದೆ. ಅದರಂತೆ ಈಗಿನ ಮಂತ್ರಿಗಳು ಅನುಸರಿಸಿದರೆ ಒಳ್ಳೇಯದು, ಕೇಂದ್ರಮಂತ್ರಿಗಳಲ್ಲಿ ಒಬ್ಬರಾಗಿ ಹೋದ ಭಾರತ ಕೇಸರಿ ಸ್ವರ್ಗೀಯ ಡಾ॥ ಶಾಮುಪ್ರಸಾದ ಮುಖರ್ಜಿಯವರು ಒಬ್ಬರು ಮಾತ್ರ ಶ್ರೀ ಬಸವಣ್ಣನವರ ಆದರ್ಶದಂತೆ ನಡೆದು ತೋರಿಸಿದರು. ಅವರನ್ನು ಕೇಂದ್ರದಲ್ಲಿ ಮಂತ್ರಿಗಳನ್ನಾಗಿ ತಕ್ಕೊಂಡದ್ದು ಅವರ ಈಗಿನ ಪಕ್ಷದ ಸದಸ್ಯರಿದ್ದಾರೆಂದು ತಕ್ಕೊಳ್ಳಲಿಲ್ಲ. ಅವರ ನಡತೆ ವ್ಯಕ್ತಿತ್ವ ಅವರ ರಾಷ್ಟ್ರಪ್ರೇಮ ಸಂಸ್ಕೃತಿಯ ರಕ್ಷಣೆಗಾಗಿ ಹೋರಾಡಿದ ಪ್ರತಿಭೆಯಿಂದ ಮಾತ್ರ ಕಾಂಗ್ರೆಸ ರಾಜ್ಯದಲ್ಲಿ ಅವರನ್ನು ಔದ್ಯೋಗಿಕ ಮಂತ್ರಿಯನ್ನಾಗಿ ತಕ್ಕೊಂಡಿದ್ದರು. ಅವರು ಕೇವಲ ಮಂತ್ರಿ ಪದವಿಯೇ ಶ್ರೇಷ್ಠವೆಂದು ಗಣಿಸದೇ ತಮ್ಮ ಜನತೆಯ ಸುಖದುಃಖದಲ್ಲಿ ಭಾಗಿಯಾಗಿ ಅವರ ಸೇವೆ, ಕೊಟ್ಟವಚನ ಪೂರೈಸಲಾರದ್ದಕ್ಕೆ ಮಂತ್ರಿ ಪದವಿಯನ್ನೇ ಧಿಃಕರಿಸಿ ಹೊರಗೆ ಬಂದರು. ಇಂಥಹ ಮಹಾನ್ ವ್ಯಕ್ತಿಯ ಆದರ್ಶವು ಭಾರತದಲ್ಲಿ ಚಿರಂತನವಾಗಿ ಉಳಿಸಿಕೊಂಡು ಹೋಗಲು ಅವರ ಎಷ್ಟೋ ಅನುಯಾಯಿಗಳು ದೃಢತೆಯಿಂದ ಕಾರ್ಯಮಾಡುತ್ತಿದ್ದಾರೆ. ಅಂಥಹ ಕಾರ್ಯವೇ ನಿಜವಾಗಿ ರಾಷ್ಟ್ರದಲ್ಲಿ ಚಿರಂತನವಾಗಿ ಉಳಿದಿವೆ. ಉಳಿಯುತ್ತ ಬಂದಿವೆ. ಭಾರತ ಮಾತೆಯು ತನ್ನ ಎಲ್ಲ ವೈಶಿಷ್ಟ ಪೂರ್ಣಗುಣಗಳಿಂದ ಮಹಾನ್ ಮಹಾನ್ ರಾಷ್ಟ್ರ ಪುರುಷರನ್ನು ಪ್ರತಿಯೊಂದು ಯುಗ ಯುಗದಲ್ಲಿ ನಿರ್ಮಿಸಿ ಅವರನ್ನು ಕಾರ್ಯಪ್ರವರ್ತರನ್ನಾಗಿ ಮಾಡಿದ್ದಾಳೆ.

ವಿಶ್ವದ ಎಷ್ಟೋ ರಾಷ್ಟ್ರಗಳಲ್ಲಿ ಜನ್ಮವೆತ್ತಿದ ಮಹಾನ್ ಪುರುಷರು ಮಾನವನಿಗೆ ಮಾರ್ಗದರ್ಶನ ಮಾಡುವದರಲ್ಲಿ ತಪ್ಪಿದ್ದಾರೆ. ಯಾಕಂದರೆ ಅವರ ಸಂಸ್ಕೃತಿ ಧರ್ಮ ಮತ್ತು ನಡತೆ ಇವೆಲ್ಲವುಗಳ ಇತಿಹಾಸವನ್ನು ಎಷ್ಟೋ ವರ್ಷಗಳಿಂದ ನೋಡಿದಲ್ಲಿ ತಪ್ಪುದಾರಿಯನ್ನು ತುಳಿದು ನಿಜವಾದ ಶಾಂತಿ ಮಾರ್ಗ ಸಿಗದೇ ಪುನಃ ಪುನಃ ಭಾರತವನ್ನೆ ಗುರುವಾಗಿ ಸ್ವೀಕರಿಸಿ ಅದರಂತೆ ನಡೆಯಲು ಇದರ ಕಡೆಗೆ ಆಶಾದೃಷ್ಟಿಯಿಂದ ನೋಡುತ್ತಾರೆ. ಯಾಕಂದರೆ ಇಲ್ಲಿಯ ಸಂಸ್ಕೃತಿ ಧರ್ಮಾಚರಣೆ ಚಿರಂತನವಾಗಿ ಉಳಿದಿವೆ. ತನ್ನ ಶ್ರೇಷ್ಟತೆಗಾಗಿ ಅನೇಕ ಮಹಾನ್ ರಾಷ್ಟ್ರ ಪುರುಷರಾದ ಶ್ರೀ ಕೃಷ್ಣ, ರಾಮ, ಬುದ್ಧ, ಬಸವೇಶ್ವರ, ಮಹಾವೀರ, ರಾಣಾಪ್ರತಾಪ, ಛತ್ರಪತಿ,

ಶಿವಾಜಿ ಮಹಾರಾಜ, ಸ್ವಾಮಿ ವಿವೇಕಾನಂದ ಇನ್ನೂ ಅನೇಕ ಸಾಧು ಸಂತರು ಮಹಾತ್ಮರು ಇಲ್ಲಿ ಜನ್ಮವೆತ್ತಿ ಮಾರ್ಗ ತೋರಿಸುತ್ತಲೇ ಭಾರತವನ್ನು ತೇಜಃಪುಂಜವಾಗಿ ಇಟ್ಟಿದ್ದಾರೆ. ಇದು ಸತ್ಯ ಮಾತಾಗಿದೆ. ಮಾನವನ ಬಾಳು ವಿಕೆಗೆ ಯಾವದೇ ರಾಷ್ಟ್ರವು ಮಾರ್ಗದರ್ಶನದ ಆದರ್ಶ ರಾಷ್ಟ್ರವಾಗಬಲ್ಲದೆಂದರೆ ಆ ರಾಷ್ಟ್ರವೇ ಭಾರತವಾಗಬಲ್ಲದು. ಸದ್ಯಕ್ಕೆ ಬೇರೆ ಬೇರೆ ರಾಷ್ಟ್ರಗಳಲ್ಲಿ ಜನ ತೆಯು ನಿಜವಾದ ಕಲ್ಯಾಣಕ್ಕಾಗಿ ಎಷ್ಟೋ ತತ್ವಗಳುದ್ಭವಿಸಿವೆ. ಅವುಗಳಲ್ಲಿ ಮಾನವನ ಶ್ರಮಕ್ಕೆ ತಕ್ಕಂತೆ ಭೋಗವಿಲಾಸ ಕೈಕೊಳ್ಳುವ ಆದರ್ಶ ಒಂದೇ ಅವರು ಇಟ್ಟಿದ್ದಾರೆ. ಅದರಂತೆ ಮೇಲಿಂದ ಮೇಲೆ ಪ್ರಯತ್ನಿಸುತ್ತಿದ್ದಾರೆ. ಅಂತೆಯೇ ರಾಷ್ಟ್ರಗಳು ದಾರಿಗಾಣದೇ ಇಂದಿನ ರಾಷ್ಟ್ರ ನಾಳೆ ಇಲ್ಲ. ನಾಳಿನ ರಾಷ್ಟ್ರ ನಾಡದು ಇಲ್ಲ. ಇದರಂತೆ ಎಷ್ಟೋ ರಾಷ್ಟ್ರಗಳು ಕಣ್ಮರೆ ಆಗುತ್ತಲೇ ಇವೆ. ಭಾರತವು ಮಾತ್ರ ಸತ್ಯ ಸಿದ್ಧಾಂತದ ತಳಹದಿಯ ಮೇಲೆ ಬಾಳಿದೆ. ಮುಂದುವರೆದ ರಾಷ್ಟ್ರಗಳೆಂದು ಪ್ರಚಲಿತವಿರುವ ರಾಷ್ಟ್ರಗಳು ಎಷ್ಟೋ ತತ್ವ ಜ್ಞಾನವನ್ನು ಪ್ರಯತ್ನಿಸಿ ಜನತೆಗೆ ಮಾರ್ಗದರ್ಶನ ಮಾಡಲು ಹೊರಟಿವೆ. ಕಮ್ಯುನಿಜಂ ಮತ್ತು ಸಮಾಜವಾದಗಳೆಂದು ಭೋಧಿಸಲು ಮಾನವನಿಗೆ ಆಶಾವಾದಿತ್ವವನ್ನೇ ಚರಮ ಸೀಮೆ ಮುಟ್ಟುವ ವರೆಗೆ ಭೋದಿಸುತ್ತಿವೆ. ಅದ ರಂತೆ ಮಾನವನು ತನ್ನ ಜೀವಿತದ ಇರುವಿಕೆಯಂದರೆ ಆತ್ಮದಲ್ಲಿ ಸದಾ ಕಲ್ಮಷ ವಿಚಾರಗೈಯುವ ಪ್ರೇರಕ ಶಕ್ತಿಯಾಗಿಯೇ ಪರಿಣಮಿಸಿವೆ ಇದು ನಿಜವಾಗಿ ಈಗಿನ ರಾಷ್ಟ್ರಗಳಲ್ಲಿ ಕಂಡು ಬರುತ್ತಿವೆ. ಭಾರತದಲ್ಲಿ ಮಾತ್ರ ತನ್ನ ಶ್ರಮಕ್ಕೆ ತಕ್ಕಂತೆ ಭೋಗಗೈಯುವದೆಂದರೆ ಪಾಪಕೃತ್ಯ ಮಾಡಿದಂತೆಯೇ ಎಂದು ಭಾರತೀಯ ಸಂಸ್ಕೃತಿಯು ಹೇಳುತ್ತದೆ. ಇಲ್ಲಿಯ ಜನಾಂಗವೂ ಕೂಡಾ ಭಾವಿಸಿದೆ.

ಯಾವದೇ ವ್ಯಕ್ತಿಗೆ ಭಾರತದಲ್ಲಿ ಏನು ಕಡಿಮೆ ಅದೆ. ಅದನ್ನು ಸಮಾ ಜವು ದಯಪಾಲಿಸುತ್ತ ಅವರ ಬಾಳುವಿಕೆಗೆ ಸಹಾಯ ಮಾಡುತ್ತ ತಾವು ಬಾಳಿದ ಇತಿಹಾಸವೇ ಭಾರತದ್ದಾಗಿದೆ. ಇದನ್ನು ಗಮನಿಸದೇ ಭಾರತವನ್ನು ತಮ್ಮ ವಿಚಾರಸರಣಿಯಂತೆ ಮಾಡಿಕೊಳ್ಳಲು ಈ ರಾಷ್ಟ್ರದ ಮೇಲೆ ಎಷ್ಟೋ ಸಂಸ್ಕೃತಿಯವರು ದಾಳಿ ಮಾಡಿದ್ದಾರೆ. ಮಾಡುತ್ತಲೇ ಇದ್ದಾರೆ. ಇದನ್ನು ಭಾರತೀಯ ಸುಸಂಸ್ಕೃತಿಯು ತನ್ನ ಶ್ರೇಷ್ಠತೆಯಿಂದ ಅರಗಿಸಿಕೊಂಡಿದೆ. ಇಷ್ಟೇ ಅಲ್ಲ, ಮುಂದೆಯೂ ಪರಕೀಯರ ಸಂಸ್ಕೃತಿಯನ್ನೂ, ಪರಕೀಯರ ವಿಚಾರವನ್ನು ಲೀನಮಾಡಿಕೊಂಡು ತನ್ನದೇ ಆದ ಸಂಸ್ಕೃತಿಯನ್ನು, ಉಳಿಸಿ

ಕೊಂಡು ಬರುವದೆಂದು ಇತಿಹಾಸವೇ ಹೇಳಬಲ್ಲರು. ಅದಕ್ಕಾಗಿ ಭಾರತೀಯರು ತಮ್ಮ ಸಂಸ್ಕೃತಿ ಹಿರಿಮೆಯನ್ನು ಅರಿದುಕೊಳ್ಳಲು ಭಾರತದಲ್ಲಿ ಆಗಿ ಹೋದ ಮಹಾನ್ ರಾಷ್ಟ್ರ ಪುರುಷರ ಜಯಂತಿಯನ್ನು ಆಚರಿಸಿ ಅವರ ತತ್ವಜ್ಞಾನ ವನ್ನು ವಿಶ್ವದ ಮಾನವನು ಅರಿತುಕೊಳ್ಳುವಂತೆ ಕಾರ್ಯ ಪ್ರವೃತ್ತರಾಗಲೀ ಅಂದರೆ ವಿಶ್ವದಲ್ಲಿ ದಾರಿತಪ್ಪಿ ನಡೆಯಲು ಹಚ್ಚಿದ ಅವರ ರಾಷ್ಟ್ರಪುರುಷರ ಕಾರ್ಯವನ್ನು ಮತ್ತು ಭಾರತದಲ್ಲಿ ಬಾಳಿ ಬೆಳಗಿದ ಶ್ರೀ ಜಗಜ್ಯೋತಿ ಬಸವೇಶ್ವರರ ತತ್ವಜ್ಞಾನವನ್ನು ಸ್ವೀಕರಿಸಿ ವಿಶ್ವದ ಜನತೆ ನಿಜವಾಗಿ ಮಾನವ ಜನಾಂಗಕ್ಕೆ ಚಿರಂತನ ಸುಖಶಾಂತಿಗಾಗಿ ಆತ್ಮಾರ್ಪಣೆ ಗೈಯುವ ಶ್ರೇಷ್ಠ ಭಾರತೀಯ ಮಾರ್ಗವಾದ ಶ್ರೀ ಬಸವೇಶ್ವರರ ತ್ಯಾಗ ನಿಸ್ವಾರ್ಥ ಸೇವಾಭಾ ವವನ್ನು ಪ್ರತಿಯೊಬ್ಬ ವಿಶ್ವದ ಮಾನವನು ಅನುಸರಿಸಿ ಪೂರ್ಣ ಮಾನವತ್ವ ಹೊಂದಿ ದೈವತ್ವಕೇರುವ ಮಾರ್ಗವನ್ನು ಸದಾ ಪ್ರಯತ್ನಿಸಿರೆಂದು ಆಶಿಸು ತ್ತೇನೆ.

# ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ.

## (ಏಕಾಂಕ ನಾಟಕ.)

(ಲೇಖಕಃ— ನಾ. ಮ. ಬಸವರಾಜ ನಾಗರಹಾಳು, ಮುಕ್ಕಾಮು- ಶಿರುಗುಪ್ಪ)



### ಪಾತ್ರಗಳು.

ಶಂಕರ— ಶಿವಬ್ರಾಹ್ಮಣ, ಭಾಗೀರಥಿ— ಶಂಕರನ ಹೆಂಡತಿ. ಜಂಗಮು— ದೇಶಸಂಚಾರಿ, ಅತಿಥಿ, ಪರಮೇಶ್ವರನೂ ಆಗಿರುವನು. ಅಮ್ಮವ್ವೆ— ಶಂಕರ, ಭಾಗೀರಥಿಯರ ಮಗಳು. ಅಮ್ಮವ್ವೆಯ ಸೋದರತ್ತೆ ಇತ್ಯಾದಿ.

### ೧ನೇ ದೃಶ್ಯ.

(ಶಂಕರ, ಭಾಗೀರಥಿ ಮತ್ತು ಮಗಳು ಅಮ್ಮವ್ವೆಯರು ಈಶ್ವರನನ್ನು ಪೂಜಿಸುವರು. ತೆರೆ ನಿಧಾನವಾಗಿ ಸರಿಯುವುದು.)

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ, ವಿಶ್ವತೋ ಪಾದ ನೀನೇ ದೇವಾ, ಕೂಡಲಸಂಗಮದೇವಾ. (ಎಲ್ಲರೂ ಕೈಮುಗಿಯುವರು)

ಮಗಳೇ ದೇವರಲ್ಲಿ ಭಕ್ತಿಯಿಡಬೇಕಮ್ಮಾ. ಪರಮಾತ್ಮನು ಸರ್ವವ್ಯಾಪಿ. ಅತಿಥಿಗಳೇ ಸಾಕ್ಷಾತ್ ಜಂಗಮ ಸ್ವರೂಪಿಗಳು. ನಾವು ಯಾವಾಗಲೂ ಹರ ಕಥೆ ಕೇಳಬೇಕು. ದೇವಾಲಯಕ್ಕೆ ಹೋಗಬೇಕು ನಾವು ಈಶ್ವರನಿಗೆ ಮೆಚ್ಚು ವಂತಿರಬೇಕು.

ಭಾಗೀರಥಿಃ— ಇಲ್ರಿ ಬಿಡ್ರಿ, ಚಿಕ್ಕವಳಿಗೇನುಗೊತ್ತಾಗುತ್ತದೆ. ಪಾಪ ದೇವರಿಗೆ ನಮಸ್ಕರಿಸಬೇಕು ಎಂದು ಹೇಳಿದರೆ ಸಾಕು. ನಮ್ಮ ಸಂಸ್ಕೃತಿಯೇ ಅವಳಿಗೆ ಬರುತ್ತಿದೆ. ಮುಂದೆ ಹೊತ್ತಾಯಿತು ಮನೆಗೆ ಹೋಗಣ ನಡೆಯಿರಿ.

ಅಮ್ಮವ್ವೆಃ— ಅಮ್ಮಾ, ಅಪ್ಪ ಹೇಳುವ ಮಾತುಗಳು ಅರ್ಥವಾಗುತ್ತವಮ್ಮಾ. ದೇವರನ್ನು ಪ್ರೀತಿಸಿದರೆ ಕಾಣಿಸುವನೇನಪ್ಪಾ! ಭಕ್ತಿ ಎಷ್ಟುದಿನ ಇಡಬೇಕು?

ಶಂಕರಃ— ಭಕ್ತಿಗೀಶ್ವರನ ತಲೆದೂಗಿಸುವದವಧಿ. ಆ ಮೇಲೆ ದೇವರೇ ನಮ್ಹತ್ತಿರ ಓಡಿಬರ್‍ತಾನೆ.

ಭಾಗೀರಥಿ:— ಓಡಿಬರಲಿಕ್ಕೆ ನಿಮ್ಮಗಳಲ್ಲಿ ನಡೆಯಿರಿ ಊಟಕ್ಕೆ ಹೊತ್ತಾಗಿದೆ. (ಹೋಗುವರು.)

**೨ನೇ ದೃಶ್ಯ.**

ನಿವೇದಕಃ— (ಹಿನ್ನೆಲೆಯಿಂದ) ಅಮ್ಮವ್ವೆಗೆ ಈಗ ಬೆಳೆದ ನವತರುಣಿಯಾಗಿದ್ದಾಳೆ. ಇದು ವರೆಗೂ ಶಿವನನ್ನೇ ನಂಬಿ ಪೂಜಿಸಿ ತಂದೆತಾಯ್ಗಳಿಗೂ ಎಲ್ಲರಿಗೂ ಅಚ್ಚುಮೆಚ್ಚಾದ ಮಗಳಾಗಿದ್ದಳು. ಕನ್ನಿಕೆ ಪ್ರಾಯವಾದ ಮೇಲೆ ಅಮ್ಮವ್ವೆ ಒಂದು ದಿನ (ತೆರೆ ನಿಧಾನವಾಗಿ ಏಳುತ್ತದೆ. ಈಶ್ವರನ ದೇವಾಲಯದಲ್ಲಿ)

ಅಮ್ಮವ್ವೆ: – ದೇವರೇ, ನೀನಿರುವಿಯಲ್ಲವೆ. ನಿನ್ನನ್ನು ಇಷ್ಟುದಿನಗಳ ವರೆಗೆ ಎಷ್ಟು ಕೊಂಡಾಡಿದರೂ ಕಾಣಿಸಲಿಲ್ಲ. ಕಾರಣವೇನು. ಇದುವರೆಗೆ ಚಿಕ್ಕವಳೆಂದು ತಾತ್ಸಾರವೇ? ಈಗಾದರೂ ದೊಡ್ಡವಳಾಗಿದ್ದೇನೆ. ಇನ್ನು ಮೇಲಾದರೂ ಕಾಣಿಸುವಿಯಲ್ಲವೇ! ನಿನಗೆ ಕರುಣಾಕರ ಎಂದು ಹೆಸರಿಟ್ಟುದೇಕೆ? ನಿನ್ನ ಪೂಜೆಯಲ್ಲೇನಾದರೂ ತಪ್ಪಿದನೇ: ಸರಿ ನಾಳೆ ಬರುತ್ತೇನೆ. ನನ್ನ ಪ್ರಶ್ನೆಗಳಿಗೆ ಉತ್ತರ ತಯಾರಿಸಿಕೊ (ಹೋಗುವಳು.)

(ಮನೆಯಲ್ಲಿ ಶಂಕರ ಶತಪಥವರಿಯುತ್ತಾ.)

(ಒಳಗಿನಿಂದ) ಅಣ್ಣಾ, ಅಣ್ಣಾ !

ಶಂಕರಃ— ಬಾರಮ್ಮಾ, ತಂಗೀ, ಬಾ. ಬಾಳದಿವಸದಿಂದ ಬಂದಿಯುಮ್ಮಾ.

ತಂಗಿ:— ಬರೋ ಕಾಲ ಬಂದಿದೆಯಪ್ಪಾ ಬಂದಿದೇನೆ. ನನ್ನ ಸೊಸೆ ಎಲ್ಲಿ?

ಶಂಕರಃ— ದೇವಾಲಯಕ್ಕೆ ಹೋಗಿದ್ದಾಳೆ. (ಎನ್ನುವಷ್ಟರಲ್ಲಿ ಅಮ್ಮವ್ವೆ ಪೂಜಾಸಾಮಗ್ರಿಗಳೊಡನೆ ಬರುವಳು) ಅಗೋ, ತಂಗಿ ನಿನ್ನ ಸೊಸೆ ಬಂದೇಬಿಟ್ಟಳು.

ತಂಗಿ:— ನನ್ನ ಸೊಸೆ ಅಮ್ಮವ್ವಳೇ ಎಷ್ಟು ಬೆಳೆದಿದಾಳೆ, ಬಾರಮ್ಮಾ,

ಶಂಕರ:— ನಿನ್ನತ್ತೆಗೆ ಪ್ರಸಾದ ಕೊಡಮ್ಮಾ (ಪ್ರಸಾದ ಕೊಟ್ಟು ಮನೆಯೊಳಗೆ ಹೋಗುವಳು.)

ತಂಗಿಃ— ನನ್ನ ಮಾತು ನಡೆಸಿಕೊಡಬೇಕಣ್ಣಾ.

ಶಂಕರ:— ಏನು ತಂಗಿ ?

ತಂಗಿ;— ನನ್ನ ಮಗನಿಗೆ ನಿನ್ನ ಮಗಳನ್ನು ಕೊಟ್ಟು ಲಗ್ನ ಮಾಡ ಬೇಕು.

ಶಂಕರ:— ನನ್ನ ಮಗಳು ಲಿಂಗಪೂಜೆಯನ್ನಲ್ಲದೆ ಮತ್ತೊಂದನ್ನರಿಯಳು. ನಿನ್ನ ಮಗನು ಅನ್ಯದೈವ ಪೂಜಕನು ಅದುಕಾರಣ ಕೊಡಲಾರೆನು.

ತಂಗಿ;— ನಾವು ಕುಲಹೀನರೆಂದು ನೀನು ಕೊಡಲೊಲ್ಲೆಯಾ, ಹೀಗಾದರೆ ನಾನು ಇಲ್ಲಯೇ ಪ್ರಾಣಬಿಡುವೆನು.

ಶಂಕರ:— ತಂಗೀ ಹಾಗೆ ಮಾಡಬೇಡ. ಮಗಳ ಪುಣ್ಯವಿದ್ದಂತೆ ಆಗಲಿ ಲಗ್ನ ಮಾಡಿಕೊಡುತ್ತೇನೆ ನಡೆಯಮ್ಮ ಊಟಕ್ಕೆ (ಹೋಗುವರು.)

## ೩ನೇ ದೃಶ್ಯ.

### (ಮದುವೆಯನಂತರ)

ನಿವೇದಕಃ (ಹಿನ್ನೊಲೆ) ಅಮ್ಮವ್ವೆ, ತನ್ನ ಸೋದರತ್ತೆಯ ಮಗನನ್ನು ಮದುವೆ ಮಾಡಿಕೊಳ್ಳುತ್ತಾಳೆ)

ಅಮ್ಮವ್ವೆ:— ಪರಮೇಶ್ವರಾ. ನಿನ್ನನ್ನೇ ಒಲಿಸಿಕೊಳ್ಳಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಇದರಲ್ಲೂ ಸಂಸಾರವೆಂಬ ಕೂಪಕ್ಕೆ ತಳ್ಳಿದೆಯಾ ತಂದೇ, ಎಂಥಾ ನಿರ್ದಯನು. (ತಂದೆ ಶಂಕರ ದುಃಖಾತಿಶಯದಿಂದ ಬರುವನು) ಅಪ್ಪಾ, ಏನು ಸಮಾಚಾರ ಹೀಗೇಕಿರುವಿ?

ಶಂಕ:—ಮಗಳೇ, ನಾನೇನ್ಹೇಳ್ಲಿ! ನಿನಗೆ ಕುಂಕುಮವಿಡುವ ಸೌಭಾಗ್ಯ ಇನ್ನುಮೇಲೆ ಇಲ್ಲದಾಯಿತು, ನಿನ್ನ ಪತಿದೇವರು ನಿನ್ನೆ ಲಿಂಗೈಕ್ಯರಾದರಂತೆ ಬಾರಮ್ಮಾ, ದುಃಖಿಸಬೇಡ, ಕಾಲಚಕ್ರವು ತಿರುಗುತ್ತಿದೆ. ಬಾ ಹೋಗೋಣ ನಡೆಯಮ್ಮ (ಮಗಳನ್ನು ಹಿಡಿದುಕೊಂಡು ಹೋಗುವನು.)

ನಿವೇದಕ:-(ಹಿನ್ನೆಲೆ)ಅಮ್ಮವ್ವೆಯ ಗಂಡ ಮತ್ತು ಸ್ವಲ್ಪ ದಿನಗಳಲ್ಲೇ ತಂದೆ ತಾಯಿಗಳು ಸ್ವರ್ಗಸ್ಥರಾಗುವರು. ಈಗ ಅಮ್ಮವ್ವೆ ರಾಟಿ ಕಾಯಕ ಮಾಡುತ್ತ ಜೀವಿಸುವಳು. (ತೆರೆ ನಿಧಾನವಾಗಿ ಸರಿಯುವದು.)

ಅಮ್ಮವ್ವೆ:— ಕಾಯಕದಲ್ಲಿ ನಿರುತನಾದೊಡೆ ಗುರು ದರ್ಶನವಾದರೂ ಮರೆಯಬೇಕು. ಜಂಗಮ ಮುಂದಿದ್ದೊಡೆಯೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು.

ಆಹಾ ! ಶರಣರ ವಚನ ಎಷ್ಟು ಅಮೋಘವಾಗಿದೆ. ನಾನಾದರೂ ಕಾಯಕದಿಂದಲೇ ಗುರುಜಂಗಮರನ್ನು ಸಂತೋಷ ಪಡಿಸಬೇಕು. ನಾನು ರಾಟಿ ಕಾಯಕ ಮಾಡುತ್ತೇನೆ. (ಎನ್ನುತ್ತಾ ದಾರ ನೂಲುವಳು.)

(ಒಳಗಿನ ಧ್ವನಿ) ಅವ್ವಾ, ಅವ್ವಾ, ಯಾರಿದ್ದೀರಿ ತಾಯೀ,

ಅಮ್ಮವ್ವೆ:— ಬನ್ನಿ ಸ್ವಾಮೀ (ಜಂಗಮ ಬರುವನು.) "ಆವ ಕಡೆಯಿಂದ ಬಿಜಯಂ ಗೈದಿರಯ್ಯಗಳೇ; ನೀವು ಬರೆ, ನಾ ಧನ್ಯಳಾದೆನೆಮ್ಮಯ್ಯಗಳೆ"

ಜಂಗಮ:— ನಾವು ದೇಶಾಂತ್ರಿಗಳು ಕಾಣವ್ವ, ಭಾಳಲೋಚನನ ಭಕ್ತರು ನಾವು ಕಾಣವ್ವ, ರುದ್ರ ಲೋಕದ ರುದ್ರನವತಾರ ನಾವವ್ವ.

ಅಮ್ಮವ್ವೆ:— ರುದ್ರನೆಂತಿರ್ಪನೆಂಬುದೆನಗೆ ಪೇಳಯ್ಯ. ನೀತಿ ಚಾರಿತ್ರಗಳ ಕುರುಹೇನು ಹೇಳಯ್ಯ.

ಜಂಗಮ:— ಅಮ್ಮವ್ವೆ, ಕೇಳ್ ತಾಯೆ ನಿಂ ಕೇಳವ್ವ; ದಿನಪಶಶಿಖಿನಯನದಿಂದೊಪ್ಪುತಿಹನವ್ವ, ಜಡೆ ಮುಕುಟದಿಂ ಗಂಗೆ ಮಡುಗಟ್ಟಿನಿಂದಿಹಳ್, ಕಡು ಚನ್ನನಾಗಿರ್ಪ ಭಸ್ಮ ಸರ್ವಾಂಗದೊಳ್, ಕೊರಲೋಳ್ ಗರಂ, ಸುರರ ಕೋಟಿ ಮಾಲೆಗಳಿಹವು. ಕರದಲ್ಲಿ ಬ್ರಹ್ಮಶಿರ ಮುಂಕ್ಕಿ ಇರುತಿಹವು. ತೊಡುವುದುಂ ಕರಿದೊವಲು, ಉಡುವುದುಂ ಪುಲಿದೊವಲು, ತೊಡವು ಹಾವುಗಳು ಭಸ್ಮಾಂಗಮುಂ ಶಿವಗೆ ನಲು ಪಡುವುದುಂ ಸುಡಗಾಡು, ಕಡೆಗೆಯದರೊಳಗಾಟ, ಒಡನೆಯಿರ್ಪವರೆಲ್ಲ ಮರುಳ್ಗಳವರೊಳೆಯಾಟ, ತಂದೆ, ತಾಯಿಗಳಿಲ್ಲ ತಂದೆ ಮೂಜಗಕೆಲ್ಲ, ಬಂಧು ಬಳಗಗಳಿಲ್ಲ ಪೊರೆವೊಡೆಯ ತಾನಿಲ್ಲ. ದೇಶಿಗನು ತಾನೆ ದೇಶಾಧಿಪತಿಯುಂ ತಾನೆ. ಆಶೆಯೊಬ್ಬರುವಿಲ್ಲ ವಾಶಾಂಬರಂ ತಾನೆ. ಹೇಳುವರೆ ತಂದೆ ತಾಯಕ್ಕ ತಂಗಿಯರಿಲ್ಲ. ಕೇಳವ್ವ; ಹೊಟ್ಟೆಯಂ ನೋಡಿ ಹೊರೆವವರಿಲ್ಲ, ಹಸಿದನೆಂದರೆ ಮರುಗಿ ಇಕ್ಕುವವರುಗಳಿಲ್ಲ. ಬಳವಳಿದದಂ ನೋಡಿ ತಾರಿಸುವವರುಮಿಲ್ಲ. ಈ ಪರಿಯೊಳಿರುತಿರ್ಪ ಶಿವನ ಕಾಣ್ಬರೆಯಿಂತು.

ಅಮ್ಮವ್ವೆ:— (ಸ್ವಗತ) ಶಿವಗೆ ತಂದೆ ತಾಯಿಗಳಿಲ್ಲ, ಬಂಧು ಬಳಗಗಳಿಲ್ಲ.

ಜಂಗಮ:— ನಾವು ಹಸಿದೇವು ನಮಗೆ ಬೋನವಂ ನೀಡು

ಅಮ್ಮವ್ವೆ:— ಬನ್ನಿ; ಜಂಗಮಾರ್ಯಾ ಆರೋಗಣೆ ತಯಾರಿಸಿದೆಂ.

(ಊಟದ ನಂತರ ಜಂಗಮಯ್ಯಗಳು ಹೋಗುವರು.)

ಅಮ್ಮವ್ವೆ:— ಖಂಡೇಂದು ಮೌಳಿ ನಿನಗಾರು ಮಿಲ್ಲಕ್ಕಟಾ, ಬಾರಯ್ಯ ಶಿವನೆ ನಾಂ ಮಕ್ಕಳಿಲ್ಲದ ಬಂಜೆ, ಬಾರಯ್ಯ ಎನ್ನ ಸಾರಲ್ಕೆ ಮನುಜರಿಗಂಜೆ, ಮುಂಡೆ ಜಡೆಗಟ್ಟಿ ನೀರೆರೆವರಿಲ್ಲಕ್ಕಟಾ, ಕೆಂಡವಂ ಹಣೆಯೊಳಗೆ ತಾಳುವರೆ ಯಕ್ಕಟಾ, ಬಾರಯ್ಯ ಶಿವನೆ ನಾ ನಾರೈಯ್ಸೆ ನೆಲೆ ಕಂದಾ, ಆರೈವೆನೆನ್ನ ಮಗನೆಂದುವಾ ನೆಲೆ ಕಂದ, ಅಡವಿಯಲಿ, ಬೆಟ್ಟದಲಿ ತಿರುಗುದಿರು ಕಂಡಯ್ಯ, ಮಡುವಿನಲಿ, ಹಳ್ಳದಲಿ ಮುಳುಗಿ ಪೋದೆಪೆಯಯ್ಯ, ಜಡೆಯ ಬಿಚ್ಚಿಯೆ ನೀರೆರೆದು ಸಾಗಿಸುವೆ ಬಾ, ಕಿಡಿಗಣ್ಣಿಗೆವೆ ಕರ್ಪುರದಂಜನವ ಬಾ, ಕಿರೆಯ ಕುಪ್ಪಸವ ತೆಗೆದಿವೆ ವಸ್ತ್ರವನು ಬಾ, ಪರಿಪರಿಯ ಉಪಚಾರ ಮಾಳ್ಪೆ ನಿನ್ನಾಣೆ ಬಾ, ರಸಿಕನಂ ನಿನ್ನ ಮಾಡುವೆ ಚೆನ್ನ ತಂದೆ ಬಾ. (ಹಾಗೆ ನೆನೆಯುತ್ತಾ ನಿದ್ರೆ ಹೋಗುವಳು. ಸ್ವಪ್ನ ಬೀಳುವದು. ಶಿವನು ಜಂಗಮ ರೂಪದಲ್ಲಿ ಬಂದು)

ಮಗನ ಬೇಡಿದೆಯವ್ವ ಕಾನನದೊಳಹನೆ ಬಾ, ಮಿಗೆ ಕಾಡ ಕುರಳ ತಹ ನೆವನಾಗಿ ನೀನು ಬಾ, ಶಿವ ನಿನಗೆ ಶಿಶುವಾಗಿ ಬಂದಹನೆ ತಾಯಿ ಬಾ, ಭವಹರಂ ಮಗನಾಗಿ ಬಂದಿಹನೆಯಮ್ಮ ಬಾ,

(ಅಮ್ಮವ್ವೆ ನಿದ್ರೆಯಿಂದ ಎಚ್ಚತ್ತು) ಇದೇಂ ಕನಸೋ ನನಸೋ, ಪಾರ್ವತೀರಮಣನೇ; ಕನಸಂ ನನಸಾಗುವಂತೆ ಮಾಡು. (ಎದ್ದು ಅಡವಿಗೆ ಹೋಗುವಳು.)

ಶಿವನೇ ನೀನೆನಗೆ ಮಕ್ಕಳನ್ನು ಕೊಡಲಿಲ್ಲ. ಈ ಎರಳೆಯ ಬಾಳು ವಿಕೆಯಕಿಂತ ನನ್ನ ಬಾಳುವೆ ಕಡೆಯದಾಯಿತಲ್ಲಾ. (ಮುಂದೆ ಹೋಗಲು ಅಲ್ಲಿ ಮರದ ಮೇಲೆ ಕಪಿ ತನ್ನ ಮರಿಯನ್ನು ಅವಚಿಕೊಂಡು ಕುಳಿತಿದ್ದುದನ್ನು ಕಂಡು)

ಅಯ್ಯಯ್ಯ ಶಿವನೆ! ವಾನರನಿಂದೆ ಕಸಯಾದೆ, ಅಯ್ಯಯ್ಯ ಭವನೆ! ಈ ನರಕದೊಳಗಾನಾದೆ. (ಮುಂದೆ ಹೋಗುವಳು. ಅಳುವ ಧ್ವನಿ ಕೇಳುವದು. ಅಲ್ಲಿಗೆ ಹೋಗಿ ಶಿಶುವನ್ನು ಕಂಡು)

ಬದುಗಂಕಿದೆನೆನ್ನ ಪುಣ್ಯಂ ಮುಂದೆಯಿದೆ, ಬಲುಗಂಕಿದೆನೆನ್ನ ಮನದಾನಂದವಿದೆ. ಇಲ್ಲಿರಿಸಿ ಪೋದರಾರಯ್ಯ ಚೆನ್ನನೆ ನಿನ್ನ, ಇಲ್ಲಿಗೇತಕೆ ಬಂದೆ ಎನ್ನ ಭಾಗ್ಯದ ಚಿನ್ನ. (ಎತ್ತಿಕೊಂಡು ಮುದ್ದಾಡಿ ಕರೆದುಕೊಂಡು ಹೋಗುವಳು.)

## ೪ ನೇ ದೃಶ್ಯ.

( ಮನೆಯಲ್ಲಿ ಕೂಸಿಗೆ ಚನ್ನಾಗಿ ಸ್ನಾನ ಮಾಡಿಸಿ, ಭಸಿತವನ್ನು ಹಚ್ಚಿ ರನ್ನದಾರುತಿ ಮಾಡಿ. )

ಅಮ್ಮವ್ವೆ:— ನಿನ್ನ ಹೆಸರು ನಾಗೇಶ. ( ಎಂದು ಕೂಗುವಳು, ತೂಗುವಳು, ತೂಗುವಳು. ನಿದ್ದೆ ಬಾರದೆ ? ಜೋಗುಳ ಹಾಡುವೆನು ಮಲಗಿಕೊ.

ಜೋ ಸುರ್ಯ ತಮಯನೆ ಸರ್ವೆಶ್ವರ್ಯಕಾಯ ಜೋ
ಜೋ ಸುಪ್ರಭಾಮಯನೆ ಆದಿಗಾಧಾರ ಜೋ
ಜೋ ಮಂಗಳಾಕಾರ ಮಾದೇವದಾತ ಜೋ
ಜೋ ಜಂಗಮಾಕಾರ ಶರಣರಾಧಾರ ಜೋ
ಜೋ ಜೋ ಮಹಾದೇವ ದೇವದೇವೇಶ ಜೋ
ಜೋ ಜೋ ಅನಾಥರಿಗೆ ದಾತಾರ ತಂದೆ ಜೋ

( ನಿದ್ರೆ ಹೋಗುವನು ಸಂತೋಷದಿಂದ ಮನೆಯೊಳಗೆ ಹೋಗುವಳು.)

ಪರದೆ ಬೀಳುವುದು.

## ೫ ನೇ ದೃಶ್ಯ.

ನಿವೇದಃ— ( ಹಿನ್ನೆಲೆ ) ಇದೇ ರೀತಿ ಅಮ್ಮವ್ವೆ ಶಿವನನ್ನೇ ತನ್ನ ಮಗನೆಂದು ತಿಳಿದು ಚನ್ನಾಗಿ ರಕ್ಷಿಸಿ ಆನಂದದಿಂದಿರುತ್ತಾಳೆ. ಆ ಜಗನ್ನಿಯಾಮಕನು ಅಮ್ಮವ್ವೆಯ ಮುಗ್ಧಭಕ್ತಿ ಲೋಕದಲ್ಲಿ ಪ್ರಕಟಿಸಬೇಕೆಂದು ಸದುದ್ದೇಶದಿಂದ ತಾನು ರೋಗಿಯಂತೆ ಕಾಣಲನುವಾದನು.

ಪರೀಕ್ಷಿಸಬೇಕೆಂದು ಕೂಸಿಗೆ ಕಾಲು ಕೈ ಉಬ್ಬುವುವು, ಹೊಟ್ಟೆ ದಪ್ಪವಾಗುವುದು. ಒಂದು ಆಟವಾಡುತ್ತಾನೆ.

( ತೆರೆ ನಿಧಾನವಾಗಿ ಸರಿಯುವದು. ) ( ಕೂಸು ಅಳುವುದನ್ನು ಕಂಡು ಅಮ್ಮವ್ವೆ ಓಡಿಬರುವಳು ನೋಡಿ ಬೆರಗಾಗುವಳು. )

ಅಮ್ಮವ್ವೆಃ— ಏನಯ್ಯ ತಮ್ಮ ಇಂತೇನಾಯಿತೆಲೆ ಮಗನೇ! ಏನಿದಿರ್ದೇನು ಸೋಜಿಗ ನಿನಗೆ ಎಲೆ ಮಗನೆ! ನೀನೆನ್ನ ಸಲಹಿದಪೆ ಎಂದಿರ್ದೆನೆಲೆ

ಕಂದ ನೀನೆನ್ನ ಹೊರೆದಪ್ಪೆ ಎಂದು ನಚ್ಚಿದೆ ಕಂದ ನಿನ್ನ ಮರೆಯುಗೆ ಇಂತು ಮಾಮವರಿ ಕೂಸಿಗಂ ? ( ಬಹಳ ದೈನ್ಯದಿಂದ ದುಃಖಿಸುತ್ತಾ ಕೂಸಿನ ಕಡೆಗೆ ನೋಡುವಳು, ಮರುಗುವಳು. )

"ನೀನೆಲ್ಲಿ ನಾನೆಲ್ಲಿ ಇನಿತವಸ್ಥೆಯುದೆಲ್ಲಿ! ನೀನೆನಗೆ ಮಗನಾಗಿ ನೋವ ನಿಕ್ಕಿದೆಯಲ್ಲಿ ಹೆತ್ತಾಕೆ ಎತ್ತಿ ಸಲಹದೆ ಹೋದಳ ಕಟಕಟ ಹೆತ್ತರಿಂದಂದಾಕಿದವರಿಂಗತಿ ನೋವಕಟ ಕಂದ ನಿನ್ನಯ ನೋವ ನಾ ನೋಡಲಾರೆ ನೈ ( ಎಂದು ಹೇಳಿ ಈಳಿಗೆಯನ್ನು ತಂದುಕೊಂಡು ಕೈಯಲ್ಲಿ ಹಿಡಿದುಕೊಂಡು )

ಹಾ! ದೇವ ನಿನ್ನ ಪದತಲದಲಿ ಸೇರಿಸಿಕೊ ( ಎನುತ್ತಾ ಅಮ್ಮವ್ವೆ ತನ್ನ ಕೊರಳಿಗೆ ಈಳಿಗೆಯನ್ನು ಹಾಕಿಕೊಳ್ಳಿ ಹೋಗುವಳು. ಶಿವನು ಮೆಚ್ಚಿ ಪಂಚಮುಖ, ದಶಭುಜ, ನಾಗಕಂಕಣ, ಜಟಾಧಾರಿಯಾಗಿ ತೊಟ್ಟಿಲಲ್ಲಿಯೇ ಪ್ರತ್ಯಕ್ಷನಾಗಿ ಕಾಣಿಸಿಕೊಂಡನು. ಅವನನ್ನು ಅಮ್ಮವ್ವೆ ಕಂಡು ಅತ್ಯಂತ ಹರುಷಿತಳಾಗಿ ಪೊಡಮಡಲು. )

ಆ ಶಿವನುಃ— "ಮೆಚ್ಚಿದೆಂ ಬೇಡಿಕೊ ಎನ್ನ ತಾಯೆ"

ಅಮ್ಮವ್ವೆಃ— "ಸಚ್ಚರಿತ ಸುಕುಮಾರ ಸುಖಿಯಾಗಿ ಇರು"

ಶಿವನುಃ— ಎಲಾ ತಾಯೇ, ನಿನ್ನಂಥ ತಾಯಿಗಳು ನನಗೆ ಇರಲು ವ್ಯಾಧಿಗಳು ನನಗೇನು ಮಾಡುವವು? ಬಾ ಕೈಲಾಸಕ್ಕೆ ಹೋಗೋಣ ( ಎಂದು ಶಿವನು ಅಮ್ಮವ್ವೆಯೊಡನೆ ಕೈಲಾಸಕ್ಕೆ ಹೋದನು.

# ಮಠಾಧಿಪತಿಗಳು ಒಂದಾಗಲಿ.

(ಲೇಖಕರು— ಸದಾಶಿವ ಬಡಿಗಂಣವರ, ಗದಗ.)

ವೀರಶೈವ ಧರ್ಮವು ಎಂದೋ ವಿಶ್ವಧರ್ಮವಾಗಬೇಕಾದಂತಹದಿದ್ದು ಇಂದಿನ ವರೆಗೂ ಏಕೆ ಆಗಲಿಲ್ಲಾ ಅದರ ಮರ್ಮವನ್ನು ಹುಡುಕುವದು ಅವಶ್ಯವಾಗಿದೆಂದು ಬೇರೆ ಹೇಳಬೇಕಾಗಿಲ್ಲ.

ವಿರಕ್ತರು, ಗುರು ವರ್ಗದವರು ಹಾಗು ಇನ್ನುಳಿದ ಸ್ವಾಮಿಗಳು ಹೀಗೆ ಮಾರ್ಗ ಮಾಡಿಕೊಂಡರು. ತಮ್ಮ—ತಮ್ಮೊಳಗೆ ನಾ ಹೆಚ್ಚು ನಾ ಹೆಚ್ಚು ಅನ್ನುವದರಲ್ಲಿಯೇ ದಿನಗಳನ್ನು ಕಳೆಯುತ್ತ ಹೋದರೆ ಎಂದಾದರೂ ಹೆಚ್ಚಾಗುವರೋ ? ಹೀಗೆಯೇ ಕಚ್ಚಾಡುತ್ತ ಹೋದರೆ ಧರ್ಮವು ಉಳಿದೀತೆ ? ಉಳಿದಷ್ಟು ಧರ್ಮವು ನಾಶವಾಗುವದರಲ್ಲಿ ಸಂಶಯವಿಲ್ಲ.

ಅರಿತು ಸ್ವಾಮಿತ್ವವನ್ನು ಹೊಂದಿದಂಥಾ ಶ್ರೀಗಳವರು ಹಾವು-ಮುಂಗಲಿ ಇಲಿ-ಬೆಕ್ಕು ಹಾಗು ಅಂಕಿಯಲ್ಲಿ ಹೇಳಬೇಕಾದರೆ ೩೬ ಆಗದೇ ಸಹಕಾರ ಪ್ರೇಮದಿಂದ, ಒಮ್ಮನಸ್ಸಿನಿಂದ ಕೂಡಿ ಭೇದಭಾವವನ್ನು ಮರೆತು ೬೩ ಅಂಕಿಯಾಗಿ ಧರ್ಮದ ಏಳಿಗೆಗಾಗಿ ಹಾಗೂ ಜಾಗ್ರತೆಗಾಗಿ ಹಾಸು ಹೊಕ್ಕಾಗಿ ದುಡಿಯುತ್ತೇವೆಂದು ಒಂದು ಸಂಯುಕ್ತ ಪ್ರಕಟನೆಯನ್ನು ಹೊರಡಿಸಲಿ. ಹಾಗೂ ಅ. ಭಾ. ವೀರಶೈವ ಮಹಾಸಭೆಗೆ ಕ್ರಮವಾಗಿ ಅಧ್ಯಕ್ಷರಾಗುತ್ತ ಹೋಗಲಿ. ಸರ್ವ ಮಠಾಧಿಪತಿಗಳು ಎಲ್ಲಿಯು ವರೆಗೆ ಸಂಯುಕ್ತ ಪ್ರಕಟನೆಯನ್ನು ಹೊರಡಿಸುವದಿಲ್ಲವೋ ಅಲ್ಲಿಯು ವರೆಗೆ ಅ. ಭಾ. ವೀರಶೈವ ಮಹಾಸಭೆಗೆ ಭಕ್ತರೇ ಅಧ್ಯಕ್ಷರಾಗಲಿ. ಯಾವ ಭಕ್ತನೂ ಇನ್ನು ಸ್ವಾಮಿಗಳ ಹೆಸರನ್ನು ಸೂಚಿಸದಿರಲಿ. ೧೭ ನೇ ಅ. ಭಾ. ವೀರಶೈವ ಮಹಾಸಭೆಗೆ ಶ್ರೀ ಡಿ. ಸಿ ಪಾವಟೆಯವರನ್ನು ಆರಿಸಿದ್ದಕ್ಕೆ ಅಭಿನಂದನೆಗಳು. ಇಂಥಾ ಒಂದು ಮಹಾಕಾರ್ಯದ ಸಲುವಾಗಿ ಮಠಾಧಿಪತಿಗಳೆಲ್ಲರೂ ಒಂದಾಗುವದು ಅವಶ್ಯವಾಗಿದೆ.

# ೨೦ನೇ ಶತಮಾನದ ವೀರಶೈವ.

( ಲೇಖಕ: — ಜಿ. ಎನ್. ಭಸ್ಮಾಂಗದೇವರು L. E. E. ಭಸ್ಮಾಂಗಿಮಠ. )

ನಮ್ಮ ಭಾರತಮಾತೆಯ ಮಡುಲಲ್ಲಿ ಅನೇಕ ಧರ್ಮಗಳು ಬೆಳೆಯುತ್ತಿರುವುವು. ಅವುಗಳಲ್ಲಿ ವೀರಶೈವ ಧರ್ಮವು ಒಂದು ಇದು ಅನೇಕ ವರ್ಷಗಳಿಂದ ಸ್ವತಂತ್ರವಾದ ಮಾರ್ಗವನ್ನು ಅವಲಂಬಿಸಿ ಸಾಮಾಜಿಕ, ನೈತಿಕ ಬೌದ್ಧಿಕ ಆಚರಣೆಯಿಂದ ಬೆಳೆದು ಬಂದಿದೆ. ಈ ಧರ್ಮವನ್ನು ಕಾಪಾಡಿಕೊಂಡು ಬರಲು ಮಠ–ಮಂದಿರ ದೇವಸ್ಥಾನಗಳು ಸಂಸ್ಥಾನಗಳು ಅನೇಕ ಶಿವಶರಣರು ತಮ್ಮ ಸಂಸ್ಕೃತಿ ತಾಯಿಯನ್ನು ಕಾಪಾಡಿಕೊಂಡು ಬಂದಿರುತ್ತಾರೆ. ಸಂಸ್ಕೃತಿ ಮಾತೆಯನ್ನು ಪರಾಧೀನ ಮಾಡಬಾರದೆಂದೂ ಸಂಸ್ಕೃತಿಯನ್ನು ಕಾಪಾಡಿಕೊಂಡು ಬರಲು ಕೋಟಿಗಟ್ಟಲೆ ಬೆಲೆ ಬಾಳುವ ಆಸ್ತಿಗಳನ್ನು ಸಾಹಿತ್ಯಗಳನ್ನು ನಮಗಾಗಿ ಬಿಟ್ಟಿರುತ್ತಾರೆ. ಜಗತ್ತಿನಲ್ಲಿ ಸತ್ಯ ಶುದ್ಧ ಕಾಯಿಕವನ್ನು ಮಾಡುತ್ತಾ ಗುರು ಲಿಂಗ ಜಂಗಮ ಸೇವೆಯಲ್ಲಿ ನಿರತನಾಗಿ ಜೀವನ್ಮುಕ್ತಿಯನ್ನು ಅಂಗ ಲಿಂಗ ಸಾಮರಸ್ಯವನ್ನು ಕ್ರಿಯಾತ್ಮಕವಾಗಿ ಅನುಭವಿಸುವ ವಿಧಾನವನ್ನು ಸ್ವತಂತ್ರವಾಗಿ ಅನುಭವಿಸುವರು ವೀರಶೈವರು ಶಿವಲಾಂಛನ ಧರ್ಮದಲಾಂಛನ ನೈತಿಕಲಾಂಛನಗಳಾದ ಇಷ್ಟಲಿಂಗಧಾರಣೆ ವಿಭೂತಿಧಾರಣೆಗಳನ್ನು ವೀರಶೈವ ಸಂಸ್ಥೆಯ ಬಾವುಟಗಳನ್ನಾಗಿ ಕಾಪಾಡಿಕೊಂಡು ಬಂದಿರುತ್ತಾರೆ.

ಈ ೨೦ನೇ ಶತಮಾನದಲ್ಲಿ ದೇಹದ ಮೇಲೆ ಲಿಂಗಲಾಂಛನ ವಿಭೂತಿಗಳನ್ನು ಧರಿಸಿ ಪ್ರಚಾರವನ್ನು ಮಾಡಿ ನಮ್ಮ ವೀರಶೈವ ಜನಾಂಗವನ್ನಾದರೂ ವೀರಶೈವರಾಗಿ ಉಳಿಯುವಂತೆ ಮಾಡಲು ಅನೇಕ ಸಾಧನಗಳು ಇವೆ. ಇದ್ದರೂ ಅವುಗಳನ್ನು ಉಪಯೋಗಿಸದೆ ಇರುವುದರಿಂದ ದಿನೆ ದಿನೆ ಧರ್ಮಲಾಂಛನಗಳು ದೇಹದ ಮೇಲಿಂದ ಮಾಯವಾಗುತ್ತಿರುತ್ತಿವೆ. ಇದಕ್ಕೆ ಕಾರಣಗಳು ಬೇಕಾದಷ್ಟು ಇವೆ. ಅವುಗಳಲ್ಲಿ ಮುಖ್ಯವಾಗಿ ಮೂರು ನಾಲ್ಕು ಸಮಾಜದ ಮುಂದಿಡುತ್ತೇನೆ. ಎಲ್ಲರೂ ಗ್ರಹಿಸಬೇಕು.

೧ ಪ್ರಚಾರಗಳು ಸಾಹಿತ್ಯಗಳು ಪುಸ್ತಕ ರೂಪದಲ್ಲಿ ಕಾಗದ ರೂಪ ಪದಲ್ಲಿ ಉಳಿದಿರುವುದು. ಮಠಮಂದಿರಗಳು ಬಾಡಿಗೆ ಮನೆಗಳಾಗಿ ತನ್ನ ಸಂಸ್ಕೃತಮಾತೆಯನ್ನು ಮಾರಿಕೊಂಡಿರುವುದು ಶುದ್ಧ ಅವಮಾನಕರ ಅನೇಕ ಮಠಗಳ ಆವರದಲ್ಲಿ ಕೋಳಿ ಹಂದಿ ನಾಯಿಗಳನ್ನು ಸಾಕುವವರು ಇರುವುದು ಗೋಚರವಾಗಿರುವುದು ಪ್ರತ್ಯಕ್ಷ ನೋಡಬಹುದು.

೨ ಕೆಲವು ದೊಡ್ಡ ದೊಡ್ಡ ಸ್ವಾಮಿಗಳೂ ಶ್ರೀಮಂತರೂ ದಾಕ್ಷಿಣ್ಯದ ಮೂರಿಗೆ ಮನಕೊಟ್ಟು ಮೌನದಿಂದಿರುವದು ಸರಿಯೆ? ಭಸ್ಮಾಂಗದೇವರು.

೩ ಅನೇಕ ಪ್ರಸಾದ ನಿಲಯಗಳಲ್ಲಿ ಅಸಿಕ್ಷಿತರಾದ ಜನಗಳನ್ನು ಸೇರಿ ಸಿಕೊಂಡು ಒಂದೇ ಪಂಕ್ತಿಯಲ್ಲಿ ಲಿಂಗವಂತ ಹುಡುಗರಿಗೂ ಅನ್ನಹಾಕು ತ್ತಿರುವುದು ಮುರ್ಖತನವಾಗಿದೆ ಸಹಾಯಧನದ ಆಸೆಗೆ ತನ್ನ ಸಂಸ್ಕೃತಿ ಯನ್ನು ಮಾರಿರುವುದು ನಮ್ಮ ಸರ್ವನಾಶವೆಂದು ತಿಳಿಯಬೇಕಾಗಿದೆ. ಕಲಿತ ವರಲ್ಲಿ ಕೆಲವರು ರಾಜಕೀಯ ಮುಖಂಡರಲ್ಲಿ ಕೆಲವರು ಲಿಂಗವನ್ನೇ ಅಂಗ ದಿಂದ ಪ್ರತ್ಯೇಕಿಸಿರುವುದು ನಮ್ಮ ದುರ್ದೈವ. ಮಂತ್ರಿಯಾಗಿಪ್ಪವರ ಎದೆಯ ಮೇಲೆ ಲಿಂಗವಿಲ್ಲ. ಎಂದಮೇಲೆ ಇನ್ನಾರಿಗೆ ಹೇಳುವುದು. ಅಷ್ಟೇ ಅಲ್ಲದೆ ಆಚಾರವಂತರ ಗರ್ಭದಲ್ಲಿ ಹುಟ್ಟಿ ಬೆಳೆದು ಅಧಿಕಾರಕ್ಕೆ ಬಂದಿರುವವರು ರಾಜಾರಷ್ಟು ಆಗಿ ಮಿಲಿಯ ಆಹಾರನನ್ನು ಕೆಡಿಸುವರು ಕೆಲವರು ಇವುಗಳು ನೋಡಿ ನೋಡಿ ಸಂಕಟಪಡುತ್ತಾ ಇರಬೇಕಾಗಿದೆ.

# ಜಯಗೀತೆ.

(ಲೇಖಕರುಃ — ಸಾವಧಾನ ಪತ್ರಿಕೆಯ ಸಂಪಾದಕರು.)



ನಮಿಸುವೆನು ನಿಮ್ಮಡಿಗೆ ಗುರು ನಾಗಭೂಷಣನೆ ।
ನಿರ್ಮಳ ಭಕ್ತಿ ಜ್ಞಾನ ವೈರಾಗ್ಯ ಮೂರುತಿಯೆ ॥
ನಮಿಸಿ ಬೇಡುವೆನಯ್ಯ ಶಿವಯೋಗ ಸಂಪದವ ।
ಕ್ರಮದಿ ನಾನೊಳಕೊಂಬ ಪರಿಯನವ ಧರಿಸಿ ॥೧॥
ಆವ ಪುಣ್ಯದ ಫಲವೊ ಆವನಾದೇಶವೊ ।
ಭಾವೇಷ್ಟ ಪ್ರಾಣಾದಿ ಲಿಂಗ ತತ್ವದ ನಿಲವ ॥
ಸಾವಧಾನದಿ ಕೇಳ್ವ ಶಿವಭಕ್ತ ಸುಕೃತರಿಗೆ ।
ಆವ ನೀನಲ್ಲ ಪ್ರತ್ಯಕ್ಷ ಗುರುರೇಣುಕ ॥೨॥
ಘನಗೂಢ ತಮ್ಮ ಧರ್ಮ ಶಾಸ್ತ್ರಾರ್ಥ ವಿಷಯಗಳ ।
ನನುಭಾವಬಲದಿಂದ ಮೃದು ಮಧುರ ಸರಣಿಯಿಂ ॥
ಜನಮನಕೆ ಬಿಂಬಿಸುವ ಭವ ವಿಮೋಚನನೆ ।
ನಿನಗಾರ್ ಸಾಟಿಪೇಳ್ ನಿಬಂಧ ಜನಮಾನ್ಯನೆ ॥೩॥
ಜಯವು ನಿನ್ನಯಪಾರ ಪಾಂಡಿತ್ಯ ವೈಭವಕೆ ।
ಜಯವು ನಿನ್ನಯ ಶೀಲ ಸಚ್ಚರಿತ ಕಾಯಕಕೆ ॥
ಜಯವು ನಿನ್ನಯ ಲಿಂಗಪೂಜಾ ವಿಲಾಸಕ್ಕೆ ।
ಜಯವು ಶ್ರೀಮದನಾದಿಸಿದ್ಧ ಸುಪ್ರೀತನೆ ॥೪॥



# ದೇವರ ದಾಸಿಮಾರ್ಯರ ಕಥೆ.

(ಸಂಪಾದಕರಿಂದ)

[ಹಿಂದಿನ ಸಂಚಿಕೆಯಿಂದ ಬಂದದ್ದು.]

ವಚನ— ಈ ಪ್ರಕಾರವಾಗಿ ಹೇಳಿದ ಸುಗ್ಗಲದೇವಿಯ ಖಂಡಿತೋಕ್ತಿಯ ಕೇಳಿ ಆ ದೇಶಿಂಗರಾಯನು ತಕ್ಷಣದೊಳಗಾ ಜಿನ ಕುಲವೃಂದವುಂ ಬರಮಾಡಿ ಸಭೆಯಂಗೂಡಿಸಿದನಂತರ ಮರ್ಯಾದೆಯೊಡನೆ ತದ್ದೇವರ ದಾಸಿಮಾರ್ಯನಂ ಕರೆಯಿಸಿ ದಿವ್ಯವಾದೊಂದು ನವಮಣಿಮಯ ಸಿಂಹ ಪೀಠದೊಳು ಕುಳ್ಳಿರಿಸಿ ತತ್ಪ್ರಸಂಗಕಲ್ಪಣೆಯಂ ನೀಯಲಾ ಜಿನ ಮುನಿಗಳು ಯಂತ್ರ ತಂತ್ರ ಕುಮಂತ್ರ ಮಹೇಂದ್ರ ಜಾಲದ್ವಯ ಶೂನ್ಯ ಮಾಯಾಕರಣ ವಿದ್ವಿಷ ಜೈನವೃತ್ತಿಯಿಂತರ್ಕಿಸಲಾ ಶರಣನದನ್ನಾಲಿಸಿ, ವೇದವೇದಾಂತ ಸಿದ್ಧಾಂತ ನ್ಯಾಯೋಪನಿಷದ್ವೈಶೇಷಿಕ ಮುಖಾನೇಕ ಶಾಸ್ತ್ರವಾಗ್ದೃಷ್ಟವಿಧಿಯುಕ್ತ್ಯಾದಿಗಳಿಂದೊಡಂಬಡಿಸುತ್ತ, ಸರ್ವವ್ಯಾಪೀಶ್ವರನೇ ಸರ್ವೋತ್ಕೃಷ್ಟನೆಂದಾಡಿದ ನುಡಿಗವರು ಚೋದ್ಯವಂಗೊಂಡು ತತ್ಪದಿಯಂ ತಿಳುಪೆನ್ನಲಾ ಗುರುವರೇಣ್ಯನುಲಸಿತ ಮುಖಾಂಬುಜನಾಗಿ ಮತ್ತವರೊಡನಿಂತೆಂದನದೆಂತೆನೆ ||

॥ಭಾಮಿನಿಷಟ್ಪದಿ॥ ಆಲಿಸಿರಿ ಜಿನ ಮುನಿಗಳೆಲ್ಲರು | ಮೂಲ ತೇಜೋತೀತ ಚಿತ್ತರ | ಲೀಲಿತಾಖಂಡಾದ್ವಯ ವಿರಾಟ ಬ್ರಹ್ಮಗೋಳಕದಿ ॥ ಕೀಲಿಸಿದ್ದ ಮಹದ್ಪ್ರಚಿಯ ಘನಾಲೀಲೆಯನು ತಳೆಯುತ್ತ ಮೆರೆಯುವ | ಶೂಲಿಯೇ ವಿಶ್ವಗುರುವಂತರ್ಯಾಮಿಯನುಪಮನು ||೧||

ವಿಶ್ವಕರ್ತನು ವಿಶ್ವಭರ್ತನು | ವಿಶ್ವಹರ್ತನು ವಿಶ್ವಪೂರ್ತನು | ವಿಶ್ವದಾತನ ವಿಶ್ವಮಯ ಶಿವನು ॥ ವಿಶ್ವರೂಪನು ವಿಶ್ವಗೋಪನು | ವಿಶ್ವಗೋಪನು | ವಿಶ್ವಶಾಲನು | ವಿಶ್ವಗರ್ಭನು ವಿಶ್ವಸಾಕ್ಷೀಭೂತನವ್ಯಯನು |೨||

ಸೂರ್ಯಸುತ್ರಾಧಾರನ ಜಡನು | ಸರ್ವಸಂಗತ್ಯಾಗಿಯಭವನು | ಸರ್ವಜೀವಾತ್ಮ ಪರಮಾತ್ಮ ಪರಾಪರಾನ್ವಿತನು | ಸರ್ವ ತತ್ವಾನಂದ ಪೂರ್ಣನು | ಸರ್ವತಂತ್ರಾಸ್ಪದನು ಸತ್ಯನು | ಸರ್ವಕಾರಣನು ಸ್ವತಂತ್ರನು ಸದ್ಗುಣ ಪ್ರಭುವು ||೩||

ಸಕಲ ವುಂತಾನಾಗಿರುತ್ತವೆ। ಸಕಲವುಂ ಹೊಂದಿರದ ನಿರ್ಗುಣಿ। ಸಕೀಲವನು ಪುಟ್ಟಿಸುತ ಸಕಲದಿ ಪುಟ್ಟದಿರ್ದಭವ॥ ಸಕಲವನು ಕೌತುಕದಿ ನಡೆಸುತ ಸಕಲದೊಳು ನಡೆಯದ ಸುಜಾಣನು। ಸಕಲವಳಿಯಲು ಸಕಲ ದೊಳು ತಾನಳಿಯದಿಹನಿತ್ಯ ॥೪॥

ಸಕಲವನು ತನ್ನೊಳಗೆಯಡಗಿಸಿ। ಸಕಲವನು ತೊಡದೆ ಸೇವನಿ ಜಗಲಿ। ಸಕಲವನು ತಾನಾಜ್ಞೆಯಿಂ ಪ್ರಕಟಿಸುವ ಸರ್ವಜ್ಞ॥ ಸಕಲವನು ಹುರಿಗೊಳಿಸಿ ಲೀಲಾ। ಸುಕರದಿಚ್ಛಾವೂತ್ರದಿಂದಲಿ। ವಿಕೃತಿಗಳನ್ನೈದಿಸುವವುಹಿತ ವುಹಾವುಹಿವುನಲದೆ ॥೫॥

ಹಿಡಿಯು ಬಂದೊಡೆ ತಪ್ಪಿಸುವವನು। ಹಿಡಿದೊಡಂ ವೆಣ್ಬಟ್ಟ ಬಯಲಾ। ಗೆಡೆವಿಡದ ವಸ್ತುತಿಗೆ ಮೀರಿದ ತುದಿಯ ಪದದವನು॥ ನುಡಿಯುವನು ಮಿಕ್ಕವನು ನುಡಿಯಂ ನುಡಿದ ಹಂಗಿದ್ದೊಡೆಯು ಬಿಡದವ। ತೊಡಕರಿಯ ದವ ತೊಡಕಿದವನಂ ತೊಡಕುತಿಪ್ಪವನು ॥೬॥

ದೃಷ್ಟಿಗಳಿಗೈದಿಸದವನು ನಿಜ। ದೃಷ್ಟಿಪೂರ್ವಕವಾಗಿ ನೋಡಲು। ದೃಷ್ಟವಾದವನರುಹಿದವನೆಂಬವರ ಸರಸುವವ॥ ಸೃಷ್ಟಿಸುವ ರಕ್ಷಿಸುವ ಕೆಡಿಸುವ। ತುಷ್ಟಿಯಿಲ್ಲದವಂ ಸವಿಗಳಂ। ದೃಷ್ಟವಾಗದವಂ ಸವಿಗಳಂ ಬಿಟ್ಟೊಡೊಲಿವನು ॥೭॥

ವಾಸನೆಗಳನು ಮಿಕ್ಕವನು ಮಿಗೆ। ವಾಸನೆಗಳಿಂ ವರ್ತಿಸುವವನು। ಲೇಸು ಹೊಲ್ಲಹವೆಂಬೆರಡು ಮುನಾಸ್ತಿಯಾದವನು॥ ಆಶೆಯಿಲ್ಲದ ಭಕ್ತಚಿತ್ತಾವಾಸವಾಗಿದ್ದವನ ಭಕ್ತಂ। ಗೋಚರಿಸುವವನಾದಿಗಾದಿಗನಾದಿಯಾದವನು॥೮॥

ಅನುವರಿದು ಸಮರಸದಿ ಕೂಡುತ। ವಿನಯ ವಿಶ್ವಾಸದೊಳು ಬೆರೆಯುತ। ದಿನವು ಶರಣರನಪ್ಪಿಯಾನಂದಿಸುತಲಗಲದಲೆ॥ ತನುಹೃದಯ ಧನಗಳನು ನಿರ್ವಂ। ಚನೆಯೊಳುಂ ತ್ರಿವಿಧಕೆ ಸಮರ್ಪಿಸು। ವನಘಭಕ್ತರ ಮನದ ಕೊನೆಯಲಿ ಹೊಳವುತಿಪ್ಪವನು ॥೯॥

ಈ ಪ್ರಕಾರದೊಳಿರ್ದು ವರ್ತಿಸು। ತಪ್ರತಿಮನಹ ಶಿವನ ಮಹಿಮೆಯು। ಸುಪ್ರಬೋಧಾತ್ಮರಿದ ಕೇಳಲ್ಪ್ರಾಪ್ತಿಯೇ ನಿಮಗೆ॥ ಅಪ್ರತರ್ಕ್ಯನು ವಾಮದೇವನುಂ। ಸುಪ್ರಸನ್ನನು ಸರ್ವವಾಗಿಹು। ದಪ್ರಸಿದ್ಧದ ನುಡಿಗಳೆಂದೆನಬೇಡಿ ತತ್ವವಿದು ॥೧೦॥

ಈಗ ದೃಷ್ಟಪ್ರತ್ಯಯಂಗಳ । ನಾಗಮೋಕ್ತದಿ ತೋರುತಲಿ ತಲಿ । ನಾಗಿಸುವೆ ನಿನಿಬರನು ಬೆಸಗೊಳಲಾರ್ಪೊಡಂ ಕೇಳಿ । ಹೇಗಂದರಿಯೀ ಹೊಟಲ ಕೆರೆಯಲಿ । ಸಾಗಿಸುವ ಬಸದಿಗಳನೆಲ್ಲವ । ಬೇಗದಿಂ ಹಿರಿ ಹಿರಿದು ಕೆಡೆ ಹಾಯ್ಕಿಸುವೆ ನೆನೆಲಾಗ ॥೧೧॥

ತಂಟದಲೆಗಳ ತಟ್ಟೆರೋ ನೊರೆ । ಸುರಿವ ಬಾಯ್ಸನಿಕೆಹಡಕಿಗಳೋ । ಕರರ ಕಿಸಕಿಲ ಕಾಕರೋ ಬಸದಿಗಳೊಳೂಳಿಡುವ ॥ ನರಿಗಳೋ ಬತ್ತಲೆಯ ಭಡಕರೋ । ಮರುಳುಗಳೋ ತಟ್ಟುಗಳೋ ಹಗರಣೆ ಗರೋಯೆನಲು ಮಲ ದಾರಿಗಳು ಗಜಬಜಿಸಿ ಮೊಗಗೆಟ್ಟು ॥೧೨॥

ಮಿಂಚುದಲೆಗಳ ಕಡಿವಲ್ಗಳ । ಸಂಚದ ವದಿರ ಕುಟಿಲ ಕುಹಕದ । ಕುಂಚಿತರ ಉದ್ದನಿಗಳಾಡೊಳ್ಳಗಳ ಹೇರೊಡಲ ॥ ವಂಚಕರ ನಿಜವೇದ ಬಾಹಿರ । ಹಂಚುಗಳ ಸನ್ಮಾರ್ಗವಿಕೆದ ಪಂಚ ಮಹಾಪಾತಕರ ಜೈನರ ಹಿಂಡು ಕಳವಳಿಸಿ ॥೧೩॥

ಸರಿಯ ಹಂತದಕುತ್ತರವಕೊಡ । ಹರಿಯ ಬಾರದೆ ಕಣ್ಗಳಿವೆಗಳ । ತೆರೆಯ ಹೊಡೆಯುತದಾಡೆ ಬಂಧನ ಮೂಗಿಸೆಣಸುತಿಹ ॥ ಗುರುವವೆಲ್ಲಳಿದ ವರು ಲಜ್ಜಾ । ಭರಿತರಾಗಿರು ಆರ್ಪರೀತಿಯ । ನರಿದು ಪಕಪಕ ನಕ್ಕುಯೀ ತಕೆ ಸುಮ್ಮನಾದಿರಲಿ ॥೧೪॥

ಬೌದ್ಧರಿರಾ ಕೇಳ್ನಿಮ್ಮ ಬೌದ್ಧವ । ಬೌದ್ಧ ಚರಿತಂ ಸಕಲ ವೇದ ವಿ। ರುದ್ಧ ಮಾರ್ಗಂ ನಿಮ್ಮ ಶಾಸ್ತ್ರಮತಂಗಳತಿ ಪಾಪ ॥ ಬದ್ಧವಾದಿಳಿಲ್ಲದಂತರ। ಬುದ್ಧನಥಮನು ನಿಮ್ಮ ದೈವವ । ಶುದ್ಧಮಂತ್ರ ಕುಮಂತ್ರ ಕುಟಿಲಾರಾಧನೆಗಳವರ ॥೧೫॥

ಹಾದಿಯನು ತುಳಿಯುದಲೆ ನೀವುಗ । ಳಾದಿ ಪರಶಿವಗಿಂತಲಧಿಕವು । ಯಾದುದಿನ್ನೊಂದಿಲ್ಲವೆನ್ನುತ ಸರ್ವ ಕಾಲದಲೂ ॥ ವೇದಗಳು ಉದ್ಘೋಷಿಸುತ್ತಿಹ । ವಾದ ಕಾರಣ ನಮ್ಮ ಭಜಿಸಿರಿ । ಸಾದರದೊಳೆಲ್ಲೆಲ್ಲು ಶಂಭುವು ತುಂಬಿಹನೆನಲು ॥೧೬॥

**ವಚನ:—** ಈ ಪ್ರಕಾರವಾಗಿ ದೇವರದಾಸಿಮಯ್ಯನು ಪೇಳಿದ ವಾಕ್ಯವನ್ನಾಲಿಸಿ ಆ ಜಿನಮುನಿಗಳೆಲ್ಲರು ಬಂದಂತಾಡುವದಕ್ಕೆ ದಿಕ್ಕು ತೋರದೆ ಸಂತಾಪ ಸಾಂತರಾಗಿ ಕ್ಷಣಕಾಲ ಮೌನವಿದ್ದ ಬಳಿಕ ಯಾವ ಬಗೆಯೊಳಗಾದೊಡಂ ಇವನ ಮೊಗಗೆಡಿಸದೆ ಬಿಡಲಾಗದೆಂದು ತಮ್ಮೊಳು ತಾವೇ ಯೋಚಿಸಿ ಗಾರುಡ ಮಂತ್ರೋಪಾಸನ ತ್ರಾಣದಿಂದ ಅವನಿಗರುವಾಗುವಂತೆ

ಪಾವಕ ಜ್ವಾಲಾಪ್ರವಾಹದ ಕಾಳ ಸರ್ಪವಂ ಪಿಡಿತಂದು ನೃಣ್ಮಯವಾದ ಪೇರ್ಗುಂಭದೊಳಗಿರಿಸಿ ಮುಚ್ಚಳವಂ ಕವುಚಿ ಮಾರ್ಗದಿಂದ ತತ್ಸಭಾಮಧ್ಯದಲ್ಲಿ ಎದುರಾಗಿ ತಂದಿಳುಹಿ ಸರ್ವವ್ಯಾಪಿಯಾದೀಶ್ವರನಂ ಇದರೊಳು ತೋರೆಂದುದುಂ ಕೇಳಿ ಆ ದಾಸಿಮಾರ್ಯನು ತತ್ಪರಿಯುಲ್ಲವನಂತರಂಗದೊಳು ತಿಳಿದು ಮಂದಸ್ಮಿತವದನಾರವಿಂದಮುಳ್ಳವನಾಗಿ ಶ್ರೀಕಂಠಾನುಗ್ರಹ ಬಲದಿಂದ ಪವಾಡವಂ ಗೆಲಿದನದೆಂತೆನೆ ||

ತ್ರಿಪುಡೆ: — ಶ್ರೀಗರಳಪುರಧಾಮ ಶಿವನು । ಬೇಗ ನಿಜಹೃತ್ಕಮಲದೊಳಗನು । ರಾಗದಿಂದ ಸ್ಮರಣೆ ಗೈಯುತ ಏಕನಿಷ್ಠೆಯೊಳು ||೧||

ಇನಿತನು ಸಂಶಯವೆಂಬುದಿಲ್ಲದೆ । ಘನಮಹಾತ್ಮನುಯುಪರ ನಿಕಟಕೆ । ಮನದೊಳಂಜದೆ ಸಾರ್ದು ನಿಲಲಾ ಕುಂಭದೊಳಗಿರ್ದ ||೨||

ಕಾಲದುರ್ಧರಭೋಗಿ ಜಿಹ್ವಾ । ಜ್ವಾಲೆ ಕಿಡಿಯುಗಳುತ್ತ ಮಡಕೆಯ । ಮೇಲೆ ಮುಚ್ಚಳ ತಳ್ಳಿ ಪೆಡೆಯ ಬಡಿಯುತಾರ್ಭಡಿದಿ ||೩||

ಭೀಳ ಭೂಂ ಕೃತಿಪೊಣ್ಮೆ ಬಾಲವ । ನಿಳವಟ ನುಲಿನುಲಿದು ಭೋಗ್ಯರೆ । ದೇಳುತ ವಿಜೃಂಭಿಸುವ ತದ್ಘನ ಸರ್ಪನಂ ನೋಡಿ ||೪||

ನಿಟಲ ನಯನ ಪ್ರತಿಮ ತಾನಾ । ಘಟದೊಳಗೆ ಕೈದುಡಿಕಿ ಮಟೆದು । ಘಟ್ಟ ಗರಳಧರನನ್ನು ಪಿಡಿಯುತ ತೆಗೆದ ಸಮಯದಲಿ ||೫||

ಸ್ಫಟಿಕಲಿಂಗ ಸ್ಫುಟಮರೀಚಿಗೆ । ಚಟುಲಿ ಭಾಸ್ಕರ ಪಟತಿಮುಂಟವು । ದ್ಘಟಿಸದಡಗಲು ದಿಕ್ತಟಂಗಳೊಳಾವರಿಸಲೊಡನೆ ||೬||

ಕುಟಿಲಪರ ಸಮಯ ಕ್ರಿಮ ಪ್ರವಿ । ಘನದೇವರ ದಾಸಿಮಾರ್ಯನ । ಪಟು ಕರಸ್ಥೀಳಘಟವಾಗಿ ಪ್ರಭವಿಸುತಲಿರಲು ||೭||

|| ವಚನ || ಈ ಪ್ರಕಾರವಾಗಿ ತದ್ವಾಸುಕೀಶನು ನವ್ಯ ದಿವ್ಯ ಧವಳತರವಾದ ಶಿವಲಿಂಗವಾಗಿ ಪ್ರಕಾಶಿಸುತ್ತಿರ್ದ ಪರಿಯಂ ಕಂಡು ತದ್ಬ್ಯಾದ್ಧಮುನಿಗಳೆಲ್ಲರು ಖಿನ್ನ ಮುಖರಾಗಿ ದಿಗ್ಭ್ರಮಣೆಯಂಗೊಂಡು ಭೀತಿಯಂ ಪೊಂದಿ ಕಂಪಿಸುತ್ತ ಹೋ ಹೋ ! ಇದರೊಳಗೂ ಈತನು ಭಂಗಿತನಾಗಲಿಲ್ಲವಲ್ಲಾಯೆಂದು ಯೋಚಿಸುತ್ತ ಸ್ವಲ್ಪ ಹೊತ್ತು ಸುಮ್ಮನಿರ್ದು ಆ ಬಳಿಕ ತಮ್ಮಗಳಂತರಂಗದೊಳ್ ಮತ್ತೊಂದು ಕುಹಕವಂ ನೆನೆದು ಪಶುಪಕ್ಷಿ ಮೃಗಾದಿ ಜಂತುಗಳಿಂಟಧಿರ್ಪ ವಿಷಸರೋವರದೆಡೆಗಂ ತದ್ದೇವದಾಸಿಮಾರ್ಯಾದಿ ಸಭಾಸದರನ್ನೊಡಗೊಂಡು ಬಂದು ಅಣುತೃಣಜಲಕಾಷ್ಠಾದಿಗಳೊಳೆಲ್ಲ । ಶಿವನಿರ್ಪುದು ನಿಜವಾದಲ್ಲಿ ಈ ಸಲಿಲವಂ ಹೀರುತಾಧಿಕ್ಯವಂ ತೋರಿದೊಡೆಪೊಪ್ಪ

ಬಹುದೆಂದುಸುರಿದ ನುಡಿಗೊಡಂಬಟ್ಟು ತನ್ಮಹನೀಯನು ಸಂತೋಷಸ್ವಾಂತನಾಗಿ ಜಗವಚ್ಚರಿ ಬಡುವಂತೆ ಶ್ರೀ ಕಂದನ ಘನತೆಯಂ ಪ್ರಕಟಿಸಿದನದೆಂತೆನೆ ॥

॥ಜಂಪೆ॥ ಶ್ರೀ ಮಲ್ಲಿಕಾರ್ಜುನನ । ವಾಮದೇವಾನನದಿ । ಭೂಮಿ ಪಾವನಕಾಗಿ । ಈ ಮಹೋದಕವು ॥೧॥

ಪುಟ್ಟಿಹುದು ಭಕ್ತಿಯುಳ । ವಟ್ಟವರು ಕೇಳಿಸಿದೊಡೆ । ಬಿಟ್ಟಳಿದಳೆಯನುಮಮತೆ । ಯಿಟ್ಟು ಪೊರೆಯುವನು ॥೨॥

ಪವಣಿಯೊಳಿದಲ್ಲದಲೆ । ಜವನ ದಿಗುಲಡಗುವದು । ಭವಶೋಕದುರಿಸಂಕ । ಟವನಳಿಸುತಿಹುದು ॥೩॥

ಪರಸಮಯಿಗಳ ಮದಪ । ಹರಿಸುವದು ಶುಭವಿಗಳ । ಹೆರಣವನು ಕಳೆಯುವದು ನಿರುತದೊಳಗಿನ್ನು ॥೪॥

ಗುರುಲಿಂಗ ಜಂಗಮದ । ಶಿರದ ಸುಖಮಜ್ಜನಕೆ । ಪರಿಶುದ್ಧ ಮಾಡುದಿದು ಶರಣಪದ ತೀರ್ಥ ॥೫॥

ಹರದಯಾಮೃತರಾರ । ತರ ನಿಜಾನಂದಾಂಬು । ಪರಮೋಕ್ಷ ರಸವಿದರ । ಪರಿನೋಡಿರೆನುತ ॥೬॥

ವರ ಪುರಾತನ ಪುಣ್ಯ । ಚರಿತರಾದ ಪ್ರಮಥ । ಚರಣ ಕಮಲ ಧ್ಯಾನಭರಿತಾತ್ಮನಾಗಿ ॥೭॥

ಬಿಸಿದಹ ಬೇಹಾವರಿಸಿ । ಪಸುರಾಗಿ ಹಾಮಚಿಯು । ಮುಸುಗಿ ತೊರೆನೊರೆಯಿಂದ । ಕಸನಾದ ಜಲಧಿ ॥೮॥

ನಲವಿನೊಳು ಕರವಿಟ್ಟು । ಕಲಿ ಕಾಡಲಾವಿಷದ । ಮಲಿತಾಂಶ ವಿನೀತಿಲ್ಲ । ದಲೆಯೊಗರುನೊಸಿದು ॥೯॥

ಚಾರು ಘನ ಮಾಧುರ್ಯ । ಗೌರತರ ಪೀಯೂಷ । ಸಾರಗುಣ ಶೈತ್ಯಮಯ । ಕ್ಷೀರಮಾಗಿರುವ ॥೧೦॥

ತೆರದನೆಲ್ಲವನಾತ । ನರಿದು ಮನದೊಳು ಹಿಗ್ಗಿ ಪರಿಪೂರ್ಣಾನಂದ । ವೆರಸುತಿರುವಾಗ ॥೧೧॥

॥ವಚನ॥ ಈ ಪ್ರಕಾರವಾಗಿ ಪವಿತ್ರಮಾಗಿರ್ಪ । ತದಮೃತ ಸರೋವರ ಜಲದೊಳು ದೇವರದಾಸಿಮಾರ್ಯನು ಕೈಕಾಲ್ಮೊಗದೊಳೆದು ಲಿಂಗಾಭಿಷೇಕಾರ್ಚನೆಯಂ ತೀರ್ಚೆ, ಮೊದಲಾಗಿ ತಾನು ನೀರ್ಕುಡಿದ ನಂತರ ನೆರೆದವರಿಗೆಲ್ಲಾ ಕೊಡಲದನ್ನು ಸಲಿಸಿದಾಕ್ಷಣವೇ ಕಳೆಯೇರಿ ಶುಚಿಭೂತರಾಗಲಾ

ಬಗೆಯನ್ನಿಕ್ಷಿಸಿ ಜೈನರೆಲ್ಲರು ಕಂಪಾಯಮಾನರಾಗಿ, ಇದರೊಳಗೂ ಸೋಲದೆ ಎಮ್ಮ ಮುಸುಡಿಗೆ ಮಸಿ ಹೆಚ್ಚಿದನಲ್ಲಾ? ಎಂದು ಬಸವಳಿಯುತ್ತ ಮುಗಳಿ ಯಥಾ ಸ್ಥಾನಕ್ಕೆಲ್ಲರೈತಂದು ಸಭೆಯಂ ಸೇರಿ ಮೌನವಾಗಿ ಕ್ಷಣಕಾಲವಿ ರ್ದಬಳಿಕ ಮತ್ತೊಂದು ಕುಬುದ್ಧಿಯಂ ನೆನದು ಸರ್ವೋತ್ಕೃಷ್ಟನಾದ ಶಿವನು ಇನ್ನಾವಲ್ಲಿರ್ಪನು ಸುರೆಂದುದಂ ಕೇಳಿ, ನಿಮ್ಮ ದೇವಾಲಯಗಳಲ್ಲಿ ಪರೀಕ್ಷಿಸಿ ರೆನ್ನಲದನಂಗೀಕರಿಸಿ ತಕ್ಷಣವಲ್ಲಿಂದ ಪೊರಮಟ್ಟು ತಜ್ಜಿನ ಮುನಿಗಳು ಚಿಂತಾಕ್ರಾಂತರಾಗಿ ಬರುತಿರ್ದರದೆಂತೆನೆ.

||ಅಟತಾಳ|| ಹಾಹವೇ ಯೇಳುವದು ಈತನ | ಸಾಹಸವು ಇನ್ನೇಸು ಯಿರಬಹು | ದೂಹಿಸಲ್ಕಸದಳವು ಈಗೀಮುರ್ಮ ತಿಳಿಯದಲಾ ||೧||

ನಾವುಗಳು ಕಲಿತಿರ್ಪುದೆಲ್ಲವ | ಭಾವನೆಯಗೈದೆಸಗಿದೊಡುಯಿವ | ನಾವದಕು ಹಿಮ್ಮೆಟ್ಟುತಂಜದೆ ಜಗಿ ಸೋಲದಲೆ ||೨||

ಮೇಟಿಯಾಗೆ ಮಗಳಿಗೆ ಬಗನಿಯು | ಗೂಟವಾಗಿರುತಿಹನು ಇವನಿಗೆ ಪಾಟಿಯಾಗಿನ್ನೊಬ್ಬರಾಗದೆ ಮರುಳದೇವರಲಾ ||೩||

ಇದಕೆ ಪೆರತೇಗೈವುತೆನ್ನುತವೊದರುತೋರ್ವರಿಗೋರ್ವರಾಗಲು | ವದನ ಗಳ ಬಾಡಿಸುತ ಕಳವಳಗೊಳುತರೈತಂದು ||೪||

ಬಾಗಿಲುಗಳ ಗಿಣಿಗಳಗಿಕ್ಕಿದ | ಬೀಗಗಳ ತೆಗೆಯುತ್ತಲೆಲ್ಲದು | ದೇಗು ಲಗಳ ಪೊಕ್ಕು ಜಿನದೈವಗಳ ನೀಕ್ಷಿಸಲು ||೫||

ಆದಿಯಾಕೃತ ಕುರುಹುಯೆಳ್ಳನಿ | ತಾದರುಳಿಯದೆ ನೀ ಚಹಸರ | ವಾದಿಗಳಿಗೆದೆಶೂಲಿಮೆನ್ನಿನಿಭವಿಕುಲಾಟವಿಗೆ ||೬||

ಬೇಗೆಯಾಗಾಶೈವಲಿಂಗ | ಗಳಾಗಿ ಪಜ್ಜಳಿಸುತ್ತಲಿರೆ ಜಡ | ಹೇಗದರು ಕಂಡಾಕ್ಷಣವೇ ದಿಗ್ಭ್ರಮಣೆಯನು ಹೊಂದಿ ||೭||

ಕುಟ್ಟಿಕೊಳುತಣಣೆಗಳಾನೆಂದಾ | ಘಟ್ಟಿಗನೋಯಿಂತಾಗಿದೆಲ್ಲವು | ಕೆಟ್ಟೆ ತಲ್ಲಾ ನುಂದೆ ಗತಿಯೇನಿಲ್ಲದಲೆಯಿನ್ನು ||೮||

ಕಟ್ಟುಯೇಗೈಯ್ಯುವನೋ ಸುಮ್ಮನೆ | ಬಿಟ್ಟರೇಯುವಗೆಮ್ಮವೇಲ್ಬಲು ಹೊಟ್ಟೆಕಿಚ್ಚಿಹುದಾದ ಕಾರಣಯಲ್ಲರೊಗ್ಗಾಗಿ ||೯||

ಎಂತವನು ಲಿಖಿಸುತಲಿ ಶಾಪರ ಮಂತ್ರಮುಚ್ಚರಿಸುತಲಥರ್ವಣ | ತಂತ್ರ ಪಂಕುಗಳನ್ನೂ ಬಿಡುತಲಿ ವಾಟವನು ಮಾಡಿ ||೧೦||

ಸಾಯಿಸಿದೊಡುಳುಕೊಳುತೆವಿಲದಿರೆ | ಬಾಯಿಯೊತಲ್ಲಿವನ ಗೆಲುವುದು | ಮಾಯೆಯಕ್ಷಣೆ ಸಿದ್ಧಿ ವಿದ್ಯದ ಸಂಚುಹೊಂಚುಗಳ ||೧೧||

ಗಾರುಡವನೆಲ್ಲರಿದ ವಂಚನೆ । ಗಾರನೆಂದಿಗು ನಂಬಲಾಗದು । ಮೀರಿ
ದರಿಗೀ ಮದ್ದೆಯೆನುತವರು ನಿರ್ಧರಿಸಿ ॥೧೨॥
ಮರಳಿಬಾರದೆ ಸಭೆಗೆಯೊಕ್ಕಡೆ । ನೆರೆದುತಕ್ಕುದಗೊಂಡು ಮಾರಣ ।
ದಿರವ ನೆನೆದು ಪುನಶ್ಚರಣೆಯನುಗೈಯುತಿರಲಾಗ ॥೧೩॥

**ವಚನ—** ಈ ಪ್ರಕಾರವಾಗಿ ಶೈವದ್ವೇಷಪಾಷಂಡಿಗಳಾದ ಬೌದ್ಧರು ಕಾಪಟ್ಯಬದ್ಧರಾಗಿ ದುರಾಗ್ರಹಂಗೊಂಡು ತದ್ದಾಸಿಮಯ್ಯನಂ ಕೊಲುವ ಕುತೂಹಲವೆರಸಿ ತದುಚ್ಛಿಷ್ಟೋಪಾಸನಾದಿಲದಿಂದ ಶಲ್ಯ ಮೊದಲಾದರುವತ್ತು ನಾಲ್ಕು ಪಂಪುಗಳಂ ಕಳುಹಿಸಲ್ಕವುಗಳೈತಂದು ಕೂಡಿದಾರ್ಪಡೆಯುಂ ನಡುಗುವಂತೆ ಆರ್ಭಡಿಸುತ್ತಿರಲದನ್ನೋಡಿ ತನ್ಮಹಾತ್ಮನು ತಡಮಾಡದೆ ಮಹಾ ಶಿವಮಂತ್ರಪೂತನಾಗಿ ನಿಜನಿಟಿಲ ತಟಘಟಿತಮಾದ ಭೂತಿಧೂಳಿತಮಂತೆಗೆದುರುಬಿದಾಕ್ಷಣವೇ ಪಂಪುಗಳೆಲ್ಲ ಭಸ್ಮೀಕೃತಮಾಗಲಾ ಜೈನರು ತಾವುಗಳಿದ್ದ ಸ್ಥಳದಲ್ಲಿಯೇ ಮೂರ್ಛಿತರಾಗಿ ಮೃತಿಪೊಂದಿರುವ ಸಂದರ್ಭವಂ ತಿಳಿದು ವಿಧೇಯರಾದವರಿಂಗೆಲ್ಲಾಶೀರ್ವದಿಸಿ ತಕ್ಷಣದಲ್ಲಿಂದ ಪೊರಮಟ್ಟು ತನ್ನ ಮಠಕಂ ಬಂದು ನಿತ್ಯ ಸ್ನಾನಾದಿ ಸುಕರ್ಮಗಳೆಲ್ಲವಂ ಮುಗಿಸಿ ಶಿವಗಣ ಸಪರ್ಯೋದ್ಯೋಗ ಭಕ್ತಿಯೊಳಗಿರವಾ ಗ್ರಾಮಸ್ಥರಾದ ಕೆಲವು ಶ್ರಾವಕರು ಆ ವಿಷಯಮಂ ಕಂಡು ಭಯಭ್ರಾಂತರಾಗಿ ಶೀಘ್ರದೋಳೋಡಿ ಬಂದು ತದ್ಬಿಜ್ಜಳ ಭೂಪಾಲಂಗೆ ಶರಣೆಂದು ಖಿನ್ನತೆಯಿಂದವನೊಡನಿಂತೆಂದರದೆಂತೆಂದಡೆ.

||**ಜಂಪೆ**|| ಕೇಳಯ್ಯಾ ಬೌದ್ಧಮತ । ಹಾಳಾಯ್ತು ಹೊಟಲಕೆರೆ ।
ಕೋಳೊಯ್ತು ಜನರಿಗುಳು । ಬಾಳಿಲ್ಲದಾಯ್ತು ॥೧॥
ಎಸೆಯುತಿರವೇಳ್ನೂರು । ಬಸದಿಗಳೆಲ್ಲ ಪರಿ । ಕಿಸಲು ಶಿವಲಿಂಗಗಳು ।
ಮುಸುಕಿಪುರ್ದಾಯ್ತು ॥೨॥
ಜಿನದೈವಗಳ ಕುರುಹು । ಯೆನಿತಿಲ್ಲದಂತಾಯ್ತು । ಘನರಾದ ಚಾರ್ವಾಕ ।
ಮುನಿಗಳಿಪ್ಪತ್ತು ॥೩॥
ಸಾವಿರೊಮ್ಮೆಯೊಳೀಗ । ಜೀವವಳಿದುರುಳಿಹರು । ಶ್ರಾವಕರ ಧರ್ಮ
ಸ್ವ । ಭಾವ ಖಿಲಮಾಯ್ತು ॥೪॥
ಶ್ರವಣ ಕ್ರಿಯಾಚಾರ । ಸುವಿಮಲ ಕ್ರಿಯೆ ಕುಲದ । ಪವಣೆಯೆಂಬುವ
ದೆಲ್ಲಾ । ಸವೆವ ಬಗೆಯಾಯ್ತು ॥೫॥
ಈ ವಿಷಯಮಿಂತಿಷ್ಟು । ದೇವಾಂಗದವನೋರ್ವ । ಶೈವನಿಂದಾಗಿಹುದು
ದಾವತಿಯನಿದನು ॥೬॥

ಪರಿಹರಿಸಿ ಬೇಗವನೆ | ಕರಿಸಿ ದಂಡನೆಗೊಳಿಸಿ | ಮರುಗುತಿಹ ಪ್ರಜೆಗಳನು ಪೊರೆ ಕೃಪೆಯೊಳೆನಲು ||೭||

**||ವಚನ||** ಈ ಪ್ರಕಾರವಾಗಿ ಪೇಳಿದ ದುರ್ಜನರುಕ್ತಿಯನಾಲಿಸಿ ಆ ಜಯಸಿಂಗ ರಾಜನು ಕಿಂಚಿತಾದೊಡಾಲೋಚನೆಯಂ ಮಾಡದೆ ರಕ್ತ ಪೂರ್ಣಿತ ನೇತ್ರಾಗ್ರಹಶೀಲನಾಗಿ ಸೇನಾಧಿನಾಯಕನಂ ಬರಮಾಡಿ ದಳಗೊಂಡು ಸೈನ್ಯವಂ ಜತೆಗೊಂಡು ಪೋಗಿ ತದ್ದೇವಾಂಗದವನನ್ನು ಪಿಡಿತರುವುದೆಂದಪ್ಪಣೆಯಂ ಕೊಡಲಾಗುವನು. ತಡಮಾಡದೇ ಚತುರಂಗ ಮಾರ್ಬಲದೊಡನೆ ಪೊರಮಟ್ಟು ತೂರ್ಯದೊಳಗಾವುತದ ಮುಂಭಾಗದೆಡೈತಂದು ತದಾಸಿನಾರ್ಯನಂ ಬರಹೇಳಿಸಲಾತನು ಪೊರ ಬಾಗಿಲಿಗಂ ಸಾರ್ದು ನಿಲ್ಲಲಾದಳಪತಿಯು ರಾರಾಜ್ಞೆಯನರುಹಲದಂ ಕೇಳಿ ತಲೆದೂಗುತ್ತ ಪಕಪಕನೆ ನಕ್ಕು ಕ್ಷಣಕಾಲವಾಲೋಚನೆಯಂಗೈದು ಬಳಿಕ ತನ್ಮಹಸೀಯನು ಸಾಧಾರಣೋಕ್ತಿಯಿಂದವನೊಡನಿಂತೆಂದನದೆಂತೆನೆ ||

**||ತ್ರಿಪುಡೆ||** ಆಲಿಸೆಲೆ ಸೈನಿಕನೆ ಗರಳಪು| ರಾಲಯ ಶ್ರೀಕಂಠ ಸೇವಾ| ಶೀಲರಾಗಿಹ ಭಕ್ತರು ಕ್ಷಿತಿ | ಪಾಲಕನ ಬಳಿಗೆ ||೧||

ಐತಿಹುದಕೇ ನೀಗಲಂತಹ | ದಾತುರದ ನಜ್ಜವನು ಗೈದಿಹು | ದೇಶಕನನು ನ್ಯಾಯುವರಿಯದೆಯಿಷ್ಟು ಸೈನ್ಯವನು ||೨||

ಬರಿದೆ ಕಳುಪಿದನಲ್ಲದಲೆ ಕೈ | ಸೆರೆಯ ಪಿಡಿಕೊಂಡೊಯ್ಯುವುದಕೆ ಶಿವ | ಶರಣರು ಪ್ರಜ್ಞಾಬ ರತ್ನವ ಕದ್ದ ತಸ್ಕರರೆ ||೩||

ಪರಿಗಣನಾಲೋಚಿಸದೆಯಾತನು | ಗರುವಿಸಿದದುಕೆ ಕೆಡುವದೇ ಧಿಟ | ಮರುಳು ಮತಿಯೊಳು ನೀನು ಯವನಂತಾಗುದುಚಿತಹುದೆ ||೪||

ತರವಿದಲ್ಲಿನೆಮ್ಮಗೊಡವೆಗೆ | ಬರದೆಪೋಗೆನೆ ಕೇಳಿ ಸೈರಿಸ | ದೆರಗಲೊಗ್ಗಟ್ಟಾಗುತಬ್ಬರಿಸೆಲ್ಲರೆತನಿಸಿದ ||೫||

ಸಮಯದೊಳು ತಿಳಿದಾಗ ಮಂತ್ರ | ಕ್ರಮುವಗೊಳಿಸಿರ್ದಗ್ಗಣಿಯುಸಲೆ | ಚಿಮಿಸಲ್ಕದರನಿಯು ಬಿದ್ದಾಕ್ಷಣವೆ ಕತ್ತರಿಸಿ ||೬||

ದಂಡು ಮೂರ್ಛೆಯೊಳೊರಗಲದನವ| ಕಂಡು ಪೊಳಗೈತಂದು ಹಿಗ್ಗುತ| ಖಂಡಪರಶುವಿನಂಘ್ರಿ ಕಮಲಧ್ಯಾನದೊಳಗಿರಲು ||೭||

**||ವಚನ||** ಈ ಪ್ರಕಾರವಾಗಿ ತತ್ಸೈನ್ಯವೆಲ್ಲವುಡುಕಲಾಗಿರುವ ಬಗೆಯನ್ನೋಡಿ ಪುರಸ್ಥರನ್ಯರಾದ ಕೆಲಬರು ಅತ್ಯಂತ ಭಯಭ್ರಾಂತರಾಗಿಯಿದೆಸುಬಿ ಬಾಯಾರಿ ಕಂಪನವಂಗೊಂಡು ಗಾಬರಿಯಿಂದೋಡಿ ಬಂದು

ತದ್ಬಿಜ್ಜಳ ಮಹೇಶನಿಗೆ ಶಿರಬಾಗಿ ಕರಪುಟಾಂಜಲಿಯಂ ಪಿಡಿದು ತದ್ವಿಷಯ ವೆಲ್ಲಂ ಸಾಂಗವಾಡಿ ಬಿನ್ನಪಂಗೈಯ್ಯಲಾ ವಾರ್ತೆಯಂ ಕೇಳಿ ಮಹಾಕೋಪೋ ದ್ರೇಕದಿಂ ಕೆದರಿದ ಕೆಂಗಣ್ಣಿಗಳುಳ್ಳವನಾಗಿ ಸಾವಕಾಶ ಮಾಡದೆ ತನ್ಮಂತ್ರಿ ಶನಂ ಬರಹೇಳಿ ಕಳುಹಿಸಲಾವೂಳಿಗದವರೈತಂದು ಬಸವರಾಜಂಗೆ ಸಾಷ್ಟಾಂಗ ಪ್ರಣಾಮ ಪೂರ್ವಕವಾಗಿ ತದಭಿಪ್ರಾಯಮಂ ತಿಳುಹಿಸಿದಾಕ್ಷಣವೇ ಶಿವಾ ನುಭವ ಮಂಟಪದೊಳು ಪ್ರಮಥ ಸಂದಣಿಯಂ ಗೂಡಿ ಪರಮ ತತ್ವರಹಸ್ಯಾರ್ಥ ವಿಚಾರದೊಳಗಿರ್ದುದಂ ಬಿಟ್ಟು ತಟ್ಟನೆದ್ದು ರನ್ನದಂಡಿಗೆಯನ್ನೇರಿ ಯಥಾವ ದ್ರಾಜಮರ್ಯಾದೆಯೊಡನೆ ತುರ್ಯದೊಳೈತಂದು ತದಾಸ್ಥಾನದೊಳು ಮೌಕ್ತಿ ಸಾನವನ್ನಲಂಕರಿಸಿ ತತ್ಸಭಾಸದರಿಂ ಸತ್ಕಾರವಂಗೊಂಡ ಬಳಿಕ ಯೇನೊಂದ ರಿಯದವನಂತೆ ಕ್ಷಣಕಾಲ ಸುಮ್ಮನಿರ್ದು ತನ್ನ ಕರೆಸಿದ ಕಾರಣವಂ ಬೆಸ ಗೊಳ್ಳಲಾನರೇಶನು ಕಾಠಿಣ್ಯತರವಾದ ಗರ್ಜನೋಕ್ತಿಯಿಂದವನೊಡನೆ ನಿಂತೆಂದನದೆಂತೆನೆ ॥

॥ಅಟತಾಳ॥ ಎಲವೊ ಸಚಿವಾಗ್ರಣಿಯೇ ನಿಮ್ಮಯ । ಮಲಹರನ ಭಕ್ತ ರುಗಳುಪಟಳ । ದಲಸಿಕೆಯ ಜನಗಳಿಗೆ ಬಲವಾಯ್ತಿತನ್ನು ಬಾಳುವದು ೧॥

ಬಹಳ ಕಷ್ಟವು ಈಯುವ್ರಾಂತವ । ಸಹಿಸಲಾಗದು ನಿತ್ಯವಿಂತಾ । ಗ್ರಹನ ಗೊಳ್ವತ ಕೊಲ್ಲುತಿರ್ದೊಡೆ ಬದುಕುದೆಲ್ಲಿಯದು ।೨।

ನೇಗಿಯವಗೇಕಿಂತ ಶೌರ್ಯವು । ಹೇಗವನೀಗಿತ್ರಾಣ ಪುಟ್ಟಿತು । ರೋಗ ದೋಷಗಳಿರುವದುಚಿತವೆ ಶೈವರಾದವರಿಗೆ ॥೩॥

ಪಿರಿಯವರು ನಾವಿದ್ದು ಹಾಗೆಯೆ । ಕಿರಿಯನವನೀ ಬಗೆಯ ಮಾಯಾ । ಕರಣ ವೃತ್ತಿಯೊಳೀಗ ಹಾನಿಯ ಮಾಡಿಹುದು ಸರಿಯೆ ॥೪॥

ಭೂತನೋ ರಕ್ಕಸನೊಯಮಜನ । ದೂತನೋ ಡಿಗ್ರಹನೋ ಜೀವರ । ಪೋತನೋಪಾರಬ್ಧ ಮೌನಿಯೋ ತಿಳಿಯಬಾರದಲೀ ॥೫॥

ಯಾರವನು ಯೆಲ್ಲಿಂದ ಬಂದನು । ಪೌರುಷವ ನಡಿಸಿಂತು ಬಾಧಿಪ । ಕ್ರೂರನಂ ಬಿಡಬಹುದೆ ಸುಮ್ಮನೆಯಾದ ಕಾರಣವು ॥೬॥

ಗಾಢಯೋಚಿಸುಯಿದಕೆ ತಕ್ಕುದ । ಮಾಡು ನಿನ್ನಿಂದಾಗಲೊರೆ । ಕೂಡಲೇಯೆಳತರಿಸಿ ದುಷ್ಟನ ಶಿಕ್ಷಿಸುವೆನೆನಲು ॥೭॥

॥ವಚನ॥ ಈ ಪ್ರಕಾರವಾಗಿ ತತ್ಸೈನಿಕರ ಸಂಬಂಧಿಕರಿಂದರಿಪೆ ಸರ್ವೋತ್ತರ ವೃತ್ತಾಂತವೆಲ್ಲವಂ ತಿಳುಪಿ ಶಿವಗಣಂಗಳ ಮಹಿಮಾ ಪ್ರಭಾ ವದ ಮರ್ಮವನ್ನಾಲೋಚಿಸದೇ ಬಹಳವಾಗಿ ರೇಗಿಂತಾಡಿದ ಬಿಜ್ಜಳನ ಮಾ

ಗೃಹ ಭಾಷೆಯುಂಗೇಳಿ ಆ ಬಸವರಾಜೇಂದ್ರನು ನಿಜಾಂತರಂಗದೊಳು ತದ್ವಿಷಯ ಸ್ಥಿತಿಯಲ್ಲಿವನ್ನಾರೈದು ಕ್ಷಣಕಾಲ ನಿಧಾನಿಸಿದ ನಂತರ ಸಾಧಾರಣೋಕ್ತಿಯಿಂದ ತತ್ಸ್ಥಲದವನೊಡನಿಂತೆಂದನದೆಂತೆನೆ ॥

॥ತ್ರಿಪುಡೆ॥ ಎಲೆ ನರೇಶನೆ ಭಕ್ತವರ್ಯನ। ಹೊಲಬ ನರಿಯದೆ ಪಳಿಯುತೀತಕೆ। ಬಲು ದುರಿತಕೊಳಗಾಗಿ ಕೆಡುವೆಯೋ ಸಲ್ಲ ಕೇಳಿನ್ನು ॥೧॥

ಧರಣಿಯೊಳು ಕೆಲರನ್ಯವರ್ಣದ। ಪರುಗಳವರವರೊಳಗೆ ನಾನಾ। ತೆರದ ಭೇದನಗೊಂಡು ಭವಿಕುಲವೊಂದರಲಿ ಜನಿಸಿ ॥೨॥

ಬಗೆ ಬಗೆಯ ನೀಚ ಬಸುರಗಳೊಳ। ಗೊಗೆದ ರುಷಿತತಿಗೋತ್ರ ಸಂಬಂ। ಧಿಗಳೆನುತ ಬಹು ಪರಿಯ ಚಿನ್ಹಗಳನ್ನೂ ಧರಿಸುತಲಿ ॥೩॥

ಸುರೆಯುಗುಡಿಯುತನೇಕ ವಿಧವಹ। ತರಸದೋರಗ ಮುಂಡು ನಡವಂ। ತರದಿ ಕೆಲಬಲದವರ ನೀಕ್ಷಿಸುತ ಕಲಾಚಾರ ॥೪॥

ಪರಿಯ ಬಹಿರಂಗದೊಳಗಂಗಿ। ಕರಿಸಿಯವರವರೊಳಗೆ ಶ್ರೀಸ್ಮೃತಿ। ಯೊರಲಿಕೊಳುತಾಶ್ರಯಿಸಿ ಬಲ್ಲವರನ್ನುಪಾಯದೊಳು ॥೫॥

ನೇಗೆಯುದ್ಯೋಗವನು ಕಲಿತು ಪ। ರಾಗದಿಂದನುದಿವು ಜೀವಿತ। ರಾಗಿ ನಾನಾ ಮುಖದೊಳಾರ್ಜಿಸಿ ಗಳಿಸಿದರ್ಥವನು ॥೬॥

ತೆರುತ ಪಾತ್ರಕೆ ಕ್ಷುದ್ರ ಮಾತ್ರಕೆ। ಯರುಗಳೆಂಬುವ ಶಕ್ತಿಗಳನುಪ। ಚರದೊಳರ್ಚನೆ ಗೈದು ತದುಪಾಸನೆಯನುಸರಿಸಿ ॥೭॥

ನೆಲೆಯನರಿಯದೆ ಕಳವಳವಗೊಳು। ತಲಿ ಬಳಿಸಿ ಬೇರೆ ಬೇರೆ ಕರ್ನದ। ಹೊಲಸಿನಲಿ ಬಾಳುತ್ತ ದೇವಾಂಗದನರೆನ ವೆಸರ ॥೮॥

ಕಲ್ಪಿಸಿಕೊಂಡೆಲ್ಲರೆದುರೊಳು। ಜಲ್ಪಿಸುತ ಹೆಮ್ಮೆನೊಳು ಕುಣಿಯುತ। ಸ್ವಲ್ಪವಾದೊಡು ಸಿಗ್ಗು ಹೆಗ್ಗಿಲದಲೆ ಖಲರಾಗಿ ॥೯॥

ಪರಮಗುರು ಶಿವಲಿಂಗ ಜಂಗಮ। ದಿರವನಾರಯ್ಯದಲೆ ತದ್ಭೂ। ಧರಸುತಾವಲ್ಲಭನ ಭಕ್ತರ ಮರ್ಮವರಿಯದಲೆ ॥೧೦॥

ಕೋನರಿ ಮನಬಂದಂತೆ ನಿಂದಿಪ। ಬಿನುಗುಮುಗ್ಗದವರೋಲುಭಾವಿಸಿ ಘನಮಹಾತ್ಮನ ಧಿಕ್ಕರಿಸುತಲಿ ತುಚ್ಛಮಾಡುವದು ॥೧೧॥

ತರವಹುದೆ ನಿನಗಿನ್ನು ಛೀ ಛೀ ಮರುಳು. ಕವಿಯಿತೋ ಮಂಕು ಹಿಡಿಯಿತೋ। ಪಿರಿಯರುಗಳೊಪ್ಪುವರೆಯೋನಿದು ಕೇಳ್ದವರು ನಗರೇ ॥೧೨॥

(ಮುಂದುವರೆದದ್ದು.)

ಬಂದಿದೆ, ಇದರಲ್ಲಿ ಕ್ರಿಯೆಗಳ ವಿಸ್ತೃತ ವಿವೇಚನೆಯು ಬರುವದು. ಇದರಲ್ಲಿ ಧಾರ್ಮಿಕ ಆಚಾರದ ವಿಷಯಗಳೂ ಸಾಮಾಜಿಕ ವಿಚಾರಗಳೂ ಈ ಏಕೋತ್ತರ ಶತಸ್ಥಲದಲ್ಲಿ ಬರುವವು. ಇವುಗಳ ಜ್ಞಾನದಿಂದ ಮನುಷ್ಯನು ತನ್ನಲ್ಲಿಯ ಲಿಂಗವಿಷಯಕ ಜ್ಞಾನವನ್ನೂ ಪ್ರಗತಿಯನ್ನೂ ಉಂಟುಮಾಡಿಕೊಳ್ಳುವನು.

ನಿಃಕಲ ಪರಶಿವನಿಂದ ಚಿತ್ ಇದರಿಂದ ಶಿವಶಕ್ತ್ಯಾತ್ಮಕನು ಇದರಿಂದ (೧) ಲಿಂಗಸ್ಥಲ ಮತ್ತು (೨) ಅಂಗಸ್ಥಲ ಎಂದು ಎರಡು. ಲಿಂಗಸ್ಥಲದಲ್ಲಿ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ (೧) ಇಷ್ಟದಲ್ಲಿ ಆಚಾರಲಿಂಗ ಗುರುಲಿಂಗ (೨) ಪ್ರಾಣದಲ್ಲಿ ಶಿವಲಿಂಗ ಚರಲಿಂಗ (೩) ಭಾವದಲ್ಲಿ ಪ್ರಸಾದಲಿಂಗ ಮಹಾಲಿಂಗ. ಈ ಲಿಂಗಗಳಿಗೆ ಕ್ರಮವಾಗಿ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿತ್‌ಶಕ್ತಿಗಳು ಇರುವವು. ಈ ಆರು ಲಿಂಗಸ್ಥಳಗಳಲ್ಲಿ ಸೂಕ್ಷ್ಮವಾಗಿ,

(೧) ಆಚಾರಲಿಂಗದಲ್ಲಿ— ಗುರುಲಿಂಗ, ಶಿವಲಿಂಗ, ಜಂಗಮಲಿಂಗ,

(೨) ಗುರುಲಿಂಗದಲ್ಲಿ— ಆಗಮಲಿಂಗ, ಕಾಯಲಿಂಗ, ಆಚಾರಲಿಂಗ,

(೩) ಶಿವಲಿಂಗದಲ್ಲಿ— ಅನುಗ್ರಹಲಿಂಗ, ಅರ್ಪಿತಲಿಂಗ, ತನುಗುಣಲಿಂಗ,

(೪) ಜಂಗಮಲಿಂಗದಲ್ಲಿ— ಒಲವುಲಿಂಗ, ನಿರೂಪಲಿಂಗ, ಪ್ರಸಾದಲಿಂಗ, ಪಾದೋದಕಲಿಂಗ,

(೫) ಪ್ರಸಾದಲಿಂಗದಲ್ಲಿ—ನಿಷ್ಪತ್ತಿಲಿಂಗ, ಆಕಾಶಲಿಂಗ, ಪ್ರಕಾಶಲಿಂಗ

(೬) ಮಹಾಲಿಂಗದಲ್ಲಿ— ಘಟಾಕಾಶಲಿಂಗ, ಬ್ರಹ್ಮಾಂಡಲಿಂಗ, ಮಹದಾಕಾಶಲಿಂಗ,

ಈ ಪ್ರಕಾರ ಹತ್ತೊಂಬತ್ತು ಸೂಕ್ಷ್ಮ ಭೇದಗಳು ಈ ಆರುಲಿಂಗಗಳಲ್ಲಿ ಆಗುವವು. ಇನ್ನು ಹತ್ತೊಂಭತ್ತು ಲಿಂಗಗಳಲ್ಲಿ ಪುನಃ ಅತಿ ಸೂಕ್ಷ್ಮ ಭೇದಗಳಾಗಿ ಮತ್ತೆ ಪ್ರತಿಯೊಂದರಲ್ಲಿ ಮೂರರಂತೆ ಲಿಂಗಗಳಾಗುವದರಿಂದ ಒಟ್ಟು ೫೭ ಲಿಂಗ ಸ್ಥಲಗಳಾಗುವವು. ಅವುಗಳನ್ನು ಮುಂದೆ ಅಂಗಸ್ಥಲದ ತರುವಾಯ ಹೇಳಲಾಗಿದೆ.

ಇನ್ನು ಅಂಗಸ್ಥಲದಲ್ಲಿ — ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ಭೇದಗಳು.

(೧) ಭಕ್ತಸ್ಥಲದಲ್ಲಿ— ಪಿಂಡ, ಪಿಂಡಜ್ಞಾನ, ಸಂಸಾರಹೇಯ, ಗುರು ಕರುಣ, ಲಿಂಗಧಾರಣ, ವಿಭೂತಿ, ರುದ್ರಾಕ್ಷಿ, ಮಂತ್ರ, ಭಕ್ತಿ ಉಭಯ ಸ್ಥಲಗಳು (ಭಕ್ತ ಜಂಗಮಗಳು) ತ್ರಿವಿಧ ಸಂಪತ್ತು (ಗುರುಲಿಂಗ ಜಂಗಮ ) ಚತುರ್ವಿಧಸಾರಾಯ (ಗುರುಲಿಂಗ ಜಂಗಮ (ಪ್ರಸಾದ) ಉಪಾಧಿಮಾಟ, ನಿರುಪಾಧಿಮಾಟ, ಸಹಜಮಾಟ ಎಂದು ಇದರಲ್ಲಿ ೧೫ ಸ್ಥಲಗಳಿರುವವು.

(೨) ಮಹೇಶ್ವರಸ್ಥಲದಲ್ಲಿ— ಮಹೇಶ್ವರ, ಲಿಂಗನಿಷ್ಠಾ, ಪೂರ್ವಾಶ್ರಯನಿರಸನ, ವಾಗದ್ವೈತನಿರಸನ, ಆಹ್ವಾನನಿರಸನ, ಅಷ್ಟತನುಮೂರ್ತಿನಿರಸನ, ಸರ್ವಗತನಿರಸನ ಶಿವಜಗನ್ಮಯ, ಭಕ್ತದೇಹಿಕಲಿಂಗ ಹೀಗೆ ಇದರಲ್ಲಿ ಸ್ಥಲಗಳಿರುವವು.

(೩) ಪ್ರಸಾದಿಸ್ಥಲದಲ್ಲಿ— ಪ್ರಸಾದಿ, ಗುರುಮಹಾತ್ಮ್ಯ, ಲಿಂಗಮಹಾತ್ಮ್ಯ, ಜಂಗಮಮಹಾತ್ಮ್ಯ, ಭಕ್ತಮಹಾತ್ಮ್ಯ, ಶರಣಮಹಾತ್ಮ್ಯ, ಪ್ರಸಾದಿಮಹಾತ್ಮ್ಯ ಎಂದು ೭ ಸ್ಥಲಗಳಿರುವವು.

(೪) ಪ್ರಾಣಲಿಂಗಿಸ್ಥಲ—ಪ್ರಾಣಲಿಂಗಿ, ಪ್ರಾಣಲಿಂಗಾರ್ಚನೆ, ಶಿವಯೋಗ ಸಮಾಧಿ, ಲಿಂಗನಿಜಸ್ಥಲ, ಅಂಗಲಿಂಗಸ್ಥಲ ಎಂದು ೫ ಸ್ಥಲಗಳಿರುವವು.

(೫) ಶರಣಸ್ಥಲ— ಶರಣಸ್ಥಲ, ತಾಮಸನಿರಸನಸ್ಥಲ, ನಿರ್ದೋಶಸ್ಥಲ, ಶೀಲಸಂಪಾದನೆಯಸ್ಥಲಗಳೆಂದು ೪ ಸ್ಥಲಗಳಿರುವವು.

(೬) ಐಕ್ಯಸ್ಥಲ— ಐಕ್ಯಸ್ಥಲ, ಸರ್ವಾಚಾರ ಸಂಪತ್ತಸ್ಥಲ, ಏಕಭಜನಸ್ಥಲ, ಸಹಜಭಜನಸ್ಥಲ ಎಂದು ೪ ಸ್ಥಲಗಳಿರುವವು.

ಈ ಪ್ರಕಾರ ಲಿಂಗಸ್ಥಲಗಳು ೫೭, ಅಂಗಸ್ಥಲಗಳು ೪೪, ಒಟ್ಟು ೧೦೧ ಆದರೂ ಇಲ್ಲಿ ಎಲ್ಲ ಲಿಂಗಸ್ಥಲಗಳನ್ನು ಹೇಳಬೇಕಾಗಿದೆ. (೧) ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರು ಕ್ರಿಯಾ ಭಾವ ಜ್ಞಾನ ಲಿಂಗಗಳು ಸ್ವಯ ಚರ ಪರ. (೨) ಕ್ರಿಯಾಗಮ, ಭಾವಾಗಮ, ಜ್ಞಾನಾಗಮ, ಸಕಾಯ, ಅಕಾಯ, ಪರಕಾಯ, ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಎಂದು ಶಿವಲಿಂಗದಲ್ಲಿ (೩) ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ, ಕಾಯಾರ್ಪಿತ, ಕರುಣಾರ್ಪಿತ, ಭಾವಾರ್ಪಿತ, ಶಿಷ್ಯ ಶುಶ್ರೂಷಾ, ಸೇವೆ, (೪) ಜೀವಾತ್ಮ, ಅಂತರಾತ್ಮ, ಪರಮಾತ್ಮ, ನಿರ್ದೇಹಾಗಮ? ನಿರ್ಭಾವಾಗಮ, ನಷ್ಟಾಗಮ, ಆದಿಪ್ರಸಾದಿ ಅಂತ್ಯಪ್ರಸಾದಿ, ಸೇವ್ಯಪ್ರಸಾದಿ, ದೀಕ್ಷಾ

ಪಾದೋದಕ, ಶೀಕ್ಷಾಪಾದೋದಕ, ಜ್ಞಾನಪಾದೋದಕ, (೫) ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ, ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ, (೬) ಸ್ವೀಕೃತಪ್ರಸಾದಿ, ಶಿಷ್ಟೋದನಪ್ರಸಾದಿ, ಚರಾಚರನಾಸ್ತಿ ಭಾಂಡಭಾಜನ, ಅಂಗಲೇಪನ, ಸ್ವಪರವರಿಯುದ ಭಾವಾಭಾವನಷ್ಟ ಜ್ಞಾನಶೂನ್ಯ, ಈ ಪ್ರಕಾರ ಇವು ೫೭ ಲಿಂಗಸ್ಥಲಗಳು ಆಗುವವು. ಇದರಿಂದ ಆದಾರಶುದ್ಧಿಯಾಗುವದು. ಅಂಗನ ಶುದ್ಧಿಯಾಗಿ, ಅಂಗ ಲಿಂಗವಾಗಲು ಆಗ ಸರ್ವಾಂಗ ಲಿಂಗಿಯಾಗುವನು. ಅಂಗ ಅಂದರೆ ಜೀವ ಮತ್ತು ಶರೀರ ಎಂದು ಎರಡೂ ಅರ್ಥದಲ್ಲಿ ಇಲ್ಲಿ ಹೆಚ್ಚಬೇಕು.

ಜೀವವೂ ವಿಕಾಸವಾಗಿ ಶುದ್ಧವಾಗುವದು. ಅದರ ಜೊತೆಗೆ ಶರೀರ ಹಾಗೂ ಶರೀರದ ಭಾಗಗಳೆಲ್ಲ ಅಂತರ ಬಾಹ್ಯ ಇಂದ್ರಿಯಗಳೂ ಕೂಡ ಈ ಏಕೋತ್ತರಶತಸ್ಥಲದಿಂದ ಶುದ್ಧ ಪವಿತ್ರ ಶಾಂತ ಯೋಗ್ಯವಾಗಿ ದೇವ ಮಂದಿರವಾಗಿ ದೇವನಾಗಿ ಮಾರ್ಪಡುವವು. ಆಗ ಹಿಂದಿನಿಂದ ಅದ್ವೈತ ಜ್ಞಾನಾನುಭವವಾಗಿ ಅದ್ವೈತದ ಒಳ್ಳೇ ಕ್ರಿಯೆಗಳು ಅದರಿಂದ ನಡೆಯ ಹತ್ತುವವು.

## ಇಷ್ಟಲಿಂಗ ಪೂಜೆಯುಂದರೇನು ?

(೧) ಇಷ್ಟಲಿಂಗದಲ್ಲಿ ಅತಿ ಸೂಕ್ಷ್ಮವಾಗಿ ೧೮ ಲಿಂಗಸ್ಥಲಗಳಾಗುವವು. ಇವೆಲ್ಲವುಗಳನ್ನು ಸರಿಯಾಗಿ ಆಚರಿಸಲಿಕ್ಕೆ ಬಂದಬಳಿಕ ಇಷ್ಟಲಿಂಗ ಅಂದರೆ ಆಚಾರಲಿಂಗ ಗುರುಲಿಂಗ ಪೂಜೆಯಾಗುವದು. ಈ ೧೮ ಲಿಂಗಸ್ಥಲಗಳಲ್ಲಿ ಸತ್ಕ್ರಿಯಾಚರಣೆ ಇರುವದು. ಕರ ಪಾದಕ್ಕೆ ಸಂಬಂಧಿಸುವದು. ಇದು ಕ್ರಿಯಗಳನ್ನೇ ಹೇಳುವದು. ಇದರ ಜೊತೆಗೆ ಜಪ, ಜ್ಞಾನ, ಧ್ಯಾನಗಳು ನಡೆಯಬೇಕು. ಗುರು, ಲಿಂಗ ಕೊಟ್ಟು ಜಂಗಮನ ಕಡೆಯಿಂದ ಜ್ಞಾನೋಪದೇಶಪಡೆಯುಲು ಕ್ರಿಯಾ ಭಾವ ಜ್ಞಾನಗಳನ್ನು ಗಳಿಸಲು ತನ್ನ ಸ್ಥೂಲತನು, ಸೂಕ್ಷ್ಮತನು, ಕಾರಣತನುವಿನಿಂದ ಧರ್ಮಾಚಾರ ಒಳ್ಳೇ ಭಾವದ ಆಚರ, ಸುಜ್ಞಾನದ ಆಚಾರವನ್ನು ಮಾಡಿ ಕಾಯುವನ್ನೆಲ್ಲ ಶುದ್ಧಗೊಳಿಸುವನು. ಇದು ಸಂಪೂರ್ಣ ಇಷ್ಟಲಿಂಗದ ಪೂಜೆಯಾಯಿತು, ಇದರಲ್ಲಿ ೧೮ ಲಿಂಗಗಳ ಆಚಾರ ಬಂದಿತು.

## ಪ್ರಾಣಲಿಂಗ ಪೂಜೆಯೆಂದರೇನು ?

(೨) ಇನ್ನು ಪ್ರಾಣಲಿಂಗ ಪೂಜೆಯಲ್ಲಿ ೨೧ ಲಿಂಗಗಳು ಬರುವವು. ಇವುಗಳನ್ನು ಸರಿಯಾಗಿ ಆಚರಿಸಲಿಕ್ಕೆ ಬಂದ ಬಳಿಕ ಪ್ರಾಣಲಿಂಗದ ಪೂಜೆ ಅಂದರೆ ಶಿವಲಿಂಗ ಹಾಗೂ ಜಂಗಮ ಲಿಂಗಗಳ ಪೂಜೆಯು ಜ್ಞಾನವಾಗುವದು. ಈ ೨೧ ಲಿಂಗ ಸ್ಥಲದಲ್ಲಿ ಒಳ್ಳೇ ನಿಷ್ಕಾಮ ಸತ್ಕ್ರಿಯಾಚರಣೆಯನ್ನು ಒಳ್ಳೇ ಭಕ್ತಿ ಜ್ಞಾನಗಳಿಂದ ಜಪಧ್ಯಾನಗಳನ್ನು ಮಾಡುತ್ತ ಮಾಡಬೇಕು. ಇದು ಉರಕ್ಕೆ ಅಂದರೆ ಭಕ್ತಿಗೆ ಸಂಬಂಧಿಸಿರುವದು. ಹೀಗೆ ಮೊದಲಿನ ೧೮ ಲಿಂಗಾಚಾರಗಳಿಂದ ಸಾಧಕನು ಮುಂದೆ ಕಾಯದ ಇಂದ್ರಿಯಗಳು ಪ್ರಾಣದ ಅನುಗ್ರಹ ಅಂದರೆ ಅವು ಹಿಡಿತದಲ್ಲಿ ಬಂದು ಒಳ್ಳೇ ಶುದ್ಧಿಯನ್ನು ಪಡೆಯಲು ನಿಷ್ಕಾಮ ಕರ್ಮ ಮಾಡಲು ಪರಹಿತಕ್ಕಾಗಿ ಕಾಯಕರಣ ಭಾವಗಳನೆಲ್ಲ ಅರ್ಪಿಸುವನು. ಶಿಷ್ಯಭಾವದಿಂದ ಸೇವೆಯನ್ನು ಶುಶ್ರೂಷೆಯನ್ನು ಶಿವಸ್ವರೂಪಿಗಳಾದ ಜೀವಿಗಳಿಗೆ ಸಲ್ಲಿಸುವನು. ಇಷ್ಟಾದರೂ ಅರ್ಧ ಪ್ರಾಣಲಿಂಗ ಪೂಜೆಯಾಗುವದು. ಮುಂದೆ ಜೀವಾತ್ಮ, ಅಂತರಾತ್ಮ, ಪರಮಾತ್ಮರಲ್ಲಿಯ ಭೇದವು ಅಡಗುವದು. ಆಗ ಶರೀರ, ಪ್ರಾಣಭಾವ ಮನಗಳ ಗುಣಗಳು ನಷ್ಟವಾಗುವವು. ಆಗ ಅವನು ಆಚರಿಸುವದಿಲ್ಲ ಆದಿ ಅಂತ್ಯ ಸೇವ್ಯ ಪ್ರಸಾದವಾಗಿ ಎಲ್ಲವೂ ಪವಿತ್ರವಾಗಲು ದೀಕ್ಷಾ, ಶಿಕ್ಷಾ, ಜ್ಞಾನಗಳಿಂಬ ಅಮೃತ ಪಾಶನವು ಪಾದಗಳಿಂದ ಪ್ರವಹಿಸಹತ್ತುವದು. ಇಷ್ಟು ಆದರೆ ಮಾತ್ರ ಪ್ರಾಣಲಿಂಗ ಅಂದರೆ ಶಿವಲಿಂಗ, ಜಂಗಮಲಿಂಗಗಳ ಪೂಜೆ ಮುಗಿಯುವದು.

## ಭಾವಲಿಂಗ ಪೂಜೆ ಎಂದರೇನು ?

(೩) ಭಾವಲಿಂಗ ಪೂಜೆಯಲ್ಲಿ ೧೨ ಲಿಂಗಗಳು ಬರುವವು. ಇವುಗಳನ್ನು ಸರಿಯಾಗಿ ಆಚರಿಸಲಿಕ್ಕೆ ಬಂದರೆ ಭಾವಲಿಂಗ ಅಂದರೆ ಪ್ರಸಾದ ಲಿಂಗ ಮಹಾಲಿಂಗಗಳ ಪೂಜೆಯಾಗಿ ಅನುಭವ ಜ್ಞಾನವಾಗಿ ಜೀವನ್ಮುಕ್ತನಾಗುವನು. ಆದರೂ ಇಲ್ಲಿ ಸಹಸತ್ಕ್ರಿಯಾಚರಣೆಗಳನ್ನು ಒಳ್ಳೇ ಭಕ್ತಿ ಒಳ್ಳೇ ಜ್ಞಾನಯುಕ್ತನಾಗಿ ಸದಾ ಜಪ ಧ್ಯಾನಗಳೊಂದಿಗೆ ಮಾಡುತ್ತ ಒಳ್ಳೇ ಜ್ಞಾನ ಪೂರ್ಣ ಆಚರಣೆಗಳನ್ನು ಮಾಡಬೇಕಾಗುವದು. ಕ್ರಿಯಾಜ್ಞಾನ ಭಾವಜ್ಞಾನ ಜ್ಞಾನದಲ್ಲಿ ಸುಜ್ಞಾನ ಮಾಡಿಕೊಂಡು ಪಿಂಡ ಬಿಂದು ಮಹಾ ಆಕಾಶಗಳಲ್ಲಿ ಏಕತೆಯನ್ನು ಸಾಧಿಸಿ ಕ್ರಿಯೆಯಲ್ಲಿ ಪ್ರಕಾಶ ಭಾವದಲ್ಲಿ ಪ್ರಕಾಶ ಜ್ಞಾನ

ದಲ್ಲಿ ಪ್ರಕಾಶ ಕಂಡು ಅನುಭವಗೊಂಡು ಎಲ್ಲ ಚರಾಚರಗಳೆಲ್ಲ ಒಂದೇ ಅಂಗ ಲಿಂಗಗಳುಳ್ಳವುಗಳೆಂದು ಅವುಗಳ ಕೂಡ ಸಮಭಾವದಿಂದ ಸಮಆಚಾರ ಣೆಯಿಂದ ಕೊಂಡುಕೊಟ್ಟು ನಿಂದು ಇರಬೇಕು. ಹೀಗೆ ಭಾಂಡ ಭಾಜನ ಶುದ್ಧಿಹೊಂದಿದ ಬಳಿಕ ಸ್ವಪರವು ಅಭೇದ ಜ್ಞಾನವಡೆದು ಸಕಲ ಸದ್ ಭಾವಗಳನ್ನೂ ಸಹ ತೊರೆದು ಜ್ಞಾನ ಶೂನ್ಯದಲ್ಲಿ ನಿಂತಾಗ ಭಾವಲಿಂಗ ಅಂದರೆ ಪ್ರಸಾದಲಿಂಗ ಮಹಾಲಿಂಗಗಳ ಪೂಜೆಯಾಗಿ ಜೀವನ್ಮುಕ್ತನಾಗು ವನು. ಮುಂದೆ ಬೇಕಾದಾಗ ಶರೀರವನ್ನು ಬಯಲು ಮಾಡಬಹುದು. ಈ ಪ್ರಕಾರ ಹೊಂದಿಕೊಳ್ಳುವದೆಂದು ತಿಳಿಸಲಾಗಿದೆ.

ಇನ್ನು ಅಂಗಸ್ಥಲದ ೪೪ ಸ್ಥಲಗಳ ಬಗ್ಗೆ ವಿಚಾರಿಸುವಾ— ೧ ಭಕ್ತ ಸ್ಥಲದಲ್ಲಿಯ ೧೫ ಸ್ಥಲಗಳನ್ನು ವಿಚಾರಿಸಿದರೆ ಪಿಂಡದ ಉತ್ಪತ್ತಿ ಜ್ಞಾನ ಮಾಡಿಕೊಂಡು ಸಂಸಾರದ ವಿಷಯ ಸುಖಗಳು ನಿಜವಾದ ಸುಖಗಳಲ್ಲ. ಅವುಗಳಲ್ಲಿ ಸುಖವಿದೆ ಎಂದು ತಿಳಿಯುವದೇ ಭ್ರಾಂತಿ ಭ್ರಮೆ ಎಂದು ಗುರುವಿನ ಕರುಣದಿಂದ ಅರಿತು ಅಷ್ಟಾವರಣ ಪಂಚಾಚಾರಗಳಂತೆ ನಡೆದು ಲಿಂಗ ಪೂಜೆ ಮಾಡುತ್ತಿರುವದೇ ಇದಾಗಿದೆ. ಲಿಂಗ ಪೂಜೆಯನ್ನು ಮೇಲೆ ವಿವರಿಸಲಾಗಿದೆ.

೨. ಮಹೇಶ್ವರಸ್ಥಲದಲ್ಲಿಯ ೯ ಸ್ಥಲಗಳಲ್ಲಿ-ಲಿಂಗದ ಮೇಲೆ ನಿಷ್ಠೆ ಶ್ರದ್ಧೆ ಭಕ್ತಿ ಇಟ್ಟು ಮೊದಲಿನ ಜೀವನದ ರೀತಿಯನ್ನು ಮಾರ್ಪಡಿಸುತ್ತ ಬಾಯಬ್ರಹ್ಮವನ್ನು ನುಡಿಯದೆ ತನ್ನೊಳಗಿನ ದೇವನನ್ನು ಇಷ್ಟಲಿಂಗ ರೂಪ ದಲ್ಲಿ ಪೂಜಿಸಿ ಹೊರಗಿನ ಎಲ್ಲ ಪ್ರಕಾರದ ಮೂರ್ತಿಗಳನ್ನು ತ್ಯಜಿಸಿ, ಜಗ ತ್ತಿನ ತುಂಬ ಶಿವನಿದ್ದಾನೆಂದೂ ಆವನೇ ಸದ್ಭಕ್ತರ ಹೃದಯದಲ್ಲಿ ವಾಸವಾ ಗಿದ್ದಾನೆಂದೂ ಜ್ಞಾನಪಡಕೊಳ್ಳುವದೇ ಈ ಸ್ಥಲದ ಗೊತ್ತುಗುರಿಯಾಗಿದೆ.

೩. ಪ್ರಸಾದಿಸ್ಥಲದಲ್ಲಿ ೭ ಸ್ಥಲಗಳು. ಇಲ್ಲಿ ಪ್ರಾಣಲಿಂಗ ಪೂಜೆಯಾಗಿ ಗುರು ಲಿಂಗ ಜಂಗಮ ಭಕ್ತ ಶರಣ ಪ್ರಸಾದಿಗಳೆಲ್ಲರಲ್ಲಿ ಅದೇ ಪ್ರಾಣಲಿಂಗ ಸ್ವರೂಪನಾದ ಶಿವನೇ ಇರುವನೆಂದು ಅವರ ಮಹಿಮೆಯನ್ನೂ ಅದರಲ್ಲಿಯ ಏಕತ್ವವನ್ನೂ ಅವರಲ್ಲಿರುವ ಅಭೇದ ಸ್ಥಿತಿಯನ್ನು ಅನುಭವಗೊಂಡು ಸತ್ಕ್ರಿ ಯಾಚರಣೆ ಮಾಡಿ ಅವರಿಗೆ ಅದರ ಫಲಗಳನ್ನು ಅರ್ಪಿಸಿ ಉಳಿದ ಅಲ್ಪ ವನ್ನೇ ಪ್ರಸಾದವೆಂದು ಭೋಗಿಸುವದೇ ಪ್ರಸಾದಿಸ್ಥಲದ ಗೊತ್ತುಗುರಿಯಾಗಿದೆ.

(೪) ಪ್ರಾಣಲಿಂಗಿಯ ಸ್ಥಲದಲ್ಲಿ ೫ ಸ್ಥಲಗಳು ತಾನೇ ಶಿವನೆಂಬ ಅನುಭವಪಡೆದು ಪ್ರಾಣಲಿಂಗಾರ್ಚನೆಯನ್ನೇ ಪೂಜಿಸಿ ಶಿವಯೋಗದಲ್ಲಿ

ಮುಳಿಗಿ ಸಮಾಧಿಸಡೆದು ನಿಜಲಿಂಗದ ಜ್ಞಾನಾನುಭವಪಡೆದು ಅದರಲ್ಲಿ ನಿಂತು ಅಂಗ ಲಿಂಗಗಳನ್ನು ಸಮರಸಗೊಳಿಸುವದೇ ಪ್ರಾಣಲಿಂಗಿಸ್ಥಲದ ಗೊತ್ತು ಗುರಿಯಾಗಿದೆ.

(೫) ಶರಣಸ್ಥಲದಲ್ಲಿ ೪ ಸ್ಥಲಗಳು. ತಾನು ದೇವರಾದ ಬಳಿಕ ಸಕಲ ಚರಾಚರಗಳೆಲ್ಲವೂ ದೇವರೆಂದು ಅನುಭವಗೊಂಡು ಎಲ್ಲರಲ್ಲಿ ಎಲ್ಲದರಲ್ಲಿ ಭೇದವನ್ನು ತೊರೆದು ಸಮತೆಯಿಂದ ನಡೆದು ಸಮಭಾವದಿಂದ ದೇಶ ಕಾಲ ಗಳ ಭೇದವನ್ನು ಸಹ ಬಿಟ್ಟು ಒಳ್ಳೇ ಸತ್‌ಶೀಲಗಳನ್ನು ಸಂಪಾದಿಸಿ ಎಲ್ಲರ ಸೇವೆಯೇ ಪೂಜೆಯೆಂದು ತಿಳಿದು ಸಕಲದರ ಕಲ್ಯಾಣಮಾಡಬೇಕು.

(೬) ಐಕ್ಯಸ್ಥಲದಲ್ಲಿ ೪ ಸ್ಥಲಗಳಿರುವವು ಸದಾಜೀವನ್ಮುಕ್ತಾವಸ್ಥೆ ಯಲ್ಲಿ ಇದ್ದು ಸಂಕಲ್ಪದಿಂದ ಜಗದಕಲ್ಯಾಣಮಾಡಿ ಧರ್ಮಆಚರಗಳನ್ನು ಸಂಪಾದಿಸಿ ಎಲ್ಲರ ಕೂಡ ಭೇದವಿಲ್ಲದೆ ವ್ಯವಹರಿಸಿ ಸಹಭೋಜನ ಮೊದ ಲಾದವುಗಳನ್ನು ನಡಿಸಿ ತನ್ನ ಸಮತೆಯನ್ನು ಕ್ರಿಯೆಯಲ್ಲಿ ತರಬೇಕು ಪ್ರಾಣಿ ಗಳೆಲ್ಲ ಒಂದೇ ಎಂದು ತಿಳಿದು ಅವೆಲ್ಲವುಗಳ ಕೂಡ ಎಲ್ಲ ರೀತಿಯ ದಯೆ, ಅಹಿಂಸೆ, ಸತ್ಯ ಮೊದಲಾದ ವ್ಯವಹಾರಗಳನ್ನು ಮಾಡಬೇಕು.

ಈ ಪ್ರಕಾರ ಅಂಗಸ್ಥಲದ ೪೪ ಸ್ಥಲಗಳಿಂದ ಈ ಪರಿಪೂರ್ಣಯೋಗವು ಎಲ್ಲರನ್ನೂ ಪರಿಪೂರ್ಣಯೋಗಿಗಳನ್ನಾಗಿ ಮಾಡುವದು. ಅಲ್ಲಮ, ಸಿದ್ಧರಾಮ, ಅನುಮಿಷಯ್ಯ, ಬಸವ, ಚನ್ನಬಸವ, ಅಕ್ಕ, ಮಡಿವಾಳಮಾಚಯ್ಯ, ಚಂದಯ್ಯ, ಹರಳಯ್ಯ, ಚನ್ನಯ್ಯ, ಬ್ರಹ್ಮಯ್ಯ, ಅಜಗಣ್ಣ, ಮೊದಲಾದ ಶರಣ ಸಂಕುಳವೇ ಹಾಗೆ ನಡೆದು ಪರಿಪೂರ್ಣಯೋಗಿಯಾಗಿ ಹೋದರು. ಈ ಪರಿ ಪೂರ್ಣಯೋಗದಲ್ಲಿ ಯಾತರದೂ ಯಾವತರದ್ದು ಎಳ್ಳಿನಷ್ಟೂ ಕೂಡ ಕುಂದು ಕೊರತೆ ಇಲ್ಲವೆಂದು ಧಾರಾಳವಾಗಿ ಹೇಳಬಹುದು. ಶರಣರು ಪ್ರಮಥರು ಆದ್ಯರು ಈ ಪರಿಪೂರ್ಣಯೋಗವನ್ನು ಬಹು ಅಂದಚಂದವಾಗಿ ಅತಿ ಸುಂದರ ವಾಗಿ ಅತಿ ಪರಿಪೂರ್ಣವಾಗಿ ಕುಂದುಕೊರತೆ ದೋಷಗಳಿಲ್ಲದಂತೆ ಹೆಣೆದು ಆಚಾರಿಸಿ ಅನುಭವಿಸಿ ಹೇಳ ಬೋಧಿಸಿ ಬರೆದು ಇಟ್ಟು ಹೋಗಿದ್ದಾರೆ. ನಮ್ಮಂಥವರ ಕೈಯಲ್ಲಿ ಅದು ಸಿಕ್ಕು ಜೀವಕಳೆಕೊಂಡು ಶರಣರ ಬರವನ್ನು ಹಾರೈಸುತ್ತ ನೆಲಹಿಡಿದು ಬಿದ್ದುಕೊಂಡಿದೆ. ಇದೆಲ್ಲ ತಿಳಿದಿದ್ದರೆ ಅನ್ಯದಕ್ಕೆ ಎಂದೂ ಯಾರೂ ಯಾರು ಹೋಗುವದು ಶಕ್ಯವಿಲ್ಲ. ಇಷ್ಟು ಪರಿಪೂರ್ಣ ಇಷ್ಟು ಸುಂದರ ಇಷ್ಟು ಶುದ್ಧ ಸತ್ಯವಾದ ಯೋಗವು ಇನ್ನೊಂದಿಲ್ಲ.

ಈ ಎಲ್ಲ ಲಿಂಗಸ್ಥಲಗಳೂ ಅಂಗಸ್ಥಲಗಳೂ ಸತ್ಯ ಶುದ್ಧ ಕ್ರಿಯೆ ಪ್ರಧಾನವಾಗಿರುವವೆಂಬುದನ್ನು ಮೇಲೆ ನೋಡಬಹುದು. ಭಾಯಿ ಬ್ರಹ್ಮಕ್ಕೆ ಶುಷ್ಕ ಜ್ಞಾನಕ್ಕೆ ಶರಣರ ಪರಿಪೂರ್ಣಯೋಗವು ಎಂದೂ ಒಂದು ಕವಡೆಯ ಬೆಲೆಯನ್ನು ಸಹ ಮಾಡುವದೇ ಇಲ್ಲ. ಕ್ರಿಯೆಗಳಿಂದಲೇ ಅನುಭವ ಜ್ಞಾನವಾಗುವದೆಂದೇ ಈ ಪರಿಪೂರ್ಣಯೋಗವು ಸಾರುವದು. ಅದಕ್ಕೆ ಕಾಯಕವೇ ಕೈಲಾಸವೆಂದು ಇದು ಸಾರಿತು. ಗುರುವಾದಡೂ ಕಾಯಕದಿಂದ ಮುಕ್ತ ಜಂಗಮವಾದಡೂ ಕಾಯಕದಿಂದಲೇ ಮುಕ್ತ. ಭಿಕ್ಕೆ ಬೇಡಿದರೆ ಗುರು ಜಂಗಮರಲ್ಲಿ ಎಂದು ಸ್ಪಷ್ಟ ಈ ಪರಿಪೂರ್ಣಯೋಗ ಹೇಳುವದು. ಇದರಲ್ಲಿ ಯಾರಿಗೂ ಚಯನಿ ಐಷಆರಾಮು ಡೌಲು ಮಾಡಲಿಕ್ಕೆ ಆಸ್ಪದವಿಲ್ಲ. ಸಾದಾ ಜೀವನ ಉದಾತ್ತ ವಿಚಾರ ನಿತ್ಯ ಸತ್ಯ ಶುದ್ಧ ಕಾಯಕವನ್ನು ಸದಾಧ್ಯಾನ ಜಪದೊಂದಿಗೆ ಮಾಡಿ ಶಿವಶಕ್ತಿಯರಲ್ಲಿ, ದಿವ್ಯಭಕ್ತಿ ಇಟ್ಟು ಅವನ ಗುರುತಿನ ಇಷ್ಟಲಿಂಗದಲ್ಲಿ ನಿಷ್ಠೆ ಇಟ್ಟು ದ್ವಿಕಾಲ ತ್ರಿಕಾಲ ಪೂಜಿಸಿ ಪರಿಪೂರ್ಣ ಯೋಗದೊಳಗೆ ಲೋಲಾಡಿ ಪರಿಪೂರ್ಣಯೋಗಿಯಾಗೆಂದು ಈ ಏಕೋತ್ತರ ಶತಸ್ಥಲವು ಅಷ್ಟಾವರಣ ಪಂಚಾಚಾರ ಸಪ್ತಾಚಾರ ಷಟ್‌ಸ್ಥಲ ಮೊದಲಾದವುಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಪೂರ್ಣ ಪರಿಪೂರ್ಣವಾಗಿ ಶೋಭಿಸಿ ಇದು ಪರಿಪೂರ್ಣಯೋಗವೆಂದು ಕರೆಯಿಸಿಕೊಳ್ಳಲಿಕ್ಕೆ ಬಹು ಯೋಗ್ಯವೇ ಇರುವದೆಂದು ಧಾರಾಳವಾಗಿ ಹೇಳಲಿಕ್ಕೆ ಏನೂ ಅಡ್ಡಿ ಆತಂಕಗಳೇ ಇಲ್ಲ.

ಈ ಏಕೋತ್ತರ ಶತಸ್ಥಲದಲ್ಲಿಯ ಲಿಂಗಸ್ಥಲಗಳು ೫೭, ಅಂಗಸ್ಥಲ ೪೪ ಇವುಗಳ ಸಂಕ್ಷೇಪ ವಿವರಣೆಯನ್ನು ಸಾಮಾನ್ಯವಾಗಿ ವಿವರಿಸಿ ಅವೆಲ್ಲ ಪ್ರಕಾರ ಈ ಪರಿಪೂರ್ಣಯೋಗಕ್ಕೆ ಹೊಂದಿಕೊಂಡು ಸಕಲ ಶರೀರವನ್ನೂ ಜೀವವನ್ನೂ ಶುದ್ಧಗೊಳಿಸಿ ಅವುಗಳಲ್ಲಿ ಏಕತ್ವವನ್ನು ಅಂದರೆ ಅಂಗದಲ್ಲಿ ಲಿಂಗದ ಗುಣಗಳು ಜೀವದಲ್ಲಿ ಹಾಗೂ ಶರೀರದಲ್ಲಿ ಲಿಂಗದ ಕಳೆ ಚೈತನ್ಯಗಳು ಹೇಗೆ ಬರುವವೆಂಬುದನ್ನು ಮೇಲೆ ನೋಡಹುದು. ಇವೆಲ್ಲಸ್ಥಲಗಳು ನಿಜವಾದ ಆಧಾರ ಶುದ್ಧಿಯನ್ನು ಚನ್ನಾಗಿ ಮಾಡುವವೆಂಬುದನ್ನು ಕಾಣಬಹುದು. ಅದರಿಂದ ಪ್ರಕೃತಿ ಪುರುಷ ಪರಶಿವ ಪರಶಕ್ತಿಯರಲ್ಲಿ ಸಮರಸ ಸಾಮರಸ್ಯ ಪಡೆದದ್ದು ನಿಚ್ಚಳವಾಗಿ ಕಾಣುವದು. ಇದೇ ಲಿಂಗಾಂಗ ಸಮರಸವೆನಿಸುವದು. ಶಿವಜೀವರೈಕ್ಯವೆನಿಸುವದು. ಈ ಪ್ರಕಾರ ಅಷ್ಟಾವರಣ ಪಂಚಾಚಾರ ಸಪ್ತಾಚಾರ ಷಟ್‌ಸ್ಥಲ ಏಕೋತ್ತರ ಶತಸ್ಥಲ ಮೂವತ್ತಾರು ಸ್ಥಲಗಳಲ್ಲಿ ಒಳ್ಳೇ ತಾಳುಮೇಳ ತಳಕುಹುಳಕ ಇರುವದನ್ನು ಈಗ ಚನ್ನಾಗಿ ಕಾಣಬಹುದು.

## ಪರಿಪೂರ್ಣಯೋಗದಲ್ಲಿ ಲಿಂಗಪೂಜೆ.

ಲಿಂಗದ ಬಗ್ಗೆ ಅನೇಕ ತತ್ವಗಳು ಹಿಂದೆ ಬಂದಿರುವವು. ಇಲ್ಲಿ ಲಿಂಗ ಪೂಜೆಯಿಂದ ಯಾವ ಯಾವ ಯೋಗಗಳು ತನ್ನಷ್ಟಕ್ಕೆ ತಾನೇ ಸಾಧಿಸುವ ದೆಂದೂ ಅದೇ ಪರಿಪೂರ್ಣ ಯೋಗವೆಂತು ಆಗುವದೆಂದೂ ಇಲ್ಲಿ ವಿಚಾರಿ ಸೋಣ. ಲಿಂಗ ಪೂಜೆಯಲ್ಲಿ ಸಾಮಾನ್ಯವಾಗಿ ಎಲ್ಲ ಯೋಗಗಳು ಅಂದರೆ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ, ರಾಜಯೋಗ, ಹಠಯೋಗ, ಲಯಯೋಗ, ಜಪಯೋಗ, ಧ್ಯಾನಯೋಗ, ಕುಂಡಲಿನಿಯೋಗ ಮೊದಲಾದ ಯೋಗಗಳು ಬರುವವು. ಅಲ್ಲದೆ ಶಕ್ತಿ ಶಿವ ಓಂ ನಮಃ ಶಿವಾಯ ಮಂತ್ರ ಬಂಧಗಳೂ, ಮುದ್ರಾಗಳೂ ಸಹ ಅಡಕವಾಗುವವು. ಲಿಂಗಪೂಜೆಯು ಅಷ್ಟು ಪರಿಪೂರ್ಣವಾದದ್ದಿರುವದು.

(೧) ಭಕ್ತಿಯೋಗಃ— ಈ ಲಿಂಗದಲ್ಲಿ ಜಗತ್ತಿನ ತಂದೆ-ತಾಯಿಗ ಳಾದ ಶಿವ ಶಕ್ತಿಯರು ಇದ್ದಾರೆ. ಇದನ್ನು ಪೂಜಿಸುವದರಿಂದ ಜಗತ್ತಿನ ಹಾಗೂ ನಮ್ಮ ತಂದೆ-ತಾಯಿಗಳನ್ನು ಪೂಜಿಸಿದಂತೆ ಆಗುವದು. ಲಿಂಗ ಮಧ್ಯೆ ಜಗತ್ ಸರ್ವಂ ಎಂದು ಇದ್ದದರಿಂದ ಅದನ್ನು ಒಳ್ಳೇ ಭಯಭಕ್ತಿ ಯಿಂದ ಒಳ್ಳೇ ಪ್ರೇಮದಿಂದ ಇದನ್ನು ಪೂಜಿಸಬೇಕೆಂಬ ಭಾವವು ತಾನೇ ಒಡಮೂಡ ಹತ್ತುವದು. ಲಿಂಗದ ಆಕಾರವು (ಕಂತೆ ಸಹಿತ) ಈ ವಿಶ್ವದಂತೆ ಇರುವದು. ಅದಕ್ಕೆ ಈ ವಿಶ್ವವನ್ನೇ, ವಿಶ್ವದೊಳಗಿನ ಚರಾಚರವನ್ನೇ ವಿಶ್ವ ದಲ್ಲಿಯ ಸ್ತ್ರೀ ಪುರುಷರನ್ನು ತಾಯಿ ತಂದೆಯಂತೆ ಪೂಜಿಸಿದಂತೆ ಈ ಲಿಂಗ ವನ್ನು ಪೂಜಿಸುವದರಿಂದ ಆಗುವದು. ಈ ಲಿಂಗ ಪೂಜಕನು ಜಗತ್ತನ್ನೇ ಪೂಜ್ಯ ಭಾವದಿಂದ ಭಕ್ತಿಪ್ರೇಮದಿಂದ ಕಾಣಬೇಕಾಗುವದು. ಅದಕ್ಕೆ ಲಿಂಗ ವನ್ನು ಅಗಲಲು ಅಂಜದವರು ಅಗಲಿದರೆ ಪ್ರಾಣವನ್ನೂ ಸಹ ಬಿಡುವರು. ಇಂಥ ಸ್ವಾಭಾವಿಕ ಪ್ರೀತಿ ಲಿಂಗದ ಮೇಲೆ ಬೀಳುವದು. ಅದಕ್ಕೆ ಲಿಂಗ ಪೂಜೆಯಲ್ಲಿ ಭಕ್ತಿಯೋಗ ಹೆಚ್ಚಾಗಿ ಸಾಧಿಸುವದು.

(೨) ಜ್ಞಾನಯೋಗಃ— ಲಿಂಗದಲ್ಲಿ ಜಗತ್ತಿನ ಸಕಲ ತತ್ವಗಳು ಸಿದ್ಧಾಂತ ಶಾಸ್ತ್ರವು ಬಹು ಗೂಢವಾಗಿ ಸೂಕ್ಷ್ಮವಾಗಿ ಅಡಗಿರುವದು ಕಂಡು ಬರುವದು. ಇದರಿಂದ ಸೃಷ್ಟಿಯು ಉತ್ಪತ್ತಿ ಹೇಗಾಯಿತೆಂದು ಹೊಳೆಯು ವದು. ಪಂಚೀಕರಣ ವಿಚಾರ ಚಂದ್ರೋದಯ ವಿಚಾರ ಸಾಗರಗಳಲ್ಲಿಯ ತತ್ವ ವಿಚಾರವು ಈ ಲಿಂಗದಿಂದ ವೇದ್ಯವಿರುವದು ಪೂಜೆಯಲ್ಲಿ ಈ ಜ್ಞಾನಕ್ಕೆ

ಸಂಬಂಧಿಸಿದ ಈ ವಿಷಯಗಳನ್ನು ಅರಿಯಲು ಶಕ್ಯವಿರುವದು. ಸಾಧಕನು ಲಿಂಗ ಪೂಜೆಯಿಂದ ಹೃದಯ ವಿಕಾಸ ಹಾಗೂ ಶುದ್ಧ ಮಾಡಿಕೊಳ್ಳುವಂತೆ ಬುದ್ಧಿ ವಿಕಾಸ ಆಗಿ ಸುಬುದ್ಧಿಯನ್ನು ಹೊಂದಿ ಸುಜ್ಞಾನವನ್ನು ಪಡೆಯಲು ಲಿಂಗಪೂಜೆ ಬಹು ನೆರವಾಗುವದು. ಇದರಿಂದ ಜ್ಞಾನಯೋಗವು ತನ್ನ ತಾನೇ ಬಂದು ಹೋಗುವದು. ಪರಶಿವನಿಂದ ಮೊದಲು ಚಿತ್‌ಶಕ್ತಿ ಪರಾ ಪ್ರಕೃತಿ ಅಂದರೆ ಸತ್ ಚಿತ್ ಆನಂದಗಳು ಹೊರಗೆ ಹೇಗೆ ಬಂದವು ಅದ ರಿಂದ ಸೂಕ್ಷ್ಮ ಮಾನಸಿಕ ಜಗತ್ತು ಪ್ರಕಟವಾಯಿತು. ಅದರಿಂದ ಸತ್ವ ರಜ ತಮಗಳಿಂದ ಕೂಡಿದ ಅಪರಾ ಪ್ರಕೃತಿ ಮಾಯಾ ಜಗತ್ತು, ಸ್ಥೂಲ ಜಗತ್ತು ಪ್ರಕಟವಾಗಿ ಹೇಗೆ ಹೇಗೆ ಈ ಚರಾಚರ ಸ್ವರ್ಗ, ಮೃತ್ಯು, ಪಾತಾಳ ಲೋಕಗಳು, ಭೂತಗಳು, ವಿಷಯಗಳು ಬಂದು ಗಂಡು ಹೆಣ್ಣು ಹೇಗೆ ಆದವೆಂಬುದನ್ನು ಇದು ಸೂಚಿಸುತ್ತದೆ. ಪುನಃ ಸ್ಥೂಲವು ಸೂಕ್ಷ್ಮದಲ್ಲಿ ಸೂಕ್ಷ್ಮವು ಕಾರಣದಲ್ಲಿ ಕಾರಣವು ಮಹಾ ಕಾರಣದಲ್ಲಿ ಹೇಗೆ ಲಯವಾಗು ವದೆಂಬುದನ್ನು ಸಹ ಈ ಲಿಂಗವು ಸೂಚಿಸುವದು. ಹೀಗೆ ಇನ್ನೂ ಅನೇಕ ವಿಷಯಗಳು ಲಿಂಗ ಪೂಜೆಯಿಂದ ಸಹಜ ಹೊಳೆಯಲಾರದೆ ಇರಲಾರವು. ಈ ವಿಷಯವನ್ನು ಹಿಂದೆ ಸಾಕಷ್ಟು ತಿಳಿಸಲಾಗಿದೆ. ಈ ಲಿಂಗವು ಅವ ರೋಹಣ, ಅವರೋಹಣ ಇಳಿಕೆಯ ರೂಪಾಂತರ, ಏರಿಕೆಯ ರೂಪಾಂತರ ಗಳನ್ನು ಸಹ ಹೇಳುವದು; ಆ ಶಿವಶಕ್ತಿಯರನ್ನು ನಮ್ಮಲ್ಲಿ ಎಲ್ಲ ಅವಯವ ಗಳೊಳಗೆ ಹೇಗೆ ಅಳವಡಿಸಿಕೊಳ್ಳಬಹುದೆಂದು ಸಹ ಈ ಲಿಂಗಪೂಜೆ ಕಲಿಸುವದು. ಇದರಿಂದ ಸರ್ವಾಂಗ ಲಿಂಗಿಯಾಗುವದು ಸಹಜ, ಸರಳ ಎಂದು ತೋರುವದು. ಪರಿಪೂರ್ಣ ಯೋಗಕ್ಕೆ ಈ ಪೂಜೆ ಬಹು ಸಹಾ ಯಕವಾಗಿರುವದು.

ನಾಶಿಕದಲ್ಲಿ ಆಚಾರಲಿಂಗ, ನಾಲಿಗೆಯಲ್ಲಿ ಗುರುಲಿಂಗ, ನೇತ್ರಗಳಲ್ಲಿ ಶಿವಲಿಂಗ, ಚರ್ಮದಲ್ಲಿ ಜಂಗಮ ಲಿಂಗ, ಶ್ರೋತ್ರದಲ್ಲಿ ಪ್ರಸಾದ ಲಿಂಗ ಹೃದಯದಲ್ಲಿ ಮಹಾಲಿಂಗಗಳಿರುವದರಿಂದ ಈ ಪರಿಪೂರ್ಣಯೋಗಿಯ ಶರೀ ರವು ಪರಿಪೂರ್ಣ ಲಿಂಗಮಯವಾಗಿರುವದೆಂದು ಹೊಳೆಯುವದು. ಇಂದ್ರಿ ಯಗಳನ್ನು ನಿತ್ಯ ಶುದ್ಧ ಪವಿತ್ರಗೊಳಿಸಿ ವಿಷಯ ರಹಿತವನ್ನಾಗಿ ಮಾಡಲು ಆ ಲಿಂಗಗಳು ಆಯಾ ಸ್ಥಾನಗಳಲ್ಲಿ ಪ್ರಕಟವಾಗಿ ಕಾರ್ಯ ಮಾಡುವ ಪ್ರಜ್ಞೆ ಬರುವದು. ಅದಕ್ಕೆ ಮೊದಲು ತ್ಯಾಗಾಂಗದಿಂದ ಲಿಂಗ ಪೂಜೆ

ಮಾಡಿ ಒಳಗಿನ ಲಿಂಗದ ಒಳಗಿನ ವಿಷಯಗನ್ನು ಭೋಗಿಸಿ ಭೋಗಾಂಗಿಯಾದ ಬಳಿಕ ತನ್ನಿಂದ ತಾನೇ ಅಂಗ ಲಿಂಗ ಸಮರಸವಾಗಿ ಯೋಗಾಂಗವಾಗುವದು. ಇದೆಲ್ಲ ಲಿಂಗಪೂಜೆಯಿಂದ ಆಗುವದು ಶಕ್ಯವದೆ. ಅಂದರೆ ಬಾಹ್ಯ ವಿಷಯಗಳು ಆ ಯಾ ಇಂದ್ರಿಯಗಳಿಗೆ ಸೋಂಕದೆ ಅವುಗಳನ್ನು ಸ್ಮರಿಸದೆ ಸೂಕ್ಷ್ಮ ವಿಷಯಗಳ ಜ್ಞಾನ ಗೊತ್ತಾಗಿ ಅವುಗಳ ಕ್ರಿಯೆಗಳು ನಡೆಯಬೇಕು. ಹೂ ಗಳಿಲ್ಲದೆ ನಾಶಿಕಕ್ಕೆ ಸುಗಂಧ ಹತ್ತಬೇಕು. ರೂಪು ಇಲ್ಲದೆ ನೇತ್ರಕ್ಕೆ ಸುರೂಪ ಗೋಚರಿಸಬೇಕು. ಏನನ್ನೂ ಸ್ಪರ್ಶ ಮಾಡದೆ ನಮಗೆ ಒಳ್ಳೇ ಸುಸ್ಪರ್ಶ ಹತ್ತಬೇಕು. ಸಕ್ಕರೆಯಿಲ್ಲದೆ ನಾಲಿಗೆ ರುಚಿಯಾಗಬೇಕು. ಬಾಹ್ಯ ಶಬ್ದವಿಲ್ಲದೆ ಸುಶಬ್ದಗಳು ಕೇಳಬೇಕು. ಅಲ್ಲದೆ ಹೃದಯದಲ್ಲಿ ಅನುಭವದ ಅರಹು ಇರಬೇಕು. ಬುದ್ಧಿಯಲ್ಲಿ ಸಮ್ಯಕ್ ಜ್ಞಾನ ಸುಜ್ಞಾನ ಪ್ರಕಟವಾಗಬೇಕು. ಇದೆಲ್ಲ ಲಿಂಗ ಪೂಜೆಯಿಂದಸಾಧಿಸುವದು. ಸತ್ಕ್ರಿಯೆಯೇ ಲಿಂಗ, ಸುಜ್ಞಾನವೇ ಜಂಗಮ, ಎಂದು ಹೇಳಿದ್ದಾರೆ. ಬೀಜದಲ್ಲಿ ಅಂಕುರವು, ಹಾಲಿನಲ್ಲಿ ತುಪ್ಪ, ಮಣ್ಣಿನಲ್ಲಿ ಬಂಗಾರ ಅಡಗಿದಂತೆ ಲಿಂಗಾಂಗ ಸಮರಸವಾಗಿ ಸರ್ವಾಂಗ ಲಿಂಗಿಯಾಗಿ ಒಂದೇ ಒಂದಾಗಿ ಹೋಗುವದೆಂಬುದನ್ನು ಈ ಲಿಂಗ ಸೂಚಿಸುವದು. ಮಹಾಕಾರಣ, ಕಾರಣ ಸೂಕ್ಷ್ಮ, ಸ್ಥೂಲ, ಶರೀರಗಳು, ಜಗತ್ತುಗಳು ಒಂದಕ್ಕೊಂದು ಸಂಬಂಧವಾಗಿಯೇ ಇರುವವೆಂಬುದನ್ನು ಈ ಲಿಂಗದಿಂದ ಅರಿಯುಬಹುದು. ಜಗವು ಸತ್ಯ ನಿತ್ಯವೆಂದು ಇದರಿಂದ ಹೊಳೆಯುವದು. ಈ ಪ್ರಕಾರ ಲಿಂಗಪೂಜೆಯಲ್ಲಿ ಭಕ್ತಿ ಯೋಗದಂತೆ ಜ್ಞಾನಯೋಗ ಸಹ ಚನ್ನಾಗಿ ಹಾಸು ಹೊಕ್ಕಾಗಿ ಹೋಗುವದು.

(೩) ಕರ್ಮಯೋಗಃ— ಸತ್ಕರ್ಮದ ನಿಷ್ಕಾಮ ಕರ್ಮದ ಅವಶ್ಯಕತೆ ಲಿಂಗಪೂಜೆಯ ರಹಸ್ಯವಾಗಿದೆ. ಲಿಂಗವನ್ನು ಕಟ್ಟುವ ಉದ್ದೇಶ ಲಿಂಗವನ್ನು ಪೂಜಿಸುವ ಉದ್ದೇಶ ಅದೇ ಆಗಿದೆ. ಅನಿಷ್ಟವನ್ನು ಹೊಡೆದೋಡಿಸಿ ಇಷ್ಟವನ್ನು ಸ್ಥಾಪಿಸಲು ಲಿಂಗಧರಿಸಿ ಪೂಜಿಸಬೇಕಾಗಿದೆ. ತನ್ನ ಅನಿಷ್ಟ. ಮನೆಯ ಅನಿಷ್ಟ, ಊರ ಅನಿಷ್ಟ, ದೇಶದ ಅನಿಷ್ಟ, ನಾಡಿನ ಅನಿಷ್ಟ, ಜಗದ ಅನಿಷ್ಟ, ಹೀಗೆ ಸಕಲ ಅನಿಷ್ಟಗಳನ್ನು ಹೊಡೆದೋಡಿಸುವೆನೆಂದು ಬಗೆದೇ ಈ ಇಷ್ಟ ಲಿಂಗ ಧಾರಣಮಾಡಿ ಪೂಜಿಸುವನು. ಇದೇ ಪರಿಪೂರ್ಣಯೋಗದ ಗೊತ್ತು ಗುರಿ. ಅದಕ್ಕಾಗಿ ನಿತ್ಯ ಸತ್ಯ ಶುದ್ಧ ಕಾಯಕ ಮಾಡಬೇಕಾಗುವದು. ಲಿಂಗ ಮಧ್ಯೆ ಜಗತ್ ಸರ್ವಂ ಲಿಂಗದಲ್ಲಿ ಸಕಲ ಚರಾಚರ ಪ್ರಾಣಿಗಳಿರುವವು.

ಅವುಗಳ ಸೇವೆಯನ್ನು ಅವುಗಳಿಗೆ ಕಲ್ಯಾಣವನ್ನು ಮಾಡೆಂದು ಇದು ಸೂಚಿಸುವದು. ಇದೇ ಪ್ರಾಣಲಿಂಗಪೂಜೆ ಅಲ್ಲದೆ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಅಂದರೆ ಕ್ರಿಯೆಗಳಿಂದ ಲಿಂಗ ಪೂಜಿಸಬೇಕು. ಆಗ ಪೂಜೆಯ ಕಾಲಕ್ಕೆ ಅನಂತ ಬ್ರಹ್ಮಾಂಡ ಹೊರಗೆ ಚರಾಚರಗಳಿಂದ ತುಂಬಿದ ವಿಶ್ವದ ಕಲ್ಪನೆ ಬಂದು ಅದರ ಪೂಜೆ ಸೇವೆಗಳನ್ನು ಮಾಡಬೇಕೆಂದು ಸಹ ತಾನೇ ಹೊಳೆಯುವದು. ಇದರಿಂದ ಭಾವಲಿಂಗ ಪೂಜೆಯಾಗುವದು. ಹೀಗಾಗಿ ಇಷ್ಟ ಪ್ರಾಣ ಭಾವಲಿಂಗ ಪೂಜೆ ಸಹಜ ತಾನೇ ಸಾಧಿಸುವದು. ಅದ್ದರಿಂದ ಭಕ್ತಿ ಜ್ಞಾನಗಳು ಲಿಂಗಪೂಜೆಯಿಂದ ಸಾಧಿಸುವಂತೆ ಕರ್ಮಯೋಗವೂ ಸಾಧಿಸುವದು.

(೪) ಹಠಯೋಗಃ— ಆಸನಗಳು ಬಂಧಗಳು ಮುದ್ರೆಗಳು ಷಟ್ಕರ್ಮಗಳು ಇದರಲ್ಲಿ ಬರುವವು. ಹಟದಿಂದ ದೇವನನ್ನು ಕೂಡುವದು. ಲಿಂಗ ಪೂಜೆ ಮಾಡಲಿಕ್ಕೆ ಪದ್ಮಾಸನ ಇಲ್ಲವೆ ಸಿದ್ಧಾಸನ ಸುಖಾಸನ ಹಾಕಿ ನೇಟಾಗಿ ಕೂಡ್ರಬೇಕು. ಇದರಿಂದ ಆಸನ ಸಿದ್ಧಿಯಾಗುವದು. ಆಗ ಮೂಲ ಬಂಧ ಮಾಡಬೇಕಾಗುವದು. ಇದರಿಂದ ಪೂಜೆಯಲ್ಲಿ ಬಂಧನವೂ ಬರುವದು ಮತ್ತು ಲಿಂಗದ ಮೇಲೆ ಮುದ್ರಾಮಾಡಬೇಕಾಗುವದು. ಇದರಿಂದ ಮುದ್ರಾ ಸಹಜ ಸಾಧಿಸುವದು. ಕರೆ ಲಿಂಗವನ್ನು ಕಣ್ಣು ಪಿಳಕಿಸದೆ ನಾಸಿಕಾಗ್ರದಲ್ಲಿ ದೃಷ್ಟಿ ಹಾಯಿಸಿ ಏಕದೃಷ್ಟಿಯಿಂದ ಅನುಮಿಷದೃಷ್ಟಿಯಿಂದ ನೋಡುತ್ತ ಕುಳಿತರೆ ತೀವ್ರ ಸಿದ್ಧಿಗಳಾಗುವವು. ಕೆಲವರು ಬಿಳೀ ಗೋಡೆಯ ಮೇಲೆ ಕರೆ ಗುರುತನ್ನು ಮಾಡಿ ನೋಡುತ್ತ ಕೂಡುವರು. ಇದಕ್ಕಿಂತ ಲಿಂಗದ ಮೇಲೆ ದೃಷ್ಟಿ ನಿಲ್ಲಿಸಿ ಏಕದೃಷ್ಟಿಯಿಂದ ನೋಡುತ್ತ ಕೂಡುವದು ಹೆಚ್ಚಿನ ಲಾಭ ತಂದು ಕೊಡುವದು. ಇದರಿಂದ ಭಕ್ತಿ ಜ್ಞಾನ ಕರ್ಮ ಹಠಗಳೆಲ್ಲ ಸಹಜ ಸಾಧಿಸುವವು. ಲಿಂಗಪೂಜೆಯಿಂದ ಸಾಧಕನಿಗೆ ತೀವ್ರ ಸಿದ್ಧಿಗಳಾಗುವವು. ಆಸನ ಇದರಲ್ಲಿ ಬಂಧನಗಳು ಮುದ್ರಾಗಳು ಬಂದು ಹೋಗುವವು.

(೫) ರಾಜಯೋಗಃ—ಅಂದರೆ ಅಷ್ಟಾಂಗಯೋಗ ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣ ಧ್ಯಾನ ಸಮಾಧಿ ಎಂದು ಮುಖ್ಯ ಅಂಗಗಳುಂಟು. ಆದರೆ ಎಲ್ಲ ಯೋಗಕ್ಕೆ ಯಮ ನಿಯಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳು ಅವಶ್ಯಬೇಕು. ಆದರೆ ಉಳಿದ ಯೋಗದಲ್ಲಿ ಪ್ರಾಣಾಯಾಮ ಬರುವದಿಲ್ಲ ಆಸನವೂ ಬರುವದಿಲ್ಲ. ಹಠಯೋಗದಲ್ಲಿ ಮಾತ್ರ ಇವು ಸ್ವಲ್ಪ ಬರುವವು. ಸಾದಾ ಪ್ರಾಣಾಯಾಮ ಬರುವದು.

ಆದರೆ ಆಸನಗಳೇ ಹಠಯೋಗದಲ್ಲಿ ಹೆಚ್ಚಾಗಿ ಬರುವವು. ರಾಜಯೋಗದಲ್ಲಿ ಆಸನಗಳು ಕಡಿಮೆ ಬರುವವು. ಲಿಂಗಪೂಜೆಯಲ್ಲಿ ರಾಜಯೋಗದಷ್ಟು ಆಸನಗಳು ಬರುವವು. ತನ್ನಿಂದ ತಾನೇ ಸಾದಾ ಪ್ರಾಣಾಯಾಮವೂ ಆಗುವದು.

ಯಮಃ— ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯಪಾಲನ, ಅಪರಿಗ್ರಹ.

ನಿಯಮಃ— ಶುಚಿ, ತೃಪ್ತಿ, ತಪಸ್ಸು, ಅಧ್ಯಯನ, ಈಶ್ವರನಲ್ಲಿ ಶರಣಾಗತಿ.

ಆಸನ:— ಪದ್ಮಾಸನ ಸಿದ್ಧಾಸನ ವೀರಾಸನ ವಜ್ರಾಸನ ಮೊದಲಾದವುಗಳು.

ಪ್ರಾಣಾಯಾಮ:— ಉಸರನ್ನು ಸ್ವಾಧೀನಕ್ಕೆ ತಂದು ಉಸರನ್ನು ಬಂದಿಸುವದು ಪೂರಕ.

ಕುಂಬಕಃ— ರೇಚಗಳು ಇದರಲ್ಲಿ ಬರುವವು. ಮಾತ್ರೆಯ ಕ್ರಮವರಿತು ಮಾಡುವದು.

ಪ್ರತ್ಯಾಹಾರ:— ಇಂದ್ರಿಯಗಳನ್ನು ವಿಷಯದಿಂದ ನಿಗ್ರಹಿಸುವದು.

ಧಾರಣಃ— ಮನಸ್ಸನ್ನು ಶಿವನಲ್ಲಿ ಏಕಾಗ್ರಮಾಡುವದು.

ಧ್ಯಾನಃ— ಶಿವನಶಕ್ತಿ ರೂಪ ಮಹಿಮೆಗಳೊಂದಿಗೆ ಅವನ ನಾಮ ಜಪಿಸುವದು.

**ಸಮಾಧಿಃ**— ಆ ಶಿವನಲ್ಲಿ ತನ್ನನ್ನು ತಾನು ಮರೆತು ಸಮರಸವಾಗಿ ಬಿಡುವದು. ಇದು ರಾಜಯೋಗದ ಸಂಕ್ಷೇಪ ವಿವರಣೆಯಾಗಿರುವದು. ಈ ಎಲ್ಲ ಕ್ರಿಯೆಗಳು ಲಿಂಗಪೂಜೆಯ ಕಾಲಕ್ಕೆ ಸಹ ತನ್ನಿಂದ ತಾನೇ ಸರಳ ಸುಲಭವಾಗಿ ಬಂದು ಹೋಗುವವು ಹೆಚ್ಚು ಲಾಭವಾಗುವದು. ಲಿಂಗವು ಕರೇದು ವಾಯು ತತ್ವದಿಂದ ಮನವಾಗಿರುವದು. ಅದಕ್ಕೆ ವಾಯುವಿನಂತೆ ಮನವೂ ಚಂಚಲವಾಗಿರುವದು. ಮನಸ್ಸಿನ ಈ ಚಂಚಲವೃತ್ತಿ ಹೊಳೆಯುವದೇ ಯೋಗದ ಉದ್ದೇಶವಾಗಿರುವದು. ಯೋಗಾತ್ ಚಿತ್‌ವೃತ್ತಿನಿರೋಧ ಎಂದು ಹೇಳಿದ್ದಾರೆ. ಈ ಮನಸ್ಸಿನ ಚಂಚಲತೆಗೆ ಕಣ್ಣು ನೆರವಾಗುವದು. ಕಣ್ಣಾಲಿ ಕರೇದಿರುವದು. ಅದಕ್ಕೆ ಕರೇ ಬಣ್ಣದ ಇಷ್ಟಲಿಂಗವನ್ನು ಬಹಳ ಹೊತ್ತು ಏಕದೃಷ್ಟಿಯಿಂದ ಅನುಮಿಷ ದೃಷ್ಟಿಯಿಂದ ನೋಡುತ್ತ ಕುಳಿತರೆ ಮನಸ್ಸಿನ ಚಂಚಲತೆ ಹೋಗುವದು. ಮನಸ್ಸಿನಲ್ಲಿ ಶಾಂತವಾಗುವದು. ಮನ ಶಿವನಲ್ಲಿ ಏಕಾಗ್ರವಾಗುವದು. ರಾಜಯೋಗದವರು ಉಸುರನ್ನು ಕಟ್ಟಿ ಕುಂಬಕ ಮಾಡಿ ಮನಸ್ಸನ್ನು ನಿಲ್ಲಿ

ಸುವರು. ಆ ಉಸುರು ಎಲ್ಲಿಯಾದರೂ ನರಗಳಲ್ಲಿ ಸಿಕ್ಕರೆ ಹುಚ್ಚು ಹಿಡಿಯಬಹುದು. ಇಲ್ಲವೆ ಸಾಯಬಹುದು. ಹೀಗಾಗಿ ಪ್ರಾಣಾಯಾಮ ಬಹು ಕಠೀಣ, ತ್ರಾಸದಾಯಕ ಬಹು ಅಪಾಯಕರ ಹಾಗೂ ಅಂಜಿಕೆಯದು. ಆಹಾರ ವಿಹಾರದಲ್ಲಿ ಒಳ್ಳೇ ನಿಯಮ ಬದ್ಧವಾಗಿ ಇರಬೇಕು. ಈ ಉಷ್ಣ ಹವಾಮಾನ ಅಡ್ಡಿ ಮಾಡುವದು. ಆದ್ದರಿಂದ ವಾಯುವನ್ನು ಕಟ್ಟುವ ಪ್ರಾಣಾಯಾಮಕ್ಕಿಂತ ಲಿಂಗದಲ್ಲಿ ಏಕಾಗ್ರ ದೃಷ್ಟಿಯನ್ನು ನಿಲ್ಲಿಸುವದು ಬಹು ಸರಳ ಸುಲಭ. ಹುಚ್ಚು ಹಿಡಿಯುವದು, ಸಾಯುವ ಪ್ರಸಂಗವೆಂದೂ ಬರಲಾರದು. ಲಿಂಗಪೂಜೆಯು ಈ ಕ್ರಮದಿಂದ ಸಮಾಧಿ ಹತ್ತುವದು. ಮುದ್ರಾತ್ರಯನಿಂದ ತಾನೇ ಸಾಧಿಸುವದು. ಹಿಪ್ನಾಟಿಝಂ, ಮೆಸ್ಮೆರಿಝಂ ಗಳನ್ನು ಇದರಿಂದ ಸಾಧಿಸಲಿಕ್ಕೂ ಬರುವದು. ಅವರು ಸುಣ್ಣದ ಗೋಡೆಯ ಮೇಲಿನ ಕರಿ ಗುರ್ತನ್ನು ನೋಡುವರು; ಅದಕ್ಕಿಂತಲೂ ಈ ಲಿಂಗಪೂಜೆ ಸರಳ ಹಾಗೂ ಹೆಚ್ಚು ಲಾಭದಾಯಕವಾಗಿರುವದು.

ಎಲ್ಲ ಯೋಗದವರು ಯಮ, ನಿಯಮ, ಪ್ರತ್ಯಾಹರಗಳನ್ನು ಸಾಧಿಸಲೇಬೇಕಾಗುವದು. ಲಿಂಗಪೂಜೆ ಮಾಡುವವರೂ ಕೂಡ ಅದನ್ನು ಸಾಧಿಸಲೇಬೇಕು. ಅಂದರೆ ಶಿವಯೋಗ ಸಾಧಿಸುವದು. ಇಷ್ಟಾದಮೇಲೆ ಗುರು ಇಪ್ಪತ್ತೊಂದು ಪ್ರಕಾರದ ದೀಕ್ಷೆಗಳನ್ನೂ ಉಪದೇಶಗಳನ್ನೂ ಸಾಧಕನಿಗೆ ಕೊಡುವನು. ಪೂಜೆಯ ಕಾಲಕ್ಕೆ ರಾಜಯೋಗದವರಂತೆ ಆಸನಗಳನ್ನು ಹಾಸಲೇಬೇಕಾಗುವದು. ಮೂಲ ಬಂಧಮಾಡಬೇಕು ಅಲ್ಲದೆ ಸರಿಯಾಗಿ ಸಾವಧಾನದಿಂದ ಉಸುರಾಡಿಸುತ್ತ ಜಪ ಧ್ಯಾನ ಮಾಡಬೇಕಾಗುವದು. ಮೂಗಿನಿಂದ ಉಸುರನ್ನು ಎಳಕೊಂಡು ಬಾಯಿಯಿಂದ ಜಪ ಧ್ಯಾನ ಸ್ತೋತ್ರಗಳನ್ನು ಮಾಡುವದರಿಂದ ಸಂಪೂರ್ಣ ಉಸುರನ್ನು ಸಾವಧಾನದಿಂದ ಹೊರಗೆ ಹಾಕಬೇಕಾಗುವದು. ಅದರಂತೆ ಸಾವದಾನದಿಂದ ಮೂಗಿನಿಂದ ಉಸುರನ್ನು ತುಂಬಬೇಕಾಗುವದು. ಹೀಗಾಗಿ ಪೂರಕ ಕುಂಬಕ ರೇಚಕಗಳು ಸಾದಾ ರೀತಿಯಲ್ಲಿ ನಡೆಯುವವು. ಅದಕ್ಕೆ ಲಿಂಗಪೂಜೆಯ ಕಾಲಕ್ಕೆ ಈ ರಾಜಯೋಗದ ಎಲ್ಲ ಭಾಗಗಳು ಸಹಜ ಅನಾಯಾಸ ಬಂದು ಹೋಗುವವು. ಇಂದ್ರಿಯ ನಿಗ್ರಹಕ್ಕೆ ಲಿಂಗ ಪೂಜಕರು ಮಹತ್ವಕೊಟ್ಟಿದ್ದಾರೆ. ಅದಿಲ್ಲವೆ ಪೂಜೆಸಾಧಿಸುವದಿಲ್ಲ. ಯಾವ ಯೋಗವೂ ಸಾಧಿಸಲಾರದು. ಅದಕ್ಕಾಗಿ ತ್ಯಾಗಾಂಗವೆಂದು ಮೊದಲಿಗೆ ಹೇಳಿದ್ದಾರೆ. ಲಿಂಗದ ಧ್ಯಾನ ಜಪಗಳು ಸದಾ ನಡೆಯುವವು. ಲಿಂಗವನ್ನು ಪ್ರೇಮದಿಂದ ಭಕ್ತಿಯಿಂದ ಏಕಾಗ್ರ ದೃಷ್ಟಿ

ಯಿಂದ ನೋಡುತ್ತ ಕೂಡ್ರುವದರಿಂದ ಮನವು ಶಾಂತವಾಗಿ ತಾನೇ ಸಮಾಧಿ ಹತ್ತುವದು. ಇದುವಲ್ಲದೆ ಶೀತ್ಕಾರ ಪ್ರಾಣಾಯಾಮವು ಈ ಲಿಂಗ ಪೂಜೆ ಯಲ್ಲಿ ಬರುವದು.

ಪರದೇಶ ಈ ದೇಶಗಳಲ್ಲಿ ಲಿಂಗದ ಜ್ಞಾನವಿರಲಾರದಕ್ಕಾಗಿ ಅನೇಕರು ಯೋಗಸಾಧಿಸಬೇಕೆನ್ನುವವರೂ ಬಿಳೇ ಗೋಡೆಯ ಮೇಲೆ ಚಿಕ್ಕ ಲಿಂಬಿಯ ಕಾಯಿಯಷ್ಟು ದುಂಡಗಿನ ಕರೇ ಗುರುತನ್ನು ಬರೆದು ಅದನ್ನು ನೋಡುತ್ತ ಕೂಡ್ರುವರು. ಅರವಿಂದರು, ಗಾಂಧಿಯವರು, ರಾಮಕೃಷ್ಣ ಪರಮಹಂಸರು ರಾಮತೀರ್ಥರು ಇಂಗ್ಲಂಡ, ಅಮೇರಿಕಾ, ಜಪಾನದವರೂ ಹೀಗೆ ಅನೇ ಕರು ಲಿಂಗದ ಜ್ಞಾನಕಲ್ಪನ ಇರಲಾರದಕ್ಕಾಗಿ ಈ ಪ್ರಕಾರ ನೋಡುತ್ತ ಕೂಡ್ರುವರು. ಇದಕ್ಕಿಂತಲೂ ಲಿಂಗವು ಹೆಚ್ಚಿನ ಲಾಭವನ್ನು ಒಳ್ಳೇ ಸುಲಭ ರೀತಿಯಲ್ಲಿ ಕೊಡುವದು ಹೋದಲ್ಲಿ ಬಂದಲ್ಲಿ ಎಲ್ಲ ಬಿಳಿಗೋಡಿ ಕರೆಗುರುತು ಸಿಗಬೇಕು. ಅದಕ್ಕಿಂತಲೂ ಸಂಗಡ ಈ ಲಿಂಗವನ್ನು ತಕ್ಕೊಂಡು ಹೋಗಿ ಬೇಕಾದಲ್ಲಿ ಬೇಕಾದಾಗ ಮೇಲಿನಂತೆ ಮುದ್ರೆ ಮಾಡಿ ಭಕ್ತಿ ಜ್ಞಾನ ಹಠ ಕರ್ಮಗಳನ್ನು ಸಾಧಿಸುವಂತೆ ರಾಜಯೋಗವನ್ನು ಸಾಧಿಸುವದು ಬಹಳೇ ಒಳ್ಳೇದಲ್ಲವೆ? ಇದೇನು (ಈ ಲಿಂಗವು) ಧಾರ್ಮಿಕ ಗುರುತಲ್ಲ. ಬೇಕಾದವರು ಅದನ್ನು ಉಪಯೋಗಿಸಿಕೊಂಡು ಕೃತಕೃತ್ಯವಾಗಬೇಕು. ಅದು ಕುರುಡನ ಕೈಯೊಳಗಿನ ಕೋಲು ಇದ್ದಂತೆ ಸರಿ. ಬೇಕಾದ ಜಾತಿಯ ಕುರುಡನಿಗೆ ಕೋಲು ಹಿಡಿಯಲಿಕ್ಕೆ ಹೇಗೆ ಅಧಿಕಾರ ಇರುವದೋ ಅದರಂತೆ ಬೇಕಾದ ಜಾತಿಯವರಿಗೆ ಜಾತಿ ವಯ ಬಣ್ಣ ರೂಪ ದೇಶಗಳ ಭೇದವಿಲ್ಲದೆ ಎಲ್ಲರೂ ಲಿಂಗ ಕಟ್ಟಿಕೊಂಡು ಇವರಂತೆ ಸಾಧನ ಮಾಡಿ ಸುಲಭ ಸರಳ ರೀತಿಯಲ್ಲಿ ಸಕಲ ಯೋಗವನ್ನು ಸಾಧಿಸಿ ಪರಿಪೂರ್ಣಯೋಗಿಯಾಗಬೇಕೆಂದು ಸೂಚಿ ಸದೆ ಇರಲಾರೆವು.

(೭) ಲಯಯೋಗ— ನಿತ್ಯ ಸಕಲ ವಿಷಯಗಳನ್ನು ಲಯಗೊಳಿ ಸುವದೇ ಇದಾಗಿದೆ. ಇಂದ್ರಿಯಗಳನ್ನೂ ಅವುಗಳ ಗುಣಧರ್ಮಗಳನ್ನೂ ಲಯಗೊಳಿಸುತ್ತ ಸಕಲ ಮನ ಬುದ್ಧಿ ಚಿತ್ತ ಅಹಂಕಾರ ಮಮಕಾರಗ ಳನ್ನು ನಿತ್ಯ ಬಿಡುತ್ತ ಶುದ್ಧಗೊಳಿಸುತ್ತ ಹೋಗಿ ಚಿತ್ತವನ್ನೂ ಸಂಪೂರ್ಣ ಲಿಂಗದಲ್ಲಿ ಲೀನಗೊಳಿಸುವದೇ ಇರುವದು. ತನು ಮನ ಇಂದ್ರಿಯ ಮೊದ ಲಾದವುಗಳ ಶುದ್ಧಿಯೇ ಲಯವೆನಿಸಿ, ಶಿವನಲ್ಲಿ ಚಿತ್ತ ನಿಲ್ಲಿಸುವದೇ ಲಯ ಯೋಗ. ಇದರಿಂದ ಸರ್ವಾಂಗಲಿಂಗಿಯಾಗುವನು. ಇದೆಲ್ಲ ಈ ಲಿಂಗ ಪೂಜೆ

ಯಲ್ಲಿ ಸಹಜ ಇದೆಲ್ಲ ಬರುವದು. ಲಯಯೋಗ ಹಾಗೂ ಲಿಂಗಪೂಜೆಗಳಲ್ಲಿ ನಿಕಟ ಸಂಬಂಧವಿರುವದು.

(೭) ಧ್ಯಾನಯೋಗ ಜಪಯೋಗಗಳು ಇದಂತೂ ಸರಿಯೇ ಸರಿ; ಜಪ ಧ್ಯಾನಗಳು ಲಿಂಗಪೂಜೆಯ ಕಾಲಕ್ಕೆ, ಸತ್ಕರ್ಮಾಚರಣೆಯ ಕಾಲಕ್ಕೆ ನಿಷ್ಕಾಮ ಸತ್ಯ ಶುದ್ಧ ಕಾಯಕದ ಕಾಲಕ್ಕೆ ಸದಾ ಮಾಡಬೇಕೆಂದೇ ಈ ಪರಿಪೂರ್ಣಯೋಗ ಸಾರುವದು. ಓಂ ನಮಃ ಶಿವಾಯ ಎಂಬ ಮಂತ್ರ ಸದಾ ನಾಲಿಗೆ ಮನಗಳು ನುಡಿಯುತ್ತಿರುವವು. ಹೀಗಾಗಿ ಕಿವಿಯಲ್ಲಿ ಇದು ತಾನೇ ಕೇಳಿಸುವದು. ಎಲ್ಲ ಇಂದ್ರಿಯಗಳಲ್ಲಿ ಈ ಜಪಧ್ಯಾನ ನಡೆಯಬೇಕೆಂದು ವಚನಕಾರರು ಹೇಳಿದ್ದಾರೆ. ಲಿಂಗಪೂಜೆಯಲ್ಲಿ ಇದು ಸದಾ ಬರುವದು.

(೮) ಕುಂಡಲಿನಿಯೋಗ— ಮೇಲಿನಂತೆ ನಿತ್ಯ ಸಾಧನಮಾಡುವದರಿಂದ ಲಿಂಗಪೂಜೆಯಲ್ಲಿ ತಲ್ಲೀನತೆ ಬರುವದು. ಸಮಾಧಿ ಹತ್ತುವದು. ಅಂದ ಬಳಿಕ ಕುಂಡಲಿನಿ ಜಾಗ್ರವಾಗ ಊರ್ಧ್ವ ಮುಖವಾಗುವದು. ಯಾವ ದೊಡ್ಡ ಮಾತು? ಇದರ ಅನುಭವವನ್ನು ವಚನಕಾರರು ಹೇಳಿದ್ದರು ನೋಡಿರಿ.

ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನಿಟ್ಟೆಲವು ಮುರಿದು ತುಟಿ ಮಿಡುಕದೆ ಅಟ್ಟೆ ಅಲ್ಲಾಡಿತ್ತಲ್ಲಾ, ಬಿಟ್ಟಗಣ್ಣು. ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟೆ ಗುಡಿಯ ಕೂಡಲ ಸಂಗಮದೇವ ಹಿಡಿವಡೆದ

ಪೂರ್ವದ್ವಾರವ ಬಂಧಿಸಿ, ಅಧೋದ್ವಾರವ ಬಲಿದು, ಊರ್ಧ್ವದ್ವಾರವ ತೆಗೆದು ಎವೆ ಹಳಚದೆ, ಒಳಗೆ ನಿಮ್ಮ ನೋಡುತ್ತಿದ್ದೆನಯ್ಯ ಬಂದುದ ಹೋದುದನರಿಯದೆ ನಿಮ್ಮ ನೋಡುತ್ತಿದ್ದೆನಯ್ಯ. ಮನನಿಂದುದು ನಿಮ್ಮಲ್ಲಿ ಹೆರೆಹಿಂಗದ ಪರಮ ಸುಖ ದೊರೆಕೊಂಡಿತ್ತು ಇನ್ನಂಜೆನಂಜೆ ನಿಜಗುರು ಸಿದ್ಧಲಿಂಗೇಶ್ವರ.

ಆಧಾರದ ನಿಚ್ಚಣಿಕೆಯನ್ನೇರಿ ನೋಡಲು ಮಂದರಗಿರಿಯೆಂಬ ಮಹಾ ಪರ್ವತವ ಕಾಣಬಹುದು. ಅದರ ತುಟ್ಟತುದಿಯಲ್ಲಿ ಮಹದಾಕಾರ ಮಂಟಪ ಉಂಟು. ರತ್ನಾಕರ ಸಿದ್ಧನು ಹೇಳಿದ್ದು— ಪೆಂಪಿನ ಧ್ಯಾನದೊಳಾ ತಪೋಧನನಿರೆ | ಕಂಪಿಸಿದೊಡನೆ ಮೂಲೋಕ | ಮಿಡುಕಲೀಯದೆ ಮನದನು ತಡೆದಾತ್ಮನೊಳ | ಡಗಿಸಿ ನಿಷ್ಕಂಪನಾಗಿ || ಕಡುಗಲಿನಿಂದ ಹಂಸ ಧ್ಯಾನ ನಿಷ್ಠೆಗೆ ನಡುಗದಿಹುದೆ ಮೂರು ಲೋಕಾ || ತೀಡಿದ ಗಾಳಿಗೆ ಚಪ್ಪರ ಲತೆಗಳ | ಲ್ಲಾಡುವಂತಲುಗಿತು ಭೂಮಿ || ನಾಡು ಬೀಡಚ್ಚರಿವಟ್ಟುದೇನೆಂದು ಕೊಂಡಾಡಲು

ಧ್ಯಾನ ಶಕ್ತಿಯನು ॥ ಈ ಪ್ರಕಾರ ಲಿಂಗಪೂಜೆಯಲ್ಲಿ ಧ್ಯಾನಸ್ಥರಾದಾಗ ಎಲ್ಲರಿಗೆ ಅನುಭವವಾಗುವದು. ಕುಂಡಲಿನಿ ಜಾಗ್ರತವಾಗುವದು ಸಹಜವದೆ. ಆದಕ್ಕೆ ಲಿಂಗಪೂಜೆಯಲ್ಲಿ ಕುಂಡಲಿನಿಯೋಗವೂ ಸಮಾವೇಶಗೊಳ್ಳುವದೆಂಬುವದರಲ್ಲಿ ಸಂದೇಹವಿಲ್ಲ. ಎಲ್ಲರಿಗೂ ಯೋಗ್ಯತೆ ಬಲಿತರೆ ಆಗುವದು. ಕುಂಡಲಿನಿ ಸರ್ಪವು ಕೆಳಮುಖ ಮಾಡಿ ಬಿದ್ದುದರಿಂದ ಅದು ಸದಾ ವಿಷಯಗಳನ್ನೇ ಕಾರಿ ಮನುಷ್ಯನನ್ನು ವಿಷಯದಲ್ಲಿ ಮುಳುಗಿಸಿ ಹಾಳು ಮಾಡುವದು. ಈ ಯೋಗಗಳಿಂದ ಅದು ತಾನೇ ಊರ್ಧ್ವಮುಖ ಮಾಡಿ ಮೇಲೆದ್ದು ಆಧಾರ, ಸ್ವಾದಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞೆಯ ಚಕ್ರಗಳಗುಂಟ ಏರಿ ಬ್ರಹ್ಮರಂಧ್ರದಲ್ಲಿ ಸೇರಿ ಸಹಸ್ರದಳ ಕಮಲದಲ್ಲಿ ಶಿವನ ಕೂಡ ಕೂಡಿ ಆನಂದವನ್ನು ಭೋಗಿಸಿ ಮುಂದೆ ಅದು ಶಿಖಾ ಅನುಚಕ್ರಗಳಲ್ಲಿ ಹಾಯ್ದು ಪಶ್ಚಿಮಚಕ್ರಕ್ಕೆ ಹೋಗಿ ಇಲ್ಲಿ ವಿಭಾಗವಾಗಿ ಇಡಾಪಿಂಗಳಗುಂಟ ಇಳಿದು ಪಾದಗಳ ಹೆಬ್ಬೆರಳಿನತನಕ ಬರುವದು. ಇದಕ್ಕೆ ಶಕ್ತಿಪಾತ ಅಥವಾ ಅಮೃತಪ್ರಾಶನವೆನ್ನುವರು. ಇದಕ್ಕಾಗಿ ಪಾದೋದಕ ಕರಣಪ್ರಸಾದ ತಕ್ಕೊಳ್ಳುವ ರೂಢಿ ಶರಣರಲ್ಲಿ ಇರುವದು. ಇದರಿಂದ ಲಿಂಗಪೂಜೆಯಲ್ಲಿ ಕುಂಡಲಿನಿಯೋಗ ಸಮಾವೇಶವಾಗುವದು.

ಈ ಪ್ರಕಾರ ಲಿಂಗ ಪೂಜೆಯಲ್ಲಿ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ, ರಾಜಯೋಗ, ಹಠಯೋಗ, ಧ್ಯಾನಯೋಗ, ಜಪಯೋಗ, ಲಯಯೋಗ, ಕುಂಡಲಿನಿ ಯೋಗ ಈ ಮುಂತಾದ ಸಕಲ ಯೋಗಗಳು ಇದರಲ್ಲಿ ಸಹಜ ಬರುವವಲ್ಲದೆ ಈ ಎಲ್ಲ ಯೋಗಗಳಿಗಿಂತಲೂ ಹೆಚ್ಚಿನ ಲಾಭವಾಗುವದೆಂದು ಹಿಂದೆ ನೋಡಿದ್ದಾಯಿತು. ಅದಕ್ಕೆ ಶಿವಶರಣರದೇ ಪರಿಪೂರ್ಣಯೋಗ. ಅದರಲ್ಲಿಯು ಲಿಂಗಪೂಜೆಯೂ ಕೂಡ ಪರಿಪೂರ್ಣ ಯೋಗವೆಂದು ಹೇಳಲಿಕ್ಕೆ ಯಾವ ಅಡ್ಡಿ ಆತಂಕಗಳಿಲ್ಲ. ಪರಿಪೂರ್ಣ ಯೋಗದೊಳಗೆ ಬರೇ ಲಿಂಗಪೂಜೆಯೊಂದೇ ಒಂದು ಸ್ವತಂತ್ರವಾದ ಪರಿಪೂರ್ಣ ಯೋಗವಾಗುವದೆಂಬುವದರಲ್ಲಿ ಯಾವ ಸಂದೇಹವಿಲ್ಲ. ಪರಿಪೂರ್ಣ ಎಲ್ಲ ಯೋಗಗಳು ಒಂದೇ ಯೋಗದಲ್ಲಿ ಸಮಾವೇಶವಾಗಿ ಪರಿಪೂರ್ಣ ಯೋಗದ ಎಲ್ಲ ಲಾಭಗಳು ಎಲ್ಲ ಸಿದ್ಧಿಗಳು ಎಲ್ಲವುಗಳು ಸಾಧಿಸಿ ಬಂದುದಾದರೆ ಅದೇಕೆ ಉಳಿದ ಎಲ್ಲ ಯೋಗಗಳಿಗಿಂತ ಶ್ರೇಷ್ಠವೆಂದು ಹೇಳಬಾರದು? ಭಕ್ತಿಯೋಗವೆಂದರೆ ಬರೇ ಭಕ್ತಿಯಿಂದ ಕೂಡುವದು. ಜ್ಞಾನಯೋಗವೆಂದರೆ ಬರೇ ಜ್ಞಾನದಿಂದ ಕೂಡುವದು. ಕರ್ಮಯೋಗವೆಂದರೆ ಬರೇ ಕರ್ಮದಿಂದ ಕೂಡು

ಜೀವ ಹಾಗೂ ಶಿವರ ಅದ್ವೈತವೇ ಅಂದರೆ ಸಾಮರಸ್ಯವೇ ಶಕ್ತಿವಿಶಿಷ್ಟಾದ್ವೈತವೆನಿಸುವದು. ಪರಶಿವನ ಪರಶಕ್ತಿ ಸತ್ಯ ನಿತ್ಯವಾಗಿರುವದು. ಈ ಶಕ್ತಿಯು ಸಾಂಖ್ಯರ ತ್ರಿಗುಣಾತ್ಮಕ ( ಸತ್ವ-ರಜ-ತಮ ) ಪ್ರಕೃತಿಯಲ್ಲಿ ಅದ್ವೈತಿಗಳ ಅನಿರ್ವಚನೀಯ ಮಾಯೆಯೂ ಅಲ್ಲ. ಶಿವನು ಸದ್ರೂಪನು, ಶಕ್ತಿಯು ಚಿದ್ರೂಪಳು. ಶಿವಶಕ್ತಿಯರು ಪುರುಷ-ಸ್ತ್ರೀಯರೆಂದು ತಿಳಿಯ ಕೂಡದು. ಅದರಂತೆ ಲಿಂಗವು ಪರವಸ್ತುವಿನ ಸದ್ರೂಪ ಚಿದ್ರೂಪ ಅಂದರೆ ಶಿವ ಶಕ್ತಿಯರನ್ನು ಒಂದುಗೂಡಿಸುವ ಶ್ರೇಷ್ಠ ತತ್ವವಾಗಿದೆ. ಅದಕ್ಕಾಗಿಯೆ ಆಗಮದಲ್ಲಿ ಲಿಂಗಂ ಶಿವಮಿದಂ ಸಾಕ್ಷಾತ್ ಶಿವಶಕ್ತ್ಯುಭಯಾತ್ಮಕಂ ಎಂದು ಹೇಳಿದ್ದಾರೆ.

ಲೀಯತೆ ಗಮ್ಯಾತೆ ಯಸ್ಮಾತ್ರಯೇನ ಸರ್ವಂ ಚರಾಚರಂ
ತದೇಕಂ ಲಿಂಗಮಿತ್ಯುಕ್ತಂ ಲಿಂಗತತ್ವ ಪರಾಯಣೈಃ

ಎಂದು ಮಗ್ಗೆಯ ಮಾಯಿದೇವನು ಹೇಳಿದ್ದಾನೆ. ಅಂದರೆ ಚರಾಚರಾತ್ಮಕವಾದ ಸಕಲವೂ ಲಿಂಗದಿಂದ ಉದಿಸಿ ಲಿಂಗದಿಂದ ಬೆಳೆದು ಲಿಂಗದಲ್ಲಿ ಉಳಿದುಕೊಳ್ಳುವದು. ಇದರಿಂದ ಉತ್ಪತ್ತಿ ಸ್ಥಿತಿ ಲಯಗಳಿಗೆ ಈ ಲಿಂಗವೇ ಕಾರಣವಾಗಿದೆ ಎಂದು ಹೊಳೆಯುವದು.

ಈ ದೃಷ್ಟಿಯಿಂದ ವಿಚಾರಿಸಿದರೆ ಯಾವ ವಸ್ತುವೂ ಮಿಥ್ಯವಲ್ಲ. ಅದಕ್ಕೆ ಯಾವ ವಸ್ತುವಿಗೆ ನಾಶವಿಲ್ಲ. ಆದರೆ ಬದಲಾವಣೆ ಹೊಂದುತ್ತವೆ. ಪ್ರತಿಯೊಂದು ಸೃಷ್ಟಪದಾರ್ಥವು ಜನನ ಬಾಲ್ಯ ವಾರ್ಧಿಕ್ಯ ಯೌವ್ವನ ಜರಾ ಮರಣಗಳಿಂದ ಕೂಡಿರುವದು ಮತ್ತು ತನ್ನ ಹಿಂದೆ ತನ್ನಂಥದೇ ಪದಾರ್ಥಗಳನ್ನು ಅಂದರೆ ಮರಿಗಳನ್ನು ಬಿಟ್ಟುಹೋಗುವದು. ಪರಶಿವನು ಸ್ಥಿರ ಲಿಂಗವೆಂದೆನಿಸಿದರೆ ಪರಶಕ್ತಿ, ಚರ ಜಂಗಮವೆಂದೆನಿಸಿಕೊಳ್ಳುವಳು. ಅದಕ್ಕೆ ಒಂದೊಂದು ವಸ್ತುವು ಒಂದೊಂದು ರೂಪದಲ್ಲಿ ಕಾಲಕಾಲಕ್ಕೆ ಪರಿವರ್ತನೆ ಹೊಂದುವದಲ್ಲದೆ ನಾಶವಾಗುವದಿಲ್ಲ. ಪರಶಕ್ತಿ ನಿತ್ಯ ತನ್ನ ಹೊಸತನದಿಂದ ಪರಶಿವನಿಗಾಗಿ ಲೀಲೆಯಾಡುವಳು. ಇದ್ದಂತೆ ಎಂದೂ ಒಂದು ಕ್ಷಣ ಸಹ ಇರುವದಿಲ್ಲ. ಸದಾ ಬದಲಾವಣೆ ಹೊಂದುವದೇ ಇವಳ ಸ್ವಭಾವ.

ಪರಶಿವನು ತನ್ನ ಶಕ್ತಿಯ ವಿನೋದಕ್ಕೆ ಪರಿಪೂರ್ಣ ಯೋಗಿಗಳ ಉಪಕಾರಕ್ಕೆ ಈ ಸೃಷ್ಟಿಯನ್ನು ಸಂಕಲ್ಪಮಾತ್ರದಿಂದ ನಿರ್ಮಿಸಿದನು. ಆ ನಿಃಕಲ ಮಹಾಲಿಂಗಕ್ಕೆ ಲೀಲಾವಿಲಾಸ ತೋರಿದಲ್ಲಿ ಚಿತ್‌ಪ್ರಭಾಕಾಶವೇ ವ್ಯಕ್ತವಾಗಿ ನಾನಾತತ್ವವನ್ನು ಹೊಂದಿ; ಪರಿಚ್ಛಿನ್ನಾತ್ಮರಾದರು. ಈ ಸೃಷ್ಟಿ

ಪರಶಿವನ ಪರಮಪ್ರಸಾದವಾಗದೆ ಅದಕ್ಕೆ ಇದು ನಿತ್ಯ ಹಾಗೂ ಸತ್ಯವಾಗಿದೆ. ಪರಶಿವನು ತನ್ನ ನಿಗೂಢವಾದ ಪರಶಕ್ತಿಯ ಪ್ರಭಾವದಿಂದ ರೂಪಾಗಲು ಬಲ್ಲ, ರೂಪಾಗದಿರಲೂ ಬಲ್ಲ. ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ. ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭು. ಅದಕ್ಕೆ ಜೀವನವು ನಮಗೂ ಒಂದು ಲೀಲೆ ವಿನೋದವಾದರೆ ಒಳಿತು. ಆಗ ಅದೇ ಪರಿಪೂರ್ಣ ಯೋಗವಾಗುವದು. ಆದರೆ ಅದ್ವೈತ ಮೊದಲಾದವರಂತೆ ಈ ಜಗತ್ತು ಆಭಾಸವಲ್ಲ. ಇದಕ್ಕೆ ಅನಾದಿ ಮಾಯೆ ಕಾರಣವಲ್ಲ. ಹಗ್ಗ ದಲ್ಲಿ ಹಾವು, ಮೃಗಜಲದಲ್ಲಿ ನೀರು, ಮಿಂಚುಗಲ್ಲಲ್ಲಿ ರೂಪಾಯಿ, ಎಂಬ ತಪ್ಪು ತಿಳುವಳಿಕೆಯೇ ಅಭ್ಯಾಸವೆಂದು ಹೇಳಬೇಕು. ಆದರೆ ಶಕ್ತಿವಿಶಿಷ್ಟಾ ದ್ವೈತಿಗಳು ಹೀಗೆ ಹೇಳುವದಿಲ್ಲ. ಸತ್ಯ ನಿತ್ಯ ಪರಶಿವನಿಂದ ಅಸತ್ಯ ಅನಿತ್ಯವಾದ ಜಗತ್ತು ಹುಟ್ಟುವದು ಶಕ್ಯವಿಲ್ಲ. ಅದಕ್ಕೆ ಈ ಸೃಷ್ಟಿ ಸಟಿಯಲ್ಲ ದಿಟವಾಗಿದೆ. " ಇಲ್ಲದ ಮಾಯೆಯನ್ನು ಉಂಟೆಂದು ಭಾವಿಸುವದು ಭ್ರಮೆ. ಗುಹೇಶ್ವರನೆಂಬ ಅರಿವು ಬಂಜೆಯಾದುದಲ್ಲ " ಎಂದು ಹೇಳಿದ್ದನ್ನು ವಿಚಾರಿಸಿದರೆ ಮೇಲಿನ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಸತ್ಯವೆನಿಸುವದು.

ದ್ವೈತಿಗಳು ಜೀವ ಬೇರೆ ಬ್ರಹ್ಮ ಬೇರೆ ಎಂದು ಹೇಳುವರು. ವಿಶಿಷ್ಟಾದ್ವೈತಿಗಳು ಜೀವನು ಬ್ರಹ್ಮನ ಒಂದಂಶವೆಂದು ಹೇಳುವರು ಅದ್ವೈತಿಗಳು ಜೀವವೇ ( ತಾವೇ ) ಬ್ರಹ್ಮನೆಂದು ಹೇಳುವರು. ಆದರೆ ಶಕ್ತಿವಿಶಿಷ್ಟಾದ್ವೈತಿಗಳು ಪರಿಪೂರ್ಣವಾದ ಅರಿವಿನಿಂದ ಬೆರೆತ ಜೀವಾತ್ಮನೇ ದೇವನೆಂದು ಹೇಳುವರು. ಇದರಂತೆ ವೇದಾಂತಿಗಳು ಅದ್ವೈತವನ್ನು ಕೇವಲ ಬಾಯಿಯಿಂದ ಹೇಳಿದರು. ಆದರೆ ಕೃತಿಯಲ್ಲಿ ತಂದವರು ಶಿವಶರಣರು. ಸಾಮೂಹಿಕವಾಗಿ ಪ್ರಚಾರಮಾಡಿ ಕಂಡು ಅನುಭವಗೊಂಡವರು ಶಿವಶರಣರು. ಇವರು ಜಗತ್ತು ಸತ್ಯಾಸತ್ಯವೆಂದು ತಿಳಿದರೂ ಅದರ ಬಗೆಗೆ ಅಭಿಮಾನ ಆಸಕ್ತಿಯನ್ನು ತೊರೆದು ಸತ್ಯಶುದ್ಧ ಕಾಯಕವನ್ನು ಜಪಧ್ಯಾನಗಳಿಂದ ಸಾಧನೆ ಮಾಡಿ ಪೂರ್ಣ ಅರಿವಿನ ವಿಕಾಸಪಡೆಯುವದೇ ಜೀವನದ ಪರಮಾದರ್ಶ. ಇದೇ ಶರಣರ ಪರಿಪೂರ್ಣಯೋಗವೆನಿಸಿದೆ. ಅಹಂಕಾರ ಮಮಕಾರ ತೊರೆದು ಫಲಾಪೇಕ್ಷೆಯನ್ನು ಬಿಟ್ಟು ತಾನೇ ಮಾಡುವವನೆಂಬ ಅಭಿಮಾನವನ್ನು ತ್ಯಜಿಸಿ ಜಗತ್ತಿನಲ್ಲಿ ಅಡಗಿದ ಪರಶಿವನ ಲೀಲೆಯನ್ನು ಕಾಣುವದೂ ಹಾಗೂ ಅವನಂತೆ ಲೀಲೆಯಾಡುವದೂ ಈ ಪರಿಪೂರ್ಣಯೋಗದ ಗೊತ್ತುಗುರಿಗಳಾಗಿವೆ. ಅದಕ್ಕೆ ಸ್ತ್ರೀಪುರುಷರೆಲ್ಲರಿಗೆ ಯಾವ ಜಾತಿ, ಲಿಂಗ, ವಯ,

ವರ್ಣ, ಆಶ್ರಮ, ಬಂಣ. ದೇಶಗಳೆಂಬ ಭೇದವಿಲ್ಲದೆ, ಎಲ್ಲರೂ ಪರಶಿವ ಪರಶಕ್ತಿಯರಂತೆ ಲೀಲೆಯಾಡುವದಕ್ಕಾಗಿ ಈ ಪರಿಪೂರ್ಣ ಯೋಗದ ದೀಕ್ಷೆಯನ್ನು ಪಡೆಯುವದು ಬಹು ಶ್ರೇಯಸ್ಕರವೇ ಸರಿ. ಈ ಶಕ್ತಿ ವಿಶಿಷ್ಟಾದ್ವೈತದ ಆತ್ಯಂತಿಕ ಗುರಿ ಅದ್ವೈತವಾದರೂ ಸಾಧನಾ ವ್ಯವಸ್ಥೆಯ ಮೊಟ್ಟ ಮೊದಲಿಗೆ ದ್ವೈತವನ್ನೇ ಆಶ್ರಯಿಸಬೇಕಾಗುವದು. ಹೀಗಾಗಿ ಸರ್ವಸ್ಮೃತಿ ಸಮನ್ವಯವನ್ನು ಈ ಪರಿಪೂರ್ಣ ಯೋಗವು ಸಾಧಿಸುವದೆಂದು ಧಾರಾಳವಾಗಿ ಹೇಳಬಹುದು.

ಸಂಪೂರ್ಣ ವಿಕಾಸವಾಗಬಯಸುವ, ಸಾಧಕನ ಶುದ್ಧ ಜೀವನು ಸರ್ವಜ್ಞ ಸರ್ವಶಕ್ತನಾದ ಪರಶಿವನನ್ನು ತನ್ನಲ್ಲಿ ಕಾಣಬಯಸುವನು. ಅದೇ ಅಂಗ ಲಿಂಗ ಸಮರಸವೆನ್ನುತ್ತಾರೆ ಈ ಗುರಿಯ ಸಾಧನೆಗಾಗಿ ಈ ಷಟ್‌ಸ್ಥಲಗಳು, ಅಷ್ಟಾವರಣ, ಪಂಚಾಚಾರ, ಸಪ್ತಾಚಾರ, ಮೂವತ್ತಾರುಸ್ಥಲ, ಏಕೋತ್ತರ ಶತಸ್ಥಲ, ವೇದವೊದಲಾದವುಗಳು ಇವುಗಳಂತೆ ಇರುವವು. ಇವುಗಳಂತೆ ಸಾಧನ ಮಾಡುವ ಸಾಧಕನ ಸರ್ವೇಂದ್ರಿಯಗಳೆಲ್ಲ ಲಿಂಗದ ಕಿರಣ. ಕಳೆ, ಪ್ರಭಾವಗಳಿಂದ ತುಂಬಿಹೋಗುವವು. ಇದೇ ಸರ್ವಾಂಗ ಲಿಂಗಿ ಸ್ಥಲ. ಪರಶಿವನು ಸತ್, ಚಿತ್, ಆನಂದ ಸ್ವರೂಪವೆಂದು ಹೇಳಿದರೆ ಅದೇ ಪರಶಕ್ತಿಯ ರೂಪವೆಂದು ತಿಳಿಯಬೇಕು. ಈ ನಿಲವನ್ನು ಅಸ್ಮಿ-ಪ್ರಕಾಶೆ-ನಂದಾಮಿ ಎಂಬ ಪದಗಳಿಂದ ಬಂಣಿಸಬಹುದು. ಬರೀ ಬಾಯಿಯಿಂದ ಹೀಗೆ ಇವರು ಹೇಳದೆ ಇದನ್ನು ಸಂಪೂರ್ಣ ಅನುಭವಗೊಂಡು ಕಂಡುಂಡು ಪ್ರಕಾಶಕ್ಕೆ ತಂದವರು ಶಕ್ತಿ ವಿಶಿಷ್ಟಾದ್ವೈತಿಗಳೇ ಸರಿ. ಅದನ್ನು ಈ ಪರಿಪೂರ್ಣ ಯೋಗವೇ ಸಾಧಿಸಿಕೊಟ್ಟಿರುವದು. ಈ ಪರಿಪೂರ್ಣ ಯೋಗದಿಂದ ಅರಿವು ತಾನೇತಾನಾಗಿ ಬೆಳಗಿ ಅಪರಿಮಿತ ಆನಂದವನ್ನು ಅನುಭವಿಸಿ ಪರಾಪ್ರಕೃತಿಯ ಆಶೀರ್ವಾದದ ನೆರವಿನಿಂದ ಪುರುಷನ (ಜೀವನು) ಪರಶಿವನಾಗುವದರಲ್ಲಿ ಸಂದೇಹವಿಲ್ಲ. ಈ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಈ ಪರಿಪೂರ್ಣಯೋಗದಲ್ಲಿ ಸಂಪೂರ್ಣ ಹಾಸುಹೊಕ್ಕಾಗಿರುವದನ್ನು ನಾವು ಈ ಪ್ರಕಾರ ಕಾಣುವೆವು.

ಪರಶಿವನು ನಿರ್ವಿಶೇಷವಾಗಿರದೆ ಸವಿಶೇಷವಾಗಿರುವದರಿಂದ ಅವನು ಶಕ್ತಿವಿಶಿಷ್ಟನೆಂದೆನಿಸಿಕೊಳ್ಳುವನು. ಆದ್ದರಿಂದಲೇ ಈ ಚರಾಚರಾತ್ಮಕ ಸೃಷ್ಟಿಯೂ ಕೂಡ ಶಕ್ತಿವಿಶಿಷ್ಟತೆಯಿಂದಲೇ ಕೂಡಿರುವದು ಕಂಡುಬರುವದು.

ಅದಕ್ಕೆ ಸೃಷ್ಟಿಯಲ್ಲಿ ಪ್ರತಿಯೊಂದು ಪದಾರ್ಥವನ್ನು ವಿಚಾರಿಸಿ ನೋಡಿದರೆ ಇದರ ಅನುಭವವಾಗುವದು. ಪೃಥ್ವಿಯಲ್ಲಿ ಧಾರಣ ಶಕ್ತಿ ಜಲದಲ್ಲಿ ಆಪ್ಯಾನ ಶಕ್ತಿ, ತೇಜದಲ್ಲಿ ಉಜ್ವಲನಶಕ್ತಿ, ವಾಯುವಿನಲ್ಲಿ ಸ್ಪಂದನಶಕ್ತಿ, ಗಿಡ ಮೊದಲಾದವುಗಳಲ್ಲಿ ಘರ್ಷಣಶಕ್ತಿ, ಅಗ್ನ್ಯಾದಿಗಳಲ್ಲಿ ದಾಹಾದಿಶಕ್ತಿ, ವನಸ್ಪತಿಗಳಲ್ಲಿ ರೋಗಗಳನ್ನು ಗುಣಪಡಿಸುವ ಶಕ್ತಿ, ಪಾದರಸದಲ್ಲಿ ತಾಮ್ರವನ್ನು ಸುವರ್ಣವನ್ನಾಗಿ ಮಾಡುವ ಶಕ್ತಿ, ವಜ್ರದಲ್ಲಿ ಶಿಲೆಯನ್ನು ಭೇದಿಸುವ ಶಕ್ತಿ ಮಣಿಮಂತ್ರಾದಿಗಳಲ್ಲಿ ವಿಷಬಾಧೆಪರಿಹರಿಸುವ ಶಕ್ತಿ, ರೇಡಿಯೋದಲ್ಲಿ ಧ್ವನಿಯನ್ನು ಆಕರ್ಷಿಸುವ ಶಕ್ತಿ ಹಾಗೂ ವಿಸ್ತಾರಗೊಳಿಸುವ ಶಕ್ತಿ, ವಿದ್ಯುತ್ತಿನಲ್ಲಿ ಅನೇಕ ತರದ ಯಂತ್ರಗಳನ್ನು ನಡಿಸುವ ಶಕ್ತಿ, ಸೂಜಿಗಲ್ಲಿನಲ್ಲಿ ಕಬ್ಬಿಣವನ್ನು ಆಕರ್ಷಿಸುವ ಶಕ್ತಿ, ಶಿಂಗಳೀಕ ಪ್ರಾಣಿಯಲ್ಲಿ ವಿಷವನ್ನು ಪರೀಕ್ಷಿಸುವ ಶಕ್ತಿ ನಾಯಿಯಲ್ಲಿ ತುಡುಗರನ್ನು ಗುರುತಿಸುವ ಶಕ್ತಿ, ಆಹಾರದಲ್ಲಿ ಪ್ರಾಣಧಾರಣಶಕ್ತಿ ಹೀಗೆ ಅನೇಕ ಪ್ರಕಾರದ ಶಕ್ತಿಗಳು ಜಗದಲ್ಲಿ ನಮಗೆ ಗೋಚರವಾಗುವವು. ಪರಶಿವನಂತೆ ಈ ಸೃಷ್ಟಿಯಾದರೂ ಶಕ್ತಿವಿಶಿಷ್ಟವಾಗಿರುವದು ಕಂಡುಬರುವದು. ಪರಶಿವನು ಸತ್ ಚಿತ್ ಆನಂದ ರೂಪದ ಪರಶಕ್ತಿಯಿಂದ ಪ್ರಕಟವಾದನು. ಅಂದರೆ ಪರಶಿವನು ನಾನು ಇದ್ದೇನೆಂದನು ನಾನು ಪ್ರಕಾಶಿಸುತ್ತೇನೆಂದನು. ಅದನ್ನೇ ಸಂಸ್ಕೃತ ಭಾಷೆಯಲ್ಲಿ ಅಸ್ತಿ-ಪ್ರಕಾಶ-ನಂದಾದಿ ಎಂದು ಅನ್ನುತ್ತಾರೆ. ಪರಶಿವನಿಗೆ ಈ ಪ್ರಕಾರ ಇರುವ ಅನುಭಾವಕ್ಕೆ ವಿಮರ್ಶೆಶಕ್ತಿ ಎನ್ನುವರು. ಪರಶಿವನಲ್ಲಿ ಈ ಅನುಭವ ವಿಮರ್ಶೆ ಶಕ್ತಿ ಇರದಿದ್ದರ ಜಡನೆಂದು ಅವನಿಗೆ ಹೇಳಬಹುದಾಗಿತ್ತು. ಸೂರ್ಯರತ್ನ ನಕ್ಷತ್ರಗಳಿಗೆ ಸ್ವಪ್ರಕಾಶ ಇರುವದು. ಆದರೆ ಆ ತಮ್ಮ ಪ್ರಕಾಶವನ್ನು ಅನುಭವಿಸಿ ವಿಮರ್ಶೆ ಮಾಡುವ ಶಕ್ತಿ ಅವುಗಳಿಗಿಲ್ಲ. ಯಾಕಂದರೆ ಅವು ಜಡವಾಗಿರುವವು. ಆದರೆ ಪರಶಿವನಲ್ಲಿ ವಿಮರ್ಶೆ ಶಕ್ತಿ ಇರುವದರಿಂದ ಸೂರ್ಯರತ್ನ ನಕ್ಷತ್ರಗಳಂತೆ ಜಡವಾಗುತ್ತಿದ್ದನು. ಈ ವಿಮರ್ಶಶಕ್ತಿಯೇ ಪರಶಕ್ತಿಯಾಗಿದ್ದಾಳೆ. ಅದಕ್ಕೆ ಸತ್ ಚಿತ್ ಆನಂದದ ಅನುಭವ ಶಕ್ತಿಯನ್ನು ಪರಶಿವನಲ್ಲಿ ಒಪ್ಪಬೇಕಾಗುವದು ಪರಶಿವನಲ್ಲಿ ನಿತ್ಯಸಂಬಂಧವಾಗಿರುವ ಈ ಶಕ್ತಿಯಿಂದಲೇ ನಾಮರೂಪ ಕ್ರಿಯಾದಿಗಳಿಂದ ಕೂಡಿ ಜಗತ್ತಿನ ಉತ್ಪತ್ತಿಗೆ ಕಾರಣೀಭೂತಳಾಗಿರುವಳು. ಅವಳೇ ಮೂಲಪ್ರಕೃತಿ ಸ್ವರೂಪಳಾಗಿರುವಳು. ಇದು ಶಿವಶರಣರ ಪರಿಪೂರ್ಣಯೋಗದಲ್ಲಿ ಪರಶಿವನಂತೆ ಈ ಸೃಷ್ಟಿಯಲ್ಲಿಯೂ

ಕೂಡ ಪ್ರತಿಯೊಂದು ಪದಾರ್ಥದಲ್ಲಿ ಸಹ ಶಕ್ತಿ ಇದ್ದಾಳೆಂದು ಹೇಳಲಾಯಿತು. ಇದನ್ನು ಸಂಪೂರ್ಣ ಅನುಭವಗೊಳ್ಳುವದೇ ಈ ಪರಿಪೂರ್ಣ ಯೋಗದ ಸಾರಸರ್ವಸ್ವವಾಗಿದೆ. ಈ ಪ್ರಕಾರ ಎಲ್ಲ ತತ್ವಗಳನ್ನು ಪರಿಪೂರ್ಣವಾಗಿ ಒಳಗೊಂಡು ಈ ಪರಿಪೂರ್ಣಯೋಗ ಬೆಳಗುತ್ತಿರುವದು.

ಸ್ಥಲವು ಶಕ್ತಿ ವಿಶಿಷ್ಟಾದ್ವೈತ ಪರಶಿವನ ಸಾಂಕೇತಿಕ ಶಬ್ದವಾಗಿದೆ. ಸ್ಥಲವೆಂದರೆ ಬಯಲೇ ಬಯಲು, ನಿರ್ಬಯಲು. ಅದೇ ಏಕಮೇವಾದ್ವಿತಿಯಂ ಎಂಬಂತೆ ತಾನೇತಾನಾಗಿ ಒಂದೇಯಾಗಿತ್ತು. ಇದರಲ್ಲಿ ಸಂಕಲ್ಪದೋರಲು ಅದರಲ್ಲಿ ಅವಿನಾಭಾವ ಸಂಬಂಧದಿಂದ ಹುದುಗಿರ್ದ ವಿಮರ್ಶ ಶಕ್ತಿಯ ಪ್ರಭಾವದಿಂದ ಆ ಸ್ಥಲದಲ್ಲಿ ಲಿಂಗಸ್ಥಲ ಅಂಗಸ್ಥಲವೆಂದು ಎರಡು ಭಾಗವಾಯಿತು. ಅದರಂತೆ ಸ್ಥಲದಲ್ಲಿ (ಪರಶಿವನಲ್ಲಿ) ಹುದುಗಿರ್ದ ಪರಶಕ್ತಿಯಲ್ಲಿ ಸಹ ಲಿಂಗಸ್ಥಲದಲ್ಲಿ ಕಲೆ, ಅಂಗಸ್ಥಲದಲ್ಲಿ ಭಕ್ತಿಯಾಗಿ ಪರಿಣಮಿಸಿತು. ಕಲೆಯು ಪ್ರವೃತ್ತಿಪರ, ಭಕ್ತಿಯು ನಿವೃತ್ತಿಪರ ಇರುವವು. ಇವೆರಡರ ನಡುವೆ ನಿರಂತರವೂ ಹೋರಾಟ ನಡೆಯುವದು. ಸದಾ ಈ ಹೋರಾಟದಲ್ಲಿ ಕೊನೆಗೆ ಅಂಗಸ್ಥಲದ ಭಕ್ತಿಗೇನೇ ಜಯಕಟ್ಟಿಟ್ಟ ಮಾತಾಗಿರುವದು. ಪ್ರವೃತ್ತಿ ( ಕಲೆ ) ಪರವಾದ ಲಿಂಗ (ಶಿವನ) ಸ್ವಭಾವಕ್ಕಿಂತಲೂ ನಿವೃತ್ತಿಪರವಾದ ಅಂಗ (ಜೀವ) ದ ಸ್ವಭಾವ ಅಂದರೆ ಭಕ್ತಿಯೇ ಶ್ರೇಷ್ಠವೆಂಬುದು ಸಿದ್ಧವಾಗುವದು. ಇದೇ ಶರಣರ ಪರಿಪೂರ್ಣಯೋಗದ ಶಾಸ್ತ್ರವಾಗಿದೆ. ಅದಕ್ಕೆ ಶಿವನಿಗಿಂತ ಶಿವನ ಭಕ್ತರೇ ಅಧಿಕವೆಂದು ಗಾದೆಯ ಮಾತಾಗಿರುವದು ಸತ್ಯವದೆ. ಅದಕ್ಕೆ ಸೋಲುವೆನೆಂಬುದು ದೇವನ ಭಾಷೆಯಾದರೆ ಗೆಲುವೆನೆಂಬುದು ಭಕ್ತನ ಭಾಷೆಯಾಗಿರುವದು. ಯಾಕಂದರೆ ಶರಣರು ಪುರುಷ ಪ್ರಕೃತಿಗಳಲ್ಲಿ ಹೋರಾಟನ್ನು ಒಪ್ಪಿಕೊಂಡಿದ್ದಲ್ಲದೆ ಎಲ್ಲರಿಗಿಂತ ಒಂದು ಹೆಜ್ಜೆ ಮುಂದೆಹೋಗಿ ಅವರು ಪುರುಷ ಪರಬ್ರಹ್ಮರಲ್ಲಿಯೂ ಸಹ ಹೋರಾಟವಿದೆ ಎಂದು ಅರಿತು ಅನುಭವಗೊಂಡರು. ಅದಕ್ಕಂತೆ ಅಣ್ಣನು—ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಶಿರಯ್ಯ ಎರಡಾಳಿನ ಭಾಷೆಯು— ಕೊಲುವೆನೆಂಬ ಭಾಷೆ ದೇವನದು। ಗೆಲ್ಲುವೆನೆಂಬ ಭಾಷೆ ಭಕ್ತರದು। ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್‌ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವಾ.

ಕಟ್ಟದೆ ಒರೆಯ ಬಿಟ್ಟೆ ಜನ್ನಿಗೆಯರ। ಮುಟ್ಟಿ ಬಂದಿರಿದರೆ ಓಸರಿಸುವನಲ್ಲ। ಓಡದಿರು ಓಡದಿರು ಎಲೆಎಲೆ ದೇವಾ ಎಲೆಎಲೆ ಸ್ವಾಮಿ ಎಲೆಎಲೆ ಹಂದೆ। **(ಹೇಡಿ)**

ಜೋಳವಾಳಿಯಾನಲ್ಲ ವೇಳೆವಾಳಿಯಾನನಾನಯ್ಯ । ಹಾಳುಗೆಟ್ಟೋಡುವ ಆಳು ನಾನಲ್ಲನಯ್ಯ । ಕೇಳು ಕೂಡಲಸಂಗಮದೇವಾ- ಮರಣವೇ ಮಹಾನವಮಿ"

ಇಲ್ಲಿ ಪುರುಷ ಪರಶಿವನಲ್ಲಿ ಹೋರಾಟವನ್ನು ಕಾಣುವೆವು. ಅಂಜುವದೇ ಮರಣ, ಅಂಜುವದೇ ಪಾಪ. ಆದಕ್ಕೆ ಅಂಜಿಕೆಯನ್ನು ತೊರೆದು ಅನಿಷ್ಟ ನಿವಾರಿಸಲು ಹೋರಾಟ ಮಾಡಿ ಮಾಡಿ ಮರಣ ಬಂದರೂ ಅದೇ ಮಹಾನವಮಿ ಎಂದು ಹೇಳಿದ್ದಾನೆ. ಇಲ್ಲಿ ಶರಣರು ಪೂರ್ವಾತ್ಯರ ಭಕ್ತಿಯನ್ನು ಪಾಶ್ಚಿಮಾತ್ಯರ ಪ್ರಯತ್ನ ಹೋರಾಟಗಳನ್ನು ಬೆಸುಗೆ ಮಾಡಿ ಜೀವವನ್ನು ಅಂದರೆ ಪರಶಿವನನ್ನು ಕಂಡಿದ್ದಾರೆ. ಇದೇ ಪರಿಪೂರ್ಣಯೋಗದ ವೈಚಿತ್ರವೆಂದು ಹೇಳಬೇಕು. ಬರೇ ದೈವ ದೈವ ಹಣೆಯುಬರವೆಂದು ಈ ಪರಿಪೂರ್ಣಯೋಗವು ಸಾಧಕನನ್ನು ಕೂಡ್ರಗೊಡುವದಿಲ್ಲ.

ಈಪ್ರಕಾರ ಸದಾ ಸಾಧಕನು ಮಹಾಮಾಯೆಯ ವಿರುದ್ಧ ಹೋರಾಡಿ ಜಯಿಸುವನು. ಈ ಮಾಯೆಗೆ ಸಾಂಖ್ಯರು ಪ್ರಕೃತಿ ಎನ್ನುವರು. ಯೋಗಿಗಳು ಕುಂಡಲಿನಿ ಎನ್ನುವರು. ವೇದಾಂತಿಗಳು ಮಾಯೆ ಭ್ರಮೆ ಎಂದು ಹೇಳುವರು. ಪುರುಷನ ಸಾಧನಕ್ಕೆ ಈ ಮಾಯೆ ಅಡೆತಡೆಗಳನ್ನು ತಂದೊಡ್ಡುವಳು. ಇದಕ್ಕೆ ವೇದಾಂತಿಗಳು ಮಾಯಾಜಾಲವೆಂದು, ಭಕ್ತರು ಲೀಲಾವಿನೋದವೆಂದೂ, ಕರ್ಮಠರು ಪೂರ್ವಜನ್ಮವೆಂದೂ ಅನ್ನುತ್ತ ಕೂಡ್ರುವದು ತಪ್ಪೆಂದು ಶರಣರು ಹೇಳುವರು. ಹೆದರಿ ಹೇಡಿಯಾಗಿ ಕುಳಿತುಕೊಳ್ಳುವದು ಪಾಶ್ಚಿಮಾತ್ಯರಿಗೆ ಸಲ್ಲದು. ಅವರು ಸದಾ ಹೋರಾಡುವರು. ಆದರೆ ಇವರಲ್ಲಿ ಭಕ್ತಿಯ ಲವಲೇಶವಿಲ್ಲ ಇದರಲ್ಲಿ ನಂಬಿಗೆ ವಿಶ್ವಾಸಗಳಿಲ್ಲ. ಪೂರ್ವಾತ್ಯರು ಮೇಲಿನಂತೆ ಹೇಳುತ್ತ ಎಲ್ಲವನ್ನೂ ದೇವರ ಮೇಲೆ ಭಾರಹಾಕಿ ಸುಮ್ಮನೆ ಕುಳಿತು ಬರೇ ಭಕ್ತಿಯನ್ನು ಮಾಡುವರು. ಆದರೆ ಶಿವಶರಣರು ಇವೆರಡರ ಬೆಸುಗೆಯನ್ನು ಮಾಡಿ ಪುರಷಪ್ರಯತ್ನ ಹಾಗೂ ದೇವಭಕ್ತಿ ಇವೆರಡನ್ನು ಕೂಡಿಸಿ ನಡಿಸಿ ಎಲ್ಲರಿಗಿಂತ ಎಲ್ಲದರಲ್ಲಿ ಹೆಚ್ಚಿಗೆ ಜಯವನ್ನು ಸಂಪಾದಿಸಿದರು. ಇದೇ ಪರಿಪೂರ್ಣಯೋಗದ ಸಾರಸರ್ವಸ್ವ. ಅನಿಷ್ಟವನ್ನು ಹೊಡೆದೋಡಿಸಿ ಇಷ್ಟವನ್ನು ತನ್ನಲ್ಲಿ, ದೇಶದಲ್ಲಿ, ಜಗದಲ್ಲ, ಸ್ಥಾಪಿಸುವದೇ ಶರಣರ ಗುರಿ. ಕಲಹಕ್ಷೇತ್ರವೆನಿಸಿದ ಈ ಕರ್ಮ ಭೂಮಿಯಲ್ಲಿ ಕಲಿಯಾದವನು ಬಾಳುವನು. ವೇದಾಂತಿಗಳಂಥ ಹೇಡಿಗಳಿಗೆ ಭಕ್ತಿಪಂಥದವರಂಥ ಹೆಣ್ಣಿನ

ಸ್ವಭಾವದವರಿಗೂ ಈ ಕರ್ಮಭೂಮಿಯಲ್ಲಿ ಉಳಿವೆ ಇಲ್ಲ ಬಾಳಲು ಶಕ್ಯವಿಲ್ಲ. ಅದಕ್ಕೆ ವಿಧವಾಗಿ ಹೋರಾಡು ಅನ್ನಕ್ಕೆ, ವಸ್ತ್ರಕ್ಕೆ, ವಿದ್ಯಕ್ಕೆ, ಭಕ್ತಿಗೆ ಜ್ಞಾನಕ್ಕೆ, ಅನುಭವಕ್ಕೆ, ಸತ್ಯಕ್ಕೆ, ಅಹಿಂಸೆಗೆ, ನ್ಯಾಯಕ್ಕೆ, ನಿಷ್ಠೆಯಿಂದ ಹೋರಾಡಬೇಕೆಂದು ಶರಣರು ತಮ್ಮ ಪರಿಪೂರ್ಣಯೋಗದ ಮುಖಾಂತರ ಜನಕ್ಕೆ ನಿವೇದಿಸಿದರು.

ಮರಹು ದೊಡ್ಡ ಮಾಯೆ ಎಲ್ಲವನ್ನೂ ಬಿಟ್ಟಮೇಲೆ ಇದನ್ನೆಲ್ಲ ತ್ಯಾಗ ಮಾಡಿ ಬಿಟ್ಟೆನೆಂಬ ಅಹಂಭಾವವೆಂಬ ಮಹಾಮಾಯೆಯು ಬಂದು ಅವನಲ್ಲಿ ಸೇರುವದು. ಇದಕ್ಕಿಂತಲೂ ಹೆಚ್ಚಿನ ಮಾಯೆ ಇಲ್ಲ, ಅಜ್ಞಾನವಿಲ್ಲ. ಮರಹು ಇಲ್ಲ. ಅವಿದ್ಯ ಇಲ್ಲ. ಅದಕ್ಕೆ ಮರವೆ ಎಂಬುದೊಂದು ಹಿರಿಯ ಮಾಯೆ ಎಂದು ಸರ್ಪಭೂಷಣ ಶಿವಯೋಗಿಗಳು ಹಾಡಿದ್ದಾರೆ. ಇರುಹು ಕುರುಹುಗಳಿಗೆ ಈ ಅರಹು ಮಧ್ಯವರ್ತಿಯಾಗಿ ಅವೆರಡನ್ನೂ ಸಮನ್ವಯಗೊಳಿಸುವದು. ಅದಕ್ಕಾಗಿ ಅರುವಿಂಗೆ ಆವರಿಸಿದ ಮರಹ... ಪರಿಹರಿಯಲು ಹೋರಾಟ ಅವಶ್ಯವಾಗಿಬೇಕು ಹೀಗೆ ಮರಹಿನಿಂದ ಕೂಡಿದ ಮಾನವನು ಅರುಹಿನ ದೇವಮಾನವನಾಗಲಿಕ್ಕೆ ಸತತ ಹೋರಾಟವಿಲ್ಲದೆ ಎಂದೂ ಶಕ್ಯವಿಲ್ಲ. ಅದಕ್ಕೆ ಅತಿಶುದ್ಧನಾಗಿ ಪವಿತ್ರನಾಗಿ ಹೋರಾಡಬೇಕು. ಹರುಷಕ್ಕೆ ಕೊನೆಯುಂಟು. ಹೋರಾಟಕ್ಕೆ ಕೊನೆಯಿಲ್ಲ ಎಂದು ಹೇಳುವದು ಸತ್ಯವದೆ. ಅದಕ್ಕೆ ಮಾನವನು ಪರಿಪೂರ್ಣಯೋಗಿಯಾಗಲು ಪರಿಪೂರ್ಣ ಶುದ್ಧ ಹೃದಯದಿಂದ ಹೋರಾಡಬೇಕು. ಇದೇ ಅವನ ಕರ್ತವ್ಯ. ಹೋರಾಟಕ್ಕಂಜಿ ಬಿಟ್ಟರೆ ಅವನು ತನ್ನ ಕರ್ತವ್ಯ ಕರ್ಮವನ್ನು ಬಿಟ್ಟ ಅಪರಾಧ ಪಾಪಕ್ಕೆ ಗುರಿಯಾಗಬೇಕಾಗುವದು.

ಪರಶಿವ ಪರಶಕ್ತಿಯರಲ್ಲಿ ಪ್ರವೃತ್ತಿಪರವಾದ ಹೋರಾಟ ಉತ್ಪನ್ನವಾಗಿ ಇದೆಲ್ಲ ಜಗಬ್ರಹ್ಮಾಂಡ ಕಲಾತ್ಮಕವಾಗಿ ರೂಪ ತಾಳಿ ನಿಂತಿದೆ. ಪುನಃ ಹೋರಾಟದಿಂದಲೇ ಅಂದರೆ ನಿವೃತ್ತಿಪರವಾದ ಭಕ್ತಿಯಿಂದಲೇ ನಾವು ಪರಶಿವನಾಗಲು ಶಕ್ಯವಿದೆ. ಇಲ್ಲವಾದರೆ ಇಲ್ಲ, ಇಂಥ ನಿತ್ಯ ಹೋರಾಟದಿಂದಲೇ ಪ್ರಕೃತಿ ಪುರುಷರಲ್ಲಿ ಮೇಳನವನ್ನುಂಟು ಮಾಡಬಹುದು. ಐಹಿಕ ಜೀವನವು ಮಾಯಾಸ್ವರೂಪವಲ್ಲ. ಮಿಥ್ಯವೂ ಅಲ್ಲ ಪವಿತ್ರವಾದ ಸತ್ಯ. ಇಷ್ಟಲಿಂಗೋಪಾಸನೆಯ ಮೂಲಕ ಸಾಧಕನು ತನ್ನ ಜೀವನವನ್ನು ದಿವ್ಯ ಜೀವನವನ್ನಾಗಿ ಮಾರ್ಪಡಿಸುವನು. ಇದೇ ಪರಿಪೂರ್ಣಯೋಗವೆನಿಸುವದು. ಆದಿಭೌತಿಕ ಶಕ್ತಿಗಳನ್ನು ಆಧ್ಯಾತ್ಮಿಕ ಶಕ್ತಿಗಳನ್ನಾಗಿ ಪರಿವರ್ತಿಸುವಂತೆ ಈ ಪರಿಪೂರ್ಣ

ಯೋಗವು ಮಾಡುವದು ಅಂಗಕರಣಗಳು ಲಿಂಗಕರಣಗಳಾಗುವಂತೆ ಇದು ಮಾಡುವದು. ಇದರಿಂದ ಜ್ಞಾನ, ಭಕ್ತಿ, ಕ್ರಿಯೆ, ಹಠ, ಲಯ, ರಾಜ ಯೋಗಗಳ ಸುಂದರ ಸತ್ಯವಾದ ಸಮನ್ವಯವು ಈ ಪರಿಪೂರ್ಣಯೋಗದಲ್ಲಿ ಇರುವದು.

ಪರಾಸಂವಿತ್ ಶುದ್ಧವಾದ ಜ್ಞಾನವನ್ನು ಹೇಳುವದು ಇದರ ಚಲನವು ವರ್ತುಲದಲ್ಲಿ ಇರುವದು. ಆದ್ದರಿಂದ ಈ ಜ್ಞಾನವು ಚಕ್ರಾಕಾರವಾಗಿ ಚಲಿಸುವದು. ಇದಕ್ಕೆ ಒಂದು ಕೇಂದ್ರ (ಮಧ್ಯಬಿಂದು) ಒಂದು ಪರಿಘವಿರುವದು. ಮತ್ತು ಈ ಮಹಾಜ್ಞಾನ ಪರಾಸಂವಿತ್ತಿನೊಳಗೆ ಮತ್ತೆ ಅನೇಕ ವರ್ತುಲಗಳಗೆ ವರ್ತುಲ ಚಕ್ರಗಳೊಳಗೆ ಚಕ್ರಗಳಿರುವವು. ಇವೇ ಜೀವಾತ್ಮರುಗಳು. ಪರಾಸಂವಿತ್ತೇಪರ ಶಿವನೆಂದು ತಿಳಿಯಬೇಕು. ಹೀಗೆ ಕೇಂದ್ರವು (ಮಧ್ಯಬಿಂದು) ಸ್ಥಿರವಾಗಿ ಪರಿಘವು ಚೈತನ್ಯಾತ್ಮಕವಾಗಿಯೂ ಇರುವವು. ಅದಕ್ಕಾಗಿ ಕೇಂದ್ರಕ್ಕೆ ಸ್ಥಿತಿ-ಸ್ಥಲ-ಲಿಂಗವೆಂದೂ, ಪರಿಘಕ್ಕೆ ಗತಿ-ಕಲಾ-ಜಂಗಮವೆಂದೂ ಈ ಪರಿಪೂರ್ಣಯೋಗದ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು. ಕೇವಲ ಶಾಂತಿಯೇ ಸ್ಥಿತಿ-ಸ್ಥಲ-ಲಿಂಗ-ಶಿವ, ಎನಿಸಿದರೆ ಕೇವಲ ಚಲನ ಸಮರ ಹೋರಾಟ ಗತಿ ಕಲಾ ಜಂಗಮ ಶಕ್ತಿ ಎನಿಸುವದು. ಹೀಗೆ ಸ್ಥಿತಿ ಗತಿಗಳು ಸ್ಥಲ-ಕಲಾ-ಲಿಂಗ-ಜಂಗಮರು, ಶಿವಶಕ್ತಿಯರು ಅವಿನಾಭಾವ ಸಂಬಂಧದಿಂದ ಕೂಡಿದ್ದಾರೆ. ಇವು ಒಂದೇ ಆಗಿರುವವು. ಭಿನ್ನವಾದವುಗಳಲ್ಲ. ಅಖಂಡಸ್ಥಿತಿಯಲ್ಲಿ ಅಖಂಡಗತಿಯುಂಟು. ಶಾಂತಿ-ಸಮರ (ಹೋರಾಟ) ವೂ ಕೂಡ ಅವಿನಾಭಾವ ಸಂಬಂಧದಿಂದ ಕೂಡಿದೆ. ಹೀಗಾಗಿ ಅರಿವಿನಲ್ಲಿ ಅರಿವು ಅಡಕಗೊಂಡಿರುವದರಿಂದ ಸ್ಥೂಲದ ಅರಿವಿನಕೇಂದ್ರಕ್ಕೆ ಇಷ್ಟಲಿಂಗ, ಸೂಕ್ಷ್ಮದ ಅರಿವಿನ ಕೇಂದ್ರಕ್ಕೆ ಪ್ರಾಣಲಿಂಗ. ಕಾರಣದ ಅರಿವಿನ ಕೇಂದ್ರಕ್ಕೆ ಭಾವಲಿಂಗವೆನ್ನುವರು. ಈ ಸ್ಥಲ ಸೂಕ್ಷ್ಮಕಾರಣಗಳ ಆಚೆಗೆ ತುರೀಯದ ಅರುವಿನ ಕೇಂದ್ರ ಉಂಟು. ಅದೇ ಆ ಮಹಾಲಿಂಗ ಈ ಉನ್ಮನಿಯಾಗಿರುವ ಮಹಾಲಿಂಗವು ಮನೋಮಯಕ್ಕೆ ಇಳಿದರೆ ಭಾವಲಿಂಗ, ಪ್ರಾಣಮಯಕ್ಕೆ ಇಳಿದರೆ ಪ್ರಾಣಲಿಂಗ, ಭೌತಿಕಕ್ಕೆ ಇಳಿದರೆ ಇಷ್ಟಲಿಂಗವಾಗಿ ಪರಿಣಮಿಸುವದು.

### ಪರಿಪೂರ್ಣಯೋಗಕ್ಕೆ ಏಕೋತ್ತರ ಶತಸ್ಥಲದ ಅವಶ್ಯಕತೆ

ನೂರೊಂದು ಸ್ಥಲ ಏಕೋತ್ತರ ಶತಸ್ಥಲಗಳನ್ನು ಆಚರಿಸುವವನು ಷಟ್ ಸ್ಥಲಗಳ ಮರ್ಮವನ್ನು ಅರಿಯುವನ ಅದರಲ್ಲಿ ಸಾಮಾನ್ಯ ತಾತ್ವಿಕ ವಿಚಾರ

ಸಂಚಿಕೆ ೧.                                        ಸಂಪುಟ ೩೪

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ  ೫ ರೂ. ೭೫ ನ.ಪೈ.

ಜಾನೇವರಿ  ೧೯೬೦.

# ವಿಷಯಾನುಕ್ರಮಣಿಕೆ




೧. ವೀರಶೈವ ಧರ್ಮವು ಹಿಂದುಳಿಯಲು ಕಾರಣವೇನು ? ೧
—ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು, ದೇವರನಿಂಬರಗಿ.

೨. ಕಲ್ಯಾಣದಿಂದ ಕಾಶ್ಮೀರ .... ೧೨
—ಶ್ರೀಯುತ ಜಿ. ಜೆ. ಸಾಲೀಮಠ, ಗದಗ.

೩. ವೀರಶೈವ ಮಹಾಸಭೆಗೆ ಸೂಚನೆಗಳು .... ೧೯
—ಶ್ರೀ ಶಿವಾನಂದ ಸ್ವಾಮಿಗಳು, ಗವಿಮಠ ತೆಗ್ಗಿಹಳ್ಳಿ.

೪. ಮಹಾತ್ಮಾ ಬಸವೇಶ್ವರರು.... .... ೨೩
—ಡಾ|| ಎಸ್. ಬಿ. ಪಾಠಕ, ವಿಜಯಪುರ.

೫. ನಲಂದ .... .... ೩೩
—ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ, ಹೆಬಗೂರು.

೬. ಶ್ರೀಮತಿ ರಮಾದೇವಿಯವರ ಧಾರವಾಡದ ಸಂದರ್ಶನ ೪೧
—ಕಾರ್ಯದರ್ಶಿ ಶ್ರೀಮತಿ ರಮಾದೇವಿ ಸ್ವಾಗತ ಸಮಿತಿ ಧಾರವಾಡ.

೭. ಸದಾಶಿವನಂದಪ್ಪನ ವಚನಗಳು ೪೨
—ಸಂಪಾದಕರಿಂದ.

೮. ಭಕ್ತಿಯ ಕುಡಿಗಳು ೪೯
—ಕುಮಾರಿ ಶಾರದಾದೇವಿ ಎಸ್. ಪಾಟೀಲ, ವಿಜಯಪುರ.

೯. ತೆರೆಯ ಮರೆಯಲ್ಲಿ .... ೫೦
—ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.

೧೦. ಬಸವಣ್ಣನವರ್ಣಸಾಧನ .... .... ೫೭
—ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.



# ವೀರಶೈವ ಧರ್ಮವು ಹಿಂದುಳಿಯಲು ಕಾರಣವೇನು?

(ಲೇ.:— ಶ್ರೀಮಲ್ಲಿಕಾರ್ಜುನ ಸ್ವಾಮಿಗಳು ದೇವರನಿಂಬರಗಿ—ಜಿ. ವಿಜಾಪುರ)

---

ಎಲ್ಲ ಧರ್ಮಗಳಂತೆ ವೀರಶೈವ ಧರ್ಮವು ಪುರಾತನ ಒಂದು ಧರ್ಮವು. ಈ ವೀರಶೈವ ಧರ್ಮಕ್ಕಿಂತ ಎಷ್ಟೋ ಕಾಲದನಂತರ ಪ್ರಾರಂಭವಾದ ಧರ್ಮಗಳಲ್ಲಿ ಕೆಲವೊಂದು ಧರ್ಮಗಳು ಜಗತ್ತನ್ನೇ ವ್ಯಾಪಿಸಿವೆ. ಕೆಲವೊಂದು ರಾಷ್ಟ್ರಗಳನ್ನೇ ವ್ಯಾಪಿಸಿವೆ, ಕೆಲವೊಂದು ದೇಶವನ್ನೇ ವ್ಯಾಪಿಸಿವೆ. ಆದರೆ ವೀರಶೈವ ಧರ್ಮವು ಮತ್ತಿಷ್ಟು ಕುಂದುತ್ತಿರಲು ಕಾರಣವೇನು? ವೀರಶೈವ ಧರ್ಮದ ತತ್ವಗಳೇನಾದರೂ ಸಂಕುಚಿತ ಅಥವಾ ಇನ್ನಿತರ ಧರ್ಮಗಳಿಗಿಂತ ಹೀನವೇನಾದರೂ ಇವೆಯೋ? ಇಲ್ಲ, ಇಲ್ಲ. ಧರ್ಮ ಗುರುಗಳಾದ ಇಂದಿನ ಮಠಾಧೀಶರಿಗೆ ಆ ಉಚ್ಚ ತತ್ವಗಳೇ ಗೊತ್ತಿಲ್ಲವೆನ್ನೋಣವೇ? ಅಥವಾ ಅಮೂಲ್ಯ ತತ್ವಭರಿತ ಗ್ರಂಥಗಳೇ ಕಡಿಮೆವೆನ್ನೋಣವ

ತಿಲ್ಲವೆನ್ನೋಣವೆ? ಅಂತೂ ಇದೊಂದು ಗೂಢ ಪ್ರಶ್ನೆಯಾಗಿದೆ. ಇದಕ್ಕೆ ತಕ್ಕ ಉತ್ತರ ಹುಡುಕುವದು ನಮ್ಮ ಕರ್ತವ್ಯ. ಈ ಪ್ರಶ್ನೆಗೆ ಉತ್ತರ ಹುಡುಕದಿದ್ದರೆ ಈ ವೀರಶೈವ ಸಮಾಜಕ್ಕೆ ಕಲ್ಯಾಣವೆಂತು ಸಾಧ್ಯ? ವೀರಶೈವ ಸಮಾಜಕ್ಕೆ ಕಲ್ಯಾಣ ಒದಗಬೇಕಾದರೆ ಎಲ್ಲ ವೀರಶೈವರು ಜಾಗ್ರತರಾಗಲೇ

ಬೇಕು. ಅಂಧಶ್ರದ್ಧೆ ತೊರೆದು ಸ್ವತಃ ಶೂರರಾಗಿ ಸಮಾಜದಲ್ಲಿಯ ಹೀನತೆಯನ್ನು ಹೊಡೆದೋಡಿಸಲು ಸತತ ಪ್ರಯತ್ನಿಸಲೇಬೇಕು. ಒಬ್ಬ ಆಂಗ್ಲ ಕವಿ ಹೇಳಿದ "Wak is Worship" ಎಂಬ ಮಾತು ಎಲ್ಲ ವೀರಶೈವರ ನಡೆನುಡಿ ಕೆಲಸದಲ್ಲಿ ಅಚ್ಚೊತ್ತಿ ಕಾಣಬೇಕು. ವೀರಶೈವ ಧರ್ಮಕ್ಕೆ ಮನ ಮುಟ್ಟಿ ಮಾಡಿದ ಕಾರ್ಯ ದೇವರಿಗೆ ಒಮ್ಮತವಿರುವಾಗ ಅದು ವೀರಶೈವ ಜನರಿಗೂ ಒಮ್ಮತವೇ ಸರಿ. ಆದರೆ ಈ ನಮ್ಮ ಅಖಿಲಭಾರತದಲ್ಲಿ ಚತುರ್ ವರ್ಣಗಳನ್ನು ಋಷಿಗಳು ಮಾಡಿಟ್ಟರು. ಈ ವರ್ಣಗಳಲ್ಲಿ ಬ್ರಾಹ್ಮಣರು ವಿದ್ಯಾವಂತರಾಗಿ, ರಾಜಗುರುಗಳಾಗಿ, ರಾಜವಿಲಾಷ ಹೊಡೆಯುತ್ತ, ಕ್ಷತ್ರಿಯರನ್ನು ಸೈನಿಕರಂತೆ ನಡೆಸಿ, ರಾಜಸೂತ್ರವನ್ನು ತಮ್ಮ ಕೈಯಲ್ಲಿಟ್ಟುಕೊಂಡು ಇಲ್ಲಿಯ ವರೆಗೆ ಬಂದರು. ಇನ್ನುಳಿದ ವೈಶ್ಯ, ಶೂದ್ರ ಧರ್ಮಗಳು ಮೋಸಗಾರಿಕೆಯ ವ್ಯವಹಾರ, ಸೇವೆ ಇವುಗಳೇ ಇವರ ಆದ್ಯಕರ್ತವ್ಯಗಳಾದ್ದರಿಂದ ಈ ಎರಡು ವರ್ಣಗಳು ಮುಂದೊರೆಯಲು ಸಾಧ್ಯವಾಗಲಿಲ್ಲ. ಮೊದಲಿನ ಎರಡು ವರ್ಣಗಳು, ಇನ್ನುಳಿದ ಎರಡು ವರ್ಣಗಳನ್ನು ಮುಂದುವರಿಯುವಂತೆ ನಿರ್ಬಂಧಗಳನ್ನು ಹಾಕುತ್ತ ಬಂದರು. ಈ ಸಂಕೋಲೆಯನ್ನು ೧೨ನೇ ಶತಮಾನದಲ್ಲಿ ಅವತಾರಿ ಪುರುಷನಾದ ಶ್ರೀಬಸವಣ್ಣನವರು ತಮ್ಮ ಒಂದು ವಚನದಲ್ಲಿ "ಸೆಟ್ಟಿಯೆಂಬೆನೆ ಶಿರಿಯಾಳನ, ಮಾದರನೆಂಬೆನೆ ಚನ್ನಯ್ಯನ, ಡೋಹರನೆಂಬೆನೆ ಕಕ್ಕಯ್ಯನ ಆನು ಹಾರುವನೆಂದೊಡೆ ಕೂಡಲಸಂಗಮನೆಂತು ಒಲಿವನು." ಎಂದಿದ್ದಾರೆ. ಹುಟ್ಟನಿಂದ ವರ್ಣ ಜಾತಿಗಳಿಲ್ಲ, ನಡೆನುಡಿಯಿಂದ ಜಾತಿವರ್ಣಗಳು ಉಂಟೆಂದು, ತಾವು ನಡೆದು. ನುಡಿದು, ಆ ತತ್ವಗಳನ್ನು ಇಲ್ಲಿ ನಮಗಾಗಿ ಬಿಟ್ಟುಹೋಗಿದ್ದಾರೆ. ಭಾರತದಲ್ಲಿಯ ಧರ್ಮಗಳು ಆದಿಯಿಂದ ಬಂದಿದ್ದರೂ ಕೂಡ ೬ನೇ ಶತಮಾನದಲ್ಲಿ ಭಾರತವನ್ನು ಪ್ರವೇಶ ಮಾಡಿದ ಇಸ್ಲಾಂ ಧರ್ಮವು ಇಂದಿನ ಭಾರತದ ೧/೪ ಭಾಗವನ್ನು ವ್ಯಾಪಿಶಿದೆ. ೨೦೦-೩೫೦ ವರ್ಷಗಳಾಚೆ ಬಂದ ಕ್ರೈಸ್ತ ಧರ್ಮವು ಭಾರತದ ಜನಸಂಖ್ಯೆಯ ೧/೮ನೇ ಭಾಗ ವ್ಯಾಪಿಸಿದೆ. ಹೀಗಾಗಲು ಕಾರಣವೇನು? ಕಾರಣ ವಿರಲೇಬೇಕು.

ಇಸ್ಲಾಮು ಧರ್ಮವು ಆದರ್ಶವಿರದಿದ್ದರೂ ಕೆಲವೊಂದು ತತ್ವಗಳು ಆದರ್ಶ ಅವೆ. ಅವೆಂದರೆ ಆ ಧರ್ಮದಲ್ಲಿ ಒಂದು ರಾಷ್ಟ್ರೀಯ, ಸಾಮಾಜಿಕ, ಧಾರ್ಮಿಕ ಯಶ, ಅಪಯಶ, ಸುಖ, ದುಃಖ ಯಾವದೇ ಕಾರ್ಯ ಬಂದರೂ ಇಂದು ರಾಜನಿರಲಿ, ಗುರುವಿರಲಿ, ಸನ್ಯಾಸಿ, ಬಿಕ್ಷಾಪತಿ ಇರಲಿ ಆ ಕಾರ್ಯದಲ್ಲಿ

ಅವರೆಲ್ಲರೂ ಭಾಗಿಗಳಾಗಲೇಬೇಕೆಂದು, ದೇವರ ಪ್ರಾರ್ಥನೆಯನ್ನು ಎಲ್ಲರೂ ಕೂಡಿಕೊಂಡು ಮಾಡಲೇಬೇಕು ಎಂದು ಅವರ ಧರ್ಮಕಟ್ಟಳೆ ಇದೆ. ಆದ್ದರಿಂದ ಅವರಲ್ಲಿ ಪ್ರಾಧಾನ್ಯವಾಗಿ ಒಂದು ಸಂಘಟನಾಶಕ್ತಿ, ಧರ್ಮಾಭಿಮಾನವು ಬೆಳೆದಿವೆ. ಅವರ ಧರ್ಮವು ಭಾರತದ ೧/೪ ಭಾಗ ವ್ಯಾಪಿಸಿದರೆ, ಅವರ ಧರ್ಮ ಪ್ರಭಾವವು ಈಡೀ ಭಾರತವನ್ನೇ ವ್ಯಾಪಿಸಿದೆ. ಇದಕ್ಕೆ ಉದಾಹರಣವೆಂದರೆ ಮೊಹರಮ್ ಹಬ್ಬವನ್ನು, ಹಳೆಯ ಬ್ರಾಹ್ಮಣ ಮೊದಲುಗೊಂಡು ಅಂತ್ಯಜ ಕಡೆಯಾಗಿ ಆಚರಿಸುವರು. ಇಂಥ ಒಂದು ಸಂಘಟನಾ ಅಭಿಮಾನಗಳಿಂದ ತಮ್ಮ ಇಸ್ಲಾಮ ಧರ್ಮವನ್ನು ಭಾರತತುಂಬ ಬೆಳಸಿದರು. "ಮಾನವ ಸಮಾಜ ಜೀವಿ" ಅವನು ತನ್ನ ಧರ್ಮ ಏಳ್ಗೆಗಾಗಿ ಹೋರಾಡಬೇಕು. ಈ ರೀತಿಯ ಶೀಲ ಮತ್ತು ಬಾಂಧವ್ಯದ ಸುಹೃದಯ ಇಸ್ಲಾಮ ಧರ್ಮದಲ್ಲಿ ಬೇರೂರಿರುವದರಿಂದಲೇ ಅದರ ಏಳ್ಗೆಗೆ ಕಾರಣವಾಯಿತೆನ್ನಲೇನೂ ಅಡ್ಡಿಯಿಲ್ಲ.

ಈ ವೀರಶೈವ ಧರ್ಮದಲ್ಲಿ ಐನವರೆಂದು, ಹೇಳಿ ಹೇಳಿಸಿಕೊಂಡು, ಅವರ ಆಚರಣೆ ನುಡಿ ಹೇಗಿದ್ದರೂ ಅಂಥವರ ಹೊಟ್ಟೆಯಿಂದ ಹುಟ್ಟಿದವರೆಲ್ಲರೂ ಐನವರು. ಮಠಾಧೀಶರೆಂದು ಹೇಳುತ್ತಿರುವ ಇಂದಿನ ಮಠಾಧೀಶರು ಈಪ್ರಕಾರ ತಿಳಿದುಕೊಂಡ ಅಂಥ ವೀರಶೈವರಂತೆ, ಈ ಇಸ್ಲಾಮುಧರ್ಮದಲ್ಲಿ ಇಸ್ಲಾಮಿಗಳ ಹೊಟ್ಟೆಯಿಂದ ಹುಟ್ಟಿದವರೇ ಇಸ್ಲಾಮಿಗಳೆಂಬ ತತ್ವವು ಇಲ್ಲ. ಇಸ್ಲಾಮ ಧರ್ಮವು ಹಾಕಿಕೊಟ್ಟ ನೀತಿಯಂತೆ ಆಚರಿಸುವವರೇ ಇಸ್ಲಾಮಿಗಳು ಎಂದು ಅವರ ತತ್ವಗಳು ಹೇಳುತ್ತವೆ. ಬೇರೆ ಜಾತಿ, ಗೋತ್ರಗಳಲ್ಲಿ ಉದ್ಭವಿಸಿದ ಪ್ರತಿಯೊಬ್ಬನಿಗೆ ತಮ್ಮ ಧರ್ಮ ಸಂಸ್ಕಾರ ಕೊಟ್ಟು ಅವರ ಕೂಡ ಊಟ ಉಪಚಾರ ಕೆಣ್ಣು ಗಂಡು ಸಂಬಂಧ, ಹೀಗೆ ಆಚರಣೆಯಲ್ಲಿ ತಂದದ್ದರಿಂದ ಈಗ ಸದ್ಯ "ನುಡಿದಂತೆ ನಡೆ'' ಎಂಬ ಶಾಸ್ತ್ರದ ಉಪದೇಶದಂತೆ ಆಚರಣೆ ಇದ್ದ ಮೂಲಕ ಅವರ ಧರ್ಮವು ಇಷ್ಟು ಪ್ರಸಾರಹೊಂದಿತು. ಜಗತ್ತನ್ನು ವ್ಯಾಪಿಸಿತು ಓರ್ವ ದೇವರನ್ನೇ ಪೂಜೆಗೈಯುವದರಿಂದ ಆ ಓರ್ವ ದೇವನ ಮಕ್ಕಳು ನಾವೆಲ್ಲ ಒಂದೇ ಎಂಬ ಸಂಘಟನಾಶಕ್ತಿಯು ಬೆಳೆದು ನಿಂತಿದೆ. ಮತ್ತು ಅವರಲ್ಲಿ ದೇವರ ಮೇಲಿನ ಭಕ್ತಿ ಬಹು ಆಳವಾದದ್ದು. ಕ್ಷಣ ಕ್ಷಣಕ್ಕೂ ಓ! ಅಲ್ಲಾ ಎಂದು ಒಮ್ಮನಸ್ಸಿನಿಂದ ನೆನೆಯುವರು. ಇಂಥ ಸಮಯದಲ್ಲಿ ನಮ್ಮ ಬಸವಣ್ಣವರ ಒಂದು ವಚನ ನೆನಪಿಗೆ ಬರುವದು.

ಎನಿಸು ಕಾಲ ಕಲ್ಲು ನೀರೊಳಗಿರ್ದರೇನು;
ನೆನೆದು ಮೃದುವಾಗಬಲ್ಲುದೆ?
ಎನಿಸುಕಾಲ ನಿಮ್ಮ ಪೂಜಿಸಿ ಏನೆನಯ್ಯಾ.
ಮನದಲ್ಲಿ ದೃಢವಿಲ್ಲದ ನಕ್ಕ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಆಯಿತೆನ್ನ ಮತಿ ಕೂಡಲಸಂಗಮದೇವಾ.

ಆದ್ದರಿಂದ ಇಸ್ಲಾಮಿಗಳ ಮತಬೆಂತರನಂತೆ ಅಲ್ಲ ಎಂಬುದು ಸಿದ್ಧವಾಗುವದು.

ಮೊನ್ನೆ ಮೊನ್ನೆ ಅಂದರೆ ೨೦೦–೨೫೦ ವರ್ಷಗಳಾಚೆ ಭಾರತವನ್ನು ಪ್ರವೇಶ ಮಾಡಿದ ಕ್ರೈಸ್ತಧರ್ಮವು ಅದುವಾದರೂ ಇಷ್ಟು ತೀವ್ರದಲ್ಲಿ ಭಾರತವನ್ನು ವ್ಯಾಪಿಸಿದೆ, ವ್ಯಾಪಿಸುವಂಥ ಪೂರ್ಣ ಆದರ್ಶ ಧರ್ಮವಲ್ಲದಿದ್ದರೂ ಅದರಲ್ಲಿ ಕೆಲವೊಂದು ಆದರ್ಶ ತತ್ವಗಳಿವೆ ಎಂಬುದು ಸಿದ್ಧ. ಈ ಧರ್ಮದಲ್ಲಿ ಜಗದವರೆಲ್ಲರೂ ಒಂದೇ ಅನ್ನುವ ಭಾವವಿರದಿದ್ದರೂ ಕ್ರೈಸ್ತರೆನ್ನುವರೆಲ್ಲರೂ ಆ ದಯಾಪರನಾದ ಪರಮಾತ್ಮನ ಮಕ್ಕಳು ಎಂಬ ಭಾವವಿದೆ. ಪರಸ್ಪರ ಒಬ್ಬರನ್ನೊಬ್ಬರು ಪ್ರೇಮದಿಂದ ಕಾಣುವ ಹೃದಯವಿದೆ. ಪರಮಾತ್ಮನನ್ನು ಸಂಘಟನಾಯುಕ್ತರಾಗಿ ಪ್ರಾರ್ಥಿಸುವ ಅಮೂಲ್ಯವಾದ ಭಕ್ತಿ ಉಂಟು. ಕ್ರೈಸ್ತರೆನ್ನುವವರನ್ನು ತಮ್ಮವರೆಂದು, ತಮ್ಮ ಬಂಧುವೆಂದು ಆರ್ಥಿಕ ದೃಷ್ಟಿಯಿಂದ ಶಿಕ್ಷಣ, ಔಷಧ ಉಪಚಾರ ವಾಸಸ್ಥಳ ದೃಷ್ಟಿಯಿಂದ ಅನೇಕತರದ ಸೌಕರ್ಯಗಳನ್ನು ಒದಗಿಸಿದ್ದುಂಟು. ಒದಗಿಸುತ್ತಿರುವದು ಉಂಟು. ತಾತ್ವಿಕ ದೃಷ್ಟಿಯಿಂದ ಈ ಧರ್ಮ ಬೆಳೆದಿದೆ ಎನ್ನುವದಕ್ಕಿಂತ, ಅಸುಯೇಯಿಂದ, ಒಂದು ಧರ್ಮವು ಇನ್ನೊಂದು ಧರ್ಮವು ಕಾಣುವ ಹೀನ ಹೃದಯದಿಂದ ಬಡತನದ ಬವಣೆಯಿಂದ ಅನ್ನ ಅನ್ನವೆಂದು ಬಳಲುವ ಬಡಭಾರತೀಯರು ಭಾರತಿಯ ಧರ್ಮಗುರುಗಳೆಂದು ಮೆರೆಯುವ, ಕಠೋರ ಹೃದಯಿಗಳಾಗಿ ರಾಜಠೀವಿಯಿಂದ ಮೆರೆಯುವವರನ್ನು ಕಂಡು ಭಾರತೀಯ ಜನಾಂಗವು ಅನ್ಯಧರ್ಮಕ್ಕೆ ಶರಣಾಗತ ಆಗುವ ಪ್ರಸಂಗ ವದಗಿತು. ಇದಕ್ಕೊಂದು ಉದಾಹರಣೆಯೆಂದರೆ, ಕ್ರಿಶ್ಚನ್ನರು ಹರಿಜನರಿಗೆ ತಮ್ಮ ಧರ್ಮದ ದೀಕ್ಷೆ ಕೊಟ್ಟ ೬ ತಿಂಗಳಲ್ಲಿ ಅವರ ಜೀವನ ಪವಿತ್ರತೆಯಿಂದ ಪ್ರಾಮಾಣಿಕ, ಸತ್ಯ, ಕಾರ್ಯಕೌಶಲ್ಯದಿಂದ ಸ್ವಚ್ಛತೆಯಿಂದ ತುಂಬುವದು ಇದೆಲ್ಲಕ್ಕೂ ಅವರ ಧರ್ಮಗುರುಗಳೆ ಇದಕ್ಕೆ ಕಾರಣ. ಇವೆಲ್ಲ ಕಾರಣಗಳಿಂದ ಈ ಕ್ರೈಸ್ತ ಧರ್ಮವು

ಭಾರತವನ್ನೇ ವ್ಯಾಪಿಸಿತು ಅನ್ನಲೇನೂ ಅಡ್ಡಿ ಇಲ್ಲ. ಬ್ರಾಹ್ಮಣ ಕ್ಷತ್ರಿಯ ಧರ್ಮಗಳು ಪ್ರಸರಣ ಹೊಂದದಿದ್ದರೂ ಬ್ರಾಹ್ಮಣ ಕ್ಷತ್ರಿಯರೆನ್ನುವವರು ತಾವು ಮಾತ್ರ ಸುಖವನ್ನುಂಡು ಅನ್ಯರಿಗೆ ಸುಖದ ಸಿಹಿ ಸಹ ಹತ್ತಗೊಡದೆ ಆದರ ಸವಿಯು ಕಲ್ಪನೆ ಬಾರದ ಹಾಗೆ ಮಾಡಿದ ಶ್ರೆಯಸ್ಕರ ಫಲ ಅವರಿಗುಂಟು. ತಮ್ಮ ಬುದ್ಧಿ ಚಾಣಕ್ಯತನದಿಂದ ಹುಳ್ಳಾನುಚ್ಚು ಉಂಡು ನಿದ್ರಿಸುವ ಮೂಢ ಜನಾಂಗದಲ್ಲಿ ದ್ವೇಷ ಹುಟ್ಟಿಸಿ ಅವರಿಬ್ಬರಿಂದ ಭಪ್ಪರೆ ಎನ್ನಿಸಿಕೊಳ್ಳುತ್ತ ತಮ್ಮ ಧರ್ಮಿಯರನ್ನು ಯಾರೆ ಇದ್ದರೂ ಮಾತ್ರ ಎತ್ತಿ ಹಿಡಿಯುವ ವೈಶಿಷ್ಟೆ ಬ್ರಾಹ್ಮಣರದಾಯಿತು. ಇನ್ನುಳಿದ ಮಾರವಾಡಿ, ಗುಜರಾಥಿಗಳು ಸರ್ವರಲ್ಲಿ ಸರ್ವಾತ್ಮನನ್ನು ಕಾಣದಿದ್ದರೂ ಇವರೂ ಸಹ ತಮ್ಮ ಧರ್ಮ ಬೆಳೆಸಲಿಕ್ಕೆ ಪ್ರಯತ್ನಿಸದೆ ಈಗಿದ್ದ ತಮ್ಮ ಜನತೆ ಸುಖದಿಂದಿದ್ದು ಕಷ್ಟದಲ್ಲಿರತಕ್ಕ ತಮ್ಮ ಜನತೆಯನ್ನು ಮೇಲಕ್ಕೆತ್ತಲು ಪ್ರಯತ್ನಿಸುವದನ್ನು ದೇವರಲ್ಲಿ ಅಪಾರ ಶ್ರದ್ಧೆಯನ್ನು ಕಾಯ್ದುಕೊಂಡು ಬಂದಕು ಮಾತ್ರ, ಇಷ್ಟಾದರೂ ಸಾಮಾನ್ಯವೇ? ಇದುವಾದರೂ ಹೆಮ್ಮೆಪಡುವಂಥ ಕಾರ್ಯ ಇಂಥ ಕಾರ್ಯದ ಪ್ರಭಾವ ಕಾಯ್ದುಕೊಂಡು ಬಂದ ಅವರ ಧರ್ಮಗುರುಗಳಿಗೆ ಧನ್ಯವಾದಗಳು.

ಮೇಲೆ ಹೇಳಿದ ಎಲ್ಲ ಧರ್ಮಗಳಲ್ಲಿ ಒಂದೊಂದು ವೈಶಿಷ್ಠೆವಿದ್ದರೆ ಈ ವೀರಶೈವರಲ್ಲೇನಿದೆ ಅಂಬುದು ವಿಚಾರಿಸುವಾ—

ಎಲ್ಲ ಧರ್ಮಗಳಲ್ಲಿ ಒಂದು ತರಹದ ವೈಶಿಷ್ಠತನವಿದ್ದರೆ ಇಲ್ಲಿ ಎಲ್ಲತರದವೈಶಿಷ್ಠೆವಿದೆ। ಇಸ್ಲಾಮಿಗಳೆಲ್ಲರೂ ತಮ್ಮವರು, ಅವರೆಲ್ಲರೂ ಒಬ್ಬ ದೇವರ ಮಕ್ಕಳು ಎಂದು ಅನ್ನುವವರು ಆದರೆ ಇನ್ನಿತರನ್ನು ದ್ವೇಷಿಸುವರು. ಕ್ರೈಸ್ತರಷ್ಟೆ ದೇವರ ಮಕ್ಕಳೆಂದು ತಿಳಿದು ಅನ್ಯರನ್ನು ದ್ವೇಷಿಸದಿದ್ದರೂ ಪ್ರೀತಿಯಿಂದ ಕಾಣಲಾರರು. ಬ್ರಾಹ್ಮಣರು ಬ್ರಾಹ್ಮಣರಷ್ಟೇ ದೇವರ ಮಕ್ಕಳು ಉಳಿದವರಲ್ಲ ಎಂಬ ಭಾವದಿಂದ ತಾವಿಷ್ಟು ಸುಖ ಪಡಬೇಕು. ಅನ್ಯರು ತಮ್ಮ ಸುಖಕ್ಕೆ ಚ್ಯುತಿ ತರಬಹುದೆಂಬ ವಾಸನೆವುಳ್ಳವರಾಗಿದ್ದಾರೆ. ಆದರೆ ವೀರಶೈವ ಧರ್ಮದ ಶಾಸ್ತ್ರವು ಮಾತ್ರ ಲಿಂಗಮಧ್ಯೆ ಜಗತ್ ಸರ್ವಂ ಎಂದು ಹೇಳುತ್ತದೆ. ಈ ಶಾಸ್ತ್ರದ ಒಂದೇ ಒಂದು ಮಾತನ್ನರಿದರೆ ಜಗತ್ತೆಲ್ಲವೂ ಶಿವಮಯವಾಗಿ ಗೋಚರಿಸುವದು. ಇಂಥ ಉಚ್ಚತತ್ವದ ಧರ್ಮವು ಜಗತ್ತಿನಲ್ಲಿ ಮತ್ತಾವುದುಂಟು ಮತ್ತಾವುದು ಇಲ್ಲವೆಂದು ಕೈಯತ್ತಿ ಹೇಳಬಹುದು. ಆದರೆ ಇದೇ ಮಾತನ್ನು ಪ್ರತ್ಯಕ್ಷದಲ್ಲಿ ಪ್ರಮಾಣಿಸಿ ನೋಡಿದರೆ ಈ ಮಾತು ಶಾಸ್ತ್ರದಲ್ಲಿ ಅಷ್ಟೇ ಉಳಿದಿದೆ.

ಪ್ರತ್ಯಕ್ಷದಲ್ಲಿ ನೋಡಿದರೆ ಉಳಿದ ಧರ್ಮಗಳು ಇದಕ್ಕಿಂತ ೧೦೦೦ ಪಟ್ಟು ಒಳ್ಳೆಯದೆನ್ನಲೇನು ಅಡ್ಡಿ ಇಲ್ಲ. ಉಳಿದ ಧರ್ಮಗಳಲ್ಲಿ ಒಳ್ಳೆಯವೆನ್ನುವವುಗಳು ಹೆಚ್ಚು ವಿಶಿಷ್ಟವಾಗಿದ್ದರೆ ಕೆಟ್ಟವೆನ್ನುವವು ಎಷ್ಟು ಅವೆಯೋ ಅವೆಲ್ಲವುಗಳು ಈ ವೀರಶೈವ ಧರ್ಮದಲ್ಲಿ ವಿಶಿಷ್ಟವಾಗಿವೆ. ಮುಸಲ್ಮಾನರಲ್ಲಿ ಸಂಘಟನಾ ಶಕ್ತಿ ಪ್ರಭಲವಾಗಿದ್ದರೆ ವೀರಶೈವರಲ್ಲಿ ಒಡಕಿನ ಶಕ್ತಿ ಪ್ರಭಲವಾಗಿದೆ. ಕ್ರೈಸ್ತರಲ್ಲಿ ವಿನಯ ಸೌಜನ್ಯಗಳು ಹಾಗೂ ಶಿಸ್ತು ವಿಶಿಷ್ಟವಾಗಿದ್ದರೆ ಇವರಲ್ಲಿ ದಿಟ್ಟತನ, ಕಠೋರತನಗಳು ಅಶಿಸ್ತು, ಬ್ರಾಹ್ಮಣರಲ್ಲಿ ಜಾತಿಯ ಅಭಿಮಾನ ವಿಶಿಷ್ಟತನವಿದ್ದರೆ ನಮ್ಮ ಜಾತಿಯಲ್ಲಿ ದ್ವೇಷತನ ಅಸೂಯೆತನಗಳು ಇವರಲ್ಲಿ ಕತ್ತೆಯಂತೆ ಪಲ್ಲಕ್ಕಿಯನ್ನು ಅಂಧತೆಯಿಂದ ಮೆರೆಯಿಸುವ ಬಡತನಗಳು ವಿಶಿಷ್ಠವಾಗಿವೆ. ಯಾವ ರೀತಿಯಿಂದ ವಿಚಾರಿಸಿದರೂ ಎಲ್ಲ ಧರ್ಮದವರು ಹೀನ ಗುಣಗಳೆಲ್ಲವನ್ನು ಇವರಿಗೆ ಬಿಟ್ಟುಕೊಟ್ಟಂತೆ ತೋರುತ್ತದೆ. ಈ ವೀರಶೈವರಲ್ಲಿ ಬಣಜಿಗ, ಪಂಚಮಶಾಲಿ, ಜಾಡರ, ಸಿಂಪಿಗ, ಗಾಣಿಗರಲ್ಲಿ ಮತ್ತೆ ಪಂಗಡ ಹೀಗೆ ಅನೇಕ ಪಂಗಡಗಳು ಈ ಪಂಗಡಗಳಲ್ಲಿ ಮತ್ತೆ ಒಳಪಂಗಡಗಳು ಈ ಪಂಗಡದವರು ಒಬ್ಬರನ್ನೊಬ್ಬರು ಸೇರುವದಿಲ್ಲ. ಇಂದಿನ ಕೋರ್ಟ ಕಚೇರಿಗಳ ದಾಖಲೆ ನೋಡಿದರೆ ೧೦೦ಕ್ಕೆ ೯೦ ಪ್ರಮಾಣ ವೀರಶೈವರುಗಳಾಗಿವೆ ಇವರ ಕುಲದೇವತೆಗಳು ಬೇರೆ ಬೇರೆ ಕುಲಗುರು, ಮನೆಗುರು ಬೇರೆ ಹೀಗಾಗಿ ಇವರಲ್ಲಿ ಒಡಕು ಬಹಳ. ಉಳಿದವರಂತೆ ಇವರಿಗೆ ಒಬ್ಬನೇ ದೇವನು. ಒಬ್ಬನೇ ಗುರುವು ಒಂದೇ ಶಾಸ್ತ್ರ ಇಲ್ಲದ್ದರಿಂದ ಹಿಗಾಗುವದೋ? ರಕ್ತವು ಹೀಗಿರುವದೋ? ಇಂಥ ಒಡಕುತನವು ಬೇರೂರಿ ಈ ಧರ್ಮದಲ್ಲಿಯೇ ನಿಲ್ಲಲುಕಾರಣವೇನು?

ಇದೆಲ್ಲಕ್ಕೆ ಕಾರಣಿಭೂತರು ಗುರುಗಳೇ ಗುರುತನವು ಆಚರಣೆಗೆ-ನಡೆನುಡಿಗಳಿಂದಲೇ ಪ್ರಾಪ್ತವಾಗಿವೆ ವಿನಃ ಹುಟ್ಟಿನಿಂದ ಅಲ್ಲವೆಂಬುದು ಬಸವಣ್ಣನವರ ಈ ವಚನದಿಂದ ಸಿದ್ಧವಾಗುವದು.

"ವ್ಯಾಸಬೋಯಿಂತಿಯಮಗ, ಮಾರ್ಕಂಡೇಯ ಮಾತಂಗಿಯಮಗ,
ಮಂಡೋಧರಿ ಕಪ್ಪೆಯ ಮಗಳು, ಕುಲವರಿಸದಿರೆಂಬೋ ಕುಲದಿಂದ
ಮುನ್ನೆನಾದಿರೆಂಬೋ ಸಾಕ್ಷಾದಗಸ್ತ್ಯ ಕಬ್ಬಲಿಗ, ದುರ್ವಾಸ ಮಟ್ಟಿಗ,
ಕಶ್ಯಪ ಕಮ್ಮಾರ, ಕಾಂಡಿಲ್ಯನೆಂಬ ಋಷಿಯು ಮೂರುಲೋಕವರಿಯಲು
ನಾಯಿದ ಕಾಣಿರೋ, ನಮ್ಮ ಕೂಡಲಸಂಗನ ವಚನವಿಂತೆಂದು
ಶ್ವಪಚೋಡಿಯಾದರೇನು ಶಿವಭಕ್ತನೆ ಕುಲಜನೆಂಬೋ."

ವೀರಶೈವ ಸಮಾಜದ ಮೂಲಪೀಠಗಳಾದ ಶ್ರೀಶೈಲ, ಉಜ್ಜಯನಿ, ಕಾಶಿ ಮೊದಲಾದ ಐದು ಪೀಠಗಳನ್ನು ಅಂದಿನ ಸಮಾಜವು ಸಂಸಾರದಲ್ಲಿ ಬಿದ್ದು ತೊಳಲುವ ಜನತೆಗೆ ಧರ್ಮೋಪದೇಶಮಾಡಿ ಭಕ್ತರಿಂದ ಬಂದ ಆಹಾರವನ್ನು ಪ್ರಸಾದವೆಂದು ಸ್ವೀಕರಿಸಿ ಉಪದೇಶಿಸುತ್ತಿರಬೇಕೆಂಬುದು ಒಳ್ಳೆಯ ಸಾತ್ವಿಕ ಸ್ವಭಾವದ ಐದು ಜನರನ್ನು ಸ್ವಾಮಿಗಳೆಂದು ಬಿಟ್ಟರು. ಆ ಸ್ವಾಮಿಗಳು ತಮಗೆ ಬೇಕಾದವರನ್ನು ಆ ಮಠಕ್ಕೆ ಮಾಡುತ್ತ ಅದು ಒಂದು ಸಾಂಪ್ರದಾಯವಾಗಿ ನಾವೇ ಪರಿಣಮಿಸಿ ಸ್ವಾಮಿಗಳು ನಮ್ಮ ಹೊಟ್ಟೆಯಿಂದ ಹುಟ್ಟಿದವರೆಲ್ಲರು ಜಂಗಮರು ನಮ್ಮನ್ನೇ ನೀವು ಪೂಜಿಸಬೇಕು. ನಮಗೆ ನೀವು ಪಲ್ಲಕ್ಕಿಯಲ್ಲಿ ಮೆರಿಸಬೇಕು. ಹಾಗೆ ಹೀಗೆ ಹೇಳುತ್ತ ತಮ್ಮ ಸಾಂಪ್ರದಾಯ ಬೆಳಿಸಿ ಮಠದ ಸಂಪತ್ತನ್ನು ಹೆಚ್ಚಿಸಿ ಭಕ್ತರಲ್ಲಿ ವಿಷದ ಬೀಜವನ್ನು ಬಿತ್ತಿ ತಾವು ಆರಾಮದಿಂದ ಸುಖದ ನಿದ್ರೆಗೆಯ್ಯುತ್ತಿರುವರು. ಇತ್ತ ೧೨ನೇ ಶತಮಾನದಲ್ಲಿ ಅವತಾರಿ ಪುರುಷನಾದ ಬಸವಣ್ಣ, ಅಲ್ಲಮರು ನಿಜತತ್ವವನ್ನು ಬೀರಿ, ನುಡಿದು, ನಡೆದು, ಒಂದು ದೊಡ್ಡ ಕ್ರಾಂತಿಯನ್ನೇ ಮಾಡಿ ತಮ್ಮ ಅನುಭವವನ್ನು ನಮಗಾಗಿ ಕೂಡಿಟ್ಟಿದ್ದಾರೆ. ಆಗಿನ ಕಾಲದಲ್ಲಿ ಹೀನ ಸ್ಥಿತಿಗಿಳಿದ ವೀರಶೈವ ಧರ್ಮದ ಜಾಗ್ರತೆಗಾಗಿ ಸಾತ್ವಿಕರು ಪ್ರತಿಯೊಂದು ಊರಿಗೆ ಒಂದು ಮಠ ಕಟ್ಟಿಸಿ ಅಲ್ಲಿ ಅವರು ವಾಸಗಿದ್ದು ಜನತೆಗೆ ಉಪದೇಶ ಮಾಡಬೇಕು. ಭಕ್ತರು ಅವರ ಹೊಟ್ಟೆಬಟ್ಟೆಯನ್ನು ನೋಡಿಕೊಳ್ಳಬೇಕು. ಎಂದು ಒಂದು ಕಟ್ಟಳೆ ಮಾಡಿದರು. ಆ ಪ್ರಕಾರವಾಗಿ ಮಠಗಳು ನಿರ್ಮಾಣವಾದವು. ಆದರೆ ಉಪದೇಶಮಾಡುವ ಕಾರ್ಯ ಮಾತ್ರ ನಿಂತಿತು. ಬಿಕ್ಷೆ ಬೇಡುವ ಗುರುವೆಂದು ಹೇಳಿ ವಿಷಯಲಂಪಟರಾಗಿ ಚೈನಿ ಹೊಡೆಯುವ ಕಾರ್ಯ ಮಾತ್ರ ಧಾರಾಳವಾಗಿ ನಡೆಯುತ್ತ ಬಂದಿತು. ಇಂದಿನ ಹಳ್ಳಿಯ ಮಠ ಅಲ್ಲಿಯ ಗುರುವೆಂದು ಹೇಳಿಸಿಕೊಳ್ಳುವ ಜನವರ ಜೀವನ ನೋಡಬೇಕು. ಅವರಲ್ಲಿ ನೀತಿ ಆಚರಣೆ, ಶಾಸ್ತ್ರದ ಜ್ಞಾನವೇನಾದನೂ ಉಳಿದಿವೆಯೇ ? ಉಳಿದಿದೆ ಊರಲ್ಲಿ ಮನಿ ಮನಿ ಹಿಟ್ಟು ಬೇಡುವದು, ಉದ್ಯೋಗವಿಲ್ಲದೆ ಹೆಂಡರು ಮಕ್ಕಳು ಯಥೇಚ್ಛ ಹೊಡೆದು ಊರಲ್ಲಿ ಉಪದ್ವ್ಯಾಪಮಾಡುತ್ತ ಅಡ್ಡಾಡುವದು. ಮಠಕ್ಕೆ ಬಂದವರಿಗೆ ಊಟಮಾಡಿಸಬೇಕೆಂಬ ನಿಯಮವಿದ್ದರೂ ೨ ಆಣೆ ಅಥವಾ ೩ ಆಣೆಗೆ ಒಂದರಂತೆ ರೊಟ್ಟಿ ಮಾರುವದು ಮೋಸತನವಂತೂ ಮನೆಮಾಡಿದೆ. ಎಲ್ಲ ಮಠಗಳೂ ಮಠಾಧೀಶರೂ ಹೀಗಿರದಿದ್ದರೂ ೧೦೦ಕ್ಕೆ ೯೯ ಜನ ಈ ನೇಮಕ್ಕೆ ಒಳಗಾಗುವರು. ಈ ಮಾತು ಓದಿ. ಕೇಳಿ ಯಾರಿಗಾದರೂ ಸಿಟ್ಟು ಬರುವದು ಸಹಜವದೆ

ಯಾಕಂದರೆ "ಕಂಡದ್ದನ್ನು ಆಡಿದರೆ ಕೆಂಡದಂತಹ ಸಿಟ್ಟು" ಎಂಬ ನಾನ್ನುಡಿಯಂತೆ ಸತ್ಯ ಸಂಗತಿ ಇದ್ದುದರಿಂದಲೆ ಅದು ಕೋಪಕ್ಕೆ ಮೂಲ ಇಲ್ಲವಾದರೆ ಅದು ಶಾಂತಿಗೆ ಮೂಲ.

ಇರಲಿ ಇದ್ದ ಸಂಗತಿ ಬರೆದರೆ ಸಿಟ್ಟು ಬರುವದಾದರೆ, ನಿಮ್ಮ ಗುರುತನದ ಸುಖ ಭೋಗಿಸಿದ ವೀರಶೈವ ಸಮಾಜಕ್ಕೆ ಎಂಥ ಅನ್ಯಾಯವಾಗಿದೆ, ಅದನ್ನು ವಿಚಾರಿಸಿದರೆ ಬ್ರಹ್ಮಾಂಡಕ್ಕೆ ಬೆಂಕಿ ಹತ್ತಿದಂತಾಗುವದು ಈ ಪ್ರಕಾರ ಆಚರಣೆಯುಳ್ಳ ಗುರುಗಳಾದ ವಿರಕ್ತರಿಗೂ, ಗುರುವರ್ಗದವರಿಗೂ ಆಗಿಬರುವದಿಲ್ಲ. ಇಂಥ ಮಠಾಧೀಶರು ಭಕ್ತರನ್ನು ಕಟ್ಟಿಕೊಂಡು ಒಬ್ಬರು ಇನ್ನೊಬ್ಬರೊಂದಿಗೆ ಬಡಿದಾಡುವರು. ಇದು ಮಠಾಧೀಶರ ಕರ್ತವ್ಯವೇ? ಇದು ಗುರು ಅನ್ನಿಸಿಕೊಳ್ಳುವವರಿಗೆ ಸರಿ ಎನ್ನಿಸುವದೆ? ವಿರಕ್ತರಾದ ಬಸವಣ್ಣ, ಅಲ್ಲಮಪ್ರಭು ಸ್ವರ್ಗವಾಸಿ ಆದರೂ ಅವರ ತತ್ವ ಅಮರವಾಗಿವೆ. ವಿರಕ್ತರಾದವರು ಅವರ ತತ್ವಗಳನ್ನು ಆಚರಿಸಬಾರದೆ? ಬಸವಣ್ಣನವರಂತೆ ಅನ್ಯಧರ್ಮದವರಿಗೆ ಲಿಂಗಧಾರಣ ಮಾಡಿ ಹರಳಯ್ಯನ ಮಗನಿಗೂ ಹಾಗು ಮಾದರಸರ ಮಗಳಿಗೂ ಲಗ್ನ ಮಾಡಿದಂತೆ ಓರ್ವವಿರಕ್ತರಾದರೂ ಒಂದಾದರೂ ಮಾಡಿದ್ದುಂಟೆ? ಗುರು ಹಾಗೂ ವಿರಕ್ತರನ್ನು ಕೂಡಿಸುವದೆಂದರೆ ಹಾವು ಮುಂಗಲಿ ಕೂಡಿಸಿದಂತೆ. ವೀರಶೈವ ಮಹಾ ಸಭೆ ಎನ್ನುವರು, ಹಣ ಖರ್ಚುಮಾಡುವರು. ಇವೆಲ್ಲವುಗಳು ನಟನೆಗಳಾಗಿವೆ. ಎಲ್ಲರೂ ತಮಗೆ ಬೇಕಾದವರನ್ನು ಬೇಕಾದ ಸ್ಥಾನದಲ್ಲಿ ತರುವರು. ಹೀಗೆ ಮಾಡುವದರಿಂದ ಎಂದಾದರೂ ಸುಧಾರಣೆಯಾಗಬಲ್ಲುದೆ? ಬಸವಣ್ಣನವರು ಇಂಥ ತಪ್ಪು ಕಂಡು ಅವರು ಅವನ್ನು ಎತ್ತಿ ತೋರಿಸಿದ್ದಾರೆ. ಬಸವಣ್ಣನವರು ಹೇಳಿದ ಈ ವಚನವು.

"ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲಾ, ನಿಮ್ಮ ಪಾದಸಾಕ್ಷಿ ಎನ್ನ ಮನಸಾಕ್ಷಿ, ಕೂಡಲಸಂಗಮದೇವಾ, ಎನಗಿದೇ ದಿಬ್ಯ,

ಈ ವಚನದಲ್ಲಿ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಮಾತು ಅಳವಡಿಸಿಕೊಂಡಿದ್ದರೆ ಈ ಮಠಾಧೀಶರು ಎನಗಿಂತ ಹಿರಿಯರಿಲ್ಲ, ನನಗಿಂತ ಶಿವಶರಣರು ಕಿರಿಯರು ಅಂಬುವ ಮಾತನ್ನು ಇವರು ಅಳವಡಿಸಿಕೊಂಡಿರುವರು. ಇಂತಹೆ ಜಾತಿ ಡೊಂಬರಿಂದ ವೀರಶೈವವು ಸುಧಾರಣೆಯಾಗುವದೆ? ಬೇಲಿ ಕೂತು ಹೊಲ ಮೆಯ್ದಂತೆ ಮುಂದೇನು ಗತಿ, ಅದಕ್ಕೆ ಉಂಟು ಗತಿ ಎಲ್ಲ ವೀರಶೈವರು ತತ್ವವೇತ್ತರಾಗಲಿ. ಬಸವಣ್ಣನವರ

ಸಾಹಿತ್ಯ ಅಭ್ಯಾಸ ಮಾಡುವವರಾಗಲಿ, ಒಳ್ಳೆಯ ಶೀಲವಂತರಿಗೆ ಬೆಲೆಯಿಯಲಿ ಅಂಥ ಶ್ರದ್ಧೆಯನ್ನು ಹೊಡೆದೊಡಿಸಲಿ, ಅಂದರೆ ಬೆಳೆಯನ್ನು ವೈಯ್ಯವ ಬೇಲಿಗೆ ಬೆಂಕಿ ಇಟ್ಟಂತಾಗುವದು. ಅಂದರೆ ನನ್ನ ಬೆಳೆ ಜೋಕೆಯಾಗುವದು. ಫಲ ಕೈಗೆ ಬರುವದು ಸುಖವು ತಾನೆ ಪ್ರಾಪ್ತವಾಗುವದು. ಇಂದಿನ ಗಾಂಧಿ ಯುಗದಲ್ಲಿ ಪ್ರತಿಯೊಂದು ಧರ್ಮದವರು ತಮ್ಮ ಧರ್ಮದ ವಿಶಿಷ್ಟತನವನ್ನು ಕಾಯ್ದುಕೊಂಡು ಬಂದಿರುವರು ಆದರೆ ವೀರಶೈವರೆನ್ನುವಂಥವರ ಎದೆಯ ಮೇಲೆ ಲಿಂಗ, ಹಣೆಯ ಮೇಲೆ ವಿಭೂತಿ ಇದೆಯೇ ನೋಡಿರಿ ಹೀಗಾಗಲು ಕಾರಣವೇನು? ಮಠಾಧೀಶರು ಗುರುಗಳೆನ್ನುವವರು, ತಮ್ಮ ತಮ್ಮ ಶಿಷ್ಯರೆನ್ನುವವರನ್ನು ಯಾಕೆ ಜಾಗ್ರತಿಸಬಾರದು. ತಾವು ಗುರುಗಳೆನ್ನಿಸಿಕೊಳ್ಳುವದಕ್ಕೆ ಹೇಗೆ ಹೆಮ್ಮೆ ಇದೆಯೋ ಹಾಗೆಯೇ ಶಿಷ್ಯರ ಕಾಲ್ಯಾಣ ಚಿಂತೆ, ಧರ್ಮದಚಿಂತೆ ಬೇಡವೇ?

ಹಳ್ಳಿಯ ಅಯ್ಯನವರು ಅಲಾಬದಲ್ಲಿ ಕರಬಲ್ ಮೇಳಮಾಡಿ ತಾವು ಹಲಿಗೆ ಬಡಿಯುತ್ತಾ ಮುಸಲ್ಮಾನರ ಹಬ್ಬ ಇನ್ನಿತರ ಕಾರ್ಯಗಳಲ್ಲಿ ತಮ್ಮ ಶಿಷ್ಯರೆನ್ನುವರು ಲಕ್ಷಾದಿಜನರು ಲಕ್ಷಾಪತಿಗಳೂ ಇರಲಿಕ್ಕಾಗಿ ದುಡ್ಡಿಗಾಗಿ ಕೈಯೊಡ್ಡಿ ನಿಲ್ಲುವದು ಎಂಥ ಹೇಯಕಾರ್ಯ. ಇದು ವೀರಶೈವ ಸಮಾಜಕ್ಕೊ ಭೂಷಣವೇ ? ಯಾರಾದರೂ ಓರ್ವ ಭಕ್ತ ಹೀಗೆ ನಾವು ಅನ್ಯ ಸಮಾಜದವರ ಕಡೆಗೆ ಹೋಗಬಾರದು. ನೀವು ಗುರುಗಳು ಎಂದು ಹೇಳಿದರೆ ಅವರ ಕೂಡ ನ್ಯಾಯಮಾಡುವರು ಉಳಿದ ಸಮಾಜದ ಗುರುಗಳೆನ್ನುವವರು ಅನ್ಯರಿಗೆ ಕೈ ಒಡ್ಡುವರೇ ವಿಚಾರಿಸಿರಿ. ಇಂಥ ಹದಿನಾರು ಮುಖದ ವೀರಶೈವ ಸಮಾಜಕ್ಕೆ ಕಲ್ಯಾಣವೆಂತು ಸಾಧ್ಯ ಉಳಿದ ಧರ್ಮದವರು ತಮ್ಮ ಧರ್ಮದಭ್ಯಾಸ ತಮ್ಮ ಧರ್ಮದವರಾರೆ ಇರಲಿ ಅವರಿಗೆ ಅಲ್ಲಿ ಪ್ರವೇಶವುಂಟು ಆದರೆ ವೀರಶೈವ ಸಮಾಜದ ಗುರುಗಳು ಎಂಥವರಿದ್ದಾರೆ ಗೊತ್ತೆ. ಸಮಾಜದಿಂದ ದುಡ್ಡೆತ್ತಿ ತಮ್ಮ ಮಕ್ಕಳೇ ಆ ವಿದ್ಯೆ ಪಡೆಯಬೇಕೆಂದು ಶಿವಯೋಗ ಮಂದಿರದಲ್ಲಿ ಐನವರ ಮಕ್ಕಳಾಗಿ ಒಂದು ಪಾಠಶಾಲೆ ತೆಗೆದಿದ್ದಾರೆ. ನಮ್ಮ ಗುರುಗಳು ಎಂದು ಹೆಮ್ಮೆ ಪಟ್ಟುಕೊಳ್ಳುವ ಓರ್ವ ಶಿಷ್ಯನು ತಮ್ಮ ಓರ್ವ ವಿದ್ಯಾರ್ಥಿಯನ್ನು ಅಭ್ಯಾಸಕ್ಕಾಗಿ ಸೇರಿಸಲಿ ನಮ್ಮ ಗುರುಗಳ, ಪ್ರಭಾವ ಜಗತ್ತಿನ ಉದ್ಧಾರ ಮಾಡುವ ಕಾರ್ಯದ ಕೌಶಲ್ಯ 'ಯಾವ ಸಮಾಜದ ಹಣದಿಂದ ನಿರ್ಮಾಣವಾದ ಸಂಸ್ಥೆ ಇರುವದೋ ಅಂಥ ಸಮಾಜ ಕಲ್ಯಾಣ ಬಗೆಯದ ಸ್ವಾಮಿಗಳಿಂದ ವೀರಶೈವ ಸಮಾಜ ಪ್ರಸರಣ ಹೊಂದುವದೆಂದರೆ ನಗೆನೀಡುವ

ಮಾತು. ಬೀಜದಂತೆ ಬೆಳೆ ಅನ್ನುವ ಮಾತು ಅಕ್ಷರಸಹ ಸತ್ಯ. ಇದರಿಂದ ಇನ್ನು ಹೊಸರಕ್ತದ ವೀರಶೈವ ತರುಣ ಜನಾಂಗವು ಯೋಗ್ಯ ಗುರುವಿನನ್ನು ಆರಿಸಿಕೊಂಡು ಅಂಥ ಗುರುಗಳಿಂದ ೧೨ನೇ ಶತಮಾನದಂತೆ ಒಂದು ಉಚ್ಚ ಮಟ್ಟದ ಸ್ಥಿತಿಗೇರುವದು ಅವಶ್ಯ. ಅದಕ್ಕೆ ಎಲ್ಲರೂ ಜಾಗ್ರತರಾಗುವ ಕಾಲ ನಾವು ಇಲ್ಲಿಯ ವರೆಗೆ ಅಲಕ್ಷಮಾಡಿ ಮನೆಯ ದೀಪವೆಂದು ಮುದ್ದು ಕೊಟ್ಟಂತಾಗಿದೆ ಅದರ ಜಳ ಸಾಕಷ್ಟು ತಾಗಿದೆ. ಆದ್ದರಿಂದಲೇ ಇಂಥ ಮಠಾಧೀಶರನ್ನು ಬಿ. ಬಸಲಿಂಗಪ್ಪ, ಮತ್ತು ಮಂತ್ರಿ ರಾಚಯ್ಯನವರು ಬಾಯಿಗೆ ಬಂದಂತೆ ಎಷ್ಟೋ ಕಡೆಗೆ ಹಳಿದಿರುವರು. ಇದು ಸೂಳೆಯ ಪಾಪ ಸನ್ಯಾಸಿಗೆ ಬಡಿದಂತಾಗಿದೆ. ಇನ್ನಾದರೂ ವೀರಶೈವರೆನ್ನಿಸಿಕೊಳ್ಳುವವರು ಜಾಗ್ರತೆಯಾಗಲಿ. ಈ ವೀರಶೈವ ಸಮಾಜವು ಸುಧಾರಿಬೇಕಾದರೆ—

(೧) ಕೆಲವೊಂದು ಹಳ್ಳಿಗಳಿಗೆ ಒಂದು ಪೋಲಿಸ ಠಾಣಾ ಮಾಡಿ ಆ ಹಳ್ಳಿಗಳ ಆಡಳಿತೆ ಅಲ್ಲಿಯ ಸಬ್ ಇನ್‌ಸ್ಪೆಕ್ಟರರು ನೋಡಿಕೊಳ್ಳುವಂತೆ ಕೆಲವೊಂದು ಗ್ರಾಮದ ವೀರಶೈವ ಸಮಾಜದ ಏಳ್ಗೆಯ ಹೊಣೆ, ಧರ್ಮಪ್ರಚಾರದ ಹೊಣೆ, ಅದರ ತಂಟೆ. ದ್ವೇಷ ಪರಿಹರಿಸುವದು, ಈ ಕಾರ್ಯಕ್ಕೆ ಓರ್ವ ಸ್ವಾಮಿಗಳನ್ನುನೇಮಿಸಿ ಈ ಎಲ್ಲ ಕರ್ತವ್ಯ ಮಾಡುವ ಅಧಿಕಾರ ಕೊಡಬೇಕು.

(೨) ಮಠಾಧೀಶ ಸ್ವಾಮಿಗಳು ವೀರಶೈವ ಸಮಾಜದ ತತ್ವ ಪ್ರಚಾರಾರ್ಥ ಸ್ವಲ್ಪ ಬೆಲೆಗೆ ಗ್ರಂಥಗಳನ್ನು ಪ್ರಕಟಿಸಿ ಎಲ್ಲರಿಗೂ ಓದಿ ತಿಳಕೊಳ್ಳಲು ಅನುಕೂಲ ಮಾಡಿಕೊಡಬೇಕು.

(೩) ಪ್ರತಿ ಜಿಲ್ಹೆಗೊಂದರಂತೆ ಸಂಸ್ಕೃತ ಪಾಠಶಾಲೆಗಳನ್ನು ಪ್ರಾರಂಭಿಸಿ ಗುರು, ವಿರಕ್ತ, ಶಿಷ್ಯ ವರ್ಗಗಳನ್ನು ಮಾಡದೆ ಪ್ರತಿಯೊಬ್ಬರಿಗೆ ಧರ್ಮ ಶಿಕ್ಷಣ ದೊರೆಯುವಂತೆ ಮಾಡಬೇಕು.

(೪) ಒಳ್ಳೇ ಆಚರಣೆ, ಶೀಲ, ಸಚ್ಚಾರಿತ್ರ್ಯಯುಳ್ಳ ವಟುಗಳನ್ನು ಮಠಗಳಿಗೆ ಮಾಡುವ ಪರಿಪಾಠ ಬೆಳೆಸಬೇಕು.

(೫) ವಿರಕ್ತರು ನಾವು ಹೆಚ್ಚು, ಗುರುವರ್ಗದವರು ನಾವು ಹೆಚ್ಚು ಎಂದು ಒಬ್ಬರನೊಬ್ಬರು ಮಾಸಿಕ ಪ್ರಕಟನೆಗಳ ಮೂಲಕ ಸಮರ್ಥಿಸುವದನ್ನು ಮೊದಲು ಬಿಟ್ಟು ಸಂಘಟಿಕರಾಗಿ ಕೆಲಸ ಮಾಡುವದನ್ನು ಮಾಡಬೇಕು.

(೬) ಕ್ರಿಶ್ಚನ್ನರ ಚರ್ಚಿನಂತೆ ಪ್ರತಿಯೊಂದು ಊರಿಗೆ ಒಂದು ಶಿವಾನುಭವ ಮಾಡಿ ಅಲ್ಲಿ ಶಿವಾನುಭವಗೋಷ್ಠಿ ನಡೆಸುವ ಏರ್ಪಾಡ ಆಗಬೇಕು.

(೭) ಇಂದಿನ ಹಳ್ಳಿಯ ಮಠದ ಐನವರ ಆಚರಣೆ ಕಂಡು ಅಯೋಗ್ಯ ಆಚರಣೆಯುಳ್ಳವರ ಮೇಲೆ ಸಹ ದೊಡ್ಡ ದೊಡ್ಡ ಮಠಾಧೀಶರು ಕ್ರಮ ಕೈ ಕೊಳ್ಳಬೇಕು.

(೮) ಅನ್ಯಧರ್ಮದವರ ಆಚಾರ ನೀತಿ ಯೋಗ್ಯವಿದ್ದು ಅವರು ಲಿಂಗ ಧಾರಿಯಾಗಬೇಕೆಂದು ಅಪೇಕ್ಷೆಪಟ್ಟರೆ ಅವರಿಗೆ ಲಿಂಗ ದಿಕ್ಷೆಕೊಟ್ಟು ಅವರನ್ನು ವೀರಶೈವರೆಂದು ಪರಿಗಣಿಸಬೇಕು.

ಈ ಪ್ರಕಾರ ಮಾಡಿದ್ದಾದರೆ ಮಾತ್ರ ವೀರಶೈವ ಎಂಬ ಶಬ್ದಕ್ಕೆ ಅರ್ಥ ಯೋಗ್ಯವಾಗುವದು. ಹೀಗೆ ಮಾಡುವದಾಗದ್ದಿರೆ ಇಂದಿನಿಂದಲೇ ಹೇಡಿಶೈವ ಯೆಂದು ಕರೆಯಲ್ಪಡಬೇಕು.

**ಆದರ್ಶ ಶರಣರ ಜೀವನ.**

# ಕಲ್ಯಾಣದಿಂದ ಕಾಶ್ಮೀರ.

(ಲೇಃ–ಜಿ. ಜಿ. ಸಾಲೀಮಠ ಗದಗ.)

---

೧೨ನೇ ಶತಮಾನದ ಮಧ್ಯದಲ್ಲಿ, ಕನ್ನಡ ನಾಡಿನೊಳಗೆ ನಡೆದ ಶಿವಾನುಭವದ ಕೂಗೂ ಉತ್ತರ ಭಾರತದಲ್ಲಿ ಪ್ರಸರಿಸಿ ಕಾಶ್ಮೀರಕ್ಕೂ ಮುಟ್ಟಿತು. ಆಗ ಅಲ್ಲಿಯ ಅರಸನಾದ ಮಹಾದೇವರಾಜನಿಗೆ ತನ್ನ ಸಂಪತ್ತಿನ ಮೇಲೆ ಧಿಕ್ಕಾರಭಾವನೆ ಮೂಡಿತು. ದೀರ್ಘವಾಗಿ ಆಲೋಚನೆ ಮಾಡಿದನು. ಅವನಿಗೆ ಯಾವ ನಿರ್ಧಾರವೂ ಕೂಡಲೇ ಹೊಳೆಯಲಿಲ್ಲ. ಯಾರಲ್ಲಿಯೂ ಈ ವಿಚಾರ ಪ್ರಸ್ತಾಪಿಸಲಿಲ್ಲ. ಕೊನೆಗೆ ಒಂದು ದಿವಸ ರಾತ್ರಿ ವಿಚಾರಿಸುತ್ತ ಮಲಗಿದ ಕೂಡಲೇ ನಿದ್ರೆಬರಲಿಲ್ಲ. ನಡುರಾತ್ರಿಯಲ್ಲಿ ಏನೋ ಒಂದುತರದ ಪ್ರಭಾವ ಕಾಯದಲ್ಲಿ ಕಂಡು ಬೆಳಕು–ಸ್ವಪ್ನದಲ್ಲಿ ಸೃಷ್ಟಿಸಿದ್ದನ್ನು ನೋಡಿ ಅಗಲೇ ಹಾಸಿಗೆಯಿಂದೆದ್ದುಬಿಟ್ಟ. ಆಗ ಅವನಿಗೆ ಏನೋ ಒಂದು ಬೆಳಕು ಕಂಡಿತು. ಅರಸೊತ್ತಿಗೆಯ ಮೇಲೆ ಸಾಸುವೆಕಾಳಿನಷ್ಟು ಆಸೆ ಉಳಿಯಲಿಲ್ಲ. ಐಶ್ವರ್ಯದ ಮೇಲೆ ಧಿಕ್ಕಾರ ಭಾವನೆ ಮೂಡಿತು. ಆಗಲೇ ಕಟುತರವಾದ ವಿರಕ್ತಿಯನ್ನು ತಳೆದುಬಿಟ್ಟನು. ನಡುರಾತ್ರಿಯಲ್ಲಿಯೇ ತನ್ನ ಪಟ್ಟದರಾಣಿಯಾದ ಗಂಗಾಂಬಿಕೆಯನ್ನೆಬ್ಬಿಸಿದ. ಅವಳಿಗೂ ತನ್ನ ನಿರ್ಧಾರವನ್ನು ಸೂಚಿಸಿ ಅವಳ ಮನವನ್ನು ಸಿರಿ, ಸಂಪತ್ತುಗಳಿಂದ ಮುಕ್ತಗೊಳಿಸಿದನು. ಅರಸನ ಉಪದೇಶ ಅವಳ ಮನಸ್ಸಿಗೆ ಹಿಡಿದು ಕೂಡಲೇ ತನ್ನ ಮೈಮೇಲಿನ ಮುತ್ತು ರತ್ನದ ಆಭರಣಗಳನ್ನು ಬಿಚ್ಚಿಟ್ಟಳು. ನಂತರ ತನ್ನ ಒಡಹುಟ್ಟಿದ ತಂಗಿಯನ್ನು ಕರೆದು ಅವಳಿಗೂ ತನ್ನ ಮಾರ್ಗವನ್ನು ತಿಳಿಸಿ, ಅದೇ ಕ್ಷಣವೇ, ತಮ್ಮ ಸಿರಿ, ಸಂಪತ್ತು ಅರಸೊತ್ತಿಗೆಯನ್ನೆಲ್ಲ ತ್ಯಾಗ ಮಾಡಿ, ತಾವು ಮೂವರ ಮೊದಲಿನ ಹೆಸರನ್ನು ಸಹ ತ್ಯಜಿಸಿ ನೂತನ ಹೆಸರುಗಳನ್ನು ನಾಮಕರಣ ಮಾಡಿಕೊಂಡರು. ಮಹದೇವರಾಜನು ಮಾರಯ್ಯನಾದನು. ಹೆಂಡತಿ ಗಂಗಾಂಬಿಕೆ, ಮಹದೇವಿಯೆಂಬ ಹೆಸರನ್ನು ತಳೆದಳು ಮತ್ತು ತಂಗಿ ನಿಜದೇವಿ ಎಂಬ ಹೆಸರನ್ನು ತೆಗೆದುಹಾಕಿ ಬೊಂತಾದೇವಿಯೆಂಬ ನವೀನ ನಾಮ ಧರಿ

ಸಿದಳು. ಈ ರೀತಿಯಾಗಿ ಮೂವರು ಮಾರ್ಪಾಟಾಗಿ ತಮ್ಮ ಮೊದಲಿನ ಭೋಗ ಸಂಪತ್ತುಗಳನ್ನೆಲ್ಲ ತೃಣಸಮಾನವೆಂದು ಭಾವಿಶಿ, ಕಾಯಕವನ್ನೇ ತಮ್ಮ ನಿತ್ಯ ಜೀವನದ ವೃತ್ತಿಯನ್ನಾಗಿ ನಿರ್ಧಾರ ಮಾಡಿಕೊಂಡು ಕಲ್ಯಾಣದ ಹಾದಿ ಹಿಡಿದ್ದಿದ್ದರು.

ನಮ್ಮ ಮಾರಯ್ಯ ಪ್ರಿಯನು ಅನೇಕ ಕಷ್ಟನಷ್ಟಗಳನ್ನು ಸಹನರೀತಿಯಿಂದ ಎದುರಿಸುತ್ತ ನಡೆದುಕೊಂಡೇ ತನ್ನ ಪತ್ನಿ ಹಾಗೂ ಸಹೋದರಿಯೊಂದಿಗೆ ಕೊನೆಗೆ ಕಲ್ಯಾಣ ಪಟ್ಟಣಕ್ಕೆ ಬಂದು ತಾನೇ ಒಂದು ಚಿಕ್ಕಟ್ಟಾದ ಪರ್ಣಕುಟೀರವನ್ನು ಕಟ್ಟಿ ಕಾಯಕವೃತ್ತಿಯನ್ನು ಕೈಕೊಂಡಿದ್ದಾನೆ. ಪ್ರತಿನಿತ್ಯವೂ ಮಾರಯ್ಯನು ಬೆಳಗ್ಗೆ ಎದ್ದು ಅರಣ್ಯಕ್ಕೆ ಹೋಗಿ ಉರುವಲು ಕಟ್ಟಿಗೆಗಳನ್ನು ಸಂಕಲಿಸಿಕೊಂಡು (ಸಂಪಾದಿಸಿಕೊಂಡು) ಬಂದು ಪೇಟೆಯಲ್ಲಿ ಆ ಕಟ್ಟಿಗೆಗಳನ್ನು ಮಾರಿ ಬಂದ ಹಣವನ್ನು (ಕೂಲಿಯನ್ನು) ಮನೆಗೆ ತಂದು ಅದರಿಂದ ಉಪಜೀವನ ಸಾಗಿಸುತ್ತಿರುವನು. ಅದೇ ಕೂಲಿಯ ಹಣದಿಂದಲೇ ದಾಸೋಹ ನಡೆಸುತ್ತಿದ್ದಾನೆ. ವಿಚಿತ್ರಲೀಲೆ. ಅರಸನ ಮೇಲೆ ಬಂದ ಕಠಿಣ ಪರಿಣಾಮವು ಎಷ್ಟೆಂದು ಹೇಳಲಾರೆ. "ಕಾಯಕವೇ ಕೈಲಾಸ'' ವೆಂಬುದು ಮಾರಯ್ಯನ ಪ್ರೀತಿಯ ಪಲ್ಲವಿಯಾಗಿ ಹೋಗಿತ್ತು. ಕಾಯಕದಿಂದಲೇ ತನಗೆ ಮುಕ್ತಿ ಎಂಬುದು ಅವನ ಒಳಮನಸ್ಸಿಗೆ ನಾಟಿತ್ತು. ಅಂತೆಯೇ ಒಳ್ಳೆಯ ಶ್ರದ್ಧೆಯಿಂದ ಸಂಪೂರ್ಣ ಮನಸ್ಸಿನಿಂದ ಈ ವೃತ್ತಿಯನ್ನು ಎಳ್ಳಷ್ಟು ಬೇಸರವಿಲ್ಲದೆಯೇ ಮಾಡುತ್ತಲಿದ್ದಾನೆ. ಅವನ ದಾಸೋಹ ಯಾವ ಆತಂಕವಿಲ್ಲದೆಯೇ ಅವ್ಯಾಹಿತವಾಗಿ ಸಾಗಿದೆ. ಆದರೆ ಮಾರಯ್ಯ ನಾಳೆನಾಡವೆಂದು ಒಂದು ಕಾಸನ್ನು ಸಹ ಕೂಡಿಡಲಿಲ್ಲ ಮತ್ತು ಪರರ ಸೊತ್ತಾದ ಒಂದು ಕಟ್ಟಿಗೆಯ ತುಂಡನ್ನು ಈ ನಮ್ಮ ಮಾರಯ್ಯ ದಂಪತಿಗಳು ಮುಟ್ಟುತ್ತಿರಲಿಲ್ಲ. ದಾಸೋಹದಲ್ಲಿ ಜಂಗಮರು ಸಂತೃಪ್ತಿಯಿಂದ ಊಟ ಮಾಡಿದನಂತರ ಇವರ ಮನಸ್ಸಿಗೆ ತೃಪ್ತಿ. ಈ ಕೆಲಸದಲ್ಲಿ ಒಬ್ಬರಿಗೊಬ್ಬರು ಬೇಸರವಿಲ್ಲದೆ ಹುರುಪಿನಿಂದ ಕಾಲವನ್ನು ಕಳೆಯುತ್ತಿದ್ದರು.

ಕಾಶ್ಮೀರ ಅರಸ ಮಾರಯ್ಯನ "ಕಾಯಕದ" ವಾರ್ತೆ ಎಲ್ಲ ಶಿವಶರಣ ಶರಣೆಯರಿಗೂ ಮುಟ್ಟಬೇಕಾದರೆ ಬಹಳ ತಡವಾಗಲಿಲ್ಲ. ಒಬ್ಬರಿಂದೊಬ್ಬರಿಗೆ ಈ ವಾರ್ತೆ ತಲುಪುತ್ತ ಕೊನೆಗೆ ಬಸವಣ್ಣನ ಕರ್ಣಕ್ಕೂ (ಕಿವಿಗೆ) ಮುಟ್ಟಿತು. ಮಾರಯ್ಯನ ಸೇವೆ, ಸಭ್ಯ ನಡತೆ, ವಿನಯ ಉಪಚಾರಗಳಿಂದ ತೃಪ್ತಿಯಾಗಿದ್ದ ಜಂಗಮ ಮೂರ್ತಿಗಳು, ಮಾರಯ್ಯನ ಗುಣಗಾನವನ್ನು ಬಸವಣ್ಣ

ನವರೆಡೆಗೆ ಬಂದು "ಬಸವಣ್ಣಾ, ಭಕ್ತಿಭಂಡಾರಿ ಬಸವಣ್ಣಾ ಇಂದು ಮಾರಯ್ಯ ನಮಗೆ ಅಂಬಲಿಯನ್ನು ಊಟಕ್ಕೆ ಬಡಿಸಿದ, ಆ ಸವಿ ಅಮೃತ ದಂತಿತ್ತು." ಎಂದು ಮಾರಯ್ಯನ ಶಿವಭಕ್ತಿಯನ್ನು ಕೊಂಡಾಡಿದರು. ಈ ಸುದ್ದಿಯನ್ನು ಕೇಳಿ ಮೊದಲಿಗೆ ದಯಾ ಪರಮಾದರನಾದ ಬಸವಣ್ಣನವರ ಮನಸ್ಸು ಕೋಮಲವಾಯಿತು. ನಮ್ಮ ಶಿವಭಕ್ತರು ಈ ಪರಿಯಿಂದ ಕಷ್ಟ ವನ್ನು ಅನುಭವಿಸುತ್ತಿರುವರೇ ಎಂದು ಮರುಗಿದನು. ಆಗ ಬಸವಣ್ಣನವ ರಿಗೊಂದು ಸೂಕ್ತಿಯೋಚನೆ ಹೊಳೆಯಿತು. ಶಿವಭಕ್ತರ ಬಡತನವನ್ನು ಸ್ವಲ್ಪವಾದರೂ ಹಿಂಗಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಜಂಗಮ ವೇಷಾ ರೂಢನಾಗಿ ಮೋಳಿಗೆಯ ಮಾರಯ್ಯನ ಮನೆಗೆ ಬಂದು, ಲಿಂಗಾರ್ಚನೆಯ ನೆವದಿಂದ ಒಳಗೆ ಹೋಗಿ ಎರಡು ಜಾಳಿಗೆ ಸುವರ್ಣವನ್ನು ಮಜ್ಜನ ಸಾಲೆಯಲ್ಲಿ ಮುಚ್ಚಿಟ್ಟು ಬರುವ ಹಂಚಿಕೆ ಹಾಕಿದನು.

ಬಸವಣ್ಣ ಜಂಗಮ ವೇಷದಿಂದ ಮಾರಯ್ಯನ ಮನೆಗೆ ಬಂದಾಗ ಮಾರಯ್ಯ ಮನೆಯಲ್ಲಿರಲಿಲ್ಲ. ಮಾರಯ್ಯನ ಪತ್ನಿ ಮಹಾದೇವಿ ಜಂಗಮನು ಬಸವಣ್ಣನವರೆಂಬುದನ್ನು ಅರಿಯದೆ ಎಂದಿನಂತೆ ಒಳ್ಳೆಯ ವಿನಯ ಭಕ್ತಿ ಯಿಂದ ಅವರ ಶಿವಾರ್ಚನೆಯನ್ನು ನೆರವೇರಿಸಿದಳು. ಬಸವಣ್ಣ ಹೋಗುವಾಗ ಅಲ್ಲಿರಿಸಿದ್ದ ಸುವರ್ಣ ಮಹದೇವಿಯ ಕಣ್ಣಿಗೆ ಬೀಳಲಿಲ್ಲ. ಹಾಗೆ ಅವಳು ತನ್ನ ಕಾಯಕದಲ್ಲಿ ಆಸಕ್ತಳಾಗಿದ್ದಳು. ಮುಂದೆ ಸ್ವಲ್ಪ ಸಮಯದನಂತರ ಅಡವಿಯಿಂದ ಮಾರಯ್ಯ ಮರಳಿ ಮನಿಗೆ ಬಂದು ಸ್ನಾನ ಮಾಡಿಕೊಂಡು ಶಿವಾರ್ಚನೆಗಾಗಿ ದೇವರ ಮನೆಯಲ್ಲಿ ಬಂದು ನೋಡುತ್ತಾನೆ ಅಲ್ಲಿ ಅಕಸ್ಮಾತ್ತಾಗಿ ಮಜ್ಜನ ಸಾಲೆಯಲ್ಲಿ ಸವರ್ಣ ಕಂಡು, ಒಮ್ಮೆಲೆ ಚಕಿತನಾಗಿ ಒಮ್ಮೆಲೇ ಹೆಂಡ ತಿಯನ್ನು ಕೂಗುತ್ತಾನೆ. ಆಗ ಏನೂ ವಿಷಯ ತಿಳಿಯದ ಮಹಾದೇವಿ ಕೆಲ ಸವನ್ನು ಬಿಟ್ಟು ದೇವರ ಮನೆಗೆ ಓಡಿಬಂದು "ಯಾಕೆ ಸ್ವಾಮಿ ಕೂಗಿದಿರಾ?" ಎಂದು ಆಶ್ಚರ್ಯದಿಂದ ಕೇಳಿದಳು. "ಮಹದೇವಿ ಹೊನ್ನು ಮಣ್ಣಿನ ಹಂಗು ತೊರೆದು ಇಲ್ಲಿ ಬಂದವನಿಗೆ ಯಾರಿಗೂ ತೋರಿಸದಂತೆ ಆಶೆ ಇದು ?" ಎಂದು ಹೇಳಿ ಅಲ್ಲಿದ್ದ ಹೊನ್ನು ತೋರಿಸಿ ಮತ್ತೆ "ಮಹಾದೇವಿ ಈಗ ಇಲ್ಲಿಗೆ ಯಾರು ಬಂದಿದ್ದರು ?'' ಎಂದು ಪುನಃ ಪ್ರಶ್ನೆ ಮಾಡಿದನು. ಮಾರಯ್ಯನ ಪತ್ನಿ ಒಬ್ಬ ಜಂಗಮಮೂರ್ತಿ ಬಂದು ಶಿವಾರ್ಚನೆ ಮಾಡಿಕೊಂಡ ಎಂದು ತಿಳಿ ಸಿದಳು. ಆಗ ಮಾರಯ್ಯನಿಗೆ ಸಂಪೂರ್ಣ ಅದರ ಮರ್ಮ ತಿಳಿದುಬಂದಿತು. ಜಂಗಮನ ವೇಷದಿಂದ ಇಲ್ಲಿಗೆ ನನ್ನನ್ನು ಪರೀಕ್ಷಿಸಲು ಬಂದವನು ಶ್ರೀ ಬಸ

ವಣ್ಣನವರೇ ಎಂಬುದು ಅವರಿಗೆ ತಿಳಿಯಿತು. ಇದನ್ನರಿತ ಮಾರಯ್ಯನ ಮನಸ್ಸಿಗೆ ಸಮಾಧಾನವೆನಿಸಲಿಲ್ಲ. "ದೇವಿ, ನಾವು ಬಸವೇಶ್ವರರ ದೃಷ್ಟಿಯಲ್ಲಿ ಅಷ್ಟೊಂದು ಬಡವರಾದೆವೆ" ಎಂದು ಪರಿತಾಪಗೊಂಡನು. "ಅಯ್ಯೋ ನಾವೆಂಥ ಪಾಪಿಗಳು ಕಾಶ್ಮೀರ ರಾಜ್ಯದ ಎಲ್ಲ ಐಶ್ವರ್ಯವನ್ನು ತ್ಯಜಿಸಿ ಬಸವಣ್ಣನವರಿಂದ ತೀರ ಬಡವರೆಂದೆನಿಸಿಕೊಳ್ಳಲು (ಹೇಡಿಗಳೆಂದು) ನಾವು ಇಲ್ಲಿಗೆ ಬಂದಂತಾಯಿತಲ್ಲಾ ದೇವಿ? ಗುರುಲಿಂಗ ಜಂಗಮಕ್ಕೆ ಸಕಲಸರ್ವಸ್ವವನ್ನು ಅರ್ಪಿಸಿದವನಿಗೆ ಧನವಿಕಾರವೆಲ್ಲಿಂದ ಬಂದಿತ್ತು ? ಇಂದು ಬಸವಣ್ಣನಿಗೇನಾದರೂ ಗುರು ಗಂಟು ಬಿದ್ದಿರುವನೇ" ಎಂದು ಮಾರಯ್ಯ ಬಸವಣ್ಣನನ್ನು ಜರಿದು ಬಳಿಕ ಇಬ್ಬರು ಜಂಗಮ ಮೂರ್ತಿಗಳನ್ನು ಬರಮಾಡಿಕೊಂಡು ಬಸವನಿಟ್ಟು ಹೋದ ಹೊನ್ನ ಜಾಳಿಗೆಗಳನ್ನು ಅರ್ಪಣ ಮಾಡಿಬಿಟ್ಟನು.

ಅದೇ ಕ್ಷಣವೇ ಮಾರಯ್ಯನು ಬಸವಣ್ಣನಲ್ಲಿಗೆ ಹೋಗಿ ಅವರಿಗೆ ಊಟಕ್ಕೆ ಬರಬೇಕೆಂದು ಆಮಂತ್ರಣ ಕೊಟ್ಟು ಬಂದನು. ಅಲ್ಲದೆ ಒಂದು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ಮೂರ್ತಿಗಳಿಗೆ ತಮ್ಮ ದಾಸೋಹಕ್ಕೆ ಊಟಕ್ಕೆ ಬರಬೇಕೆಂದು ಹೇಳಿಬಂದನು. ನಿಯಮಿತ ವೇಳೆಗೆ ಎಲ್ಲರೂ ಊಟಕ್ಕೆ ಬಂದರು. ಆಗ ಕೆಲವರು "ಇವನು ಹೇಗೆ ಇಷ್ಟು ಜನಕ್ಕೆ ಊಟಕ್ಕೆ ಹಾಕುತ್ತಾನೆಯೋ ನೋಡೋಣ" ಎಂದು ತಮ್ಮ ಮನಸ್ಸಿಗೆ ಬಂದಂತೆ ಮಾರಯ್ಯನನ್ನು ಟೀಕಿಸುತ್ತಿದ್ದರು. ಅಷ್ಟರಲ್ಲಿ ಪಂಚಪಕ್ವಾನ್ನ ಉಣಬಡಿಸಿದರು. ಈಗ ಅವರೆಲ್ಲರಿಗೂ ಚಕಿತಾಶ್ಚರ್ಯಗಳು ಏಕಕಾಲದಲ್ಲಿಯೇ ಉಂಟಾದವು. ತಮ್ಮ ತಪ್ಪಿಗಾಗಿ, ಅವರಿಗೆ ತಕ್ಕ ಪ್ರಾಯಶ್ಚಿತವಾಗಿ ಹೋಯಿತು. ಮಾರಯ್ಯ ಬಂದು ಜಂಗಮ ಮೂರ್ತಿಗಳೆಲ್ಲರಿಗೂ ಅವರವರ ಇಚ್ಛಾರ್ಥ ಪದಾರ್ಥ. ಭೋಜನವನ್ನು ಸಾಕಷ್ಟು ತೃಪ್ತಿಯಾಗುವಂತೆ ಒತ್ತಾಯದಿಂದ ಬಡಿಸಿದ್ದ. ಇಷ್ಟಲ್ಲದೆ, ಅಡಿವಿಯಿಂದ ತಂದ ಕಟ್ಟಿಗೆ ತುಂಡುಗಳ ಮೇಲೆ ಪಾದೋದಕವನ್ನು ಹಾಕಿ ಆ ಎಲ್ಲ ಕಟ್ಟಿಗೆಯ ತುಂಡುಗಳನ್ನು ಸುವರ್ಣದಂಡಗಳನ್ನಾಗಿ ಮಾರ್ಪಡಿಸಿ ಬಂದ ಜಂಗಮ ಮೂರ್ತಿಗಳೆಲ್ಲರಿಗೂ ಒಂದೊಂದು ಸುವರ್ಣ ದಂಡಗಳನ್ನು ಕೊಟ್ಟು ಕಳಿಸಿದನು. ಜಂಗಮರೆಲ್ಲ ಮಾರಯ್ಯನ ಶಿವಭಕ್ತಿಯ ಹೆಚ್ಚಳವನ್ನು ಕಂಡು ಸಂತೋಷದಿಂದ ಅವನ ದಿವ್ಯಗುಣಗಳನ್ನು ಹೊಗಳ ತೊಡಗಿದರು. ಎಲ್ಲೆಲ್ಲಿಯೂ ಮೋಳಿಗೆಯ ಮಾರಯ್ಯನ ಶಿವಭಕ್ತಿಯ ವಾರ್ತೆ ಮೂಲೆ ಮೂಲೆಗೂ ಹಬ್ಬಿತು. ಆಗ ಬಸವಣ್ಣನವರ ತಮ್ಮ ತಪ್ಪು ಅರ್ಥವಾಯಿತು. ಮಾರಯ್ಯನ ಶಿವಭಕ್ತಿ, ಕಾಯಕವನ್ನು ಕಣ್ಣಾರೆಕಂಡಿದ್ದನು. ಮಾರಯ್ಯನು

ಹಣದಲ್ಲಿ ಶುಚಿ, ಪ್ರಾಣದಲ್ಲಿ ಕೊಂಚಭಯವಿಲ್ಲ. ಈತನೊಬ್ಬ ಆಶೆ ಇಲ್ಲದ ದೊಡ್ಡ ಮಹಾಪುರುಷನೆಂಬುದು ನನ್ನ ವಿವೇಕಕ್ಕೆ ತಿಳಿಯಲಿಲ್ಲವಲ್ಲಾ! ಎಂದು ತಾಪದಿಂದ ಶೋಕಿಸತೊಡಗಿದನು. ತಾನು ಮಾಡಿದ್ದಕ್ಕಾಗಿ ತಾನೇ ಪಶ್ಚಾತ್ತಾಪಪಟ್ಟನು. ಇಷ್ಟಾದರೂ ಬಸವಣ್ಣನಿಗೆ ಸಮಾಧಾನ, ಶಾಂತಿ ಸಿಗಲಿಲ್ಲ. ಕೂಡಲೇ ಚನ್ನಬಸವಣ್ಣ, ಸಿದ್ಧರಾಮಯ್ಯ ಹಡಪದ ಅಪ್ಪಣ್ಣ ಮೊದಲಾದ ಪ್ರಮುಖರನ್ನು ಕರೆದುಕೊಂಡು ತಾನು ಕ್ಷಮೆ ಬೇಡುವದಕ್ಕಾಗಿ ಮಾರಯ್ಯನ ಮನೆಗೆ ಬಸವಣ್ಣ ಹೋದನು. ಮನೆಯ ಹೊರಗೆ ಬಸವಣ್ಣ ಅನೇಕರೊಡನೆ ನಿಂತಿದ್ದನ್ನು ಕಂಡು ಮಾರಯ್ಯ ಆಶ್ಚರ್ಯನಾದ. ಆದರೂ ಅದನ್ನು ಪ್ರಕಟಮಾಡದೇ ಬಂದ ಮಹಾನುಭಾವರಿಗೆ ಪತಿ, ಪತ್ನಿಯರಿಬ್ಬರೂ ಕೂಡಿಕೊಂಡು ಆದರದಿಂದ ಅವರನ್ನು ಒಳಗೆ ಬರಮಾಡಿಕೊಂಡು ಎಲ್ಲರನ್ನು ಆಸನದಲ್ಲಿ ಕೂಡ್ರಿಸಿದರು. ಆಗ ಬಸವಣ್ಣನವರು ಎದ್ದುನಿಂತು ಮಾರಯ್ಯ, ನಿನ್ನ ಭಕ್ತಿಯ ಆಳವನ್ನರಿಯದೆ (ಕುಳುವನರಿಯದೆ) ಮುನ್ನುಗ್ಗಿ ನಾನು ಕೆಟ್ಟೆ, ತಪ್ಪಾಯಿತು.. ನನ್ನನ್ನು ಕ್ಷಮಿಸುವಿರಾ? ಎಂದು ಆ ದಂಪತಿಗಳಿಗೆ ಬೇಡಿಕೊಂಡ. ಆಗ ಮಾರಯ್ಯ ಬಸವನನ್ನು ಬಿನ್ನೈಸಿ ಹೀಗೆ ನುಡಿಯುತ್ತಾನೆ.

"ಅಯ್ಯಾ, ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರು? ಏರಿ ನೀರು ಕುಡಿದರೆ ಬಿಡಿಸುವವರಿನ್ನಾರು ? ಮಹಾ ಮೇರುವು ನಡೆದರೆ ಪಥಕಿಂಬುಗೊಡುವರಾರು? ಅರಿದವ ಮರೆದವ ನಾಡಿದೆ ಅರಿಕೆಯ ಹೇಳುವವರಾರು ? ನಿಮ್ಮ ನಿಜವೆ ನೀವೆ ಬಲ್ಲಿರಿ. ನಾನಂಜುವೆ ನಿಃಕಳಂಕ ಮಲ್ಲಿಕಾರ್ಜುನಾ" ಎಂದು ಮಾರಯ್ಯ ಶಾಂತದಿಂದ ನುಡಿದುಬಿಟ್ಟನು.

ಶಿವಭಕ್ತಮಾರಯ್ಯನ ಉತ್ತರವನ್ನರಿತ ಬಸವಣ್ಣನ ಭಾರವಾದ ಮನಸ್ಸು ಸಂಪೂರ್ಣ ಹಗುರಾಯಿತು. ಮಾರಯ್ಯನ ಸ್ವಾನುಭಾವದ ಕೀರ್ತಿಯನ್ನು ಕಂಡು ಸಿದ್ಧರಾಮ ಮೊದಲಾದವರೆಲ್ಲ ಆತನ ಕೀರ್ತಿಯನ್ನು ಹೊಗಳುತ ಮನೆಗೆ ಸಾಗಿದರು. ಅಷ್ಟರೊಳಗಾಗಿ ಮಾರಯ್ಯನ ಕೀರ್ತಿಯ ವಾರ್ತೆ ಇಡೀ ಕಲ್ಯಾಣ ಪಟ್ಟಣದ ತುಂಬ ಹರಡಿತು. ಮೊದಲಿಗೆ ಯಾರಿಗೂ ಅರಿಯದಂತೆಯೇ ಕಾಯಕದಿಂದಲೇ ಗುಪ್ತವಾಗಿ ಶಿವಭಕ್ತಿ ಆಚರಿಸುತ್ತಿದ್ದ ಮೋಳಿಗೆಯ ದಂಪತಿಗಳ ವೃತ್ತಾಂತ ಈಗ ಎಲ್ಲರ ನಾಲಿಗೆಯ ಮೇಲೆ ಸುಳಿದಾಡತೊಡಗಿತು. (ಅದೇ ಮಾತು ಯಾರಾದರೂ ಕಾಯಕವನ್ನಾಚರಿಸುವಂತಿದ್ದರೆ ಮೋಳಿಗೆಯ ಮಾರಯ್ಯ ಆಚರಿಸಿದಂತೆ ಆಚರಿಸಬೇಕು. ಇದುವೆ ಮಾನವನ

ಕರ್ತವ್ಯ. ಭಕ್ತಿಯನ್ನು ನಿರೂಪಿಸುತ್ತಿದ್ದರೆ ಮಾರಯ್ಯನಂತೆ ನಿರೂಪಿಸಬೇಕು. ಮಾರಯ್ಯನ ಪ್ರಭಾವದಿಂದ ಕಟ್ಟಿಗೆ ಸುವರ್ಣವಾಯಿತು ಎನ್ನುವ ನುಡಿ ಶರಣರ ನುಡಿಯಾಯಿತು.)

ಈಗ ಮಾರಯ್ಯನಿಗೆ ಬೇರೊಂದು ಹಂಬಲವುಂಟಾಯಿತು. ತನ್ನ ಭಕ್ತಿಫಲ ಸಂಪೂರ್ಣ ಪಕ್ವವಾಗಿದೆ. ಎಂದು ತಿಳಿದು ತಾನು ಇನ್ನು ಲಿಂಗೈಕ್ಯ ನಾಗಬೇಕೆಂದೆನಿಸಿತು ಅವನ ಎದುರಿಗೆ ಬೆಳಕು ಸುಳಿಯಿತು. ಅವನಿಗೆ ನಿತ್ಯದ ರೂಪ ಕಂಡುಬಂದಿತು. ಹೀಗಿರಲು ಒಂದು ದಿನ ಮಾರಯ್ಯ ತನ್ನ ಹೆಂಡತಿಯನ್ನು ಕರೆದು "ಮಹದೇವಿ, ನನಗೆ ಚನ್ನಮಲ್ಲಿಕಾರ್ಜುನನಲ್ಲಿ ಕೂಡಿ ಕೊಳ್ಳುವ ಆಶೆಯಾಗಿದೆ. ಇದಕ್ಕೆ ನಿನ್ನ ಸಮ್ಮತಿ ಇದೆಯೋ" ಎಂದು ಕೇಳಿದನು.

ಇಲ್ಲಿಯವರೆಗೆ ಮಹದೇವಿ "ಎಲೆಯ ಹಿಂದಿನ ಹೂವಿನಂತೆ" ಇದ್ದಳು. ಗಂಡನ ಈ ಪ್ರಶ್ನೆ ಅವಳಿಗೆ ಸರಿಕಾಣಲಿಲ್ಲ. ಲಿಂಗೈಕ್ಯನಾಗುವ ವಿಚಾರವನ್ನು ಗಂಡನಿಂದ ದೂರು ಮಾಡಬೇಕೆಂದು ಬಗೆದು ಪತಿಪತ್ನಿಯರ ಸಂಬಂಧವನ್ನು ತ್ಯಜಿಸಿ ಸತಿಗೆ ತಾನೆ ಗುರುವಾಗಿ ಉಪದೇಶಿಸತೊಡಗಿದಳು. "ಬಸವಣ್ಣನವ ರಂತೆ ಭಕ್ತರಿಗೆ ಉಪದೇಶ ಹೇಳಲು ಮಾಡಿದ ನಿಮ್ಮ ಮನಸ್ಸು ಈಗೆಲ್ಲಿ ಹೋಯಿತು? ಅರಸೊತ್ತಿಗೆ ಸಂಪತ್ತು ತ್ಯಜಿಸಿ ಬರುವಾಗ ಅಪಾರವಾಗಿ ಇದ್ದ ಶಿವಭಕ್ತಿಯ ಕೋಶ ಈಗ ಸಡಿಲಾಯಿತೇ ? ಕಟ್ಟಿಗೆಯನ್ನು ಸುವರ್ಣ ಮಾಡಿದೆನೆಂಬುದೇ ನಿಮಗೆ ಹೀಗೆ ನುಡಿಸೀತೆ? ಎಂದು ನಿಂತಿರುವ ನಿಜವಾದ ಐಕ್ಯದ ಅರಿವನ್ನ ಮಾಡುವದಕ್ಕಾಗಿ ಮತ್ತೆ "ನಿಮ್ಮ ಭಕ್ತಿ ಕೈಕೂಲಿಯೇನು? ಜ್ಯೋತಿಗೆ ತಮದ ಭೀತಿಯೇ? ಪರಿಪೂರ್ಣವಸ್ತುವಿಗೆ ಗಮನಾಗಮನ ವುಂಟೇ? ನೀವೇ ತಿಳಿದುನೋಡಿರಿ" ಹೆಂಡತಿ ಹೇಳುವ ಮಾತು ಮಾರಯ್ಯ ನಿಗೆ ಸರಿಯೆನಿಸಿತು. ಆದರೂ ಮನಸ್ಸು ಬದಲಿಸಲಾರ. ಅದಕ್ಕಾಗಿ ಮಹಾ ದೇವಿಗೆ" ಎನ್ನ ಸತ್ಯಕ್ಕೆ ಎನ್ನ ಮನಕ್ಕೆ ಎನ್ನ ಮುಕ್ತಾಂಗನೇ, ನನ್ನ ನಿಶ್ಚ ಯಕ್ಕೊಂದು ದಾರಿ ತೋರಾ? ಮಲ್ಲಿಕಾರ್ಜುನ ಎಲ್ಲಿರುವ ಹೇಳು? ಅದಕ್ಕೆ ಮಹಾದೇವಿ ಶಾಂತದಿಂದ "ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನೆಂಬವರು ನೀವೇ ದೇವಾ" ಎಂದು ನುಡಿದ ತನ್ನದೇ ಆದ ಕಾವ್ಯವಾ ಣಿಯಲ್ಲಿಯೇ ಅದರ ವಿವರಣೆ ತಿಳಿಸುತ್ತಾಳೆ.

"ಗುರುವಿಗೆ ತನು ಹೋಯಿತ್ತು, ಲಿಂಗಕ್ಕೆ ಮನಹೋಯಿತ್ತು, ಜಂಗಮಕ್ಕೆ ಧನ ಹೋಯಿತ್ತು. ಇಂತೀ ಎಲ್ಲ ಲಕ್ಷದಲ್ಲಿ ಲಕ್ಷಿಸಿ ನೀವು ಕೈಲಾಸಕ್ಕೆ ಹೋದಿರೆಂಬ ಕಲ್ಲೆದೆಗೆ ನಾನಂಜುವೆನು. ಎನ್ನಯ ಪ್ರೀಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.

ಕಾಯದ ಭ್ರಮೆಯಿಂದ ಕೈಲಾಸ, ಜೀವನ ಭ್ರಮೆಯಿಂದ
ಮಹೆರಕೂಟವೆಂಬುದು, ಕಾಲದ ಜೀವದ ಭೇದವನರಿತಿಲ್ಲ.
ಅತ್ತಲಿತ್ತಲೆಂದು ಮತ್ತೆ ಹೆಲುಬಲಿಲ್ಲ ಇದು ನಿಶ್ಚಯದ ಕೂಟ
ಎನ್ನಯ ಪ್ರೀಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.

ಹೀಗೆ ಅನೇಕ ವಿಧವಾಗಿ ಮಹಾದೇವಿ ತನ್ನ ಕಾವ್ಯವಾಣಿ ಝರಿಯಿಂದ ಪತಿಗೆ ನಿಜೈಕ್ಯದ ನಿರ್ಣಯ ತೋರಿಸಿದಳು. ಆದ ಆನಂದದಿಂದ ಮಾರಯ್ಯ "ನೀನು ನನಗೆ ಗುರುವಾಗಿ ಬಂದೆ. ನಿನ್ನ ಭಕ್ತಿ ನನ್ನ ಸತ್ಯದ ಬೆಳೆ" ಎಂದು ನುಡಿದು, ಒಪ್ಪಿ ಶಿವಾನುಭವ ಆಚರಿಸತೊಡಗಿದನು. ಮುಂದೆ ಬಿಜ್ಜಳನ ಅವಿವೇಕದಿಂದ ಕಲ್ಯಾಣ ಹಾಳಾಗಿ ಅನುಭವ ಮಂಟಪದ ಶರಣರು ಚಲ್ಲಾಪಿಲ್ಲಿಯಾದರು. ಆದರೆ ಮೋಳಿಗೆಯ ದಂಪತಿಗಳು ಕಲ್ಯಾಣ ಬಿಡಲಿಲ್ಲ. ಮಾರಯ್ಯನಿಗೆ ಬಿಡುವ ಆಶೆ ಮೊದಲು ಬಂದಿತ್ತು. ಪತ್ನಿಯು "ಅಲ್ಲೆ ಇಲ್ಲೆಂಬ ಗೆಲ್ಲುಗೂಳಿತನ ಬೇಡಿರಿ" ಎಂದು ನುಡಿದ ಮಹಾದೇವಿಯ ನುಡಿಗೆ ಅದನ್ನು ಬಿಟ್ಟುಬಿಟ್ಟನು. ಕಲ್ಯಾಣದಲ್ಲಿಯೇ ಇದ್ದು ಮುಂದೆ ವಚನಕಾರ್ತಿಯಾಗಿ ವಚನಗಳ ರಾಶಿಯನ್ನೇ ನಾಡುನುಡಿಯಲ್ಲಿ ಸಾಹಿತ್ಯಕ್ಕೆ ಅರ್ಪಿಸಿದ್ದಾರೆ. ಭೋಗ, ಸಿರಿ, ಬಿಟ್ಟು ಕಾವ್ಯಯೋಗಿನಿಯಾಗಿ ಬೊಂತಾದೇವಿಯೊಂದಿಗೆ ಕನ್ನಡ ನಾಡನ್ನು ಉದ್ಧರಿಸುವದರಲ್ಲಿ ಟೊಂಕಕಟ್ಟಿ ಎಲ್ಲರನ್ನು ಉದ್ಧರಿಸಿ. ಆದರ್ಶ ಶಿರೋಮಣಿಯೆನಿಸಿದಳು. ಈ ವೀರಶೈವ ದಂಪತಿಗಳು ಕಲ್ಯಾಣದ ಹತ್ತಿರದ ಹಳ್ಳಿಯಲ್ಲಿ ಶಿವಾಧೀನರಾಗಿ ಹೋಗಿದ್ದಾರೆ.

—ಆಧಾರದಿಂದ.

# ವೀರಶೈವ ಮಹಾಸಭೆಗೆ ಸೂಚನೆಗಳು.

( ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. )

ವೀರಶೈವ ಮಹಾಸಭೆಯನ್ನು ಶಿವಯೋಗಮಂದಿರದಲ್ಲಿ ಈ ಸಲ ಕರೆದದ್ದು ಒಂದು ಶುಭವೇ ಸರಿ. ವೀರಶೈವವು ವಿಶ್ವಧರ್ಮವಾಗಲಿಕ್ಕೆ ಬಹು ಯೋಗ್ಯವೆಂದು ಎಲ್ಲರ ಅಭಿಪ್ರಾಯವಿರುವದು. ಶಿವಭಕ್ತರನ್ನೆಲ್ಲ ಒಂದೇ ಎಂಬೆ ಲಿಂಗಾಂಗಿಗಳೆಲ್ಲ ಒಂದೇ ಎಂಬೆ ಎಂಬಂತೆ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು ಎಲ್ಲ ವೀರಶೈವರಿಗೆ ಇರುವವು. ಇದರಂತೆ ಭಕ್ತ, ಮಹೇಶ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವರಿಗೂ ಇವು ಸಮಾನವಾಗಿಯೇ ಇರುವವು. ಇವುಗಳಂತೆ ಸಾಧನೆ ಮಾಡಿ ಪ್ರತಿಯೊಬ್ಬರೂ ಯೋಗ್ಯತೆ ಬಂದಂತೆ ಮುಂದಿನ ಮೇಲಿನ ಸ್ಥಾನಕ್ಕೆ ಹೋಗಲಿಕ್ಕೆ ಬರುವದೆಂದು ವೀರಶೈವವು ಬೋಧಿಸುವದು. ಎಲ್ಲರೂ ಮೊದಲು ಭಕ್ತರೇ ಸರಿ. ಯಾರೂ ಜಾತಿಯಿಂದ ಹೆಚ್ಚಲ್ಲ ಕಡಿಮೆಯಲ್ಲ. ಇದನ್ನು ಅನುಲಕ್ಷಿಸಿ ಶರಣರು ಒಳ್ಳೇ ಪದ್ಧತಿ ಹಾಕಿ ಗುರು-ವಿರಕ್ತ, ಚರ-ಪಟ್ಟ, ಭಕ್ತ-ಮಹೇಶ, ಬಸವ-ಪಂಚಾಚಾರ್ಯ ಮೊದಲಾದ ಹೊಡದಾಟಗಳಿಲ್ಲದಂತೆ ನಡೆಯುತ್ತ ಬಂದಿದ್ದರು. ಈ ನಡುವಿನ ಕಾಲದಲ್ಲಿ ಇಲ್ಲಿಯತನಕ ನಮ್ಮಲ್ಲಿ ಐಕ್ಯಮತ್ಯವಿಲ್ಲ. ಎಲ್ಲರೂ ಬಡದಾಡಿ ನಮ್ಮ ಧರ್ಮದಲ್ಲಿ ಅನೈಕ್ಯತೆ ಉಂಟಾಗಿ ಯಾವ ಲಾಭವಿಲ್ಲದೆ ಹಾನಿಗೊಳಗಾಗಿ ನಮಲ್ಲಿ ಅನೇಕ ಬಣಗಳಾಗಿವೆ. ಈ ಶೋಚನೀಯ ಸ್ಥಿತಿಯನ್ನು ಹೋಗಲಾಡಿಸಲು ಈ ವೀರಶೈವ ಮಹಾಸಭೆಯು ನಿರ್ಮಾಣವಾಗಿದೆ. ಆದರೂ ಈ ಮಹಾ ಸಭೆಯಿಂದ ಯಾವ ಕಾರ್ಯವಾಗಿಲ್ಲ. ಇನ್ನು ಮಾತ್ರ ಶರಣರ ತತ್ವದಂತೆ ಯೋಗ್ಯದೆಶೆಯಲ್ಲಿ ಎಲ್ಲರೂ ಕಾರ್ಯಮಾಡಲಿಕ್ಕೆ ಪ್ರವೃತ್ತರಾಗದ ಹೊರತು ಗತಿಇಲ್ಲ. ಅಂದರೆ ಮಾತ್ರ ನಮ್ಮ ಧರ್ಮಬಾಳಿ ಉಳಿದು ಬೆಳೆದು ಕಳೆಗೊಂಡು ಮೆರೆಯುವದರಲ್ಲಿ ಸಂದೇಹವಿಲ್ಲ. ಈಗಿನ ಜನಜಾಗ್ರತೆಯ ಕಾಲದಲ್ಲಿ ಹಿಂದಿನಂತೆ ಮೂಢನಂಬಿಗೆಗೆ ಅಂಧಶ್ರದ್ಧೆ ಅಂಧಾನುಕರಣದಿಂದ ಯಾರೂ ವರ್ತಿಸುವದು ಇನ್ನು ಮಾತ್ರ ಶಕ್ಯವಿಲ್ಲ. ಆದಕ್ಕೆ ಎಲ್ಲರೂ ಜಾಗ್ರತರಾಗಿ ಶರಣರ ತತ್ವದಂತೆ ಎಲ್ಲರಿಗೂ ಸಮಾನ ಹಕ್ಕು ಸಮಾನ ಧರ್ಮಗಳನ್ನು ಕೊಡಲಿಕ್ಕೆ ಹೆಣಗಬೇಕು.

ಈ ಜಾತಿಯ ಗುರುತ್ವ ಅಥವಾ ರೂಢಿಯ ಗುರುತ್ವಗಳು ಅವಶ್ಯ ಹೋಗಬೇಕು. ಇದರಿಂದಲೇ ನಮ್ಮಲ್ಲಿ ಅನೈಕ್ಯತೆಯುಂಟಾಗಿದೆ ಅಲ್ಲದೆ ಇದರ

ವಿರುದ್ಧ ಹೋರಾಡಲು ಹೊಸ ಅನೇಕ ಮಠಗಳೂ ಸಿಂಹಾಸನಗಳೂ ಅಧಿಕಾರಿಗಳೂ ಸಿದ್ಧರಾಗಿದ್ದಾರೆ. ಹೀಗಾಗುವದಕ್ಕಿಂತ ಮೊದಲೇ ಉಳಿದವರು ಜಾಗ್ರತರಾಗಿ ಎಲ್ಲರಿಗೂ ಸಮಾನ ಹಕ್ಕು ಕೊಟ್ಟರೆ ನಿಮ್ಮನ್ನು ಎಲ್ಲರೂ ಹಾಡಿಹರಿಸುವರು. ಈಗ ವೀರಶೈವರಲ್ಲಿಯು ಕೆಲವು ಆಧ್ಯಾತ್ಮಿಗಳು ಪಾರಮಾರ್ಥದ ಕಡೆಗೆ ಬಲವುಳ್ಳವರು ಅನ್ಯರು ಸ್ಥಾಪಿಸಿದ ಪಂಥ, ತತ್ವ ಮತಗಳಂತೆ ನಡೆಯುವದು ಹೆಚ್ಚಾಗಿದೆ. ಹೀಗಾಗಿ ನಮ್ಮಲ್ಲಿ ಜನಸಂಖ್ಯೆ ಕಡಿಮೆಯಾಗುತ್ತ ನಡೆದಿದೆ ಉದಾಹರಣೆಗಾಗಿ ಇಂಚಗೇರಿ ಸಮಾಜಕ್ಕೆ ಅನೇಕರು ಸೇರಿದ್ದಾರೆ. ಅವರು ವೀರಶೈವಾಚಾರವನ್ನೇ ಬಿಟ್ಟಿದ್ದಾರೆ ಆದರಂತೆ ಮುನಿ ಸಮಾಜಕ್ಕೆ ಅನೇಕರು ಸೇರಿದ್ದಾರೆ, ಅಲ್ಲದೆ ಅರವಿಂದ ಸಮಾಜಕ್ಕೆ ಸೇರಿ ವೀರಶೈವವನ್ನೇ ಮರೆತಿದ್ದಾರೆ. ಇವರೆಲ್ಲರೂ ವೀರಶೈವ ಗುರುಗಳನ್ನು ಮನ್ನಿಸುವದಿಲ್ಲ. ಇದಕ್ಕೆಲ್ಲ ನಮ್ಮಲ್ಲಿಯ ವಿಷಮತೆಯೇ ಕಾರಣ. ಉಳಿದವರಿಗೆ ಕೆಳಗಿನವರೆಂಬ ಭೇದಭಾವದಿಂದ ಈಗಿನ ಗುರುವರ್ಗದವರೂ ವರ್ತಿಸುವದೇ ಕಾರಣ. ಎಲ್ಲ ವೀರಶೈವರಿಗೆ ಸಮಾನಹಕ್ಕು ಬಾಧ್ಯತೆಗಳನ್ನು ಕೊಟ್ಟರೆ ಅವರೆಂದೂ ಅನ್ಯಸಮಾಜದ ಕಡೆಗೆ ಹೋಗುವದೇ ಇಲ್ಲ. ಇನ್ನೂ ಇವುಗಳಲ್ಲದೆ ಅನೇಕ ಅನ್ಯಗುರುಗಳ ಕಡೆಯಿಂದ ಉಪದೇಶಪಡಕೊಂಡು ಅವರ ತತ್ವ ವಿಚಾರಗಳಂತೆ ನಡೆಯುವ ಅನೇಕ ಮತಗಳಿರುವವು. ಇದಕ್ಕೆಲ್ಲ ಈಗಿನ ರೂಢಿಯು ಜಾತಿಯು ಗುರುತ್ವದ ಪದ್ಧತಿಯೇ ಕಾರಣವೆಂದು ಧಾರಾಳವಾಗಿ ಹೇಳಬಹುದು. ಹೀಗಾಗಿ ಕೆಲಕಾಲದ ಮೇಲೆ ವೀರಶೈವರೆಲ್ಲ ಪರಕೀಯರ ಮತಗಳಂತೆ ನಡೆಯಹತ್ತಿದರೆ ಮುಂದೆ ಯಾರ ಮೇಲೆ ಇವರು ಗುರುತ್ವದ ಅಧಿಕಾರವನ್ನು ನಡೆಸುವರೋ ತಿಳಿಯದಾಗಿದೆ. ಇದೂ ಅಲ್ಲದೆ ಅನೇಕ ಅದ್ವೈತ ಸಂಗಡಗಳೂ ಹಳ್ಳಿಹಳ್ಳಿಗೆ ಇರುವವು. ಅವರೆಲ್ಲ ಪಂಚೀಕರಣ ವಿಚಾರ ಚಂದ್ರೋದಯ ಪಂಚರತ್ನ ಜ್ಞಾನಸಿಂಧುಗಳನ್ನು ಅಭ್ಯಾಸ ಮಾಡಿ ಆ ಅದ್ವೈತ ಪದ್ಧತಿಯ ಗುರುಗಳ ಕಡೆಯಿಂದ ಉಪದೇಶ ಪಡಕೊಂಡು ಶಿಷ್ಯರಾಗಿ ಈಗಿನ ನಮ್ಮ ಜಾತಿ ಅಥವಾ ರೂಢಿಯ ಗುರುಗಳನ್ನು ಜರೆದು ಮರೆತು ಬಿಡುತ್ತಿರುವದೂ ಸಹ ಕಂಡುಬಂದಿದೆ. ಬಹುತರ ಖಾನೇಸುಮಾರಿಯು ಲಿಂಗಾಯತರೇ ಬಹಳಷ್ಟು ಇದ್ದಾರೆ. ಈ ಅದ್ವೈತ ಪಂಥಗಳೆಂದರೆ ಸಿದ್ಧಾರೂಢ ಪಂಥ, ರಾಮಾರೂಢ ಪಂಥ, ಸಂತ ಸಮಾಜ, ಸಾಯಿಬಾಬಾ ಸಮಾಜ, ಮೇಹೆರ ಸಮಾಜ ಮೊದಲಾದವುಗಳಿರುವವು. ಇವುಗಳಿಗೇಕೆ ಜನ ಹೆಚ್ಚಾಗಿ ಹೋಗುವರು? ಇದನ್ನು ಯಾವ ಧಾರ್ಮಿಕ ಈಗಿನ ಗುರುಗಳು

ವಿಚಾರಿಸಿದ್ದಾರೆ. ತಿಳಿಸಿ ನೋಡುವಾ? ಹೀಗಾದರೆ ನಮ್ಮ ಸಿಂಹಾಸನ ನಮ್ಮ ಗುರುತ್ವಗಳು ಮುಂದೆ ಯಾರ ಮೇಲೆ ನಡಿಸುವದು ವಿಚಾರಿಸಬಾರದೆ?

ಹೀಗೆ ಆಗಲಿಕ್ಕೆ ವೀರಶೈವರಲ್ಲಿ ಜಾತಿಭೇದ ಮಾಡಿದ್ದೇ ಕಾರಣ. ಒಂದೇ ಜಾತಿಗೆ ಗುರುವಿನ ಗುತ್ತಿಗೆಯನ್ನು ಕೊಟ್ಟದ್ದೇ ಮುಖ್ಯ ಕಾರಣ, ಅನ್ಯರಾರೂ ಗುರುತ್ವಕ್ಕೆ ಏರಬಾರದೆಂಬ ಕಲ್ಪನೆಯೇ ಇದಕ್ಕೆ ಮುಖ್ಯ ಕಾರಣ. ಜಾತಿಯ ವಿಷದ ಬೀಜದಿಂದ ಹೀಗೆ ನಮ್ಮ ಸಮಾಜ ಹಾಳಾಗುತ್ತಿರುವದಕ್ಕೆ ಕಾರಣವಾಗಿದೆ. ಎಲ್ಲರಿಗೂ ಸಮಾನ ಹಕ್ಕು ಧರ್ಮದಲ್ಲಿ ಕೊಟ್ಟರೆ ಯಾರೂ ಅನ್ಯ ಸಮಾಜದಲ್ಲಿ ಅನ್ಯ ಮತಪಂಥದಲ್ಲಿ ಎಂದೂ ಹೋಗುವದೇ ಇಲ್ಲ ಅಲ್ಲದೆ ಹೊರಗಿನ ಮತಸಂಥದವರೂ ಕೂಡ ನಮ್ಮಲ್ಲಿ ಬಂದು ಸಹಜ ಸೇರುವರು. ಅದಕ್ಕೆ ಈಗಿನ ಗುರುಪದ್ಧತಿ ಮೊದಲು ಹೋಗಬೇಕು. ಇದಕ್ಕೆ ಈಗ ಕಾಲ ಒಳ್ಳೇ ಪಕ್ವವಾಗಿದೆ. ಹೇಗಂದರೆ– ಶಿವಯೋಗ ಮಂದಿರ ಮತ್ತು ಕಾಶಿಯ ಜಂಗಮವಾಡಿಯ ಮಠದಲ್ಲಿ ಈಗಿನ ಪದ್ಧತಿಯಂತೆ ಬರೇ ಅಯ್ಯಗಳ ವಟುಗಳನ್ನೇ ಕಲಿಸಲಿಕ್ಕೆ ತಕ್ಕೊಳ್ಳದೆ ವೀರಶೈವ ಎಲ್ಲ ಜಾತಿಯ ಯೋಗ್ಯ ಸುಶಿಕ್ಷಿತ ವಟುಗಳನ್ನು ತಕ್ಕೊಂಡು ಶರಣರ ತತ್ವಗಳಂತೆ ಅವರಿಗೆ ಸರಿಯಾದ ಶಿಕ್ಷಣಕೊಟ್ಟು ಸರಿಯಾದ ಸಾಧನಮಾಡಿಸಿ, ಮುಂದೆ ಮಠಗಳಿಗೆ ಅಧಿಕಾರಿಗಳನ್ನಾಗಿ ಮಾಡುತ್ತಹೋದರೆ ಈಗಿನ ವಿಷಮತೆ, ಭೇದಗಳು ತಾವೇ ಅಡಗುವವು. ಅದರಂತೆ ವೀರಶೈವ ಮುಖಂಡರು ಅಧ್ಯಕ್ಷರು ಕಮೀಟಿಯವರು ಮೊದಲಾದ ಮುಂದಾಳುಗಳು ಈ ತತ್ವದಂತೆ ನಡೆಯಬೇಕೆಂದು ಒಂದು ನಿಯಮವನ್ನು ಪಾಸು ಮಾಡಿ ಶಿವಯೋಗಮಂದಿರ ಜಂಗಮವಾದಿ ಮಠಗಳ ಕಾಯ್ದೆಯಲ್ಲಿ ತಿದ್ದುಪಡಿ ಮಾಡಿ ಈ ಹೊಸ ಕಾಯ್ದೆಯನ್ನು ಸೇರಿಸಬೇಕು. ಅದರಂತೆ ಚಾಚು ತಪ್ಪದೆ ನಡೆಯಬೇಕು. ಇಲ್ಲವಾದರೆ ಇಂದಿಲ್ಲ ನಾಳೆ ಕ್ರಾಂತಿಯ ಕೆಂಧೂಳಿ ಎದ್ದೇಳುವದು. ಆಗ ಈಗಿನ ಗುರುವರ್ಗವು ಅದರ ಬಗ್ಗೆ ಮಿಡಿಕಿದರೆ ಪ್ರಯೋಜನವೆಂದಿಗೂ ಆಗಲಾರದು. ಪ್ರೇಮ ಸಮಾನತೆಗಳು ಎಂದು ಈಗಿನ ಗುರುವರ್ಗದಲ್ಲಿ ಉದಿಸುವರೋ ಆಗಮಾತ್ರ ಅವರಿಗೂ ಸೌಖ್ಯ, ಸಮಾಜಕ್ಕೂ ಸುಖ, ನಾಡಿಗೂ ಕಲ್ಯಾಣ. ವೀರಶೈವ ಮಹಾಸಭೆಯು ಬರೇ ಫಾರ್ಸಿನಂತೆ ಆಗಬಾರದು ನಿಜವಾದ ಶರಣರ ತತ್ವಪ್ರಚಾರ ಮಾಡುವದು ಅತಿ ಅವಶ್ಯ. ಹೀಗೆ ಹೇಳಿದರೆ ಕೆಲವರು ಸಿಟ್ಟಾಗಬಹುದು. ಇದರಲ್ಲಿ ಯಾರಿಗೆ ಅನ್ಯಾಯವಾಗುವದು ? ಅನ್ಯಾಯ ಮಾಡಬಾರದೆಂದು ಹೇಳಿದರೆ ಸಿಟ್ಟಾಗುವದು ಸರಿಯಲ್ಲ ಧರ್ಮದ ಬಗ್ಗೆ ಕಳಕಳಿ ಇದ್ದವರು ಧರ್ಮ ಹಾಳಾಗುತ್ತಿರುವದನ್ನು ಕಣ್ಣಿನಿಂದ ಕಂಡ ಕನಿಕರಪಡುವವರಿಗೆ ಇದೇನು ಕೆಡಕೆನಿಸುವದಿಲ್ಲ. ಇಲ್ಲಿ ಯಾರದೂ ವೈಯ

ಕ್ತಿಕ ಟೀಕೆ ನಿಂದೆ ಇಲ್ಲ. ಸಮಾಜದಲ್ಲಿಯ ಕೆಟ್ಟ ರೂಢಿ ಪದ್ಧತಿಯಿಂದ ಆಗುವ ಅನ್ಯಾಯ ಕೆಡಕುಗಳನ್ನು ಎತ್ತಿ ತೋರಿಸಿ ಅದನ್ನು ಸುಧಾರಿಸಲಿಕ್ಕೆ ಎಲ್ಲರೂ ಎಲ್ಲ ರೀತಿಯಿಂದ ಹೆಣಗಬೇಕೆಂದು ವಿನಂತಿಸಿಕೊಂಡದ್ದು ತಪ್ಪಲ್ಲ. ಅಪರಾಧವೂ ಅಲ್ಲ, ಅದಕ್ಕೆ ವೀರಶೈವ ಮಹಾಸಭೆಯವರು ಮುಖಂಡರು ಮುಂದಾಳುಗಳೂ ಇದನ್ನು ಲಕ್ಷಿಸಿ ಶಿವಯೋಗಮಂದಿರ ಹಾಗೂ ಜಂಗಮ ವಾಡಿಯ ಮಠದಲ್ಲಿಯ ಕಾಯ್ದೆಯನ್ನು ತಿದ್ದುಪಡಿ ಮಾಡಿಕೊಂಡು ಅವುಗ ಳಲ್ಲಿ ವೀರಶೈವರೆಲ್ಲರಿಗೂ ಜಾತಿಭೇದಮಾಡದೆ ಪ್ರವೇಶಿಸುವಂತೆ ಆಗಬೇಕು. ಕಾಲಕ್ಕನುಸರಿಸಿ ಎಲ್ಲರೂ ಹೊಂದಿಕೊಂಡು ಹೋಗುವದು ವಿಹಿತವೇ ಸರಿ. ಈಗಿನ ಪ್ರತಿಯೊಬ್ಬ ಮಠಾಧೀಶನಿಗೆ ಕನಿಷ್ಠ ವ್ಯಾಟ್ರಿಕ್ ಪಾಸಾಗಿರಬೇಕು. ಅಂದರೆ ಶಿವಯೋಗಮಂದಿರ ಅಥವಾ ಜಂಗಮವಾಡಿಯ ಮಠಗಳಲ್ಲಿ ಕಲಿ ಯಲು ಪ್ರವೇಶ ಸಿಗಬೇಕು. ಅಲ್ಲದೆ ೩೦—೩೫ ವರ್ಷಕ್ಕೆ ಶಿಕ್ಷಣ ಸಾಧನ ಮುಗಿದು ಆ ಬಳಿಕ ವಿರಕ್ತ ಪಟ್ಟಗಳಿಗೆ ಅಧಿಕಾರಿಗಳನ್ನಾಗಿ ಮಾಡಬೇಕು. ಅಂದರೆ ಮಠಗಳು ಸುರಕ್ಷಿತ ನಡೆಯಬಲ್ಲವು. ಇಷ್ಟರಲ್ಲಿ ಆ ಪಟ್ಟಗಳ ಸ್ಥಿತಿ ಗತಿಗಳು ತಿಳಿದು ಬರುವವು. ಅದಕ್ಕಂತೇ ಸಿದ್ಧರಾಮನು ಒಂದು ವಚನದಲ್ಲಿ ಹೇಳಿದ್ದನ್ನು ಅನುಲಕ್ಷಿಸಿರಿ—"ಎಂಟು ವರ್ಷಕ್ಕೆ ದೀಕ್ಷೆಕೊಡಿಸುವದು, ಹದಿನಾರು ವರ್ಷಕ್ಕೆ ಲಿಂಗಪೂಜೆ ಹಿಡಿಸುವದು. ಇಪ್ಪತ್ತುವರ್ಷಕ್ಕೆ ಉಪದೇಶಕೊಡಿಸು ವದು. ಇಪ್ಪತ್ತುನಾಲ್ಕು ವರ್ಷಕ್ಕೆ ಶಿವಾಭವ ಹೇಳಿಸುವದು. ಮೂವತ್ತು ವರ್ಷಕ್ಕೆ ಸಮರಸಮಾಡುವದು. ಮೂವತ್ತೆರಡು ವರ್ಷಕ್ಕೆ ಸರ್ವಾಧಿಕಾರಕ ಮೂರ್ತಿ ಎಂದು ಮುದ್ರೆಕೊಡುವದು ಇದು ಜಂಗಮಸ್ಥಲ, ಇದು ಮೀರಿದ ಸ್ಥಲ, ಇದು ಮಹಾಲಿಂಗ ಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನನ ಕೊಡುವ ಬ್ರಹ್ಮಸ್ಥಲ ನೋಡಾ ಕೇದಾರಯ್ಯ" ಇದರಂತೆ ಒಂದು ಕಾಯದೆಯನ್ನು ಸಹ ಜಾರಿಯಲ್ಲಿ ತರಬೇಕು. ಸಿಕ್ಕ ಸಿಕ್ಕವರಿಗೆ ಮರಿಗಳೆಂದು ಮುದ್ರೆಯನ್ನು ಚಿಕ್ಕಂದಿನಲ್ಲಿ ಎಂದೂ ಒತ್ತಬಾರದು. ಈ ಎರಡು ಕಾನೂನುಗಳನ್ನು ಅವಶ್ಯ ಈ ವೀರಶೈವ ಮಹಾಸಭೆಯವರು ಜಾರಿಗೆ ತರಬೇಕೆಂದು ಸೂಚಿಸದೆ ಇರ ಲಾರೆವು. ದೇಶಕಾಲ ಪರಿಸ್ಥಿತಿಗಳಿಗೆ ಹೊಂದಿಕೊಂಡು ನಡೆಯುವದು ಜಾಣ ತನದ ಲಕ್ಷಣವಾಗಿದೆ. ಯೋಗ್ಯಜನರದೊಂದು ಆ ಯೋಗವು ಈ ಸಭೆಯ ಕಾಲಕ್ಕೆ ಹೋದರೂ ಅಡ್ಡಿ ಇಲ್ಲ. ಅದಕ್ಕೆ ತಕ್ಕಂತೆ ಏರ್ಪಾಡು ಮಾಡಿ ಒಂದು ಆ ಯೋಗವನ್ನು ಕಳಿಸಿಕೊಡಬೇಕು. ಹೇಳಿದಂತೆ ಕೇಳಿ ತಲೆ ಅಲ್ಲಾಡಿಸಿ ಹೊರಟು ಬರುವದರಿಂದ ಏನೂ ಪ್ರಯೋಜನವಾಗಲಾರದು.

————

# ಮಹಾತ್ಮಾ ಬಸವೇಶ್ವರರು.

## (ವೀರಶೈವ ಮತ ಜೀರ್ಣೋದ್ಧಾರಕರು.)

### ಲೇಖಾಂಕ ೯.

(ಲೇಖಕರು:— ಡಾ॥ ಎಸ್. ಬಿ. ಪಾಠಕ, ವಿಜಯಪುರ.)

---

( ಅಗಸ್ಟ ಸಂಚಿಕೆಯಿಂದ ಸಾಗಿಬಂದದ್ದು. )

ಬಸವ ಬಾಲಕನು ವಿದ್ಯಾಭ್ಯಾಸದ ಹಲವು ಹಂತಗಳನ್ನು ಪರಿಪೂರ್ಣಗೊಳಿಸಿ ಅಷ್ಟನು ವರುಷ ಸಮೀಪಿಸುತ್ತಲೇ ಮಾದರಸ ಮಾದಲಾಂಬೆಯರು ಸ್ವಧರ್ಮದ ರೀತಿ ನೀತಿಗನುಸಾರವಾಗಿ ಸ್ವಕೀಯರಲ್ಲಿ ಆತ್ಮೀಯರಲ್ಲಿ ಹಾಗೂ ಬಂಧು ಬಾಂಧವರಲ್ಲಿ ಬಸವನ ಉಪನಯನದ ಕುರಿತು ಪ್ರಸ್ತಾಪಿಸಿದರು. " ವಿವಿಧ ದೇವತೋಪಾಸನೆ ಕರ್ಮಗತ ಆಚಾರ ವಿಚಾರ ವಿಧಾನಗಳನ್ನು ಅರಿತುಕೊಳ್ಳುವ ಶ್ರದ್ಧೆ ನನಗಿಲ್ಲ; ನನ್ನ ಉಪನಯನದ ವಿಚಾರವನ್ನು ಎತ್ತಲೇ ಬೇಡಿರಿ. ಅದು ನನ್ನಿಂದ ಸರ್ವಥಾ ಆಗದು. ಎಂದು ಬಸವನು ಸ್ಪಷ್ಟೋಕ್ತಿಯಲ್ಲಿ ಉತ್ತರಿಸಿದನು. ಮಗುವಿನ ಮುಖದಿಂದ ಹೊರಟ ದೃಢನಿರ್ಧಾರದ ಸ್ಪಷ್ಟೋಕ್ತಿಯನ್ನು ಕೇಳಿ ತಾಯಿ ತಂದೆಗಳು ಮೌನ ಮುಗ್ಧರಾದರು. ಬಳಗದವರು ಬೆಪ್ಪಾಗಿ ತಮ್ಮ ತಮ್ಮ ಮನೆಗೆ ಹೊರಟು ಹೋದರು. ಸ್ಥಿರವೃತ್ತಿಯ ಶ್ರೇಷ್ಠ ನಿಷ್ಠೆಯ ಈ ಬಾಲಕನು ತನಗೆ ಜನ್ಮಕೊಟ್ಟ ತಾಯಿ ತಂದೆಗಳಿಗೆ ನಮಿಸಿ ಗುರುಹಿರಿಯರಿಗೆ ವಂದಿಸಿ ನಾನು ಸಂಗಮೇಶ್ವರನನ್ನು ಕಾಣಲು ಧ್ಯಾನ ಪ್ರಾರ್ಥನೆ ಅಖಂಡ ಸಮರ್ಪಣೆಗಾಗಿ ಹೊರಟಿರುವೆ. ನಾನು ಎಲ್ಲಿಯೇ ಹೋಗಲಿ ಎಲ್ಲಿಯೇ ಇರಲಿ ಮಾತಾಪಿತೃಗಳ ಮಮತೆ ಹರಕೆ, ಕರುಣೆ, ಪೂರ್ಣವಾಗಿರಲಿ. ಸರ್ವಾಂತರ್ಯಾಮಿ ದೇವನು ದಯಾಭರಿತನು ಆದುದರಿಂದ ನನ್ನನ್ನು ಆಶೀರ್ವದಿಸಿ ಹೋಗಗೊಡಿರೆಂದು ಮತ್ತೆ ಮತ್ತೆ ನಮಿಸಿ ಅಪ್ಪಣೆ ಪಡೆದು ಹೊರಟವನೇ ನೇರವಾಗಿ ತನ್ನ ಗುರುದೇವನಾದ ಸಂಗಮೇಶ್ವರನಲ್ಲಿಗೆ ಬಂದು ತ್ರಿಕರಣಪೂರ್ವಕವಾಗಿ ಅನನ್ಯ ಭಕ್ತಿ ಭಾವನೆಯಿಂದ ಪ್ರಸನ್ನೀಕರಿಸಿಕೊಂಡು ಇಷ್ಟ ಪ್ರಾಣ ಭಾವ ಲಿಂಗಗಳ ಸಮಾವೇಶಗೊಳಿಸಿಕೊಂಡು ಶಿವಸಂಗಮೇಶನ ಆಶೀರ್ವಾದ ಆದೇಶ ಪಡೆದು ಶಿವಲಿಂಗ ತತ್ವವನ್ನು ಪ್ರಸಾರ ಮಾಡಲು ಕಾಯಾ ವಾಚಾ ಮನಸಾ ಮುಪ್ಪುರಿಗೊಂಡ ಬಾಲ ಬಸವನು

ಭಕ್ತಿ ಭಂಡಾರಿಯಾಗಿ ಸಮಾಜ ಸುಧಾರಕ ಬಸವೇಶನಾಗಿ ಅಜ್ಞ ಜನತೆಗೆ ಮೋಕ್ಷಮಾರ್ಗದರ್ಶಕನಾಗಿ "ಬಸವ ಪ್ರಭುವೆನಿಸಿ" ಶ್ರೇಷ್ಠ ಶಿಖಾಮಣಿ ಎನಿಸಿ ದಿಗ್ದೇಶಗಳನ್ನು ಬೆಳಗಿಸಹತ್ತಿದನು.

ಸುಮಾರು ಕ್ರಿ. ಶ. ೧೧೪೬ ರ ಸಮಯ ಚಾಲುಕ್ಯರ ವಶದಲ್ಲಿದ್ದ ಕಲ್ಯಾಣವನ್ನು ಜೈನ ಮತದ ಬಿಜ್ಜಳನೆಂಬ ಅರಸು ಆಳುತ್ತಿದ್ದನು. ಈ ರಾಜ್ಯವು ಹೈದರಾಬಾದದ ಕೆಲವು ಭಾಗವಿದ್ದಿರಬಹುದೆಂದು ತಿಳಿದುಬರುತ್ತದೆ. ಈ ನಮ್ಮ ಚರಿತ್ರನಾಯಕನಾದ ಬಸವೇಶ್ವರನ ಸೋದರ ಮಾವ ಬಲದೇವನೇ ಬಿಜ್ಜಳರಾಜನ ಮುಖ್ಯ ಮಂತ್ರಿಯಾಗಿದ್ದನು. ಈ ಮಂತ್ರಿವರ್ಯನಿಗೆ ಗಂಗಾಂಬಿಕೆಯೆಂಬ ಓರ್ವ ಗುಣಸಂಪನ್ನೆಯಾದ ಮಗಳಿದ್ದಳು. ಅವಳ ಲಗ್ನದ ಯೋಚನೆಯು ಕಣ್ಮನಗಳಲ್ಲಿ ಕುಣಿಯುತ್ತಿರುವಾಗ ತನ್ನ ತಂಗಿ ಮಾದಲಾಂಬೆಯ ವರಮಾತ್ರ ಸುಪುತ್ರ ಕೀರ್ತಿವೆತ್ತ ಬಸವೇಶ್ವರನೆಂದು ತಟ್ಟನೆ ಹೊಳೆಯಿತು. ಮಂತ್ರಿಗಳೆಂದ ಮೇಲೆ ಕೇಳಬೇಕೆ? ಪ್ರಧಾನ ಮಂತ್ರಿಗಳು ಸೋದರಳಿಯ ಬಸವೇಶ್ವರನನ್ನು ಅಪೂರ್ವ ವಿಜೃಂಭಣೆಯಿಂದ ಬರಮಾಡಿಕೊಂಡು ತನ್ನ ಮನದ ವರಮಾತ್ರ ಆಕಾಂಕ್ಷೆಯನ್ನು ಅರುಹಿ, ಬಸವೇಶ್ವರನ ಮನದಿಚ್ಛೆಯಂತೆ 'ಲಿಂಗವಂತ' ವಿಧಿನಿಯಮಗಳಿಗನುಸಾರವಾಗಿ ದೀಕ್ಷಾನಂತರ ಶುಭ ಸಮಯದಲ್ಲಿ ವರ್ಣನಾತೀತವಾದ ವಿಜೃಂಭಣೆಯಿಂದ ಲಗ್ನಸಮಾರಂಭವು ನೆರವೇರಿತು.

ಕಾಲನ ಪ್ರಭಾವಕ್ಕೆ ಎಲ್ಲರೂ ಒಳಗಾಗಬೇಕಷ್ಟೇ? ರಾಜನೀತಿ ಪರಿಣತ ಪ್ರಧಾನ ಮಂತ್ರಿ ಕಾಲವಶನಾದುದು ತುಂಬಿಬಾರದ ಹಾನಿಯೆನಿಸಿ ಅರಸು ಬಿಜ್ಜಳನಿಗೆ ಅತೀವ ವ್ಯಥೆಯೆನಿಸಿತು. ರಾಜನೀತಿ ತಂತ್ರಜ್ಞ ಪ್ರಭಲ ಪ್ರಧಾನ ಮಂತ್ರಿಯು ಬೇಕಾಗಿದ್ದುದರಿಂದ ಅರಸು ಚಿಂತೆಗೊಳಗಾದನು. ಉಳಿದ ಸಚಿವರೆಲ್ಲರೂ ಬಿಜ್ಜಳರಾಜನ ಮನೋಭಾವನೆ ವ್ಯಸನವರಿತವರಾಗಿ ಒಂದು ದಿನ ಅರಸನ ಎದುರಿಗೆ ಎಲ್ಲರೂ ಕೂಡಿ ಬಲದೇವ ಮಂತ್ರಿಯ ಸೋದರಳಿಯ ಬಸವೇಶ್ವರನು ಬಹು ಜಾಣನು, ಪ್ರಾಮಾಣಿಕನು, ಚತುರನು ಸಾಹಸಿಯೂ ಇದ್ದಾನೆ. ಉತ್ತಮೋತ್ತಮ ಗುಣಗಳಲ್ಲಿ ಅದ್ವಿತೀಯನು ಆದ್ದರಿಂದ ಪ್ರಧಾನ ಮಂತ್ರಿಯ ಪದಕ್ಕೆ ಬಸವಣ್ಣನೇ ಯೋಗ್ಯನೆಂದು ನೆರೆದ ಸಭಿಕರೆಲ್ಲರೂ ಏಕಕಂಠದಿಂದ ನುಡಿದರು. ಪಂಡಿತರು, ಸಭಿಕರು, ಸಚಿವರು ಮತ್ತು ರಾಜಕಾರಣಿ ಪಟುಗಳು, ಬಸವಣ್ಣನವರ ಬಗೆಗಾಡಿದ ಸ್ತುತ್ಯ ಮಾತುಗಳನಾಲಿಸಿ ತಲೆದೂಗಿ ಸಮ್ಮತಿಸಿ ರಾಜಗೌರವದ ಸಂಭ್ರಮದೊಡನೆ, ಬಸವಣ್ಣ

ನವರನ್ನು ಕರೆಕಳಿಸಿ ರಾಜಸಭೆಗೆ ಬರಮಾಡಿಕೊಂಡನು ಸಭೆಯು ಬಹು ದೊಡ್ಡ ಪ್ರಮಾಣದಲ್ಲಿ ಕೂಡಿದ್ದಿತು. ಜಾಣ್ಮೆಯ ಪರೀಕ್ಷಾರ್ಥವಾಗಿ ಆಕಸ್ಮಿಕ ವಾಗಿ ದೊರಕಿದ ಒಂದು ಹಳೆಯ ಲಿಪಿಯನ್ನು ಸಭಿಕರಿಗೂ ಸಚಿವರಿಗೂ ಓಲಗದ ಪ್ರಮುಖ ವ್ಯಕ್ತಿಗಳಿಗೂ ಅರಸನು ಓದಹೇಳಿದನು ಯಾವತ್ತರೂ ತಮ್ಮ ಅಸಹಾಯಕತೆಯನ್ನು ವಿಷಾದಪೂರ್ವಕವಾಗಿ ವ್ಯಕ್ತಗೊಳಿಸಿದರು. ಬಸವಣ್ಣನವರ ಸರತಿ ಬಂದಿತು. ಬಸವಣ್ಣನವರು ಅದನ್ನು ಸಹಜವಾಗಿ ಓದಿ ತೋರಿಸಿದರಲ್ಲದೆ ಸಿಂಹಾಸನದ ಕೆಳಗೆ ಹೇರಳವಾದ ನಿಕ್ಷೇಪವಿರುವ ದೆಂಬ ರಹಸ್ಯವನ್ನು ಅರಸನಿಗೆ ತಿಳಿಯಪಡಿಸಿದರು. ಸಿಂಹಾಸನದ ಕೆಳಗಿನ ನೆಲದ ಮರೆಯ ನಿಧಿಯು ಅರಸನ ವಶವಾಗಲು ಎಲ್ಲರೂ ಸಂತೋಷಭರಿ ತರಾದರು. ನೆರೆದ ಜನಸಮುದಾಯವೆಲ್ಲವೂ ಬಸವಣ್ಣನವರ ಜಾಣ್ಮೆಗೆ ಪ್ರಾಮಾ ಣಿಕತನ ಹಾಗೂ ನಿಷ್ಠೆಗೆ ಮೆಚ್ಚಿ ತಲೆಬಾಗಿ ಗೌರವಿಸಿದರು. ಬಲದೇವನಿ ಗಿಂತಲೂ ಸರ್ವವಿಧದಲ್ಲಿ ಸಮರ್ಥ ಪ್ರಧಾನ ಇವರಾಗಲು ಸಾಧ್ಯವೆಂದು ಸಭೆಯು ಮನಗಂಡಾಗ ಬಿಜ್ಜಳದೊರೆ ಅದೇ ಸಮಯದಲ್ಲಿ ಅದೇ ಸಭೆ ಯಲ್ಲಿ ಬಸವಣ್ಣನವರಿಗೆ ಪ್ರಧಾನಮಂತ್ರಿಪದವನ್ನು ಅರ್ಪಿಸಿದರು.

ಸೈನಿಕ ಶಕ್ತಿಗಿಂತ ನೈತಿಕ ಶಕ್ತಿ ಬಲವಾದುದೆಂಬ ಸೂತ್ರವನ್ನರಿತ ಬಸವಣ್ಣನವರು ನೀತಿಯನ್ನೇ ರಾಜ್ಯದ ನೆಲೆಗಟ್ಟನ್ನಾಗಿರಿಸಿದರು, Love begety love' ಪ್ರೇಮದಿಂದ ಪ್ರೇಮ ಹುಟ್ಟುತ್ತದೆ. ದಯೆಯು ಎಲ್ಲ ಧರ್ಮ ಗಳ ಮೂಲವೆಂಬುದನ್ನು ಪ್ರಜಾಕೋಟಿಗೆ ಮನಗಾಣಿಸಿ ಕೊಟ್ಟರು. Power corrapts and obslute power corrapts obslutely ಎಂಬ ಮಾತಿಗೆ ಬಸವಣ್ಣನವರು ಅಪವಾದವಾಗಿದ್ದರೆಂದು ಹೇಳಿದರೆ ಅತಿಶಯೋಕ್ತಿ ಯೆನಿಸದು. ಪ್ರಜೆಗಳ ಧನವನ್ನು ಮತ್ತು ಅಧಿಕಾರವನ್ನು ಸ್ವಧರ್ಮ ಪ್ರಚಾರಾ ರ್ಥವಾಗಿ ಬಳಸಿದರೆಂಬುದು ಕೆಲವು ಕೇಡಿಗಳ ಅಭಿಪ್ರಾಯ. ಬಸವಣ್ಣನವರು ಅಮಾತ್ಯ ಪದವಿಯನ್ನು ಸ್ವೀಕರಿಸಿದ ಅತ್ಯಲ್ಪ ಕಾಲದಲ್ಲಿ ಸಮಾಜ ಸುಧಾ ರಣೆಯ ಸದುದ್ದೇಶದಿಂದ ಧರ್ಮದಲ್ಲಿ ಕೈಹಾಕಿ ಅನುಭವಗೋಷ್ಠಿ ಶಿವಸಾ ಹಿತ್ಯ ವಚನಗಳು ಅನುಭವಮಂಟಪಗಳ ಮೂಲಕ ಧರ್ಮ ಜಾಗೃತಿಗೊ ಳಿಸಿದರು, ಬಯಸಿ ಬಂದವರಿಗೆ ಅನ್ನ ವಸ್ತ್ರ ದ್ರವ್ಯಗಳ ಸಹಾಯವನ್ನು ಮುಕ್ತಹಸ್ತದಿಂದ ನೀಡಹತ್ತಿದರು. ದೇಶದ ದೂರದೂರದ ಭಾಗಗಳಿಂದ ಶಿವಶ ರಣ ಶಿವಶರಣೆಯರು ತಂಡೋಪತಂಡವಾಗಿ ಬರಲಾರಂಭಿಸಿದರು. ಈ ರೀತಿ ಯಾಗಿ ಮಹಾನುಭಾವ ಬಸವಣ್ಣನವರು ಜನಾನುರಾಗಕ್ಕೆ ಪಾತ್ರರಾದರು.

ದೇಶದ ನಾಲ್ಕೂ ನಿಟ್ಟಿನ ತುಂಬ ಕೀರ್ತಿ ಹರಡಿತು. ಬಸವಣ್ಣನವರನ್ನು ಕಾಣಲು ಬರುವ ಭಕ್ತ ಜನವೃಂದವು ಹೆಚ್ಚಿತು. ಇದನ್ನೆಲ್ಲ ಅರಿತ ಶ್ರೀಅಲ್ಲಮಪ್ರಭುದೇವರು ಮಹಾಯೋಗಿ ಬಸವಣ್ಣನವರ ಬಳಿಗೆ ಬಂದರು. ಅವರ ಆಗಮನದ ಉದ್ದೇಶವನ್ನು ಅರಿತ ಬಸವಣ್ಣನವರು ಬಹು ವಿಜ್ರಂಭಣೆಯಿಂದ ಲಿಂಗನಿಷ್ಠೆಯುಳ್ಳ ಶಿವಶರಣ ಸಮುದಾಯದೊಡನೆ ಶಿವಾನುಭವ ಮಂಟಪದಲ್ಲಿ ಷಟ್‌ಸ್ಥಲ ಸಿಂಹಾಸನವೊಂದನ್ನು ರಚಿಸಿ ಸರ್ವರೂ ಜಯ ಜಯಕಾರದೊಡನೆ ಅಲ್ಲಮಪ್ರಭುದೇವರನ್ನು ಸ್ವಾಗತಿಸಿದರು. ಹಾಗೂ ಮೂಲ ಪ್ರಣವಖಚಿತ ಪೀಠದಲ್ಲಿ ಕುಳಿತುಕೊಳ್ಳಲು ಎಲ್ಲರೂ ಪ್ರಾರ್ಥಿಸಿಕೊಂಡರು. ಪೀಠಾರೂಢರಾದ ಮೇಲೆ ಅಗ್ರಪೂಜಾವಿಧಾನವು ನಡೆಯಿತು. ನಂತರ ಒಬ್ಬೊಬ್ಬರು ಅನುಭವಗೋಷ್ಠಿಯನ್ನು ಕುರಿತು ಲಿಂಗಾಂಗ ಸಾಮರಸ್ಯ ವಿಷಯದ ಮೇಲೆ ಮಾತನಾಡಿದರು ಮತ್ತೆ ಕೆಲವರು ಅಂತರ್ಭಾಹ್ಯ ಶುದ್ಧಿ ಶಿವಲಿಂಗಾರ್ಪಿತ ಅನುಭವಗಳನ್ನು ಹೇಳಿದರು. ಇನ್ನುಳಿದವರು ಗುರುಲಿಂಗಜಂಗಮ ಇಷ್ಟ ಪ್ರಾಣ ಮತ್ತು ಭಾವ ಸಮುಚ್ಚಯವಾಗುವಂತೆ ಅಚ್ಚುಕಟ್ಟಾಗಿ ವಿವರಿಸಿದರು. ಸೈನಿಕ ಶಿಸ್ತನ್ನು ಮೀರಿಸಿದ ಈ ಶಿವಶರಣರ ಶಿಸ್ತನ್ನು ಕಂಡು ಜನರಲ್ ಕಮಾಂಡಂಟರಾದ ಶ್ರೀಅಲ್ಲಮಪ್ರಭುದೇವರು ಸೈನ್ಯಾಧಿಕಾರಿಯಾದ ಬಸವಣ್ಣನವರನ್ನು ತಮ್ಮ ಕಡೆಗೆ ಬರಮಾಡಿಕೊಂಡು ಅನಂತ ಅಧಿಕಾರ ಸಾಧನ ಸಿದ್ಧಿಗಳನ್ನು ಒಪ್ಪಿಸಿದರು. ಹಾಗೂ ಮಾನವರೆಲ್ಲರಲ್ಲಿ ಪ್ರೇಮ, ಬಂಧುತ್ವ, ಸಮತಾಭಾವನೆಗಳು ವಿಶಾಲವಾಗಿ ವಿಶ್ವಧರ್ಮವಾಗಲೆಂದು ಕೃಪಾಶೀರ್ವಾದ ಮಾಡಿದರು.

ಆಮೇಲೆ ಬಸವಣ್ಣನವರು ರಾಜ್ಯದ ಮುಖ್ಯಾಧಿಕಾರಿಯಾಗಿದ್ದರೂ ಶಿವಭಕ್ತಿ, ಶಿವಾಚಾರ ಲಿಂಗಮಹಿಮೆಮೊದಲಾದ ಧಾರ್ಮಿಕ ನೀತಿ ಪ್ರಚಾರ ಕಾರ್ಯವನ್ನು ಹೆಚ್ಚಿಸತೊಡಗಿದರು. ವಚನಸಾಹಿತ್ಯ ಶಿವಾನುಭವಗೋಷ್ಠಿಗಳು ಭರದಿಂದ ನೆಲೆಗೊಳ್ಳಹತ್ತಿದವು. ಎಲ್ಲ ನಿಟ್ಟಿನ ಬಹುಜನರು ಅನುಭವಾಮೃತವೀಂಟಲು ಕಾತರರಾದರು. ಶಿವದೀಕ್ಷೆ ಲಿಂಗಧಾರಣ ತತ್ವವನ್ನು ಚರ್ಚಿಸಿ ಬಹುಮಟ್ಟಿಗೆ ಮೆಚ್ಚಿಕೆಯಾಗಿ ವೀರಶೈವ ಧರ್ಮತತ್ವವನ್ನೇ ಸ್ವೀಕರಿಸಹತ್ತಿದರು. ಈ ಮತತತ್ವಕ್ಕಾಗಿ ತನು ಮನ ಧನ ಸಹಾಯವನ್ನಿತ್ತು ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾರಂಭಿಸಿದರು, ಬ್ರಾಹ್ಮಣ ಮೊದಲುಗೊಂಡು ಹರಿಜನರವರೆಗೂ ಸಹಭೋಜನ ಪುನರ್ವಿವಾಹ ಅಂತರ್ಜಾತಿಯ ವಿವಾಹ ಸಂಬಂಧಗಳು ನಡೆಯುತೊಡಗಿದವು, ಅತಿ ಪ್ರಾಚೀನ ಕಾಲದಿಂದ ಪ್ರಾಶಸ್ತ್ಯ

ವನ್ನು ಹೊಂದಿದ ಬ್ರಾಹ್ಮಣ, ವಿಶ್ವಕರ್ಮ, ಜೈನ, ಬೌದ್ಧ, ಧರ್ಮ ಸಂಘಗಳಲ್ಲಿ ಅಸೂಯ ಅಸಹಕಾರ ದೂರಗಳು ಕಿಡಿಕಿಡಿಯಾಗಿ ಆರಂಭಗೊಂಡಿತು. ಶಿವಲಾಂಛನ ಕಂಡು ಬಸವಣ್ಣನವರು ಬೇಡಿದಷ್ಟು ದ್ರವ್ಯವನ್ನು ಕೊಟ್ಟು ಸಂತುಷ್ಟಪಡಿಸಹತ್ತಿದ್ದರಿಂದ ಬಡವ ಬಲ್ಲಿದರು ಕೂಡ ಗುಂಪುಗುಂಪಾಗಿ "ಭಕ್ತಿ ಭಾಂಡಾರಿ ಬಸವಾ ಬಸವರಾಜಾ" ಇತ್ಯಾದಿಯಾಗಿ ಸ್ತುತಿಸಹತ್ತಿದರು. ಈ ಸ್ತುತಿ ಹಿಡಿಸಲಾರದೆ ಕೊಂಡಿಮಂಚಣ್ಣಾದಿಗಳು ಒಳಗೊಂಡು ಒಂದು ವಿರೋಧಿ ಮಂಡಳವು ಸಿದ್ಧವಾಗಿ ಬಿಜ್ಜಳ ಅರಸನಲ್ಲಿ ಮುಖ್ಯ ಮಂತ್ರಿಯ ಬಗೆಗೆ ಸಂಶಯವು ಉತ್ಪನ್ನವಾಗುವ ಹಾಗೆ ಸಿಟ್ಟು ಬರುವೋ ಹಾದಿಯಲ್ಲಿ "ಮಹಾಪ್ರಭುಗಳೇ ನಿಮ್ಮ ಸ್ನೇಹ ವಿಶ್ವಾಸಾದಿಗಳ ದುರುಪಯೋಗವನ್ನು ಬಸವಣ್ಣನವರು ಮಾಡಿಕೊಳ್ಳುತ್ತಲಿದ್ದಾರೆ. ಮತ್ತು ಕಲ್ಯಾಣವನ್ನು ಶಿವನ ಗದ್ದುಗೆ ಮಾಡಲಾಗಿದೆ. ಕಲ್ಯಾಣವನ್ನು ಕೈವಲ್ಯ ಭಾವವನ್ನಾಗಿ ಮಾಡಲಾಗಿದೆ. ಭಲೆಭಲೆ ಬಸವರಾಜಃ" ಅಂತ ತಾವು ಬಸವಣ್ಣನವರನ್ನು ಕೊಂಡಾಡಹತ್ತಿರುವಿರಿ. ರಾಜನ್ ನಮ್ಮ ಮಾತಿನ ಕಡೆಗೆ ಚಿತ್ತೈಸಿರಿ ಮುಖ್ಯ ಮಂತ್ರಿಪದವನ್ನು ಅವರಿಗೆ ಕೊಟ್ಟಿದ್ದು ತಪ್ಪಾಯಿತೆಂಬ ವಿಷಯ ತಮ್ಮ ಗಮನಕ್ಕೆ ಬರದಿರದು. ಬೊಕ್ಕಸವೆಲ್ಲ ಬರಿದಾಯಿತು. ಅಳಿದುಳಿದ ಅಲ್ಪ ಸ್ವಲ್ಪ ಧರ್ಮ ಹಾಗೂ ಸಂಸ್ಕೃತಿ ಹಾಳಾಗುತ್ತಿದೆ. ಭಾಂಡಾರವೆಲ್ಲ ನಷ್ಟವಾದ ಮೇಲೆ ರಾಜ್ಯಸೂತ್ರವೆಲ್ಲ ಸಹಜವಾಗಿ ಅವರ ಸ್ವಾಧೀನವಾಗುತ್ತದೆ." ಹೀಗೆ ಹಲವು ರೀತಿಯಾಗಿ ಬಿಜ್ಜಳ ಅರಸನಿಗೆ ಬಿಂಬಿಸುವಂತೆ ತಲೆ ತುಂಬಿದರು. ಚಾಡಿ ಮಾತುಗಳನ್ನು ಚಪ್ಪಾಳೆ ಕೇಕೆಹಾಕಿ ಸಂಶಯಾಬ್ಧಿಯಲ್ಲಿ ಮುಳುಗಿಸಿದರು. ರಾಜನು ವಿರೋಧಿಪಕ್ಷದವರ ಮಾತಿಗೆ ಕಿವಿಗೊಟ್ಟು, ತತ್‌ಕ್ಷಣವೇ ಬಸವಣ್ಣನವರನ್ನು ಓಲಗಕ್ಕೆ ಬರಮಾಡಿಕೊಂಡು ಖಜಾನೆಯನ್ನು ಹಾಗೂ ಸಂಬಂಧಿಸಿದ ಲೆಕ್ಕಪತ್ರವನ್ನು ಪರಿಶೀಲಿಸಿದನು. ಎಲ್ಲ ಲೆಕ್ಕಪತ್ರಗಳು ಯಥಾರ್ಥವಾಗಿದ್ದವು. ಅಲ್ಲದೆ ಭಂಡಾರದ ಒಂದು ಕಾಸೂ ಅಪವ್ಯಯವಾಗಿದ್ದಿಲ್ಲ. ಇದನ್ನು ಕಂಡು ಬಸವೇಶ್ವರರು ಅಪ್ರತಿಮ ಪ್ರಾಮಾಣಿಕರೆಂಬ ಮಾತು ಸರ್ವರಿಗೂ ವಿದಿತವಾಯಿತು. ಬಸವಣ್ಣನವರ ಬಗೆಗೆ ಅರಸನ ಪ್ರೇಮ ವಿಶ್ವಾಸ ಸಖ್ಯ ಭಕ್ತಿ ಮತ್ತಿಷ್ಟು ಬೆಳೆಯಿತು. ಇದು ವಿರೋಧಿಗಳಿಗೆ ಸಹಿಸಲಾರದಷ್ಟು ನೋವನ್ನುಂಟುಮಾಡಿತು. ಬಸವಣ್ಣನವರು ಇಮ್ಮಡಿಮುಮ್ಮಡಿ ಉಲ್ಹಾಸದಿಂದ ಕಾರ್ಯೋನ್ಮುಖರಾದರು.

ಬಿಜ್ಜಳ ಮಹಾರಾಜನ ಓಲಗದಲ್ಲಿ ಬಸವಣ್ಣನವರು ಹೇಳಿದ್ದೇನಂದರೆ- "ಬಾಂಧವರೇ, ಹಲವಾರು ದೇವರುಗಳ ಬೇರೆ ಬೇರೆ ರೀತಿಯ ಉಪಾಸನೆಗಳು ಹಾಗೂ ಸಮರ್ಪಣೆಯು ದೇವನೊಬ್ಬನಲ್ಲಿ ಏಕ್ಯೈಕವಾಗಿ ನೈಗೂಡಲಾರವು. ಮಾನವನು ತನ್ನ ಉದ್ಧಾರಕ್ಕೆ ಒಬ್ಬನೇ ದೇವರೆಂದೂ ಆತನೇ ಸರ್ವಸ್ವವೆಂದೂ ಶಿವಲಿಂಗವನ್ನು ತನುತ್ರಯದಲ್ಲಿ ಸಮರ್ಪಿಸಿಕೊಳ್ಳುವದೇ ಶ್ರೇಷ್ಠವಾದ ಪರಮಪವಿತ್ರವಾದ ಮಂತ್ರವೆಂದೂ ತಿಳಿದುಕೊಂಡಲ್ಲಿ ಯಾವತ್ತೂ ಪಾಪಕರ್ಮಗಳು ಆತನ ಸಮೀಪ ಬಾರವು." ಇದನ್ನು ಕೇಳಿ ಬಿಜ್ಜಳ ರಾಜನು ಮಾನವ ಕುಲೋದ್ಧಾರಕ ಬಸವಣ್ಣನೆಂದು ಬಿರುದುಕೊಟ್ಟು ಗೌರವಿಸಿದನು. ವಿವಿಧ ಮತಪಂಥಗಳ ಪ್ರವರ್ತಕರು ಅನುಯಾಯಿಗಳು ಆಚಾರ್ಯ ಶ್ರೇಷ್ಠರು ಹಾಗೂ ವಿದ್ವಾಂಸರು ಬಸವಣ್ಣನವರನ್ನು ಸೋಲಿಸ ಬಂದು ತಾವೇ ಸೋಲನ್ನೊಪ್ಪಿದರು. ಮೆಚ್ಚಿಕೆಯಿಂದ ಕೆಲವರು ಲಿಂಗವಂತ ಮತತತ್ವವನ್ನು ಸ್ವೀಕರಿಸಿದರು. ಪರಾಭವಹೊಂದಿದ ಮತ್ತು ಉಳಿದ ಕುಹಕ ಜನರು ಮಾತ್ಸರ್ಯದಿಂದ ಕುತರ್ಕದೊಡನೆ ಕ್ರಾಂತಿಯ ಕಿಡಿಗಳನ್ನು ಉದುರಿಸಹತ್ತಿದರು. ಬಿಜ್ಜಳರಾಜನ ಸ್ಥಿರವೃತ್ತಿಯನ್ನು ಕೆಡಿಸಿದರು. "ಜೈನ, ವಿಶ್ವಕರ್ಮ, ಬ್ರಾಹ್ಮಣ ಬೌದ್ಧ" ಮತದವರಿಗೆ ನಿಮ್ಮ ಬಸವಣ್ಣನು ಅತ್ಯಂತ ಅವಮಾನ ಮಾಡುತ್ತಾನೆ. ಅತ್ಯಂತ ಹೀನ ಮತಗಳೆಂದು ಹೀಯಾಳಿಸುತ್ತಾನೆ. ತುಚ್ಛವಾಗಿ ಕಾಣುತ್ತಾನೆ. ಮುಖ್ಯ ಮಂತ್ರಿಯಾದರೇನಾಯಿತು? ಆತನ ಪ್ರತಿಯೊಂದು ಮಾತಿಗೆ ತಲೆದೂಗುವಿರಿ. ಬಿಜ್ಜಳರಾಜನ ನಮ್ಮ ನಗರದಲ್ಲಿ ಸ್ವಲ್ಪಾವಧಿಯಲ್ಲಿಯೇ ಲಿಂಗವಂತ ಧರ್ಮದ ಹೊರ್ತಾಗಿ ಯಾವ ಪಂಥಗಳನ್ನು ಯಾವ ಧರ್ಮವನ್ನೂ ಉಳಿಯಗೊಡಲಾರನು. ಎಲ್ಲ ಧರ್ಮಗಳನ್ನು ನುಂಗಿ ನೀರು ಕುಡಿಯುವನು. ಜಯವೂ ಆತನನ್ನೇ ಹಿಂಬಾಲಿಸಿದೆ. ರಾಜನ್ ಅಲ್ಪರಾದ ನಮ್ಮನ್ನು ಕೇಳುವವರು ಇಲ್ಲವಾದರು. ಶೃತವಿರಲಿ" ಎಂದು ದೂರಿದರು ವಿರೋಧಿ ಗುಂಪಿನವರ ಮಾತಿಗೆ ಮನಸೋತು ಬಿಜ್ಜಳನು ದರ್ಪದಿಂದ ಶೀಘ್ರವಾಗಿ ಬಸವಣ್ಣನವರನ್ನು ಬರಮಾಡಿಕೊಂಡನು. ಕೋಪೋದ್ರೇಕ ಶಬ್ದಗಳನ್ನು ಉಚ್ಚರಿಸಿದ ರಾಜನ ಭಾವವನ್ನು ಅರಿತ ಬಸವಣ್ಣನವರು "ಸೊಪ್ಪುಹಾಕದೆ" ಸೌಮ್ಯವಾಗಿ ನ್ಯಾಯವಾಗಿ ಸಪ್ರಮಾಣವಾಗಿ ಸತ್ಯ ಅಹಿಂಸೆ ಅಪರಿಗ್ರಹ ನೈಷ್ಠಿಕ ಧಾರ್ಮಿಕ ಅಲ್ಲದೆ ರಾಜ್ಯಕಾರಣದ ಕಾನೂನಿನಂತೆಯೇ ಆಚರಿಸುತ್ತಿದ್ದೇನೆ. ಗುರುಸಂಗಮೇಶನು ಅನ್ಯಾಯವನ್ನು ನನ್ನಿಂದ ಯಾವ ಕಾಲಕ್ಕೂ ನೋಡಲಿಕ್ಕಿಲ್ಲ." ಎಂದು ವಿನಯಭರಿತರಾಗಿ ನುಡಿದರು. ಬಸವಣ್ಣನವರು.

ಈಗ ಕಪಟ ಕಾರಸ್ಥಾನಿಗಳ ಕೈವಾಡ ಮತ್ತು ವರ್ಚಸ್ಸು ಅರಸನ ಮೇಲಾಗಿ ಕ್ರಾಂತಿಯ ಕಿಡಿ ಪ್ರಜ್ವಲಿಸಿತು. ಕೈಲಾಸ ಸಮವಾಗಿರ್ಪ ಕಲ್ಯಾಣವು ಹಾಳಾಗುವ ಸಮಯವೊದಗಿತು. ಕ್ರಾಂತಿಗೆ ತುತ್ತಾಗಿ ಕಲ್ಯಾಣ ಶಾಸ್ತ್ರವು ಮಣ್ಣು ಮಸಣಾಗುವ ಸಮಯ ಸಮೀಪಿಸಿತು. "ವಿನಾಶ ಕಾಲೇ ವಿಪರೀತ ಬುದ್ಧಿ'' ಎನ್ನುವಂತೆ ಮುಂಬರುವ ವಿಪರೀತ ಅನಿಷ್ಟದ ದ್ಯೋತಕವಾಗಿ ಅಂಧ ತಮಸ್ ಮತ್ತು ರಜೋಗುಣಗಳ ಕೈವಾಡವಾಗಿ ಬಸವಣ್ಣನವರಲ್ಲಿಟ್ಟಿದ್ದ ಅತುಲಪ್ರೇಮಶ್ರದ್ಧೆ, ಭಕ್ತಿ ವಿಶ್ವಾಸಗಳು ಮತ್ತು ಅರಸನಲ್ಲಿಯ ಸಾತ್ವಿಕ ಗುಣಗಳು ಮಾಯವಾದವು.

ಇತ್ತಕಡೆ ಬಸವಣ್ಣನವರು ಪುಟಕ್ಕೆ ಹಾಕಿದ ಬಂಗಾರವು ಮತ್ತಿಷ್ಟು ಹೊಳೆಯುವಂತೆ ತೇಜೋಲ್ಲಾಸದಿಂದ ಗುರುಸಂಗಮೇಶನ ನಾಮಾಮೃತದಲ್ಲಿ ನಿಮಗ್ನರಾಗಿದ್ದುದರಿಂದ ಅವರ ನೀತಿಪ್ರಧಾನ ಅನಂತ ವಚನಗಳು, ಅನಂತ ಲಿಂಗನಿಷ್ಠೆಯ ಭಕ್ತಿಪರ ವಚನಗಳು ಎಲ್ಲ ಜಾತಿಯ ಮಾನವ ಕುಲಕ್ಕೆ ಸುಲಭವಾಗಿ ಬೋಧಪ್ರದವಾಗಿ ಆದರ್ಶಪ್ರಾಯವಾಗಿರುವವು.

ಲಿಂಗವಂತ ತತ್ವದಲ್ಲಿ ಪಂಚ ಪಾತಕಿಗಳೂ ಪಂಚ ಸೂತಕಗಳು ಸಮೀಪ ಬಾರವು. ಈ ತತ್ವವು ಮಾನವನಿಗೆ ವ್ಯಾಪಕಧರ್ಮವಾಗಿದೆ. ಪ್ರತಿಯೊಬ್ಬ ಲಿಂಗವಂತನಿಗೆ ಸಮಾಜದಲ್ಲಿ ಸಮಾನಸ್ಕ ಮಟ್ಟವು ಇದೆ. ಜಾತಿ ಭೇದಗಳಲ್ಲಿ ನೀತಿಯ ಮಟ್ಟವೇ ನಿಷ್ಠೆಗೊಂಡಿದೆ! ಅತುಲಪ್ರೇಮ ಅಚಲಭಕ್ತಿ ಲಿಂಗದಲ್ಲಿ ಅಡಕವಾಗಿದೆ. ವೀರಶೈವ ಮತೀಯರಲ್ಲಿ ಜಾತೀಯ ಭಾವನೆಗಳು ತಿಲಮಾತ್ರವೂ ಕಾಣಿಸುವದಿಲ್ಲ. ಜಾತಿಯತೆಗೆ ಸಂಗಮನಾಥನು ಮೆಚ್ಚನು. ಶಿವಲಿಂಗದಲ್ಲಿ ಚಿತ್ಕಳೆ ಅರಿಯದವನೇ ಶಿವಲಿಂಗದ್ರೋಹಿ, ಮಹಾಪಾಪಿ. ಸ್ವರ್ಗನರಕಗಳು ನನಗೆ ಗೊತ್ತಿಲ್ಲ, ದ್ವೈತ ಅದ್ವೈತ ನನಗೆ ಬೇಕಿಲ್ಲ. ಶಿವಲಿಂಗದಲ್ಲಿ ಮೈಗೂಡಿದ ಮಾನವರೆಲ್ಲರೂ ನನ್ನ ಬಂಧುಗಳು ಶಿವಲಿಂಗ ಸಾಂಪ್ರದಾಯಿಗಳೆಲ್ಲರೂ ಸನ್ಮಾನ್ಯರು. ಹಾಗೂ ಹಿರಿಯರು. ನಾನು ಅವರೆಲ್ಲರ ಸೇವಕನು.

ಅಂತಃಕರಣ ಶುದ್ಧಿಯಾಗದ ಧರ್ಮವಾವುದು? ಪ್ರೇಮನಿಷ್ಠೆ ಸಮತೆ ಬೇಕು. ಸರ್ವಪ್ರಾಣಿಮಾತ್ರರಲ್ಲಿ ಶಾಂತಿ ಸಮತೆ ಬೇಕು. ಸರ್ವಮಾನವ ಕುಲಕ್ಕೆ ಸಮರ್ಪಿತ ಭಾವ ಇಲ್ಲದಿರೆ ಗುರುಸಂಗಮೇಶನು. ಮೆಚ್ಚನು.

ಈ ರೀತಿಯ ಜೀವನದ ಹಲವಾರು ವಿಷಯಗಳನ್ನು ಕುರಿತು ಸುಮಾರು ಸಹಸ್ರ ವಚನಗಳನ್ನು ರಚಿಸಿ ಮಾನವರೆಲ್ಲರಿಗೆ ಸಪ್ರಮಾಣವಾಗಿ ಬೀರಹತ್ತಿದರು. ಈ ಮತತತ್ವವು ಪೂರ್ವಾಗಮಗಳಿಂದ ಪರಂಪರಾಗತ ಬೋಧಿಸುತ್ತ

ಬಂದದ್ದಾಗಿದೆ. ಮತ್ತು ನನ್ನಿಂದಲೇ ಈ ಮತವು ಹೊಸದಾಗಿ ಪ್ರಾರಂಭ ವಾಯಿತೆಂದು ತಿಳಿದುಕೊಳ್ಳಬೇಡಿರೆಂದು ಬಸವಣ್ಣನವರ ಅಭಿಪ್ರಾಯ. ಆಗ ಮಗಳ ಮುಖ್ಯ ರಹಸ್ಯವೇ ಇದು. ಇದರ ಯಥಾರ್ಥವಾದ ತಿರುಳನ್ನು ಅರಿಯದಿದ್ದುದಕ್ಕಾಗಿಯೇ ಸುಸಂಸ್ಕೃತಿ ಮಲಿನವಾಗಹತ್ತಿದೆ; ಶಿಥಿಲವಾಗತೊಡಗಿದೆ. ಅನಾದಿಕಾಲದಿಂದ ಲಿಂಗವಂತ ಮತತತ್ವವು ಸಮತಾಸಾಮರಸ್ಯವು ವ್ಯಾಪಾಕವಾಗಿ ಅಡಕವಾಗಿದೆ. ಅಂತಾ ಹೇಳುತ್ತ ಲಿಂಗಮತ ಮತಜೀರ್ಣೋದ್ಧಾರ ಮಾಡಿದರು ಬಸವಣ್ಣನವರು. ಅವರ ಮತತತ್ವವನ್ನು ವಚನಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿ ವಿವೇಚಿಸಿದರೆ ಯಾವ ಮಹಾಪುರುಷರ ಮೇರು ಕೃತಿಗಳಿಗಿಂತ ಕಡಿಮೆಯೆನಿಸವು. ಸಂಘ ಸಂಸ್ಥೆ ಮತ್ತು ಶಿಬಿರಗಳ ಮುಖಾತರ ತಮ್ಮ ತತ್ವವನ್ನು ಅಣ್ಣನವರು ದೇಶದ ತುಂಬೆಲ್ಲ ಹಬ್ಬಿಸಿದರು. ಬಸವಣ್ಣನವರ ಧರ್ಮ ವಿಶ್ವಧರ್ಮ, ಬಸವಣ್ಣನವರು ವಿಶ್ವಕವಿ. ಅವರ ವಚನ ಸಾಹಿತ್ಯ ವಿಶ್ವಸಾಹಿತ್ಯ. ಕರ್ನಾಟಕದ ಈ ಅಮೂಲ್ಯ ಧರ್ಮ ಬಹುಮೂಲ್ಯ ಸಾಹಿತ್ಯ ವಿಶ್ವವ್ಯಾಪಿಯಾಗಬೇಕಾಗಿದೆ.

ಇಂಥ ಮಹಾನುಭಾವ ಬಸವಣ್ಣನವರ ನೀತಿ ನಿಷ್ಠೆ, ಪವಿತ್ರ ಧರ್ಮ ವಚನ ಸಾಹಿತ್ಯ ಪ್ರಚಾರ ನಾಲ್ದೆಶೆಗಳಲ್ಲಿ ತುಂಬಿ ಬೆಳಗಹತ್ತಿತು. ಆದುದರಿಂದ ಬಿಜ್ಜಳ ದೊರೆಗಿಂತ ಬಸವಣ್ಣನವರಿಗೇ ಸರ್ವಜನರಿಂದ ಮಾನ ಮನ್ನಣೆ ಹೆಚ್ಚುಗೊಂಡಿತು. ಅದರಿಂದ ಬಿಜ್ಜಳನಿಗೆ ಅಂತರಂಗದಲ್ಲಿ ಅವಮಾನವೆನಿಸತೊಡಗಿತು. ಬಸವಣ್ಣನವರ ಅಂಗರಕ್ಷಕ ಏಕೆ ಸ್ವಂತ ಅಂಗಾಂಗಳಂತಿದ್ದ ಅತುಲ್ಯ ಸಲುಗೆಯಲ್ಲಿ ಬೆಳೆದ ವೀರ ಶಿವಶರಣರಾದ ಮಧುವಯ್ಯ ಹರಳಯ್ಯ ಎಂಬೀರ್ವರು ಓಲಗದ ಬಳಿಯಲ್ಲಿ ಬಂದಾಗ್ಗೆ ಅವರನ್ನು ಬಂಧಿಸಿ ಅವರ ಕಣ್ಣುಗಳನು ಬಿಜ್ಜಳರಾಜನು ಕೀಳಿಸಿದನು. ಶೀಘ್ರದಲ್ಲಿಯೇ ನಗರದ ತುಂಬೆಲ್ಲ ಹಾಹಾಕಾರವೆದ್ದಿತು. ಇಂಥ ಅನ್ಯಾಯ ರಾಜನಿಂದ ಘಟಿಸಿದ್ದು ಬಸವಣ್ಣನವರಿಗೆ ತಿಳಿದೊಡನೆಯೇ ಮಂತ್ರಿಪಥವನ್ನು ಬಿಟ್ಟು ಹೊರಬಿದ್ದರು. ಆ ಸಮಯದಲ್ಲಿ ಮೂರನೆಯ ಪಂಗಡದ ಮುಖಂಡರಿಯಾದ ಜಗದೇವನೆಂಬವನು ಬಸವಣ್ಣನವರ ಭೆಟ್ಟಿಗೆ ಬಂದನು. “ಸಹನೆಗೆ ಸೀಮೆ ಇಲ್ಲವೋ ಬಸವರಾಜ? ಶಿವಶರಣರ ಕಣ್ಣು ಕೀಳಿಸಿದರೂ ಸುಮ್ಮನೆ ಕುಳಿತುಕೊಳ್ಳಬೇಕೆ? ಶಿವ ಶಿವಾ ಕೇಳಲಾಗದು ಕೇಳಲಾಗದು.” ಎಂದು ವೀರಾಗ್ರಹಿ ಜಗದೇವನು ಬಸವಣ್ಣನವರ ಮುಂದೆ ಮಹದನ್ಯಾಯವೆಂದು ಗದರಿಗೊಂಡನು.

ಆ ಮೇಲೆ ಅಣ್ಣನವರು ಅಯ್ಯೋ ಗುರು ಸಂಗಮೇಶಾ ನೋಡಲಾರೆ, ಇದೆಂಥ ಅನ್ಯಾಯ ಅವಮಾನ ಗುರುದೇವಾ ಸಹಿಸಲಾಗದು. ಸಂಗಮನಾಥಾ ಮರೆಯಲಾರದಂಥ ಅನ್ಯಾಯ ನಿನ್ನ ಭಕ್ತಾದಿಗಳಿಗೆ ವಿಶ್ವೇಶಾ, ಗುರುಸಂಗ ಮನಾಥಾ ಎಂದು ಅತಿಯಾಗಿ ವ್ಯಥೆಪಟ್ಟನು.

ಜಗದೇವನು ಬಸವಣ್ಣನವರ ಹಿತಚಿಂತಕನಾಗದಿದ್ದರೂ ಸಂದಿಗ್ಧ ಸಮಯವನ್ನರಿತು ಸಂಕ್ರಾಂತಿಯ ಕೋಲಾಹಲವನ್ನೆಬ್ಬಿಸಿ ಇದೇ ಮಹತ್ವ ಪೂರ್ಣ ಸಮಯವೆಂದರಿತು ಜಗದೇವನು ಗಣಾಚಾರ ತತ್ವಾಭಿಲಾಷೆಯುಳ್ಳವನಾಗಿ ಬಸ ಬಸವಣ್ಣನವರೆ ನಿಮ್ಮ ಕೃಪೆಯೊಂದಿರಲಿ, ನಿಮಿಷಾರ್ಧದಲ್ಲಿ ಅತ್ಯಾಚಾರವನ್ನು ನಿಲ್ಲಿಸುವೆ. "ಬಸವ ಚಕ್ರೇಶಾ" ನೀನು ನೊಂದುಕೊಳ್ಳ ಬೇಡವೆಂದು ಸಂತಯಿಸಿ ರೌದ್ರಾವತಾರ ತಾಳಿ ತಾಂಡವ ನೃತ್ಯದೊಡನೆ ಅರಮನೆಯನ್ನು ಒಳನುಗ್ಗಿ ಬಿಜ್ಜಳ ದೊರೆಯನ್ನು ಮಮ್ಮಲ ಬಲಯ್ಯರ ಸಹಾಯದಿಂದ ಕೊಂದು ಹಾಕಿದನು. ಈ ಅಘಟಿತ ಘಟನೆಯನ್ನರಿತು ಬಸವಣ್ಣನವರು ದುಃಖಸಾಗರ ದಲ್ಲಿ ಮುಳುಗಿ ಗುರುಸಂಗಮೇಶನನ್ನು ಪ್ರಾರ್ಥಿಸಿದರು. ಶಿವ ಶಿವಾ ಎನ್ನುತ್ತ ಕೊರಗಿದರು. ಕಲ್ಯಾಣ ರಾಜ್ಯವು ಮಣ್ಣು ಪಾಲಾಯಿತು. ಉಳಿದ ಅಲ್ಪ ಸ್ವಲ್ಪ ಪ್ರಜೆಗಳು ಶರಣರು ಬಸವಣ್ಣನವರ ಆಶ್ರಯದಲ್ಲಿ ಬದುಕಿ ಬಾಳಿದರು. ಅಣ್ಣನವರ ಆಜ್ಞೆಯನ್ನು ಅಚ್ಚಳಿಯದೇ ಅಂಗೀಕರಿಸಿದ ಅನೇಕರು ದಿಕ್ಕು ದೇಶಗಳಲ್ಲಿ ಹೊರಟು ಹೋದರು.

ಈ ರೀತಿಯಾಗಿ ಜಗದ ಜನಮನ ಸೆಳೆದು ಪಾವನ ಪುರುಷರಾದ ಬಸವಣ್ಣನವರು ಸತ್ಯ ಅಹಿಂಸೆ ಜಾತ್ಯಾತೀತ ಸಮತಾ ಸಮಾನಸ್ಕ ಬಾಂಧವ್ಯ ನೀತಿಯ ನೆಲೆಗಟ್ಟನ್ನು ಸ್ಥಾಪಿಸಿ ಸಂಗಮನಾಥನ ಪೂರ್ವ ಕೃಪಾಶೀರ್ವಾದ ಅಭಯ ವಚನದಂತೆ ಸಂಸಾರ ವಿಹರಿತ ವಿಮಲ ಜ್ಞಾನವನ್ನು ಅರಿತುಕೊಂಡು ಕೂಡಲ ಸಂಗಮೇಶನಲ್ಲಿಗೆ ಹೋಗಿ ತ್ರಿಯಾವಸ್ಥೆ ಅಳಿದುಳಿದ "ಲಿಂಗಮನ ಲೀನ ಕರೋತಿ ಲಿಂಗಃ" ಎಂಬ ಪದ ಉಕ್ತಿಯಂತೆ ಲಿಂಗಾಂಬುಧಿಯಲ್ಲಿ ಲೀನವಾಗುವ ಐಕ್ಯಸ್ಥಲ ಸಾಧಿಸಿ ಲಿಂಗಾರ್ಪಿತ ಧ್ಯೇಯವು ಲಿಂಗಾನಂದ ದಲ್ಲಿ ಮುಳುಗಿಸಿ ಅಮೈಕ್ಯರಾದರು.

ತೋರುವ ಶರೀರ ನಮಗೆ ಕಾಣದಂತಾದರೂ ಅವರವರ "ಪ್ರಸಾದ ವಾಣಿ" ವಚನ ಸಾಹಿತ್ಯ, ಸೇವ್ಯ ಸೇವಕಭಾವ, ಸತ್ಯ ಅಹಿಂಸೆ, ಶಾಂತತಾ ಪೂರ್ಣ ಅನುಭವ ಅಂದಿಂದಿಗೂ ಅಮರತ್ವವು ಅವನೀತಲಕ್ಕೆ ಆದರಣೀಯವೂ ಪ್ರಶಂಸನೀಯವೂ ಆಗಿವೆ.

ಆದುದರಿಂದ ಮುಮುಕ್ಷುಲೋದ್ಧಾರಕ ಅಣ್ಣನವರ ಜಯಂತಿ ಮತ್ತು ಇತಿಹಾಸ ಮುಖಾಂತರ ಎಲ್ಲ ಭಾಷೆಗಳಲ್ಲಿ ಎಲ್ಲ ದೇಶಗಳಲ್ಲಿ ಪ್ರಸರಿಸುವಂತೆ ಶಾಖೋಪ ಶಾಖೆಗಳನ್ನು ಹೆಚ್ಚಿಸಿ ಅಚ್ಚಳಿಯದ ನಿಯಮಗಳ ಮೂಲಕ ಸ್ವತಂತ್ರ ಭಾರತದ ಚಿಕ್ಕ ದೊಡ್ಡ ಸಂಸ್ಥೆಗಳಲ್ಲಿ ಮನೆ ಮಠಮಂದಿರಗಳಲ್ಲಿ ಸಜ್ಜನ ಸುಜನ ವೃಂದವು ಉತ್ತರೋತ್ತರೋತ್ಕರ್ಷವಾಗಿ ಅಭಿವೃದ್ಧಿ ಹೊಂದಿಸಿ ಅಜರಾಮರ ಪ್ರಭೆಯು ಪುನಃ ಪ್ರಜ್ವಲಿಸುವ ಪವಿತ್ರತಮವಾದ ಕಾರ್ಯವು ಅದ್ವಿತೀಯವಾದ ಪ್ರಜಾಪ್ರಭುತ್ವ ರಾಜ್ಯದ ಧುರೀಣರಿಂದ ಆದಿಯಾಗಿ ಕಡು ಬಡವನ ಗುಡಿಸಲಿನವರೆಗೂ ಸಹ ಈ ತತ್ವವು ಸಮತಾ ಸಮಾನತ್ವದ ಹಕ್ಕು ಬಾಧ್ಯತೆಗಳನ್ನು ಬಂಧುರಗೊಳಿಸಿದರೆ ಅಶನ ವಸನ, ವ್ಯಸನರಹಿತರಾದರೆ ಅಣ್ಣನವರ ವಚನ ಸಾಹಿತ್ಯವನ್ನು ಅರಿತು ಅರಗಿಸಿಕೊಂಡರೆ, ಆನಂದಾತಿಶಯದಿಂದ ಕಣ್ಮನಗಳು ತುಂಬಿ ಹೃದಯ ಉಕ್ಕಿಸುವ ಹರುಷದ ವರುಷಗಳು ಆಗಲುವದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಓಂ ಶಾಂತಿಃ ಶಾಂತಿಃ ಶಾಂತಿಃ.

# ನಲಂದ.

(ಲೇಖಕರು:— ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

ಇಂದು ಭಾರತೀಯ ಶಿಕ್ಷಣ ಇತಿಹಾಸ ರಂಗದ ಮೇಲಿನ ಮುಸುಕು ತೆರೆಯುಬದಿಗೆ ಸರಿಯುತ್ತಿರುವುದು ಸರಿಯೇ ಆಗಿದೆ. ಇಂದು ಜಗತ್ತಿನಲ್ಲಿ ಅತ್ಯಂತ ಸುಶಿಕ್ಷಿತವೆಂದು ಮೆರೆಯುತ್ತಿರುವ ಸಮಾಜಗಳು ಶಿಕ್ಷಣ ಎಂದರೆ ಏನೆಂಬುದನ್ನು ಕೂಡ ಅರಿಯುವುದಕ್ಕಿಂತ ಮೊದಲೇ ಇಲ್ಲಿ ಶಿಕ್ಷಣಕ್ಕಾಗಿ ಎಲ್ಲ ಬಗೆಯ ಸೌಕರ್ಯಗಳನ್ನೊಳಗೊಂಡ ವಿಶಾಲವ್ಯಾಪಕ ಉನ್ನತತರವಾದ ಶಿಕ್ಷಣ ಕೇಂದ್ರಗಳು ಇದ್ದವು.

"ಭಾರತ ಪುತ್ರರೇ! ನಿಮ್ಮ ವೈಭವವು ಬಹಳ ಮೇಲ್ಮಟ್ಟದ್ದು. ಆ ಪೂರ್ವಜರ, ಆ ಮಹರ್ಷಿಗಳ ರಕ್ತವು ಇನ್ನೂ ನಿಮ್ಮ ರಕ್ತನಾಳ ನರ ನಾಳಗಳಲ್ಲೆಲ್ಲ ಹರಿಯುತ್ತಿದೆ ಎಂಬುದನ್ನು ನೀವು ಮರೆಯಬೇಡಿ. ನಿಮ್ಮ ರಾಷ್ಟ್ರದ ವಿದ್ಯಾ ಕೇಂದ್ರಗಳನ್ನು, ಅವುಗಳ ಧ್ಯೇಯ ಮತ್ತು ಧ್ಯೇಯಸಾಧನೆ ಗಳೆಲ್ಲ ಮೀರಿಸಿದ್ದ ಇನ್ನು ಯಾವ ರಾಷ್ಟ್ರದ ವಿದ್ಯಾಲಯಗಳು ಖಚಿತವಾಗಿಯೂ ಇರಲಿಲ್ಲವೆಂಬುದನ್ನು ನೆನಪಿನಲ್ಲಿಡಿ. ಪ್ರಾಚೀನ ಸಂಸ್ಕೃತಿಯನ್ನೂ, ವೈಭವ ವನ್ನೂ ಚೆನ್ನಾಗಿ ಮತ್ತೆ ಪಡೆದು ಭಾರತದ ಭಾವೀ ವೈಭವವನ್ನು ಪುನ ರುಜ್ಜೀವನಗೊಳಿಸಿ ಮುಂಚೆಗಿಂತ ಹೆಚ್ಚಿಗೆ ಶಾಂತಿಪ್ರದವಾಗಿ ಮಾಡಿ."

—ಸ್ವಾಮಿ ವಿವೇಕಾನಂದ.

ತಮ್ಮ ತಮ್ಮ ಮನೆಗಳಲ್ಲಿಯೇ ಶಿಷ್ಯರಿಗೆ ಜ್ಞಾನ ದಾನ ಮಾಡುತ್ತಿದ್ದಂತಹ ಆಚಾರ್ಯರು ಅನೇಕರಾಗಿದ್ದರು. ಹಲವು ವೇಳೆ ಇಂತಹ ಆಚಾರ್ಯರು ಎಲ್ಲರೂ ಒಂದೆಡೆ ಕಲಿತು ಕೂಡುವುದರಿಂದ ಸಣ್ಣ ಸಣ್ಣ ವಸತಿಗಳ ನಿರ್ಮಾ ಣವಾಗಿ ಅವು ಶಿಕ್ಷಣದ ಕೇಂದ್ರಗಳಾಗಿ ಪರಿಣಮಿಸುತ್ತಿದ್ದವು. ಅವುಗಳ ನಿರ್ಣಯಗಳು ಪ್ರಮಾಣವಾಗಿ ಮನ್ನಣೆಯಾಗಲ್ಪಡುತ್ತಿದ್ದವು. ಇವುಗಳಲ್ಲದೆ ಪ್ರಖ್ಯಾತ ಪಂಡಿತರಾದ ಋಷಿಗಳ ಆಶ್ರಮಗಳಲ್ಲಿಯೂ ಕೂಡ ವಿದ್ಯಾರ್ಥಿಗಳು ಇರುತ್ತಿದ್ದು ಅವರಿಗೆ ಅಲ್ಲಿ ಅನೇಕ ವಿಷಯಗಳ ವಿಚಾರದಲ್ಲಿ ಶಿಕ್ಷಣವನ್ನು

ಕೊಡಲಾಗುತ್ತಿದ್ದಿತು. ಬುದ್ಧ ವಿಹಾರಗಳು ಕಾಲಕ್ರಮೇಣ ಶಿಕ್ಷಣ ಕೇಂದ್ರಗಳಾಗಿ ಮಾರ್ಪಟ್ಟವು. ಮಧ್ಯಕಾಲದಿಂದ ಭಾರತೀಯ ಸಂಸ್ಕೃತಿ ಮತ್ತು ಜ್ಞಾನಸಾಹಿತ್ಯಗಳ ಅವನತಿಯ ವೇಳೆಯಲ್ಲಿಯೂ ಕೂಡ ಮಠ, ದೇವಸ್ಥಾನ ಮೊದಲಾದ ಧಾರ್ಮಿಕ ಸಂಸ್ಥೆಗಳ ಸಂಗಡ ಸಂಬಂಧಿಸಿದ ಶಾಲೆಗಳಲ್ಲಿ ಶಿಕ್ಷಣ ವ್ಯವಸ್ಥೆಯು ಏರ್ಪಾಡಾಗುತ್ತಿತ್ತು. ಬುದ್ಧ ವಿಹಾರದಿಂದ ವಿಕಾಸವಾಗಿ ವಿಶ್ವವಿದ್ಯಾನಿಲಯವಾದ ಶಿಕ್ಷಣ ಕೇಂದ್ರಗಳಲ್ಲಿ ಯಶವೆತ್ತುದು ನಲಂದವು.

ಬಿಹಾರು ಪ್ರಾಂತದ ಮುಖ್ಯ ಪಟ್ಟಣವಾದ ಪಾಟ್ನಾದಿಂದ ಪೂರ್ವಕ್ಕೆ ಭಕ್ತಿಯಾರಪುರವುಂಟು. ಇಲ್ಲಿಂದ ದಕ್ಷಿಣಕ್ಕೆ ರಾಜಗೃಹವಿದೆ. ಇದು ಪುರಾಣ ಹಾಗೂ ಚರಿತ್ರೆಯ ದೃಷ್ಟಿಯಿಂದಲೂ ಪ್ರಸಿದ್ಧಿಯಾಗಿದೆ. ಹಲವು ವರ್ಷಗಳ ವರೆಗೂ ಅಜಾತ ಶತ್ರುವಿನ ಪ್ರಧಾನ ಪಟ್ಟಣವಾಗಿ ಹೆಸರುಗೊಂಡಿದೆ. ಪ್ರಥಮ ಬುದ್ಧ ಸಮ್ಮೇಳನವು ಇಲ್ಲಿಯೇ ಜರುಗಿ ಸಾಂಗೋಪಾಂಗವಾಗಿ ಸಫಲಕಾರಿಯಾಗಿದೆ. ಇಂತಹ ಜಾಗಕ್ಕೆ ಅನತಿ ದೂರದಲ್ಲಿ ನಲಂದ ಗ್ರಾಮವಿದೆ. ಇಡೀ ವಿಶ್ವಕ್ಕೆ ಇದು ಒಂದಾನೊಂದು ಕಾಲದಲ್ಲಿ ತನ್ನ ಕೀರ್ತಿ ಬೆಳಗನ್ನು ಬೆಳಗಿವೆ. ಬೌದ್ಧ ಯುಗದ ರತ್ನ ದೀವಿಗೆಯ ಬೆಳಕು ಹೆಚ್ಚು ಹೆಚ್ಚು ತೀಕ್ಷ್ಣವಾಗಿ ದೃಗ್ಗೋಚರವಾಗುತ್ತಿದೆ. ಇಲ್ಲಿನ ಕಟ್ಟಡದ ಉತ್ಕೃಷ್ಟತೆಯನ್ನೂ, ಮಾಟವನ್ನೂ ನೋಡಿದರೆ ಆಶ್ಚರ್ಯವಾಗುತ್ತದೆ, ಇಂತಹ ಕಟ್ಟಡವನ್ನೂ, ಇಂತಹ ಇಟ್ಟಿಗೆಗಳನ್ನೂ ಈ ಯಂತ್ರಯುಗದಲ್ಲಿ ತಾನು ಎಲ್ಲಿಯೂ ನೋಡಲಿಲ್ಲವೆಂದು ಡಾ. ಸ್ಪೂನರ್‌ರವರು ಮುಕ್ತಕಂಠದಿಂದ ಹೇಳಿದ್ದಾರೆ. ಅದರ ಪ್ರಶಸ್ತವಾದ ಮಂದಿರಗಳನ್ನೂ ಗಗನಚುಂಬಿತ ಪರಿಶೋಧನಾಲಯಗಳನ್ನೂ ಹೊಯುನ್‌ತ್ಸಾಂಗನು ಕಂಡು ಮುಗ್ಧನಾಗಿ ಮನಸೋತು ಕಿಟಿಕೆಗಳಿಂದ ಹೊರಗೆ ನೋಡಿದರೆ ಮುಗಿಲುಗಳು ವಿಚಿತ್ರವಾಗಿ ರೂಪುಗೊಳ್ಳುತ್ತಿದ್ದುದನ್ನು ನೋಡಬಹುದಿತ್ತು ಎಂದಿದ್ದಾನೆ. ತಲೆಯೆತ್ತಿ ಸುತ್ತಲೂ ನೋಡಿದರೆ ಭಿಕ್ಷುವಿಗಳ ಕೋಣೆಗಳು ಮತ್ತು ಅಂಗಳಗಳು ಕಣ್ಣೆದುರಿಗೆ ನಿಲ್ಲುತ್ತವೆ. ಅವುಗಳ ಉಳಿದ ಗೋಡೆಗಳೂ ಸಹ ಕಾಣುತ್ತವೆ; ಆದರೆ ಚಿತ್ತಭಿತ್ತಿಯಲ್ಲಿ ಮಾತ್ರ ಅವು ಪ್ರತಿಬಿಂಬಿಸುತ್ತವೆ.

ಚೈತ್ಯಗಳ ರಚನಾ ಕೌಶಲ್ಯಕ್ಕೆ ತಲೆದೂಗಬೇಕಾಗುತ್ತದೆ. ಬುದ್ಧನು ಸಂಚಾರಮಾಡಿದ ಸ್ಥಳಗಳ ಸ್ಮಾರಕಗಳು ಇವು ಎನ್ನುತ್ತಾರೆ. ಅಂದಿನವರ ಕಲೋಪಾಸನ, ಸೌಂದರ್ಯ ಸಂಪತ್ತು ನೋಡಿದವರಿಗೆ ಮನವರಿಕೆ ಆಗದೆ ಇರದು! ಇಲ್ಲಿನ ಪ್ರತಿಮೆಗಳಿಂದ ಬುದ್ಧನ ಕಥಾಭಾಗವು ಅಷ್ಟಿಷ್ಟು ದೊರಕುತ್ತದೆ

"ನಲಂದ ಮಹಾವಿಹಾರದ ಅಂಗವಾಗಿ ಆರು ವಿದ್ಯಾಲಯಗಳಿದ್ದು ಗುಪ್ತ ಚಕ್ರವರ್ತಿಗಳು ಇವುಗಳಿಗೋಸ್ಕರ ವಿಶಾಲ ಭವನಗಳನ್ನು ಕಟ್ಟಿಸಿದರು. ಈ ಭವನಗಳಿಗೆ ಎಷ್ಟೋ ಅಂತಸ್ತುಗಳಿದ್ದವು. ಇವುಗಳ ಸುತ್ತಲೂ ಹಲವು ಬಾಗಿಲುಗಳು ಪ್ರಧಾನ ವಿದ್ಯಾಲಯದ ಬಳಿಯಿದ್ದವು. ಇತರ ಸಮೀಪದಲ್ಲಿ ಎಂಟು ಮಂದಿರಗಳು ಮಹಾಬಿಹಾರದ ನಡುವೆಯಿದ್ದವು. ಹಲವು ಮಂದಿಯು ಆದರಕ್ಕೆ ಗುರಿಯಾದ ಇವುಗಳ ಶಿಖರಗಳು ಪರ್ವತದ ತುದಿಗಳಂತೆ ಒಂದು ಕಡೆಗೆ ಕಾಣಿಸುತ್ತಿದ್ದವು. ವೇದ ಪಾಠಶಾಲೆಗಳು ಮುಂಜಾನೆಯ ಮಂಜಿನಲ್ಲಿ ಮೇಲ್ಭಾಗವು ಕಾಣಿಸದಷ್ಟು ಉನ್ನತವಾಗಿದ್ದವು. ಮೇಲಂತಸ್ತಿನ ಕೋಣೆಗಳು ಮುಗಿಲುಗಳಿಗಿಂತಲೂ ಎತ್ತರದಲ್ಲಿ ಇರುವಂತಿದ್ದವು. ಕಿಟಕಿಗಳಿಂದ ಮುಗಿಲುಗಳ ಬಗೆ ಬಗೆಯ ಬದಲಾವಣೆ ಮತ್ತು ಸೂರ್ಯ ಚಂದ್ರರ ಸಂಕ್ರಮಣಗಳು ಕಾಣುಸುತ್ತಿದ್ದವು.

—ಹೂಯನ್‌ತ್ಸಾಂಗನ ಚರಿತ್ರೆ.

ವಿದ್ಯಾರ್ಥಿಗಳಿಗೆ ಅಧ್ಯಯನ ವಿಚಾರಗಳನ್ನು ಬರೀ ಗಿಳಿ ಪಾಠ ಮಾಡಿಸದೆ ಅವರ ಹೃದಯದಲ್ಲಿ ಜ್ಞಾನದ ನಿರಂತರ ಪ್ರವಾಹವನ್ನು ಹರಿಯಿಸುವುದೇ ನಲಂದವಂತೆ! ಮತ್ತೊಂದು ಪ್ರತೀತಿ. ಹಿಂದಿನ ಜನ್ಮದಲ್ಲಿ ಕಥಾಗಕನು ಆ ಜಾಗದಲ್ಲಿಯೇ ಬೋಧಿಸತ್ವನಂತೆ ಜೀವನವನ್ನು ಸಾಧಿಸಿ, ಕೊನೆಗೆ ಅಲ್ಲಿಯೇ ದೊಡ್ಡದೊರೆಯಾದನು. ಅದೇ ಊರನ್ನು ತನ್ನ ಮುಖ್ಯಪಟ್ಟಣವಾಗಿ ನೇಮಿಸಿಕೊಂಡನು. ಅಂದೂ ಕೂಡ ಪ್ರಪಂಚದಲ್ಲಿದ್ದ ವ್ಯಾಕುಲ ದುಃಖ ಪರಂಪರೆಗೆ ಚಿಕಿತ್ಸೆ ಮಾಡಬೇಕೆಂಬ ಉದ್ಯಮದಿಂದ ಆತನು ಯಾವಾಗಲೂ ಕಾರ್ಯಪರನಾಗುತ್ತಿದ್ದನು. ದೇಹಿ ಎಂದವರಿಗೆ ನಾಸ್ತಿಯನ್ನದೆ ಸಹಾಯಮಾಡುತ್ತಿದ್ದನು. ಬಂದವರಿಗಾಗಿ ತನ್ನಲ್ಲಿ ಇದ್ದದನ್ನೆಲ್ಲವನ್ನು ದಾನಮಾಡುತ್ತಿದ್ದ. ದಯಾಮಯ ಗುಣಕ್ಕಾಗಿ ಆತನನ್ನು 'ಹರಿಯುತ್ತಿರುವ ದಾನ' ನನ್ನಾಗಿಮಾಡಿ ನ ಅಲಂದ ಎಂದು ಕರೆಯುತ್ತಿದ್ದರು ಕೊನೆಗೆ ಆತನ ಹೆಸರನ್ನು ನಿಲ್ಲಿಸಲು ಸಂಘಾರಾಮವನ್ನು ಅದೇ ಹೆಸರಿನಿಂದ ಕರೆದರು.

"ಈ ಸಂಘದ ತೆಂಕಲಲ್ಲಿನ ಮಾನವಿನ ತೋಫಿನ ಮಧ್ಯೆ ಹೊಂಡವೊಂದಿದು ಆ ಹೊಂಡದ ನಾಗನಿಗೆ ನಾಲಂದ ಕಮಲಗಳನ್ನು ಕೊಡುತ್ತಿದ್ದರು. ಸಂಘವು ಈ ಹೊಂಡದ ಕಡೆಯಲ್ಲಿ ಇದ್ದ ಕಾರಣ ನಾಲಂದವೆಂದಾಯಿತೆಂದು ತಿಳಿದು ಬರುತ್ತದೆ."

—ಹ್ಯೂಯನ್‌ತ್ಸಾಂಗನ ಚರಿತ್ರೆ.

ಮತ್ತೊಂದು ದಂತಕಥೆ. ವಿಹಾರದ ತೆಂಕಣ ಮಾವಿನ ತೋಪಿನ ಮಧ್ಯೆ ಕೊಳವೊಂದಿತ್ತು. ಅಲ್ಲಿ ನಲಾಂದವೆಂಬ ಹೆಸರಾದ ನಾಗವು ವಾಸಿಸುತ್ತಿತ್ತು. ಸಂಘಾರಾಮದ ತಳಹದಿಯನ್ನು ಹಾಕುವ ಸಮಯದಲ್ಲಿ ಅದಕ್ಕೆ ಪೆಟ್ಟು ತಾಗಲು ಅದು ಬಹಳವಾಗಿ ರಕ್ತವನ್ನು ಕಾರಿತು. ಅದನ್ನು ನೋಡಿದ ಭಿಕ್ಷುವು "ಇದು ಒಳ್ಳೆಯ ಸೂಚನೆಯು. ಇದರ ಸಂಘದ ಯಶಸ್ಸು ಬಹಳ ವಾಗಿ ಬೆಳೆಯುವುದು." ಎಂದರಂತೆ.

ಬುದ್ಧನು ತನ್ನ ಪ್ರವಾಸದ ಸಮಯದಲ್ಲಿ ಸಂಘಾರಾಮದ ಪ್ರದೇಶಕ್ಕೆ ಬಂದಿದ್ದನು. ಧನಿಕ ವ್ಯಾಪಾರಿ ಲೇಪನು ಆಗ ಅಲ್ಲಿ ಜೀವಿಸುತ್ತಿದ್ದನು. ಅಲ್ಲಿ ಅವ್ರಾಬ್ರಾತಿಕಾಗ್ರಹದಲ್ಲಿ ಬುದ್ಧನು ಮೂರು ಮಾಸ ಕಾಲ ಕಳೆದನು. ಮೊದಲು ಆ ಜಾಗವು ಶ್ರೇಷ್ಠಿನಾ ಅವ್ರಾಕ್ಕೆ ಸೇರಿ, ಅದನ್ನು ಐದು ನೂರು ವರ್ತಕರು ಹತ್ತುಅಕ್ಷ ಚಿನ್ನದ ನಾಣ್ಯಗಳಿಗೆ ಕೊಂಡು ಬುದ್ಧನಿಗೆ ಕೊಟ್ಟರು ಎಂದು ಹ್ಯುಯನ್‌ತ್ಸಾಂಗನು ಹೇಳಿದ್ದಾನೆ. ಅಲ್ಲಿಗೆ ಸಾರಿಪುತ್ರನು ಬರಲು ಆತನ ಸಂದೇಹಗಳೂ ಬುದ್ಧನಿಂದ ಪರಿಹಾರವಾದವು. ಬುದ್ಧನ ನಿರ್ವಾಣ ದನಂತರ ಶಕ್ರಾದಿತ್ಯ ದೊರೆಯು ಮಹಾಗುರುವಿನ ಸ್ಮಾರಕವಾಗಿ ಆ ವಿದ್ಯಾ ಲಯವನ್ನೂ ವಿಹಾರವನ್ನೂ ಕಟ್ಟಿಸಿದನು ಎಂದು ಹ್ಯುಯನ್‌ತ್ಸಾಂಗನು ಬರೆದ್ದಾನೆ. ಶಕ್ರಾದಿತ್ಯನ ವಂಶಸ್ಥರು ನಾಲ್ಕು ಮಂದಿರಗಳನ್ನು ಕಟ್ಟಿಸಿ ವಿಸ್ತರಿಸಿದರು. ಮಧ್ಯಭಾರತದ ದೊರೆಯೊಬ್ಬನು ಆರನೆಯ ಮಂದಿರವನ್ನು ಕಟ್ಟಿಸಿ, ದೊಡ್ಡ ಪ್ರಾಕಾರವೊಂದನ್ನು ನಿರ್ಮಿಸಿದನು. ಮಧ್ಯೆ ಮಧ್ಯೆ ಮಹ ಮದೀಯರಿಂದಲೂ ಜೈನರಿಂದಲೂ ವಿನಾಶಕಾರ್ಯವು ನಡೆಯಿತು. ಆರನೆ ಶತಮಾನದಿಂದ ಇವರ ಪ್ರಾಮುಖ್ಯತೆಯ ಪ್ರಾರಂಭವು. ತಾರಾನಾಥನ ಅಭಿ ಪ್ರಾಯದ ಪ್ರಕಾರ ಅಶೋಕನು ಇದರ ಪ್ರಥಮಸ್ಥಾಪಕನು. ಗುಪ್ತಚಕ್ರವರ್ತಿ ಗಳ ಕಾಲದಲ್ಲಿ ಇದರ ಪ್ರಗತಿಯು ಭರದಿಂದ ಸಾಗತೊಡಗಿತು. ನಿಜವಾದ ವಿಶ್ವವಿದ್ಯಾನಿಲಯವಾಗಿ ರೂಪುಗೊಂಡಿದ್ದು ಇವರ ಕಾಲದಲ್ಲಿಯೇ. ಟಿಬೆಟ್ಟಿಗೆ ಸಭ್ಯತೆಯನ್ನು ಕಲಿಸಿದ ಆಚಾರ್ಯ ಶಾಂತವಕೇತರು ಈ ವಿದ್ಯಾನಿಲಯದವ ರಾಗಿದ್ದರು. ಟಿಬೆಟ್ಟಿನ ಸಮ್ಮೇವಿಹಾರವನ್ನು ಇದರ ಮಾದರಿಯ ಮೇಲೆ ಕಟ್ಟಿ ದರು. ಜಪಾನಿನ ನಾರಾವಿಹಾರವು ನಲಂದದ ಅನುಕರಣೆಯ ಮೇಲೆ ಆಯಿತು. ಇಲ್ಲಿನ ಶಿಕ್ಷಣದಂತೆ ಜಪಾನರು ಸಭ್ಯರಾದರು. ಹ್ಯುಯನ್‌ತ್ಸಾಂಗನು ಕ್ರಿ. ಶ. ೬೩೦ ರಲ್ಲಿ ಇಲ್ಲಿಗೆ ಬಂದು ವಿದ್ಯಾಲಯದ ಕೀರ್ತಿಯನ್ನು ಆಚಂದ್ರಾರ್ಕ ವಾಗಿರಿಸಿ, ಕಾರ್ಯಮಾಡತೊಡಗಿದನು. ಸುಮಾರು ಏಳನೆಯ ಶತಮಾನದ

ವೇಳೆಗೆ ಯೂರೋಪು ಖಂಡವು ಮಧ್ಯ ಯುಗದ ಅಜ್ಞಾನ ಕೂಪದಲ್ಲಿ ಮುಳುಗಿ ಏಳುತ್ತಿದ್ದಾಗ ಭಾರತದಲ್ಲಿ ಒಂದು ಸಂಜೀವ ಮತ್ತು ಪ್ರಕಾಶಮಾನವಾದ ಅಂತರಾಷ್ಟ್ರೀಯ ಶಿಕ್ಷಣ ಕೇಂದ್ರವಾಗಿ ಇದು ಮೆರೆಯುತ್ತಲಿತ್ತು. ಹನ್ನೊಂದನೆ ಶತಮಾನದ ಮಧ್ಯದವರೆಗೆ ಇದು ಜ್ಞಾನಜ್ಯೋತಿರ್ಮಯ ಪ್ರಕಾಶವನ್ನು ಬೀರುತ್ತಲಿತ್ತು. ಸಾಲಕುಲದ ಧರ್ಮಸಾಲ ದೊರೆಯಕಾಲಕ್ಕೆ ವಿಕ್ರಮಶಿಲಾ ವಿದ್ಯಾನಿಲಯವು ಸ್ಥಾಪನೆಯಾಗಿ ಬೆಂಬಲವೆಲ್ಲವೂ ಅದಕ್ಕೆ ಸಿಕ್ಕಿತು. ವಿಶಾಲ ಭವನಗಳ ಜೀರ್ಣೋದ್ಧಾರವು ಬರುಬರುತ್ತ ಕಡಿಮೆಯಾಯಿತು. ತುರುಕರ ಆಕ್ರಮಣವು ಅತಿಯಾಗಿತ್ತು. ಹಿಂದೂ ಧರ್ಮದ ಪುನರುಜ್ಜೀವನವಾದಂತೆಲ್ಲ ಇದರ ವರ್ಚಸ್ಸು ಕಡಿಮೆಯಾಗುತ್ತ ಬಂದಿತು. ಇದರ ಮಂದಿರಗಳು ಕ್ರಮ ಕ್ರಮೇಣ ಮೂಲೆಗುಂಪಾದವು. ದರಿದ್ರ ಭಿಕ್ಷುಗಳಿಗೆ ಇದರ ವೆಚ್ಚವನ್ನು ಎಣಿಸಲು ಅಸಾಧ್ಯವಾಯಿತು. ಬರುಬರುತ್ತ ಇದು ವಿಪನ್ನಾವಸ್ಥೆಗೆ ಇಳಿಯಿತು. ಕೊನೆಗೆ ಮೂರ್ತಿಧ್ವಂಸಕರಾದ ಮುಸಲ್ಮಾನರು ಇದನ್ನು ಹಾಳು ಮಾಡಿದರು. ಈ ಏಟಿನಿಂದ ಮೇಲೆಯೂ ಮುಂಡಿತ ಭದ್ರನೆಂಬ ಭಿಕ್ಷುವು ಬಹಳ ಕಷ್ಟದಿಂದ ಇದನ್ನು ಕೆಲಮಟ್ಟಿಗೆ ಉದ್ಧಾರಮಾಡಿದನು. ಚೈತ್ಯದೇವಾಲಯಗಳಿಗೆ ಪುನಃ ರೂಪು ಬಂದಾಯಿತು. ಆದರೆ ದುರ್ದೈವಶಾತ್ ಇದು ಸಂಪೂರ್ಣವಾಗಿ ಜೈನರಿಂದ ನಾಶವಾಯಿತು.

ಇಲ್ಲಿನ ಕಾರ್ಯಕ್ರಮವು ಬಹಳ ಉದಾರವಾಗಿತ್ತು. ಬರೀ ಸಾಂಪ್ರದಾಯಿಕವಾದ ಬೌದ್ಧಧರ್ಮವಷ್ಟೇ ಅಲ್ಲದೆ ಸಕಲ ವಿಚಾರಗಳ ಶಿಕ್ಷಣವು ದೊರಕುತ್ತಿತ್ತು. ವ್ಯಾಕರಣ, ಸಾಹಿತ್ಯ, ದರ್ಶನ, ಧರ್ಮ, ಜೋತಿಷ್ಯ, ವೈದ್ಯಕ, ತಂತ್ರ, ವೇದ, ಶಬ್ದ, ಸಾಂಖ್ಯಾದಿ ಹಲವಾರು ವಿಷಯಗಳಲ್ಲಿ ಶಿಕ್ಷಣವು ಇಲ್ಲಿ ಸಿಗುತ್ತಿತ್ತು. ಅಸ್ತ್ರಚಿಕಿತ್ಸೆಯಲ್ಲಿ (Operation) ಅದ್ವಿತೀಯ ಕಾರ್ಯ ನಡೆಯುತ್ತಿತ್ತು ಬಹಳ ಕಾಲದವರೆಗೆ ದೃಢಕಾಯರಾಗಿ ಬಾಳಲು ತೆಗೆದುಕೊಳ್ಳುತ್ತಿದ್ದ ಔಷಧಿಯು ಅಂದು ಅವರಿಗೆ ಗೊತ್ತಿತ್ತು. ಇಲ್ಲಿ ಗ್ರಂಥ ಶಿಕ್ಷಣವಲ್ಲದೆ ಹಸ್ತಕೌಶಲ್ಯದ ಶಿಕ್ಷಣವೂ ಸಹ ದೊರಕುತ್ತಿತ್ತು. ಕಟ್ಟಡದ ಹೆಬ್ಬಾಗಿಲಲ್ಲಿ ವೃದ್ಧ ಭಿಕ್ಷುವು ಬಂದು ವಿದ್ಯಾರ್ಥಿಗಳಿಗೆ ಪ್ರಶ್ನೆಹಾಕುತ್ತಿದ್ದನು. ಭಿಕ್ಷುವಿನ ಅಪಾರಜ್ಞಾನಕ್ಕೆ ಬಂದವರು ಉತ್ತರಕೊಡಲಾರದೇ ಹೋಗುತ್ತಿದ್ದವರು ಕೆಲಮಂದಿ ಈ ಪ್ರವೇಶ ಪರೀಕ್ಷೆಯಲ್ಲಿ ಶೇಕಡಾ ಇಪ್ಪತ್ತುಮಂದಿ ಜಯಶೀಲರಾಗುತ್ತಿದ್ದರು. ಈ ಕಠಿಣ ಪರೀಕ್ಷೆಯು ಅಗ್ನಿ ಪರೀಕ್ಷೆಯಲ್ಲವೇ? ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದ ಯೋಗ್ಯತಾ ಪತ್ರದ ಮುದ್ರೆಯು ಶ್ರೀ ನಲಾಂದಾ ಮಹಾವಿಹಾರೀ ಭಿಕ್ಷು

ಸಂಘದ ಧಾರ್ಮಿಕ ತಂಪನ್ನು ತೋರಿಸುತ್ತಿತ್ತು. ಇದರ ಖರ್ಚು ಪ್ರಧಾನವಾಗಿ ರಾಜಾಶ್ರಯದಿಂದ ನಡೆಯುತ್ತಿತ್ತು. ಇದರ ಪೋಷಣೆಯ ಸಲುವಾಗಿ ಎರಡು ನೂರು ಗ್ರಾಮಗಳ ಉತ್ಪನ್ನವು ನಿಯಾಮತವಾಗಿತ್ತು. ಮೂರುನೂರು ಕೋಣೆ ಗಳು ವಿದ್ಯಾರ್ಥಿಗಳಿಗಾಗಿ ಇದ್ದವು. ಇಲ್ಲಿ ಒಂದುಸಾವಿರದ್ದೈನೂರು ಅಧ್ಯಾ ಪಕರೂ ಇದ್ದರು. ಇವರು ದಿನವೂ ಬಗೆ ಬಗೆಯ ವಿಚಾರಗಳ ಮೇಲೆ ವ್ಯಾಖ್ಯಾನವನ್ನು ಕೊಡುತ್ತಿದ್ದರು. ಪ್ರವಚನ ವಾದ ವಿವಾದವು ಈ ಶಿಕ್ಷಣ ಪದ್ಧತಿಯಲ್ಲಿ ಏರ್ಪಟ್ಟಿತು. ವಿಶ್ವವಿದ್ಯಾನಿಲಯದ ವ್ಯವಸ್ಥಾಪಕ ಸಮಿತಿಯಲ್ಲಿ ಮೂರು ಪ್ರಧಾನ ಅಧಿಕಾರಿಗಳು ಇರುತ್ತಿದ್ದರು. ೬೭೫-೬೮೦ರ ವರೆಗೆ ಇಲ್ಲಿನ ಪ್ರಧಾನಾಧಿಕಾರಿಯು ತಿನ್ ಫಾಸಾಂಗನು ಇಲ್ಲಿನ ಅಧ್ಯಯನಿಯಾಗಿದ್ದ ಇತ್ಸಿಂಗ್ ಚೀನಾ ಯಾತ್ರಿಕನ ಹೇಳಿಕೆಯ ಪ್ರಕಾರ ಆಧುನಿಕ ವಿಶ್ವವಿದ್ಯಾನಿಲಯದ ಕುಲಪತಿಗೆ ಈ ಪ್ರಧಾನಾಧಿಕಾರಿಯನ್ನು ಹೋಲಿಸಬಹುದು. ಎರಡನೆಯವ ನಾದ ಸ್ಥವಿರನು ಈಗಿನ Principal ಗೆ ಹೋಲಿಸ ಬಹುದು. ಹೂಯನ್ ತ್ಸಾಂಗನ ಕಾಲದಲ್ಲಿ ಆಚಾರ್ಯಶೀಲಭದ್ರನು ತಿನ್ ಫಾಸಾಂಗನಾಗಿದ್ದನು. ನಾಗಾರ್ಜುನ, ಅಶ್ವಘೋಷ, ವಸುಭದ್ರ, ಅಸಂಗ, ದಿಗ್ನಾಗ, ಕಮಲಸಿಂಗ, ಚಂದ್ರಪಾಲ, ಗುಣಮುನಿ, ಸ್ಥಿರಮತಿ, ಪ್ರಭಾಮಿತ್ರ, ಜ್ಞಾನಚಂದ್ರ, ಜಿನ ಮಿತ್ರ, ಪದಸಂಭವ, ಬುದ್ಧಕೀರ್ತಿ, ಕುಮಾರ ಶ್ರೀ ಶರಹಾತಿಗಳು ಅಧ್ಯಾಪಕ ರಾಗಿದ್ದರು. ಸೂತ್ರ ಶಾಸ್ತ್ರಗಳನ್ನು ಕಲಿಸುವವರು ಸುಮಾರು ಸಾವಿರಮಂದಿಯೂ ತ್ರಿದಶ ಸಂಗ್ರಹಗಳನ್ನು ಕಲಿಸುವವರು ಐದುನೂರು ಜನರೂ, ಪಂಚದಶ ಸಂಗ್ರಹಗಳನ್ನು ಕಲಿಸುವವರು ಹತ್ತು ಜನರೂ ಇದ್ದರು. ಅಲ್ಲಿನ ಯಾವತ್ತು ಜ್ಞಾನಭಂಡಾರವನ್ನು ಶೀಲಭದ್ರನು ಸೂರೆಮಾಡಿ, ಅದರ ಸಾರವನ್ನು ವಿದ್ಯಾರ್ಥಿ ಗಳಿಗೆ ಬೀರುತ್ತಿದ್ದನು. ಆತನ ವಯಸ್ಸು ನಡತೆ ಅಪಾರ ವಿದ್ವತ್ವ ಸರ್ವರಲ್ಲಿಯೂ ಪ್ರೀತಿ ವಿಶ್ವಾಸವನ್ನು ಗಳಿಸಿದ್ದವು. ವಿದ್ಯಾಲಯದ ಎತ್ತರವಾದ ದ್ವಾರ ಪ್ರವೇಶ ಗಳಲ್ಲಿ ಮುಖ್ಯ ಅಧ್ಯಾಪಕರ ಹೆಸರನ್ನು ಕೆತ್ತುತ್ತಿದ್ದರು. ಕ್ರಿ. ಶ. ೭೫೦ರಲ್ಲಿ ಟಿಬೆಟ್ಟಿನ ದೊರೆಯು ಭಿಕ್ಷುವಾದ ಕಮಲ ಶೀಲನನ್ನು ತನ್ನಲ್ಲಿಗೆ ಕರೆಯಿಸಿ ಕೊಂಡು ಅಲ್ಲಿನ ಜನರಿಗೆ ಜ್ಞಾನಬೋಧೆಯನ್ನು ಮಾಡಿಸುವದಲ್ಲದೆ ಆತನಿಂದ ವಾದಗಳನ್ನು ಕೂಡ ಮಾಡಿಸಿ, ಪ್ರತಿವಾದಿಗಳು ತಲೆಬಾಗುವಂತೆ ಮಾಡಿದನು. ಗ್ರಂಥಾಲಯಗಳೇ ನಿಜವಾದ ವಿದ್ಯಾಲಯಗಳು ಎಂದು ಕಾರ್ಲೈಲನ ಹೇಳಿಕೆ ಅತ್ಯಂತ ದೊಡ್ಡದಾದ ಪುಸ್ತಕ ಭಂಡಾರವು ಇದ್ದ ಜಾಗವನ್ನು ಧರ್ಮಗಂಜ್ ಎಂದು ಕರೆಯುತ್ತಿದ್ದರು. ಮೂರು ಸುಂದರವಾದ ಮದಿರಗಳಲ್ಲಿ ರತ್ನಸಾಗರ,

ರತ್ನದಧಿ, ರತ್ನರಂಜಿತ ಇದ್ದವು. ಬುದ್ಧ ಮೂಲ ತತ್ವಗಳಾದ ಬುದ್ಧ ಧರ್ಮ ಸಂಘವನ್ನು ಪ್ರತಿಬಿಂಬಿಸಿದ್ದವು. ರತ್ನದಧಿ ಭಂಡಾರವು ಒಂಬತ್ತು ಅಂತಸ್ತಿನ ಆಲಯವಾಗಿತ್ತು. ಅಲ್ಲಿಯೇ ಮುಖ್ಯ ಮುಖ್ಯವಾದ ಪ್ರತಿಗಳನ್ನು ಜತನ ಮಾಡುತ್ತಿದ್ದರು. ಅಲ್ಲಿಯೇ ಪ್ರಾಜ್ಞಪರಾಮಿತ ಸೂತ್ರಗಳಿದ್ದವು. ಬೆಳಗಿನ ಗಂಟೆಯಾಗುತ್ತಲೇ ವಿಹಾರದ ಹತ್ತಿರವಿದ್ದ ದಶಸರೋವರಗಳಿಗೆ ಸ್ನಾನಕ್ಕೆ ಹೋಗುತ್ತಿದ್ದರು; ಕಾಲವನ್ನು ಸೂಚಿಸಲು ಅಲ್ಲಿ ಒಂದು ಗಳಿಗೆಯ ಬಟ್ಟಲು ಇತ್ತು. ಮಹಾವಿಹಾರದೊಳಗೆ ಹಲವು ಛತ್ರಗಳಿದ್ದು ಅಲ್ಲಿನ ಪ್ರವಾಸಿಗಳಿಗೆ ಪುಕ್ಕಟೆ ಭೋಜನ ಮತ್ತು ಇತರ ಉಪಯೋಗಿಕ ಸಾಮಗ್ರಿಗಳು ಸಿಗುತ್ತಿದ್ದವು. ಇತ್ಸಂಗ್ ಹೇಳಿಕೆಯಂತೆ ಭಾರತದಲ್ಲಿ ಬಹಳತರನಾಗಿ ಭಿಕ್ಷು ಮತ್ತು ಗೃಹಸ್ಥರು ಇಬ್ಬರೂ ದೂರ ತಿರುಗಾಡುವ ಪರಿಸ್ಥಿತಿ ಉಳ್ಳವರಾಗಿದ್ದರು. ಉಪಯುಕ್ತ ಕಾಲದಲ್ಲಿ ಯಾವದಾದರೊಂದು ನಿರ್ಧರ ಹಾದಿಯಿಂದ ತಮ್ಮ ಇಚ್ಛೆಯಂತೆ ತಿರುಗಾಡಲು ಹೋಗುತ್ತಿದ್ದರು. ಇದರಿಂದ ಜೀರ್ಣಶಕ್ತಿಯೂ, ರೋಗ ಪರಿಹಾರವೂ ಆಗುತ್ತಿತ್ತು.

"ವಿದ್ಯಾಲಯದ ಭವ್ಯಮಂದಿರಗಳನ್ನೂ, ಸೊಗಸಾದ ಸಂಶೋಧನಾಲಯಗಳನ್ನು ನೋಡಿ ಅವುಗಳ ವಿಚಾರವಾಗಿ ಬರೆಯಲು ಭಾಷಾಶಕ್ತಿಯು ಸಾಕಾಗಿರಲಿಲ್ಲ." —ಹೊಯನ್‌ತ್ಸಾಂಗ.

ಇತ್ಸಂಗನ ಕಾಲದಲ್ಲಿ ಎಂಟು ಚಂದ್ರಶಾಲೆಗಳೂ ಮೂರುನೂರು ಕೋಣೆಗಳೂ ಇದ್ದವು.

ಹ್ಯೂಯನ್‌ತ್ಸಂಗನ ಯಾತ್ರೆಯ ಕಾಲಕ್ಕೆ ವಿದ್ಯಾರ್ಥಿಗಳ ಸಂಖ್ಯೆಯು ಹತ್ತುಸಾವಿರವಿತ್ತು. ಇಲ್ಲಿನ ಜೀವನವು ಬೌದ್ಧಿಕ ಮತ್ತು ಅಧ್ಯಾತ್ಮಿಕ ದೃಷ್ಟಿಯಿಂದ ಸಾಕಷ್ಟು ಉನ್ನತವಾಗಿತ್ತು; ಆದರೆ ಇಲ್ಲಿನ ಕಾರ್ಯಕ್ರಮದಲ್ಲಿ ಕಾಯಿದೆ ಮತ್ತು ಉದ್ಯೋಗ ದಂದೆಗಳ ಶಿಕ್ಷೆಗಳ ತೀರಾ ಅಭಾವವಿದ್ದ ಸಮಾಚಾರವು ಗಮನಾರ್ಹವಾಗಿದೆ. ಇಲ್ಲಿ ಉಚ್ಚ ಶಿಕ್ಷಣವನ್ನು ಪಡೆಯುತ್ತಿದ್ದ ವಿದ್ಯಾರ್ಥಿಗಳು ಆಹಾರದ ಚಿಂತೆಯಿಂದ ಪೂರ್ಣ ನಿಶ್ಚಿಂತರಾಗುತ್ತಿದ್ದು ಅವರ ಸಮಯ ಬಲಗಳೆಲ್ಲವೂ ಸಂಪೂರ್ಣವಾಗಿ ಬೌದ್ಧಿಕ ಮತ್ತು ಆಧ್ಯಾತ್ಮಿಕ ವಿಕಾಸಕ್ಕಾಗಿ ವ್ಯಯವಾಗುತ್ತಿತ್ತು. ನಲಂದದ ಪ್ರಖರ ಕೀರ್ತಿಯನ್ನು ಕೇಳಿದ ಹ್ಯೂಯನ್‌ತ್ಸಾಂಗನು ನಲಂದಕ್ಕೆ ಬಂದು ವ್ಯಾಸಂಗ ಮಾಡಲು ಆತನ ಅಭೀಷ್ಟವು ನೆರವೇರಿತು. ಇಲ್ಲಿನ ವಿದ್ಯಾರ್ಥಿಗಳೆಲ್ಲರೂ

ಸಕಲಕಲೆಗಳನ್ನೂ, ಶಾಸ್ತ್ರಗಳನ್ನೂ ಕಲಿಯುತ್ತಿದ್ದರೂ ಕೂಡ ಮಹಾಯಾನ ಗ್ರಂಥಗಳಿಗೆ ಹೆಚ್ಚಿಗೆ ಪ್ರೇಮವನ್ನು ತೋರಿಸುತ್ತಿದ್ದರು. ವಿದ್ಯಾರ್ಥಿ ಜೀವನವು ಕೇವಲ ಸರಳವಾಗಿದ್ದಿತು. ಹ್ಯೂಯನ್‌ತ್ಸಾಂಗನಿಗೆ ದಿವಸವೂ ನೂರಿಪ್ಪತ್ತು ಜಂಬೀರಗಳನ್ನೂ, ಇಪ್ಪತ್ತು ಮಗ್ಗಗಳನ್ನೂ ಕೊಡುತ್ತಿದ್ದರು. ಅಲ್ಲದೆ ಊಟಕ್ಕಾಗಿ ಮಹಾಶಾಲಿಯಕ್ಕಿಯನ್ನು ಕೊಡುತ್ತಿದ್ದರು. ಹ್ಯೂಯನ್ತ್ಸಾಂಗನ ಹೇಳಿಕೆಯಿಂದ ಆಹಾರವು ಸ್ಪಷ್ಟವಾಗುತ್ತದೆ.

ಎಣ್ಣೆ ತುಪ್ಪವೂ ಕೂಡ ಸಾಕಾದಷ್ಟು ಸಿಗುತ್ತಿತ್ತು. ಇಲ್ಲಿನ ವಿದ್ಯಾರ್ಥಿಗಳಿಗೆ ಸಂಕುಚಿತತೆಯು ಇರಲಿಲ್ಲ. ಇಲ್ಲಿನ ವಿದ್ಯಾರ್ಥಿಗಳು ಬರೀ ವಿದ್ವಾಂಸರಾಗುವುದಲ್ಲದೆ ವಿದ್ಯಾಲಯದ ವಾತಾವರಣವು ಅವರ ಬಾಳಿನ ಮೇಲೆ ತನ್ನ ವರ್ಚಸ್ಸನ್ನು ಬೀರುವಂತೆ ಇತ್ತು. ಅವರ ಅಂತಃಕರಣವು ವಿನಯ ಸೇವಾಭಾವನೆಗಳಿಗೆ ಮನೆಯಾಗಿ ಗುರುಭಕ್ತಿಗೆ ಗೂಡಾಗಿತ್ತು.

# ಶ್ರೀಮಾತೆ ರಮಾದೇವಿಯರ ಧಾರವಾಡದ ಸಂದರ್ಶನ.

## ಮುಂದಿನ ಫೆಬ್ರುವರಿ ತಿಂಗಳಲ್ಲಿ

ನಮ್ಮ ಕಾಲದ ಸಂತವರೇಣ್ಯರ ಮಾಲಿಕೆಯಲ್ಲಿ ಮಂಗಳೂರಿನ ಸದ್ಗುರು ಶ್ರೀ ರಮಾದೇವಿಯವರು ಒಂದು ವಿಶಿಷ್ಟ ಸ್ಥಾನವನ್ನು ಪಡೆದ್ದಾರೆ. ಭಕ್ತಿಮಾರ್ಗದ ಪ್ರವರ್ತಕರಾದ ಅವರು ಇಪ್ಪತ್ತೆಂಟು ವರ್ಷ ವಯಸ್ಸಾದಾಗಲೇ ಆತ್ಮಸಾಕ್ಷಾತ್ಕಾರವನ್ನು ಹೊಂದಿದರು. ರಾಮ, ಕೃಷ್ಣ, ಪರಶಿವ ಮತ್ತು ಜಗನ್ಮಾತೆಯರ ದರ್ಶನವನ್ನು ಅನೇಕ ಬಾರಿ ಅವರು ಪಡೆದಿದ್ದಾರೆ. ಎಲ್ಲ ತರದ ಸಮಾಧಿಯನ್ನೂ ಅನುಭವಿಸಿದ ಅವರು ಮುಖ್ಯತಃ ಭಾವಸಮಾಧಿಯ ಸಮಯದಲ್ಲಿ ವಿಶೇಷ ರೀತಿಯಿಂದ ಆಧ್ಯಾತ್ಮಿಕ ಶಕ್ತಿಯನ್ನು ಪ್ರಸೃತಗೊಳಿಸಿ ಸುತ್ತಲಿರುವ ಸುಪ್ತ ಜೀವಿಗಳನ್ನು ಜಾಗ್ರತಗೊಳಿಸುತ್ತಾರೆ. ಇಂತಹ ಮಹಾತ್ಮರನ್ನು ನೋಡುವದು ಸಹ ಒಂದು ಅಪೂರ್ವಭಾಗ್ಯ.

೧೯೬೦ ಫೆಬ್ರುವರಿ ತಿಂಗಳ ಮಧ್ಯದಲ್ಲಿ ಶ್ರೀಮಾತೆ ರಮಾದೇವಿಯವರು ಪ್ರಥಮಬಾರಿ ಧಾರವಾಡವನ್ನು ಸಂದರ್ಶಿಸಲಿರುವರು. "ಮಹಾತ್ಮರ ಸಂಗವು ದುರ್ಲಭವೂ, ಅಗಮ್ಯವೂ ಅಮೋಘವೂ ಆಗಿದೆ. ಪರಮಾತ್ಮನ ಕೃಪೆಯೊಂದರಿಂದಲೇ ಅದು ಲಭಿಸಲು ಸಾಧ್ಯ" ಎಂದು ಮಹರ್ಷಿ ನಾರದರು ಹೇಳುತ್ತಾರೆ. ಈ ಮಹಾನ್ ವಿಭೂತಿಯ ದರ್ಶನದ ಲಾಭ ಧಾರವಾಡದ ಅಷ್ಟೇ ಏಕೆ? ಉತ್ತರ ಕರ್ನಾಟಕದ—ಆಧ್ಯಾತ್ಮಪ್ರೇಮಿ ಜನರೆಲ್ಲರಿಗೆ ಶೀಘ್ರವೇ ಲಭಿಸಲಿದೆ. ಅವರಿಗೆ ಹಾರ್ದಿಕ ಸ್ವಾಗತನೀಡಿ ಅವರ ಸಂದರ್ಶನದ ಪೂರ್ಣಲಾಭ ಪಡೆಯುವ ಸುಯೋಗ ನಮ್ಮೆಲ್ಲರಿಗೆ ಒದಗಿ ಬಂದಿದೆ.

ಈ ದಿಶೆಯಲ್ಲಿ ಎಲ್ಲ ವ್ಯವಸ್ಥೆಯನ್ನು ಮಾಡುವದಕ್ಕಾಗಿ ಮೊನ್ನೆ ಧಾರವಾಡದ ಇಲೆಕ್ಟ್ರಿಕ್ ಪಾವರ ಹೌಸಿನಲ್ಲಿ ಸೇರಿದ ಆಧ್ಯಾತ್ಮಿಕ ಪ್ರೇಮಿ ನಾಗರಿಕರ ಸಭೆಯಲ್ಲಿ "ಶ್ರೀ ರಮಾದೇವಿ ಸ್ವಾಗತ ಸಮಿತಿಯ ರಚನೆಯಾಯಿತು.

ಅದರ ಪದಾಧಿಕಾರಿಗಳು ಈ ಕೆಳಗಿನಂತಿರುವರು:—

| | |
|---|---|
| ಅಧ್ಯಕ್ಷಿಣಿ | ಶ್ರೀಮತಿ ಲೀಲಾವತಿ ಸಿ. ದೇಸಾಯಿ. |
| ಕಾರ್ಯಾಧ್ಯಕ್ಷಿಣಿ | ಡಾಕ್ಟರ ಶ್ರೀಮತಿ ಉಮಾಬಾಯಿ ಕೂಪ್ಪಿಕರ. |
| ಉಪಕಾರ್ಯಾಧ್ಯಕ್ಷಿಣಿಯರು | ಶ್ರೀಮತಿ ಅಂಜನಿಬಾಯಿ ನೀಲೇಕಣಿ ಮತ್ತು<br>ಶ್ರೀಮತಿ ಕಲ್ಯಾಣಿಬಾಯಿ ಕಾನಾಡ. |

ಪ್ರಧಾನ ಕಾರ್ಯದರ್ಶಿ ಡಾಕ್ಟರ ವಿ. ಜಿ, ಕುಲಕರ್ಣಿ.
ಜೊತೆ ಕಾರ್ಯದರ್ಶಿಯರು ಶ್ರೀ. ಎಮ್. ಕೆ. ಪಟವರ್ಧನ ಮತ್ತು
ಶ್ರೀ. ಎನ್. ಎಸ್. ಕಾರಂಡೆ.
ಕೋಶಾಧ್ಯಕ್ಷ ಶ್ರೀ. ಪಿ. ಸಿ. ಖೇರ.

ಇದೊಂದು ಪ್ರವಿತ್ರ ಕಾರ್ಯ. ಈ ಕಾರ್ಯದಲ್ಲಿ ಉತ್ತರ ಕರ್ನಾಟಕದ ಮುಖ್ಯವಾಗಿ ಧಾರವಾಡದ ಸಹೃದಯ ನಾಗರಿಕರೆಲ್ಲ ತನು-ಮನ-ಧನಗಳಿಂದ ನೆರವಾಗಿ ಪುಣ್ಯಭಾಗಿಗಳಾಗಬೇಕೆಂದು ಪ್ರಾರ್ಥನೆ. ಹೆಚ್ಚಿನ ವಿವರಗಳನ್ನು ಪದಾಧಿಕಾರಿಗಳಿಂದ ತಿಳಿದುಕೊಳ್ಳಬಹುದು.

ಧಾರವಾಡ
ತಾ. ೨೨-೧೨-೧೯೫೯

ಜೊತೆ ಕಾರ್ಯದರ್ಶಿ
(ಡಾಕ್ಟರ ವಿ. ಜಿ. ಕುಲಕರ್ಣಿ)
Msc P·h·d.

ಪ್ರಧಾನ ಕಾಯದರ್ಶಿ.
ಶ್ರೀಮತಿ ರಮಾದೇವಿ
ಸ್ವಾಗತ ಸಮಿತಿ ಧಾರವಾಡ.

———

# ಸದಾಆನಂದಪ್ಪನ ವಚನಗಳು.

## ಭಾಗ ೧.

(ಸಂಪಾದಕರಿಂದ)

ದೇಶಾಭಿಮಾನಿಗಳೇ, ಈ ವಚನಗಳನ್ನು ತಯಾರಮಾಡಿದನಾನು ಸರ್ವ ಜನರಿಗೆ ವಿಜ್ಞಾಪನೆ ಮಾಡಿಕೊಳ್ಳುವದೇನಂದರೆ, ಈ ಭೂಲೋಕದ ನರಜನರಿಗೆ ಮೋಕ್ಷವಾಗುವದಕ್ಕೆ ವಚನಗಳೇ ಮುಖ್ಯವಾಗಿದ್ದು, ವಚನಗಳಂತೆ ಯಾರು ನಡಿವರೊ ಅವರಿಗೆ ಮೋಕ್ಷ ಆಗುವದು. ನೋಡಿರಿ, ಪೂರ್ವದಲ್ಲಿ ಕೆಲವು ಮಾನ್ಯರು ಜನರಿಗೆ ಮೋಕ್ಷಗೋಸ್ಕರ ಪರವುಪಕಾರದದೆಶೆಯಿಂದ ಎಷ್ಟೋ ಕಷ್ಟಪಟ್ಟು ವಚನಗಳನ್ನು ತಯಾರು ಮಾಡಿರುವರು. ಅವರಂತೆ ಈಗ ನಿಜಾಂ ಸರಕಾರ ಹೈದ್ರಾಬಾದು ಇಲಾಖೆ ಗುಲಬುರ್ಗಾ ಜಿಲ್ಹೆ ರಾಯಚೂರು ಪೈಕಿ ತಾಲೂಕು ದೇವದುರ್ಗದಲ್ಲಿ ಇರುವಂಥ ಶಿವಭಕ್ತನಾದ ಸದಾಆನಂದಪ್ಪನು ತಾನು ಹುಟ್ಟಿದ್ದಕ್ಕೆ ಜನ್ಮಸಾರ್ಥಕ ಸಾಫಲ್ಯ ಆಗಬೇಕೆಂದು "ಪರೋಪಕಾರಿ ಶರೀರಮಿದಂ" ಎಂಬುವಂತೆ ಮುಂದಿನ ನರಜನರಿಗೆ ಮೋಕ್ಷದಗೋಸ್ಕರ ಪೂರ್ವಿಕರಂತೆ ಜ್ಞಾನಶೋಧಿಸಿ ಕಷ್ಟಬಟ್ಟು ಗುರುಪ್ರಸಾದದಿಂದ ಷಟ್‌ಸ್ಥಲ ವಚನಗಳು ಎಂಬ ನಾಮವನ್ನಿಟ್ಟು ಭೂಲೋಕದ ನರಜನರಿಗೆ ಪರವುಪಕಾರಕ್ಕೋಸ್ಕರ ಅನೇಕ ಜ್ಞಾನವಚನಗಳನ್ನು ತಯಾರ ಮಾಡಿರುವೆನು. ನೋಡಿರಿ, ಹಿಂದಕ್ಕೆ ನಿಜಗುಣ ಶಿವಯೋಗಿ ತಮ್ಮ ಕೈವಲ್ಯದ ಮೊದಲನೇ ಪದದಲ್ಲಿ "ಶ್ರೀಗುರು ವಚನ ಉಪದೇಶವ। ಲಾಲಿಸಿದಾಗಳಾಗುವದು ಜನರಿಗೆ ಮುಕುತಿ" ಯಂಬುವಂತೆ ಈ ವಚನಗಳೇ ಗುರುವಾಕ್ಯದ ಉಪದೇಶಗಳಿರುವವು. ಈ ವಚನಗಳಂತೆ ನಡೆದ ಜನರಿಗೆ ಮೋಕ್ಷವಾಗುವದು ಸತ್ಯ ಸತ್ಯ; ಸುಳ್ಳಲ್ಲಾ. ತಾವು ಸುಜ್ಞಾನದಿಂದ ನೋಡಿದರೆ ತಿಳಿಯದಿರಲಾರದು. ಅದುಕಾರಣ ಈ ಭೂಲೋಕದಲ್ಲಿ ಯಾವ ಕುಲದವರೇ ಆಗಲಿ, ಸರ್ವ ನರಜನರು ಈ ವಚನಗಳಂತೆ ನಡೆನುಡಿ ಒಂದೇ ಮಾಡಿ ನಡೆದರೆ ಮೋಕ್ಷಹೊಂದುವಿರೆಂದು ನನ್ನ ಪೂರ್ಣ ಪ್ರಾರ್ಥನೆ ಇರುವದು.

—ಸದಾ ಆನಂದಪ್ಪ ಯೋಗಿ.

## ಗುರುಸ್ತೋತ್ರ.

ಶ್ಲೋಕ॥ ಶ್ರೀಗುರುದೇವೋ ಮಾಹಾದೇವಂ ।
ಸರ್ವ ಚೈತನ್ಯದಾಯಕಂ ।
ಶ್ರೀಗುರುದೇವೋ ಪರನಾಸ್ತಿ ।
ಶ್ರೀಗುರುವೇ ನಮಃ ॥೧॥

ಶ್ರೀಗುರುವೇ ನಿಶೂನ್ಯ ನಿರಾಕಾರಂ ।
ಶ್ರೀಗುರುವೇ ಸರ್ವಲೋಕಾಧಿಕಂ ।
ಶ್ರೀಗುರುವೇ ಪರಿಪಾಲಯಮಂ ।
ಶ್ರೀಗುರುವೇ ನಮುಸ್ತುತೆ ॥೨॥

ಶ್ರೀಗುರುವೇ ಪರಂಜೋತಿಸ್ವರೂಪಂ ।
ಶ್ರೀಗುರುವೇ ಭವನಾಸ್ತೆಂ ।
ಶ್ರೀಗುರುವೇ ಮೋಕ್ಷದಾಯಕಂ ।
ಶ್ರೀಗುರುವೇ ನಮುಸ್ತುತೆ ॥೩॥

ಶ್ಲೋಕ॥ ಶ್ರೀಗುರುದೇವೋ ಮಹಾದೇವೋ ।
ಗುರುದೇವೋ ಸದಾಶಿವ ।
ಗುರುದೈವೋ ಪರನಾಸ್ತಿ ।
ತಸ್ಮಯೆ ಶ್ರೀಗುರುವೇ ನಮಃ ॥೧॥

ಗುರುವೇ ಸರ್ವಲೋಕಾನಾಂ ।
ವೃಷಭೆ ಭವರೋಗೀಣಾಂ ।
ನಿಧಯೆ ಸರ್ವವಿದ್ಯಾನಾಂ ।
ದಕ್ಷಣಾಮೂರ್ತಿಯೇ ನಮಃ ॥೨॥

ಪದ ರಾಗ ರೇಗುಪ್ತಿ ಆದಿತಾಳ.

ಬೆರಿಯಬಾರದೆ । ಗುರುನಾಥಯನಗೆ ನೀ ಬೆರಿಯಬಾರದೆ ॥ ತರುಳನೆಂದು ಕರುಣವಿಟ್ಟು ಭರದಿಬಂದು ಯನಗೆ ನೀ ಬೆರಿಯಬಾರದೆ ॥ಪಲ್ಲ॥ ಆದಿಸೋಂ ನಾದಗೂಡಿ । ಸುರಳಿಗೊಂಡು ರಂಧ್ರದಿಂದ ॥ ಶೃಂಗಾರದಿಂದ ಬರುವಂತ ಇಷ್ಟಲಿಂಗ ನೀನು ಯನಗೆ ಬೆರಿಯಬಾರದೆ ।೧॥

ರವಿಶಶಿಗಳು ಯೆರಡುಕೂಡಿ । ಮಂದಮಾರುತ ಯೋಗದಿಂದ ॥ ಕೋಟಿ ಪ್ರಕಾಶದಿಂದಬರುವ ಪ್ರಾಣಲಿಂಗ ನೀನು ಯನಗೆ ಜಿರಿಯಬಾರದೆ. ॥೨॥

ದೇಶಕಧಿಕವಾದ ವಾಸ । ದೇಹ್ಯದುರ್ಗಾಧೀನ ॥ ಮಣಿಪುರ ಕಮಲದಿಂದ ಬರುವ ಭಾವಲಿಂಗ ನೀನು ಯನಗೆ ಜಿರಿಯಬಾರದೆ ॥೩॥

ವಚನ;— ಬ್ರಹ್ಮಾಂಡ ಪಿಂಡಾಂಡ ಪಂಚಕ್ಷರಗಳು ಜನಸಿದ ತಾತ್ಪರ್ಯವು ಎಂತೆಂದಡೆ. ತತ್‌ಪೂರ್ವದಲ್ಲಿ ಏನಿಲ್ಲದೆ ಶೂನ್ಯ ನಿರಾಕಾರ ಬೈಲ ಸ್ವರೂಪವಿತ್ತು. ಆಗ್ಗೆ ಅನಂತ ಕೋಟಿ ಮಹಾಕಾಲ ಪ್ರಳಯಂಗಳು ಕೇವಲ ನೀರ ಮೇಲೆ ತೇಲುವಾಗ ಸರ್ವಶೂನ್ಯ ನಿರಾಕಾರಮಯವಾಗಿ ಕಾಳದುಂಧು ಮಹಾದುಂಧು ಕಾಳ ಕಾಳಾಂಧಕಾರವಾದ ದುಂಧು ನಿರಾಕಾರವೇ ಬಲಿದು ಆಕಾರವಾಯಿತು. ಎಂತೆಂದಡೆ ಶೂನ್ಯವೆ ನೆಲೆಗೊಂಡು ತಾರಕಬ್ರಹ್ಮಸ್ವಯಂ ಜ್ಯೋತಿಯಾಯಿತು. ನಿಶ್ಶೂನ್ಯವೆ ಅಂಕರವಾಗಿ ದಂಡಿಕಬ್ರಹ್ಮ ಶಿದ್ಧಲೋಕ ವಾಯಿತು. ಆ ಕಾಳಶೂನ್ಯವೇ ಸಯುಕ್ತವಾಗಿ ಕುಂಡಲಿ ಬ್ರಹ್ಮದಲ್ಲಿ ಜ್ಯೋತಿ ನಿರ್ಮಿತವಾಯಿತು. ಊರ್ಧ್ವಶೂನ್ಯ ದ್ರಾವಿಡ ಮುಸಿಕಿಯಾಗಿ ಅರ್ಧ ಅಣು ಬಿಂದು ಬ್ರಹ್ಮ ಪರಂಜೋತಿ ಪ್ರಕಾಶವಾಯಿತು. ಒಟ್ಟು ಶೂನ್ಯ ದಂಡಕವಾಗಿ ಅರ್ಧಬಿಂದು ಪರಬ್ರಹ್ಮದಲ್ಲಿ ಸುಶಿದ್ದಿ ಜೋತಿ ಜೋತಿಮಯವಾಗಿ ಪ್ರಜ್ವಲಿಸಿತು. ಇಂತೀ ಪಂಚನಿಷ್ಕಲ ಬ್ರಹ್ಮವು ಕೂಡಿ ಜಗಜ್ಯೋತಿಯಾದ ಓಂಕಾರವೆಂಬ ಪ್ರಣವಸ್ವರೂಪವಾಯಿತು ಅದು ಅನಂತಕೋಟಿ ಜಲಪ್ರಳಯವನೆಲ್ಲ ಹೀರಿಕೊಂಡು ಹೆಪ್ಪಾಯಿತು. ಆ ಓಂಕಾರವೆಂಬ ಪ್ರಣಮದಲ್ಲಿ ಪಂಚಪ್ರಣಮಗಳು ಜನಿಸಿದವು. ಆ ನಾಮಂಗಳು ಯಾವನೆಂದರೆ ಆ ಓಂಕಾರಮುಖ ತಾರಕಬ್ರಹ್ಮದಲ್ಲಿ ಆಕಾರ ಎಂಬ ಪ್ರಣಮ ಉತ್ಪತ್ತಿಯಾಯಿತು. ಅಲ್ಲಿಂದ ಆ ಓಂಕಾರ ಕಂಠದಂಥ ಬ್ರಹ್ಮದಲ್ಲಿ ಉಕಾರವೆಂಬ ಪ್ರಣಮ ಪುಟ್ಟಿತು. ಅಲ್ಲಿಂದ ಆ ಓಂಕಾರದ ಪ್ರಣಮದಕಡೆ ಬಿಂದುವಿನ ಪರಬ್ರಹ್ಮ ಜೋತಿಯಲ್ಲಿ ಳಕಾರವೆಂಬೊ ಪ್ರಣಮ ಜನಿಸಿತು ಇಂತೀ ಅಕಾರ, ವುಕಾರ, ಮಕಾರ, ಹಕಾರ ಳಕಾರ ಎಂಬ ಪಂಚಪ್ರಣಮಗಳು ಜನಿಸಿದವು. ಈ ಪಂಚಕ್ಷರಗಳೆ ಪಂಚಕ್ಷರ ಮಂತ್ರವಾಗಿರ್ಪವೆಂದ ನಮ್ಮದೇಶಕಧಿಕವಾದ ದೇಹ್ಯ ದುರ್ಗಾಧೀಶನು ॥೧॥

ವಚನ:— ಅಣ್ಣಗಳಿರಾ, ನೀವು ಕೇಳಿರಿ. ಎತೊ ಬ್ರಹ್ಮಾಂಡ ತಥಾ ಪಿಂಡಾಂಡವೆಂಬ ತಾತ್ಪರ್ಯ. ಅದು ಇಂತೆಂದಡೆ ಕೃತಯುಗ ತ್ರೈತಾಯುಗ ದ್ವಾಪರಯುಗ, ಕಲಿಯುಗ ಇಂತೀ ಈ ಸಾಲ್ಕು ಯುಗಗಳು ಕಲತು ಒಂದು

ಬ್ರಹ್ಮಾಂಡವಾಗಿರ್ಪುದು. ಈ ಬ್ರಹ್ಮಾಂಡ ಮನುಜರಂತೆ ನಾಲ್ವತ್ತುಮೂರು ಲಕ್ಷದ ಇಪ್ಪತ್ತುಸಾವಿರ ವರುಷಕ್ಕೆ ಮರಣ ಅಂದರೆ ಜಲಪ್ರಳಯವಾಗುವದು. ಜಲಪ್ರಳಯವಾದಮೇಲೆ ಕೆಲವು ಕಾಲಾಂತರ ವರುಷಗಳು ಆದನಂತರ ನೀರು ಘಟ್ಟಿಯಾಗಿ ಮೊದಲಿನಂತೆ ಹೆತ್ತು ಬ್ರಹ್ಮಾಂಡ ತಯಾರಾಗಿ ನಾಲ್ಕು ಯುಗಗಳು ನಡಿದವು. ಇದರಂತೆ ಅನಂತ ಯುಗಗಳು ಜಲಪ್ರಳಯ ಆಗಿ ಆಗಿ ಅಳತೆಯಿಲ್ಲದೆ ಅನಂತಯುಗಗಳು ಮನುಜರಂತೆ ಮರಣ ಹೊಂದಿ ಹೊಂದಿ ಜನಸಿರುವವು. ಬ್ರಹ್ಮಾಂಡದಂತೆ ಪಿಂಡಾಂಡಕ್ಕೆ ಯುಗಗಳು ಯಾವವೆಂದರೆ, ಮಹಾಕಾರಣ ತನವು, ಕಾರಣ ತನವು, ಸೂಕ್ಷ್ಮತನವು, ಸ್ಥೂಲತನವು ಇಂತೀ ಈ ನಾಲ್ಕು ತನುಗಳು. ಪಿಂಡಕ್ಕೆ ಯುಗಗಳಂಟು. ಈ ನಾಲ್ಕು ತನುವಿನಲ್ಲಿ ಜೀವನ ಪ್ರತಿದಿನ ಸಂಚಾರ ಮಾಡುವದು. ಬ್ರಹ್ಮಾಂಡದಂತೆ ಪಿಂಡ ನೂರಾಯಿಪ್ಪತ್ತು ವರುಷಕ್ಕೆ ಮರಣಹೊಂದಿ ಅಳತೆಯಿಲ್ಲದೆ ಸತ್ತು ಸತ್ತು ಹುಟ್ಟಿರುವದು. ಬ್ರಹ್ಮಾಂಡಕ್ಕೆ ಪಿಂಡಕ್ಕೆ ಆಯುಷ್ಯ ಪ್ರಮಾಣ ಬ್ರಹ್ಮ ಬರೆದಿರುವನು. ಈ ಆಯುಷ್ಯ ಪ್ರಮಾಣ ಜಾಸ್ತಿ ಕಮ್ಮಿ ಮಾಡಲಿಕ್ಕೆ ಯಾರಿಗೂ ಶಕ್ಯವಿಲ್ಲ. ಇವುಗಳ ಅಳತಿ ಸರಿಯಾಗಿ ಮರಣಹೊಂದುವವು. ಬ್ರಹ್ಮ ಬರೆದ ಬರಹ ಎಂದಿಗೂ ಸುಳ್ಳು ಆಗಲರಿಯದು. ಮನುಷ್ಯರು ಸವಾ ನೂರುವರುಷದ ಕಮ್ಮಿ ವರುಷದ ೮, ೧೦, ೨೦ ವರುಷದಲ್ಲಿ ವಿಷತಿಂದು, ಉರುಲುಹಾಕಿಕೊಂಡು, ಹಾವು ಕಡಿದು ಗಿಡಗಳ ಮೇಲಿಂದ ಬಿದ್ದು, ಇರಿಸಿಕೊಂಡು, ತಿವಿಸಿಕೊಂಡು ಅನೇಕ ನೆವದಿಂದ ಮನುಷ್ಯ ಮರಣಹೊಂದುವ ಕಾರಣವೇನಂದರೆ, ಈ ಜೀವ ಮೊದಲು ಈ ಭೂಲೋಕಕ್ಕೆ ಬರುವಕಾಲದಲ್ಲಿ ಮಹಾಕಾರಣ ತನುವಿನಿಂದ ಕಾರಣತನುವಿಗೆ, ಕಾರಣ ತನುವಿನಿಂದ ಸೂಕ್ಷ್ಮತನುವಿಗೆ, ಸೂಕ್ಷ್ಮತನುವಿನಿಂದ ಸ್ಥೂಲತನುವಿಗೆ ಇದರಂತೆ ಸ್ಥೂಲತನುವಾಗಿ ಹುಟ್ಟಿ ಹುಟ್ಟಿ ಸತ್ತು ಸತ್ತು ಅಳತಿಯಿಲ್ಲದೆ ಪಿಂಡವಾಗಿ ಹುಟ್ಟಿಬಂದಿರುವದು. ಈ ಜನ್ಮಕ್ಕೆ ಎಂದೆಂದಿಗೂ ಮರಣಯಿಲ್ಲ. ಪಿಂಡವೆ ಸತ್ತು ಸತ್ತು ಹುಟ್ಟುವದು. ಪಿಂಡ ಮರಣವಾಗುವ ಕಾಲಕ್ಕೆ ಜೀವನು ಬಂದದಾರಿಹಿಡಿದು ಬಂದಂತೆ ಹೋಗುವದು. ಹೇಗೆಂದರೆ ಈ ಜೀವನ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಕೃತ್ಯದಿಂದ ಸ್ಥೂಲತನುವಿನಲ್ಲಿ ಕೆಲವು ದಿವಸ ಕಾಲಕಳೆದು ದುರ್ಮರಣ ಅಕಾಲ ಮರಣಹೊಂದಿ ಸ್ಥೂಲತನುವು ಬಿಟ್ಟು ಸೂಕ್ಷ್ಮತನುವಿಗೆ ಹೋಗಿ ಅಲ್ಲಿ ಕೆಲದಿವಸ ಕಾಲಕಳೆದು ಕಾರಣ ತನುವಿಗೆ ಹೋಗಿ ಅಲ್ಲಿ ಕೆಲವು ದಿವಸ ಕಾಲಕಳೆದು ಮಹಾಕಾರಣತನು

ವಿಗೆ ಹೋಗಿ ಕಾಲಕಳೆದರೆ ಅಲ್ಲಿಗೆ ಪಿಂಡಕ್ಕೆ ನೂರಾಯಿಪ್ಪತ್ತು ವರುಷಗಳು ಪೂರ್ಣವಾಗಿ ಮರಣಹೊಂದುವದು. ಅಲ್ಲಿಗೆ ಆಯುಷ್ಯ ಪೂರ್ಣವಾಗುವದು. ಆದಕಾರಣ ಬ್ರಹ್ಮ ಬರೆದ ಬರಹ ಸತ್ಯವಿರುವದು. ಬ್ರಹ್ಮಾಂಡ ಪಿಂಡಾಂಡ ಈ ಎರಡಕ್ಕೆ ನೀರು ಆಧಾರ. ನೀರಿನಿಂದಲೆ ಬ್ರಹ್ಮಾಂಡ ಪಿಂಡಾಂಡ ಈ ಎರಡು ಹುಟ್ಟಿರುವವು. ನೋಡಿರಿ ಈ ಲೋಕದಲ್ಲಿ ಮನುಷ್ಯರಿಗೆ ನೀರುದಾಹ ಆದಾಗ್ಗೆ ನೀರುಸಿಗದೆ ಹೋದರೆ ಮತ್ತು ನುಳೆ ಆಗದೆ ಹೋಗಿ ಬೆಳೆ ಆಗದೆ ಬರಾಬಿದ್ದರೆ ಪಿಂಡಗಳು ಮರಣಹೊಂದುವವು. ಕಡೆಗೆ ಬ್ರಹ್ಮಾಂಡ ನೀರಿನಿಂದ ಮರಣ ಹೊಂದುವದು. ಅದುಕಾರಣ ಬ್ರಹ್ಮಾಂಡ ಪಿಂಡಾಂಡವು ಒಂದೇ ಇರುವ ದೆಂದು ನಮ್ಮ ದೇಶಕಧಿಕವಾದ ದೇಹ್ಯದುರ್ಗಧೀಶನು ||೨||

ವಚನಃ— ಅಣ್ಣಗಳಿರಾ, ನೀವು ಕೇಳಿ. ಈ ಲೋಕದಲ್ಲಿ ಕೆಲವು ಜನರು ಭೂಲೋಕಕ್ಕೆ ಈ ಜೀವನು ಯಾವ ಯಾವ ಸ್ಥಲದಿಂದ ಬಂದಿ ರುವನು ಹೇಗೆ ಪಿಂಡರೂಪವಾಗಿ ಇರುವದು ಇದರ ತಾತ್ಪರ್ಯ ಅರಿ ಯರು. ಅದು ಎಂತೆಂದಡೆ ಮೊದಲಲ್ಲಿ ಈ ಜೀವನು ನೀರು ಧಾನ್ಯದಲ್ಲಿ ಒಂಬತ್ತು ತಿಂಗಳವರೆಗೆ ಇದ್ದು ಆ ಧಾನ್ಯ ಅಡಿಗಮಾಡಿ ತಂದು ಊಟ ಮಾಡಲು ಆಗ್ಗೆ ಜೀವನು ತಂದಲ್ಲಿ ಬಂದು ಒಂಬತ್ತು ತಿಂಗಳವರೆಗೆ ಇದ್ದು ತಾಯಿ ಮುಟ್ಟಾದ ೧೬ ದಿವಸದೊಳಗಾಗಿ ತಂದೆ ತಾಯಿ ಸಂಪರ್ಕ ಮಾಡಲು ಉಭಯರ ಶುಕ್ಲಶ್ರೋಣಿತ ತಾಯಿಯ ಹನ್ನೊಂದು ದಿವಸ. ತಂದಿಯ ಹತ್ತು ದಿವಸಗಳು. ಒಟ್ಟು ಇಪ್ಪತ್ತೊಂದು ದಿವಸು ಕಲಿತು ಪಿಂಡರೂಪವಾಗಿ ೯ ತಿಂಗಳವರೆಗೆ ತಾಯಿಯ ಹೊಟ್ಟೆಯೊಳಗೆ ಇದ್ದು ಆಗ್ಗೆ ಬೈಲಿಗೆ ಪಿಂಡ ರೂಪದಿಂದ ಬರುವದು. ಇದರ ತಾತ್ಪರ್ಯ ಅದು ಎಂತೆಂದೊಡೆ ತಂದೆತಾಯಿ ಸಂಪರ್ಕ ಮಾಡಿದ ೫ ದಿವಸದಲ್ಲಿ ಬೆಳ್ಳಿಯಂತೆ ಹತ್ತು ದಿವಸಕ್ಕೆ ಕಡ್ಡಿಯಂತೆ ಒಂದು ತಿಂಗಳಿಗೆ ತಲೆ, ಎರಡು ತಿಂಗಳಿಗೆ ತೋಳು, ಮೂರು ತಿಂಗಳಿಗೆ ತೊಡೆ ಕಾಲು, ನಾಲ್ಕು ತಿಂಗಳಿಗೆ ಸರ್ವಅಂಗ ತಯಾರಾಗಿ ಐದು ತಿಂಗ ಳಿಗೆ ನರಗಳಲ್ಲಿ ಪ್ರಾಣ ಸೇರಿ ಹೊಟ್ಟೆಯೊಳಗೆ ಕದಲುಬದಲು ಓಡ್ಯಾಡುವ ದಕ್ಕೆ ಹತ್ತುವದು. ಆರು ತಿಂಗಳಿಗೆ ರಕ್ತಮಾಂಸ ವಗೈರೆ, ಏಳು ತಿಂಗಳಿಗೆ ಉಗುರು ಎಲ್ಲ ಅವಯವಗಳು ತಯಾರಾಗಿ ಎಂಟು ತಿಂಗಳಿಗೆ ತನ್ನ ಹಿಂದಿನ ಜನ್ಮದಲ್ಲಿ ಮಾಡಿದ ಕೀರ್ತಿಗಳ ಕಳವಳಿಕೆ ಹತ್ತುವದು. ಅಲ್ಲಿಂದ ಒಂಭತ್ತು ತಿಂಗಳು ಆದನಂತರ ಗರ್ಭದಲ್ಲಿ ಇರುವಾಗ ಈ ಜೀವಕ್ಕೆ ತ್ರಿಕಾಲಜ್ಞಾನ

ಉಂಟಾಗಿ ತನ್ನೊಳಗೆ ತಾನೇ ವಿಚಾರ ಮಾಡಿಕೊಂಡು ಅನ್ನುವದಲ್ಲ; ಅಯ್ಯೋ! ಶಿವ ಶಿವ ಹೊಟ್ಟೆಯೊಳಗೆ ನಾನು ಇದ್ದರೆ ಮಲಮೂತ್ರದ ಬಾಧೆ ವಡವಾಗ್ನಿ ಕೊಡುವ ದುಃಖಂಗಳು ತಡಿಯಲಾರದೆ ಹೊರಗೆ ಬರ ಬೇಕೇಂದು ಪ್ರಯತ್ನ ಇಡಲು ಅಗ್ಗ ಸುತಿಯೆಂಬ ಘಾಳಿ ಬೀಸಲು ಆ ಘಾಳಿ ಯೋಗದಿಂದ ಕೋಟಿ ಶಿಡಿಲು ಬಿದ್ದಂತೆ ಆಗಿ ಪಿಂಡವು ಭೂಮಿಗೆ ಬೀಳಲು ಅದುಕಾರಣ ನರಜನರ ಜೀವ ಪಿಂಡರೂಪದಿಂದ ಮೊದಲಿನಂತೆ ಭೂಲೋಕಕ್ಕೆ ಬಂದಿರುವದೆಂದು ನಮ್ಮ ದೇಶಕಧಿಕವಾದ ದೇಹ್ಯದುರ್ಗಾಧೀಶನು ॥೩॥

ವಚನಃ— ಅಣ್ಣಾಗಳಿರಾ, ನೀವು ಕೇಳಿ. ಈ ಭೂಲೋಕದಲ್ಲಿ ಅಂಡಜ ಇಪ್ಪತ್ತೊಂದು ಲಕ್ಷ, ಪಿಂಡಜ ಇಪ್ಪತ್ತೊಂದು ಲಕ್ಷ, ಜಲಜ ಇಪ್ಪತ್ತೊಂದು ಲಕ್ಷ, ಉದ್ಭಿಜ ಇಪ್ಪತ್ತೊಂದು ಲಕ್ಷ ಇಂತೀ ೮೪೦೦೦೦೦ (ಎಂಬತ್ತುನಾಲ್ಕು ಲಕ್ಷ) ಜೀವರಾಸಿಯಿರುವವು. ಈ ನಾಲ್ಕು ಜೀವರಾಸಿ ಪೈಕಿ ಪಿಂಡಜಯೆಂಬ ಮನುಷ್ಯನ ಜನ್ಮ ಅಧಿಕ ಇರುವದು. ಈ ಮನುಷ್ಯನ ಜನ್ಮಕ್ಕೆ ನಾಲ್ಕು ಯುಗದಿಂದ ಈ ಪ್ರಪಂಚ ಸುಖದುಃಖಂಗಳು ಬೆನ್ನತ್ತಿ ಇರುವವು. ಪಿಂಡಗಳ ಪೈಕಿ ಇದೇ ಮನುಷ್ಯನ ಜನ್ಮಕ್ಕೆ ಮೋಕ್ಷದೊರೆಯುವದು. ಬಾಕಿ ಜೀವಿಗಳಿಗೆ ಮೋಕ್ಷವಿಲ್ಲ. ಜೀವನಕ್ಕೆ ಮೋಕ್ಷ ಅಂದರೆ ಪುನರ್‌ಜನ್ಮವಿಲ್ಲವೆಂದು ಜ್ಞಾನಿಗಳು ಎಷ್ಟೋ ಕಷ್ಟವಾದರೂ ಚಿಂತೆಯಿಲ್ಲವೆಂದು ಮೋಕ್ಷ ಹೊಂದಬೇಕೆಂದು ಕಷ್ಟಪಡುವರು. ಹಿಂದಕ್ಕೆ ಇದೇ ಕಲಿಯುಗದಲ್ಲಿ ಕೆಲವು ಜನರು ಪುನರ್‌ಜನ್ಮ ಆಗಬಾರದೆಂದು ಕಷ್ಟಪಟ್ಟು ಮೋಕ್ಷಹೊಂದಿರುವರು. ಮೋಕ್ಷ ಆಗುವವರೆಗೂ ಜೀವನಕ್ಕೆ ಈ ಪ್ರಪಂಚ ಸುಖದುಃಖಗಳು ತಪ್ಪುವದಿಲ್ಲ. ಅದುಕಾರಣ ಈ ಭೂಲೋಕದಲ್ಲಿ ಯಾವ ಕುಲದವರೇ ಆಗಲಿ ನರ ಜನರ ಘಟಾಸ್ಥಿರವಿಲ್ಲ ಈಗ ಹಾಗೇ ಹೋಗಿ ಹೊತ್ತು ಗಳೆಯಬೇಡಿರಿ. ಘಾಳಿಯಿರುವ ಕಾಲಕ್ಕೆ ತೂರಿಕೊಳ್ಳಬೇಕು. ಹಾಲು ಇರುವಕಾಲಕ್ಕೆ ಹಬ್ಬ ಮಾಡಬೇಕು ಎಂಬುವಂತೆ ಸರ್ವಜನರು ಘಟಾ ಇರುವಕಾಲಕ್ಕೆ ಗುರುದೀಕ್ಷೆಯಿಂದ ಲಿಂಗಧರಿಸಿ ಮೋಕ್ಷಹೊಂದಿದರೆ ಪುನರ್‌ಜನ್ಮ ನಿಮಗೆ ಎಂದೆಂದಿಗೂ ಇಲ್ಲವೆಂದು ನಮ್ಮ ದೇಶಕಧಿಕವಾದ ದೇಹ್ಯದುರ್ಗಧೀಶನು ॥೪॥

(ಮುಂದುವರಿದುದು.)

# ಭಕ್ತಿಯ ಕುಡಿಗಳು.



(ಕುಮಾರಿ ಶಾರದಾದೇವಿ ಎಸ್. ಪಾಟೀಲ, ವಿಜಯಪುರ. ಇವಳು ಧ್ಯಾನದಲ್ಲಿ ಭಾವೋನ್ಮತ್ತಳಾದಾಗ ಭಕ್ತಿಯಿಂದ ಹೊರಬಂದ ಕುಡಿಗಳನ್ನು ಸಂಗ್ರಹಿಸಿ ಕೊಡಲಾಗಿದೆ)



೧. ಕಾಡ ಬೆಳದಿಂಗಳಕೆ ಮರುಳಾಗಿ ತೋಳಿನ ಬಾಯಿಗೆ ಕುರಿಯು ಆಹುತಿಯಾದಂತೆ, ಈ ಭವಸಾಗರಕೆ ಮರುಳಾಗಿ ನಿನ್ನನು ಮರೆಯದಂತೆ ಮಾಡು ಚನ್ನಮಲ್ಲಿಕಾರ್ಜುನದೇವ

೨. ಈ ನಶ್ವರದೇಹವನು ಕೊಟ್ಟವರು ತಂದೆ ತಾಯಿ ಬಂಧುಬಳಗ ವಲ್ಲ. ನೀ ಎನ್ನ ಸ್ವರೂಪ ತಿಳುಹಿಸಿಕೊಟ್ಟೆ ನೀನೇ ಎನ್ನ ನಿಜ ತಂದೆ ತಾಯಿ ಬಂಧುಬಳಗ ಅಲ್ಲದೆ ಇನ್ನುಮೇಲೆ ಮತ್ತಿನ್ನಾರನ್ನು ನಂಬಿ ನೆನೆಯದಂತೆ ಕರುಣಿಸು ಚನ್ನಮಲ್ಲಿಕಾರ್ಜುನದೇವ.

೩. ಈ ಸಂಸಾರವೆಂಬ ಹೇಸಿಕೂಪದೊಳಗೆ ಬಿದ್ದು ಕೆಡುವ ಮೊದಲು ಕರುಣೆಯಿಂದ ಎತ್ತಿ ನಿನ್ನೊಳು ಅಡಗಿಸಿಕೊಳ್ಳು ಚನ್ನಮಲ್ಲಿಕಾರ್ಜುನದೇವ.

೪. ನಾನೆಂಬ ಅಹಂ ಅಳಿದು ನೀನೆಂಬ ಅರಿವು ಉದಿಸಿದಾಗ, ನಿನ್ನ ಬಿಟ್ಟು ನಾನಿಲ್ಲ, ಜನ್ಮವಿಲ್ಲ, ಮರಣವಿಲ್ಲ, ನಾನೆಂಬುದಿಲ್ಲ. ಆಗ ನಾನೆ ನೀನು, ನೀನೆ ನಾನು ಆಗುವಂತೆ ಕೃಪೆದೋರು ಚನ್ನಮಲ್ಲಿಕಾರ್ಜುನದೇವ.

೫. ಈ ಲೋಕದ ಜನರು ನಾನು ನನ್ನದೆಂಬ ಅಹಂವೆಂಬ ಮರ್ಕಟವ ನಿಡಿದು ಕೆಡುವರು. ಕೆಡುವ ಮೊದಲು ಅಜ್ಞಜೀವಿಗಳನು ದಯತೋರಿ ಎತ್ತಿ ಕೊಳ್ಳು ಚನ್ನಮಲ್ಲಿಕಾರ್ಜುನದೇವ.

# ತೆರೆಯ ಮರೆಯಲ್ಲಿ.

(ಲೇಖಕರುಃ— ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.)

---

ಜಗನ್ನಿಯಾಮಕನು ಸೃಷ್ಟಿಸಿದ ಸೃಷ್ಟಿಯತ್ತ ಜ್ಞಾನದೃಷ್ಟಿಯಿಂದ ನೋಡಲಾಗಿ ಸೃಷ್ಟಿಯು ನಾಟಕದ ರಂಗಭೂಮಿಯೆಂದು ಸ್ಪಷ್ಟವಾಗುತ್ತದೆ. ಆ ಪರಮಾತ್ಮನೇ ಸೂತ್ರಧಾರಿ ಹಾಗು ಪ್ರೇಕ್ಷಕನೆಂಬ ಕಲ್ಪನೆಯೂ ನಮಗಾಗುತ್ತೆ. ನಾವೆಲ್ಲ ನಟರು, ಹಾಗು ವಿಶ್ವವು ರಂಗಭೂಮಿ. ಇಲ್ಲಿ ಅನೇಕ ನಾಟಕಗಳಾದರೂ ಅವಕ್ಕೆಲ್ಲ ಒಂದೇ ಒಂದಾದ ಹೆಸರುಂಟು. ಆ ಹೆಸರೇ ಜೀವನ.

ಜೀವನದಲ್ಲಿ ಸುಖ ಸಂತೋಷಗಳಿದ್ದರೆ ಆ ಜೀವನದಲ್ಲಿ ಬಾಳಿ ಬೆಳೆದು ತೆರಳುವದು ಅಷ್ಟೊಂದು ಮಹತ್ವವೆನಿಸದು. ಆ ಜೀವನವು ಜೀವನವಲ್ಲ, ವ್ಯರ್ಥಬಾಳು. ಯಾವ ಮಾನವನ ಜೀವನವು ದುಃಖಮಯ, ಹಾಗು ಕಷ್ಟಸಹಿಷ್ಣುತೆಯ ಜೀವನವಿದೆಯೋ ಆ ಜೀವನದ ಕಥೆಯೇ ಕೊನೆಯವರೆಗೂ ಉಳಿಯಬಹುದಾದದ್ದು. ಅಂಥ ಕಷ್ಟಸಹಿಷ್ಣುತೆಯ ಜೀವನದಲ್ಲಿ ಅನೇಕ ಮಹನೀಯರಿರಬಹುದು. ಆದರೆ ಆ ಕಷ್ಟಸಹಿಷ್ಣುತೆ ತನಗಾಗಿರದೆ ತನ್ನ ನಾಡಿಗಾಗಿ, ನುಡಿಗಾಗಿ, ಹಾಗು ಜನತೆಗಾಗಿ ಅರ್ಪಣ ಮಾಡಿದಲ್ಲಿ ಮಾತ್ರ ಪ್ರೇಕ್ಷಕನ ದೃಷ್ಟಿಯು ಅವರತ್ತ ತೆರಳುತ್ತದೆ. ಆಗ್ಗೆ ಪರಮಾತ್ಮನು ಸಹ ಕಷ್ಟಪಡಿಸಿಯೂ ನೋಡುತ್ತಾನೆ. ಸುಖ ಪಡಿಸಿಯೂ, ನೋಡುತ್ತಾನೆ. ಆದರೆ ಮಾನವನು ಸುಖಕ್ಕೆ ಆತುರನಾದಲ್ಲಿ ಜೀವನವೇ ವ್ಯರ್ಥವಾಗುತ್ತದೆಂಬ ಅರಿವು ಅಲ್ಲಿ ಉಂಟಾಗಬೇಕಾದುದು ಅವಶ್ಯ. ಅಂಥ ಒಂದು ಜೀವನದ ಸನ್ನಿವೇಶವೇ ಇಲ್ಲಿ ಕೊಡಬಹುದಾದ ಮಹತ್ವದ ವಿಷಯವಿದೆ. ಆ ಜೀವನವೇ ಶ್ರೀಯುತ ರಾ॥ ಬ॥ ಫ. ಗು. ಹಳಕಟ್ಟಿಯವರ ಜೀವನ.

ಈ ಮೊದಲು ಅನೇಕ ಮಹನೀಯರು ಶ್ರೀಯುತ ಹಳಕಟ್ಟಿಯವರ ಜೀವನದ ಬಗ್ಗೆ ಅನೇಕೋ ಲೇಖಕಗಳನ್ನು ಕಳಿಸಿದ್ದಾರೆ ಹಾಗೂ ಕಳಿಸುತ್ತಲೂ ಇದ್ದಾರೆ. ಅದರಂತೆ ಅನೇಕ ತಿಂಗಳುಗಳ ಸಂಚಿಕೆಗಳಲ್ಲಿ ಪ್ರಸಿದ್ಧಪಡಿಸಿದುದೂ ಉಂಟು. ಆದರೂ ಸಹ ಅವರ ಬಗ್ಗೆ ಪ್ರಾಸ್ತಾಪಿಸುವ ಇನ್ನೂ ಅನೇಕ ಮಹತ್ವದ ವಿಷಯಗಳು ಉಳಿದುವದರಿಂದ ಈ ಲೇಖನವು ಇಲ್ಲಿ ಕೊಡು

ವದು ಅತಿ ಮಹತ್ವದ್ದಾಗಿದೆಯೆಂದು ಈ ಲೇಖಕನ ಅಭಿಪ್ರಾಯ. ಆದುದರಿಂದಲೇ ಈ ಲೇಖನದ ಹೆಸರು "ತೆರೆಯ ಮರೆಯಲ್ಲಿ" ಎಂದು ಸಂಬೋಧಿಸಲಾಗಿದೆ. ಈ ಮೊದಲು ಅನೇಕ ತೆರೆಗಳು ಒದಿಗಾದರೂ ಇನ್ನೊಂದು ತೆರೆಯ ಹಿಂದೆಯೂ ಅವರ ಜೀವನವು ಇದೆ. ಆದರೆ ಅದು ಮರೆಯಾದುದರಿಂದ ಅದನ್ನು ಸರಿಸಿ ನೋಡದ ಜನತೆಗೆ ತೋರಿಸುವದು ಅತಿ ಮಹತ್ವದ್ದಾಗಿದೆ. ಆ ತೆರೆಯ ಮರೆಯಲ್ಲಿರುವ ಜೀವನವನ್ನು ಈ ಲೇಖಕನು ಎಂಟು ಹತ್ತು ವರ್ಷಗಳಿಂದಲೂ ನೋಡುತ್ತಲಿದ್ದು, ದಿನದಿನಕ್ಕೆ ಉತ್ಸುಕತೆಯು ಹೆಚ್ಚು ಹೆಚ್ಚಾಗಿ ಹೊರಹೊಮ್ಮಿ ನಮ್ಮ ಬಂಧುಗಳಿಗೆ ಈ ಅವರ ಕಥೆಯನ್ನು ತಿಳಿಸಲೋಸುಗ ಉತ್ಸಾಹದಿಂದ ಬರೆದ ಲೇಖವೇ ಇದಾಗಿದೆ.

ಶ್ರೀಯುತ ಹಳಕಟ್ಟಿಯವರು ವಚನವಾಙ್ಮಯಕ್ಕೆ ಸಲ್ಲಿಸಿದ ಸೇವೆಯು ಸರ್ವಸಾಮಾನ್ಯವಾದುದಲ್ಲ. ಇದನ್ನು ಇಂದಿನ ಸುಶಿಕ್ಷಿತ ತರುಣರು ಅರಿತು ಕೊಳ್ಳಬೇಕಾದುದು ಅವಶ್ಯ. ಶ್ರೀಯುತರು ಚಿಕ್ಕಂದಿನಲ್ಲಿಯೇ ಇಂಥ ಸೇವೆಗೆ ತಲೆವಾಗಿರುವದು ತಮ್ಮ ಕೀರ್ತಿಗಾಗಿಯಲ್ಲ. ಶರಣರ ಕೀರ್ತಿಗಾಗಿ ಎಂಬುದನ್ನು ಅರಿಯಲು ಶ್ರೀಯುತರ ಜೀವನವೇ ನಿದರ್ಶನವಾಗಿದೆ.

ಇಂದಿನ ಸುಶಿಕ್ಷಿತ ತರುಣರು ಸುಶಿಕ್ಷಿತರೇನೋ ನಿಜ. ಆದರೆ ಒಂದು ದೃಷ್ಟಿಯಿಂದ ನೋಡಲಾಗಿ ಅಶಿಕ್ಷಿತರೆಂದೇ ಭಾಸವಾಗುವದು. ಅನೇಕ ಮಹನೀಯರು ನಮ್ಮ ನಾಡಿನ ಹಾಗು ದೇಶದ ಸಂಸ್ಕೃತಿಯ ನಾಶಕರಾಗಿದ್ದಾರೆ. ಮಾಧ್ಯಮಿಕ ಶಿಕ್ಷಣದಲ್ಲಿ ಕಾಲಿಟ್ಟನಂತರವಂತೂ ವಿದ್ಯೆಗಿಂತ ವಿಲಾಸಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟು, ನಾಡುನುಡಿಯು ಹಾಗೂ ಸಾಂಸ್ಕೃತಿಯ ಬಗ್ಗೆ ಜಿಗುಪ್ಸೆ ತಾಳಿ, ಬೋಧಾಮೃತವುಳ್ಳ ಸಾಹಿತ್ಯದ ಅರ್ಥವರಿಯದವರಾಗಿ ವ್ಯರ್ಥ ಕಾಲಹರಣಮಾಡಿ ನಮ್ಮಿಂದ ಇಂಥ ದೊಡ್ಡ ಕಾರ್ಯವು ಹೇಗಾಗಬೇಕು ಎಂದು ನುಡಿಯುವವರಿಗೆ ಶ್ರೀಯುತ ಹಳಕಟ್ಟಿಯವರ ಜೀವನವು ಆದರ್ಶಮಯವಾಗುವಲ್ಲಿ ಸಂದೇಹವಿಲ್ಲ.

ಶ್ರೀಯುತರು ನಾಡು ನುಡಿ, ಹಾಗು ವಾಙ್ಮಯ ಸೇವೆ, ದೇಶ ಸಂಸ್ಕೃತಿಯಲ್ಲಿಯೇ ಮುಪ್ಪಾಗಿದ್ದಾರೆ. ಅವರು ಮಾಧ್ಯಮಿಕ ಶಿಕ್ಷಣದಲ್ಲಿ ಕಾಲಿಟ್ಟಾಗಲೇ ಇಂಥ ಒಂದು ಜ್ಞಾನದೃಷ್ಟಿಯು ಅವರನ್ನು ಈ ಕಡೆಗೆ ಸೆಳೆಯಿತು. ಇಂದಿನ ವಿದ್ಯಾರ್ಥಿಗಳಂತೆ ಅವರು ವ್ಯಸನದಲ್ಲಿ ಕಾಲ್ಕಳಿಯದಿರಲು ಈ ವಚನವಾಙ್ಮಯವು ಅವರಿಗೆ ಆಧಾರವಾಗಿತ್ತೆಂದು ತಿಳಿಯಬಹುದು.

ಆ ವಾಙ್ಮಯುವು ಅವರಿಗೆ ಆಧಾರವಾಗಿರುವದೊಂದೇ ಉಳಿಯಲಿ, ಆ ವಾಙ್ಮ ಯಕ್ಕೆ ಅವರು ಆಧಾರಿಗಳಾಗಿ ನಮ್ಮೆಲ್ಲರಿಗೆ ಆಧಾರ ಮಾಡಿದರೂ ಸಹ ನಮ್ಮ ಲಕ್ಷವು ಅತ್ತ ಸಾಗದಿರುವದು ದುರ್ದೈವದ ಸಂಗತಿಯೇ ಸರಿ. ಅಂಥ ದಿವ್ಯ ವಚನವಾಙ್ಮಯುವು ಅವರಿಂದ ಶೋಧಿಸಲ್ಪಡದಿದ್ದರೆ ಹುಳುಹತ್ತಿ ಆ ಎಲ್ಲ ತಾಡುವಾಲೆಗಳು ನಾಶವಾಗಿ ಹಿಂದಿನ ಮಹಾಮಹಿಮರ ಕಥಾ ಜೀವನವೇ ನಾಶವಾಗುತ್ತಿತ್ತು ; ಅವರು ಜನತೆಗೆ ನೀಡಿದ ದಿವ್ಯವಾಣಿಯನ್ನು ತಿಳಿದು ಕೊಳ್ಳುವದು ದುಸ್ತರವಾಗುತ್ತಿತ್ತು. ಇಂದವೇಲೆ ಅವರು ಮಾಡಿದ ಸೇವೆ ಎಷ್ಟೊಂದು ಆಳವಾದುದು ಹಾಗು ಎಷ್ಟೊಂದು ಮಹತ್ವದ್ದಾಗಿರುವದೆಂಬುದನ್ನು ಅರಿತುಕೊಳ್ಳಿ.

ಯಾವನೊಬ್ಬ ಮಾನವನು ಯಾವದೇ ಒಂದು ಕಾರ್ಯದಲ್ಲಿ ತೊಡಗಿದರೆ ಅದರಲ್ಲಿ ಪ್ರಸಿದ್ಧಿಗೆ ಬರುವದು ಸ್ವಾಭಾವಿಕವೇ ಸರಿ. ಆದರೆ ಶ್ರೀಯುತರು ಇದೊಂದೇ ತಮ್ಮ ಕರ್ತವ್ಯವೆಂದು ಅರಿತು ಈ ಕಾರ್ಯದಲ್ಲಿಯೇ ಹಗಲಿ ರುಳು ದುಡಿದವರಲ್ಲ. ಹಾಗೆ ದುಡಿದಿದ್ದರೆ ಈ ಅರವತ್ತುಮೂರು ಪುರಾತನ ರೇಕೆ ಇನ್ನೂ ಅನೇಕರೋ ಶರಣರ ಚರಿತ್ರೆ ಹಾಗು ಅವರ ವಚನಗಳನ್ನು ಪ್ರಸಿದ್ಧಿಸಬಹುದಾಗಿತ್ತು. ಆದರೆ ಪ್ರಸಿದ್ಧಿಸುವದು ಸುಲಭವಾದ ಕಾರ್ಯವಲ್ಲ. ಧಾರಾಳವಾಗಿ ಹಣವು ಬೇಕಾಗುತ್ತೆ, ಇದಕ್ಕಾಗಿಯೇ ಅವರು ವಕೀಲಿ ವೃತ್ತಿ ಹಾಗು ಅನೇಕ ಸಂಘ ಸಂಸ್ಥೆಗಳಲ್ಲಿ ಚೇರಮನ್ ಮುಂತಾದ ವೃತ್ತಿಗಳನ್ನು ಕೈಕೊಂಡು ಈ ವಾಙ್ಮಯಕ್ಕೆ ಹಣದ ಅಭಿಷೇಕ ಮಾಡಿದ್ದಾರೆ. ಇದುವೇ ಅವರ ದಿವ್ಯ ಪೂಜೆಯಾಗಿದೆ.

ಶ್ರೀಯುತರನ್ನು ನೋಡದ ಹಾಗು ಅವರನ್ನು ಅರಿಯದ ಜನರು ನಮ್ಮ ನಾಡಿನಲ್ಲಿಲ್ಲವೆನ್ನಬಹುದು. ಕಲಾಪ್ರಿಯರು ಸುಪ್ರಸಿದ್ಧ ಕಟ್ಟಡಗಳ ತೈಲಚಿತ್ರ ಗಳನ್ನು ಕಂಡು ಆಯಾ ಪುರಪಟ್ಟಣಕ್ಕೆ ಧಾವಿಸಿ ಕಟ್ಟಡಗಳನ್ನು ಕಾಣು ವಂತೆ ವಚನವಾಙ್ಮಯ ಪ್ರಿಯರು ವಚನ ಗ್ರಂಥಗಳನ್ನು ಕಂಡು ರಾ॥ ಬ॥ ಹಳಕಟ್ಟಿಯವರನ್ನು ಕಾಣದೇ ಇರರು. ಶ್ರೀಯುತರ ಮನೋಭಾವನೆ ಯಾವಾ ಗಲೂ ಮೃದುವಾದುದು. ಎಷ್ಟೊಂದು ಕಷ್ಟವಾದರೂ ಸಹ ಆ ಕಷ್ಟದ ಚಿನ್ಹವೇ ಅವರ ಮುಖದ ಮೇಲೆ ಕಾಣದು. ಕಷ್ಟವನ್ನೇ ಸುಖವೆಂದರಿತ ಅವರಿಗೆ ಕಷ್ಟವೆಂಬುದೇನುಗೊತ್ತು ? ಯಾವಾಗಲೂ ವಚನಗಳ ಸುರಿಮಳಿಯು ಅವರ ಕೋಣೆಯಲ್ಲಿ ಸುರಿಯುತ್ತದೆ. ನಾಲ್ಕು ನಿಟ್ಟಿನ ಕೋಣೆಯ ಗೋಡೆಗಳು

ಅನೇಕರೋ ಸಂಗ್ರಹ ಪುಸ್ತಕಗಳಿಂದಲೂ, ಗ್ರಂಥಗಳಿಂದಲೂ ಆಚ್ಛಾದಕವಾಗಿ ಕೋಣೆಯ ಗೋಡೆಯು ಕಾಣದೆ ಆ ಸಂಗ್ರಹ ಪುಸ್ತಕಗಳೇ ಅವರ ಜೀವನದ ಗ್ರಹವಾಗಿ ಕಾಣುತ್ತದೆ. ಯಾವಾಗಲೂ ಯಾವದಾದರೊಂದು ವಿಷಯದ ಪುಸ್ತಕವನ್ನಾಗಲಿ ಇಲ್ಲವೆ ವಚನ ಗ್ರಂಥಗಳನ್ನಾಗಲಿ ಮುಂದಿಟ್ಟುಕೊಂಡು ಓದುತ್ತಲೇ ಇರುತ್ತಾರೆ. ಅದುವೇ ಅವರ ಜಾಗೃತಾವಸ್ಥೆ ಹಾಗು ಸ್ವಪ್ನಾವಸ್ಥೆಯಾಗಿದೆ. ಹೀಗೆ ತಮಗೆ ಬೇಸರಾದಲ್ಲಿ ಸ್ವಲ್ಪ ಹೊತ್ತು ಮೌನವಾಗಿ ವಿಚಾರಮಗ್ನರಾಗಿರುತ್ತಾರೆ. ಹಾಗು ಇನ್ನು ಕೆಲವು ವೇಳೆ ಪ್ರಕಟನಾ ಮಂದಿರದ ಕೆಲಸಗಳು ಬಂದಿರಲು ಅವುಗಳ ತಪ್ಪು ತಿದ್ದುವಿಕೆ ಹಾಗು ಲೆಕ್ಕಪತ್ರಗಳ ವಿಚಾರಣೆಯಲ್ಲಿ ಕಾಲ್ಕಳೆಯುವರೇ ಹೊರತು, ಅನೇಕರ ಕೂಡ ಅನೇಕ ನುಡಿಗಳನ್ನಾಡುತ್ತ ವ್ಯರ್ಥ ವೇಳೆಗಳೆಯದೆ ಮಿತಭಾಷಿಗಳಾಗಿ ನುಡಿದರೂ ಕೇಳಿದವರ ಮನವು ಆನಂದದಿಂದ ತುಂಬಿ ಉಯ್ಯಾಲೆಯಾಡಿರಬೇಕು. ಅಂಥ ನುಡಿ ಅವರದು.

ಪ್ರಪಂಚದಲ್ಲಿ ಸದಾ ಸುಖಿಯಾಗಿಯೇ ಬಾಳಲು ಪರಮಾತ್ಮನು ಸಹ ಆಸ್ಪದಕೊಡಲಾರ. ಗಂಗೆ ಯಮುನೆಯರ ಸಂಗಮದಲ್ಲಿ ನಾನು ಕೇವಲ ಗಂಗೆಯಲ್ಲಿಯೇ ಮಿಂದು ತೆರಳುವೆನೆಂದರೆ ಎಷ್ಟೊಂದು ಹಾಸ್ಯಾಸ್ಪದವೋ ಅಷ್ಟೊಂದು ಹಾಸ್ಯಾಸ್ಪದ ಜೀವನವಾಗುವದು ಸುಖಮಯವಾಗಿಯೇ ಬಾಳಿ ತೆರಳಬೇಕೆಂಬುವನ ಜೀವನವು ಸತತವಾಗಿ ಕಷ್ಟವೆಂಬ ನದಿಯಲ್ಲಿ ಮಿಂದುಕೊಳ್ಳಬಹುದು. ಆದರೆ ಸುಖಸಾಗರದಲ್ಲಿ ಸತತವಾಗಿ ಮಿಂದುಕೊಳ್ಳಲಾರ ಮಾನವ. ಹೀಗೆ ಇವೆರಡನ್ನು ಅರಿಯದೆ ಸುಖವನ್ನೂ ದುಃಖವನ್ನೂ ಕೇವಲ ಶಬ್ದವೆಂದೇ ಭಾವಿಸಿ, ದುಃಖದಲ್ಲಿಯೇ ಸುಖವನ್ನು ಕಂಡುಕೊಂಡು ಜೀವನ ಸಾಗಿಸಿದವರಲ್ಲಿ ಶ್ರೀಯುತರೊಬ್ಬರು.

ಈ ಕಾಲಕ್ಕೆ ಮೇಲಿಂದ ಮೇಲೆ ಬರಗಾಲವು ಸಂಭವಿಸಲು ನಮ್ಮ ನಿಮ್ಮಗಳ ಒಂದು ತಪ್ಪು ಎಂಬುದು ಪ್ರತಿಯೊಬ್ಬರು ಅರಿಯಬಹುದಾದ ವಿಷಯವೇ ಆಗಿದೆ. ಎತ್ತ ನೋಡಿದತ್ತ, ಹಣದ ಸುಲಿಗೆಗಾರರೇ ಹೆಚ್ಚಾಗಿದ್ದಾರೆ. ಅದಕ್ಕಾಗಿ ಸೋಗುಹಾಕಿ ತಿರುಗುತ್ತಾರೆ. ಅಂಥವರಿಗೆ ಧಾರಾಳವಾಗಿ ಹಣಸಿಕ್ಕುತ್ತಿ. ಆದರೆ ಇದೊಂದು ಕಾಲವೆಂದರಾಯಿತು. ನಮ್ಮ ನಾಡುನುಡಿ ಸಂಸ್ಕೃತಿಗಳಿಗೆ ನಾಶಕರಾಗಿಯೂ ಹಣಗಳಿಸುವದು ಬೇಡವೆಂದು ಶ್ರೀಯುತರು

"ನವಕರ್ನಾಟಕ" ವಾರಪತ್ರಿಕೆಯನ್ನು ನಿಲ್ಲಿಸಬೇಕಾಗಿಬಂದಿತು. ಏಕೆಂದರೆ ಮುಖಪುಟಕ್ಕೆ ಸಿನೇಮಾತಾರೆಯರುಬೇಕಲ್ಲ. ಅಂಥ ಬ್ಲಾಕುಗಳನ್ನು ತರಿಸಲು ಶಕ್ಯವಿಲ್ಲವೆಂದು ಬಿಟ್ಟಿದ್ದಲ್ಲ. ನಮ್ಮಗಳ ನಾಶಕ್ಕೆ ಕಾರಣವೆಂದರಿತು. ಜನತೆಗೆ ಮೋಸುಗೊಳಿಸಿ, ಕತ್ತಲೆಯಲ್ಲಿ ದಾರಿಕೇಳಿದವರಿಗೆ ಬಾವಿಯತ್ತ ದಾರಿ ತೋರಿ ದಂತೆ ಆಗುತ್ತದೆಂದು ತಿಳಿದು ಪತ್ರಿಕೆಯ ಪ್ರಕಟನೆಯನ್ನು ನಿಲ್ಲಿಸುವ ಪ್ರಸಂಗವು ಓದುಗರಿಂದಲೇ ಬಂದಿತು. ಇದನ್ನು ತಿಳಿದುಕೊಂಡಾದರೂ ಇನ್ನಿತರರು ಅಂಥ ಹಣಕ್ಕಾಗಿ ಆಶಿಸದೆ, ತಮ್ಮ ಕಾರ್ಯದಲ್ಲಿ ನಮ್ಮ ಸಂಸ್ಕೃತಿಯನ್ನು ಎತ್ತಿ ಹಿಡಿಯಬೇಕೆಂದು ಆಶಿಸುವೆ. ಇಷ್ಟೇ ಅಲ್ಲ, ಅವರು ವಕೀಲಿ ವೃತ್ತಿಯಲ್ಲಿದ್ದಾಗ್ಗೆ ಶರೀರಕ್ಕೆ ಆ ಕಾಲಕ್ಕೆ ಬೇಕಾದ ಪಾಶ್ಚಿಮಾತ್ಯರ ಉಡುಪನ್ನೇ ಧರಿಸಬಹು ದಾಗಿತ್ತು. ಆದುದರಿಂದ ಶರೀರಕ್ಕೇನೋ ಅವರಂತೆ ವಸ್ತ್ರವನ್ನು ಧರಿಸಿದರು. ಆದರೆ ಒಬ್ಬರನ್ನೊಬ್ಬರು ಗುರುತಿಸಿಕೊಳ್ಳಬಹುದಾದದ್ದು ಕೇವಲ ಮುಖದಿಂದ ಮಾತ್ರ ಆದುದರಿಂದ ಮುಖದ ಮೇಲಣ ನಮ್ಮ ಸಂಸ್ಕೃತಿಯ ಚಿನ್ಹವು ಇನ್ನೊಬ್ಬರಿಗೆ ತಿಳಿಯುವಂತೆ ಪಟಕವನ್ನು ಸುತ್ತುತ್ತಿದ್ದರು. ಇದರಿಂದ ತಿಳಿದು ಕೊಳ್ಳಿ ನಮ್ಮ ಸಂಸ್ಕೃತಿಯ ಬಗ್ಗೆ ಎಷ್ಟೊಂದು ಅಭಿಮಾನವು ಅವರಲ್ಲಿದೆ ಎಂಬುದು. ಅವರ ಈ ನೀತಿ ನಡಾವಳಿಕೆಯನ್ನು ಗಹನವಾಗಿ ವಿಚಾರಮಾಡಿ ದವರಿಗೆ ಮಾತ್ರ ತಿಳಿದು ಬರುವದೇ ಹೊರತು ಎಲ್ಲರಿಗೂ ತಿಳಿಯಲು ಸಾಧ್ಯ ವಾಗದು. ತೆರೆಯಮರೆಯಲ್ಲಿದ್ದ ಶರಣರ ನುಡಿಗಳನ್ನು ಕೇಳುವಂತೆ ಮಾಡಿದ ಅವರು ತಾವೇ ತೆರೆಯ ಮರೆಯಲ್ಲಿ ಶರಣರ ಜೀವನ ತೆರೆಯನ್ನು ಸರಿಸಿ ತೋರಿ ಸುವ ಚಾಲಕರಾಗಿದ್ದಾರೆ. ಇಂಥ ನಿಸ್ವಾರ್ಥ ಸೇವಕರಾಗಿ ಸಾಗಿದ ಅವರ ಜೀವನದ ತೆರೆಯನ್ನೇ ಇಲ್ಲಿ ತೆರೆಯಲಾಗಿದೆ. ಬರೆಯುತ್ತಾ ಹೋದರೆ ಅವರ ಜೀವನದ ಕಥಾಸಾರವು ಬೆಳೆಯುತ್ತಲೇ ಸಾಗುತ್ತೆ.

ಇಂದು ಜಾತ್ಯಾತೀತವೆಂಬ ಹೆಸರಿನ ನಮ್ಮ ರಾಜ್ಯದಲ್ಲಿ ರಾಜಪ್ರಮು ಖರು ಹರಿಜನರನೇಕರನ್ನೊಡಗೂಡಿ ಅನೇಕೋ ಪವಿತ್ರ ದೇವಾಲಯಗ ಳನನ್ನು ಪ್ರವೇಶಿಸಿದರು. ಆದರೆ ಪ್ರವೇಶಿಸಿದ ಒಂದೇ ಒಂದು ದಿನಮಾತ್ರ ಮುಂದೆ ಯಥಾಪ್ರಕಾರವಿಲ್ಲ. ಇದಕ್ಕೆ ಕಾರಣವೇನೆಂದರೆ ದೇವಾಲಯಕ್ಕೆ ಭಕ್ತಾಸಕ್ತರಾಗಿ ಪ್ರವೇಶಿಸಿದುದಲ್ಲ. ಅಲ್ಲಿಯ ಭಕ್ತರ ಮನೋವಿರುದ್ಧವಾಗಿ ಸಾಗಿಹುದು. ಇದಕ್ಕೇ ಒತ್ತಾಯವೆಂಬ ಹೆಸರು. ಭಕ್ತಿಯ ಲವಲವಿಕೆಯು ಮನದಲ್ಲಿ ಉಂಟಾಗಿ ದಿನಾಲು ತೆರಳಿದರೆ ಆ ಕಾರ್ಯವು ಯಶಸ್ವಿಯಾಗ

ಬಹುದಿತ್ತು. ಇಂದು ಕೇವಲ ಅನೇಕರೋ ವ್ಯಕ್ತಿಗಳು ಕೇವಲ ತಮ್ಮ ಸ್ವಾರ್ಥ ತನಕ್ಕಾಗಿ ಏನನ್ನೋ ಮಾಡುತ್ತಾರೆ. ಆದರೆ ಮುಂದಾಗುವದನ್ನು ಅರಿಯರು. ಕಾರ್ಯತತ್ಪರರಾಗಿ ಕೈಯ್ಯಲ್ಲಿ ಕಸಬರಿಗೆ ಹಾಗೂ ಹೆಡಿಗೆಗಳನ್ನು ಹಿಡಿದು ಫೋಟೊಗ್ರಾಫರನು ಫೋಟೋತೆಗೆದುಕೊಳ್ಳುವವರೆಗೆ ಮಾತ್ರ ಕೈಯ್ಯಲ್ಲಿ ಹಿಡಿದಿರುವದೇ ಬಹು ಕಷ್ಟಮಯವಾಗಿಬಿಟ್ಟಿರುತ್ತದೆ. ಇಂಥ ಯಾವ ಸಮಾರಂಭಕ್ಕಾಗಲಿ, ಅಥವಾ ಅಂಥ ಫೋಟೋಗಳಲ್ಲಿ ಒಡಮೂಡಿಕೊಳ್ಳಲು ಅಪೇಕ್ಷಿಸಿದವರಲ್ಲ ನಮ್ಮ ಶ್ರೀಯುತರು.

ನಮ್ಮ ಶ್ರೀಯುತರಿಗೆ ಇಂದಿಗೆ ೮೩ ವರ್ಷಗಳು ತುಂಬಿದರೂ ಸಹ ಇನ್ನೂ ತಮ್ಮ ಕಾರ್ಯದಲ್ಲಿ ಆಸಕ್ತರಾಗಿದ್ದಾರೆ. ಬೆಳಗಿನಿಂದ ಸೂರ್ಯನು ತಾನು ಜಗತ್ತಿಗೆ ಸಲ್ಲಿಸಬೇಕಾದ ಬೆಳಕನ್ನು ಯಥಾಪ್ರಕಾರವಾಗಿ ಹೇಗೆ ಸಲ್ಲಿಸುವನೋ ಹಾಗೆ ಶ್ರೀಯುತರು ಜಗತ್ತಿಗೆ ಸಲ್ಲಿಸಬೇಕಾದ ವಾಙ್ಮಯ ಜೋತಿಯನ್ನು ನಂದಗೊಡದೆ ಅದಕ್ಕೆ ತೈಲವನ್ನು ಹಾಕುತ್ತಲೇ ಇದ್ದಾರೆ. ಆ ಬೆಳಕಿನ ಉಪಯೋಗವನ್ನು ಮಾಡಿಕೊಂಡಲ್ಲಿ ಜೀವನದ ಎಡರುತೊಡರುಗಳು ತೆರಳಿ ಸುಗಮವಾಗಿ ಸಾಗಲು ಅನುವಾಗುತ್ತದೆ ಇಂಥ ಜ್ಯೋತಿಯ ಸೇವಕರಾಗಿಯೂ ತಮ್ಮೆಲ್ಲರ ಸೇವಕರಾಗಿಯೂ ಇರುವ ಅವರಿಗೆ ಸೇವಕರಿನ್ನೆಲ್ಲಿ? ತಮ್ಮ ಯಾವದೇ ಕೆಲಸವನ್ನು ಇನ್ನೊಬ್ಬರಿಗೆ ಹೇಳುವವರಲ್ಲ. ಮನೆಯಲ್ಲಿಯಾಗಲಿ ಇನ್ನೆಲ್ಲಿಯಾದರೂ ತಾವು ಕುಳಿತ ಸ್ಥಳದಲ್ಲಿ ಒಂದು ಕಡ್ಡಿಯ ಚೂರು ಬಿದ್ದಲ್ಲಿ ಅದನ್ನು ತಾವಾಗಿಯೇ ತೆಗೆದು ಕಸದ ಬುಟ್ಟಿಯಲ್ಲಿ ಎಸೆಯುವರು. ಇಂಥ ಸಾಮಾನ್ಯ ಜೀವಿತವು ಅವರದು. ಅಂದಮೇಲೆ ಕೋಪವೆಂಬುದು ಎಲ್ಲಿ? ಕೋಪವೆಂಬುದು ಸರ್ವಸಾಮಾನ್ಯ ಇನ್ನೊಬ್ಬರು ತಮ್ಮ ಮನಸ್ಸಿನ ವಿರುದ್ಧವಾದಲ್ಲಿ, ಹಾಗು ತಮ್ಮ ಕಾರ್ಯವನ್ನು ಮಾಡದಿದ್ದಲ್ಲಿ ಸ್ವಾಭಾವಿಕವಾಗಿ ಬರುತ್ತೆ. ಹೀಗಿರುವಲ್ಲಿ ತಮ್ಮ ಕಾರ್ಯವನ್ನು ತಾವಾಗಿಯೇ ಮಾಡಿಕೊಳ್ಳುತ್ತ ಹಾಗು ಇನ್ನೊಬ್ಬರ ಮನ ನೋಯಿಸದ ಅವರಿಗೆ ಕೋಪವೆಂಬುದೆಲ್ಲಿ? ಅವರ ಮುಖಮುದ್ರೆಯಲ್ಲಿ ಸಿಟ್ಟಿನ ರೇಖೆಯೇ ಕಾಣುದದಿಲ್ಲ. ಇಂಥ ಜೀವನವೇ ಜೀವನ. ಇಂಥ ಜೀವನ ಸಾಗಿಸುವದು ಬಹು ಕಷ್ಟವಾದುದು. ಆದರೆ ಆ ಕಷ್ಟವೆಂಬ ಶಬ್ದವನ್ನೇ ಸುಖವೆಂದು ಅರಿತವರಿಗೆ ಅಂಥ ಜೀವನವು ಅತಿ ಸುಲಭವಾದುದು.

ಪರಮಾತ್ಮನು ತನಗಾಗಿ ಎನನ್ನೂ ಬೇಡನು. ಆತನಿಗೆ ಆತನಂದ ಉತ್ಪತ್ತಿಯಾಂಥ ಫಲಗಳನ್ನು ಅರ್ಪಿಸಿದರೆ ನಮ್ಮಿಂದ ಕೊಟ್ಟ ಫಲವೇನು?

ಆತನ ಫಲವನ್ನು ಆತನಿಗೆ ಕೊಟ್ಟಂತಲ್ಲವೇ ? ನಮ್ಮಿಂದ ಆತನಿಗೆ ಅರ್ಪಿಸ ಬೇಕಾದುದು ಭಕ್ತಿ. ಆ ಭಕ್ತಿಯನ್ನು ಕೈಕೊಳ್ಳುವದೇ ಆ ದೇವಾಧಿದೇವನಿಗೆ ಸಂತೃಪ್ತಿಪಡಿಸಿದಂತೆ. ಆ ರೀತಿಯಾಗಿ ಜನತಾಸೇವೆಯೇ ಜನಾರ್ಧನಸೇವೆ ಎಂದರಿತು ನಮ್ಮ ಸಂಪಾದಕರು ಜನಸೇವಾಸಕ್ತರಾಗಿ ವೃದ್ಧರಾದರು. ಇಷ್ಟೇ ಅಲ್ಲ. ಈ ಎರಡು ತಿಂಗಳುಗಳ ಹಿಂದೆ ಅವರಿಗೆ ಶರೀರದಲ್ಲಿ ಸ್ವಸ್ಥವಿದ್ದಿಲ್ಲ. ಕಾಯಿಲೆಯಿಂದ ಬಳಲುತ್ತಿದ್ದರೂ ಸಹ ತಮ್ಮ ಕಾರ್ಯವನ್ನು ಯಥಾಪ್ರಕಾರವಾಗಿ ಸಾಗಿಸುತ್ತಿದ್ದರು. ಡಾಕ್ಟರರು ಅವರಿಗೆ ಒಂದು ತಿಂಗಳಾದರೂ ವಿಶ್ರಾಂತಿ ಅವಶ್ಯವಾಗಿಬೇಕೆಂದು ಹೇಳಿದರೂ ಸಹ ಅವರೆದುರು "ನಾನು ವಿಶ್ರಾಂತಿಯಲ್ಲಿಯೇ ಇರುವೆ, ಯಾವ ವಿಚಾರವನ್ನು ಮಾಡಿಲ್ಲ" ವೆಂದು ಹೇಳುತ್ತಲೇ ಕಾಯಿಲೆಯಿಂದ ಮುಕ್ತರಾದರು ಸೂರ್ಯನು ತನ್ನ ಕಾರ್ಯವನ್ನು ಸಾಗಿಸಲು ಉದಯಿಸಿಯೇ ಇರುತ್ತಾನೆ. ಆದರೆ ಮೋಡ ಮುಸುಕಲು ವಿಶ್ರಾಂತಿಯನ್ನು ಹೇಗೆ ತೆಗೆದುಕೊಳ್ಳದೆ ಆ ಮೋಡವು ಅಡ್ಡಗಟ್ಟಿದೆಂದು ಭಾವಿಸದೇ ಜಗತ್ತಿಗೆ ಬೆಳಕನ್ನೀಯುವನೋ ಹಾಗೆ ಕಾಯಿಲೆಯನ್ನು ಲೆಕ್ಕಿಸದೆ, ತಮ್ಮ ವಯವನ್ನು ಲೆಕ್ಕಿಸದೆ ತಮ್ಮ ಶಕ್ತಿಯನ್ನು ಲೆಕ್ಕಿಸದೆ ಯಂತ್ರದಂತೆ ದುಡಿಯುತ್ತಿದ್ದಾರೆ. ಯಂತ್ರವು ಒಂದು ವೇಳೆ ಯಾವದೇ ಕಾರಣದಿಂದ ನಿಲ್ಲಬಹುದು. ಅದಕ್ಕಿಂತಲೂ ಮಿಗಿಲಾಗಿ ದುಡಿದಿದ್ದಾರೆ. ಹಾಗು ದುಡಿಯುತ್ತಲಿದ್ದಾರೆ. ತಮ್ಮಂತೆ ಇನ್ನೂ ಅನೇಕರು ಈ ಕಾರ್ಯದಲ್ಲಿ ದುಡಿಯುವವರಾದಲ್ಲಿಯೇ ಅವರಿಗೆ ಸಂತೋಷ. ಹೊರ್ತಾಗಿ ಅವರನ್ನು ಕುಳ್ಳಿರಿಸಿ ಅವರ ಕಾರ್ಯವನ್ನು ವಹಿಸಿಕೊಂಡು ಅವರ ಸೇವಕರಾಗಬೇಕೆಂಬುವ ಧರ್ಮಾಭಿಮಾನಿಗಳಿಂದ ಅವರಿಗೆ ಸುಖವಿಲ್ಲ. ದೇವಾಧಿದೇವನು ಸಮಾಜೋದ್ಧಾರಕರನ್ನಾಗಿಯೇ ಅವರನ್ನು ಕಳಿಸಿದಂತಿದೆ. ಅವರು ಜಗತ್ತಿಗೆ ಸಲ್ಲಿಸಿದ ಸೇವೆ ಅಪಾರವಾದುದು. ಪರಮಾತ್ಮನು ಅವರಿಗೆ ಆಯುರಾರೋಗ್ಯ ಕೊಟ್ಟು ಅವರಿಂದ ವಿಶ್ವವು ನೀತಿಪಥದಲ್ಲಿ ಸಾಗಲೆಂದು ಹಾರೈಸುವೆ.

# ೩. ಬಸವಣ್ಣನವರ ಸಾಧನ.

(ಲೇಖಕರು:— ಶ್ರೀಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.)

[ಹಿಂದಿನ ಸಂಚಿಕೆಯಿಂದ ಮುಂದುವರಿದುದು.]

ಇದರಂತೆ ಪುನಃ ದೇವರಿಗೆ ಅಣ್ಣನು ಮೊರೆ ಇಡುವನು.

೨೮. "ಕೆಸರಲ್ಲಿ ಬಿದ್ದ ಪಶುವಿನಂತೆ ಆನು ದೆಸೆದೆಸೆಗೆ ಬಾಯಬಿಡು ತಿದ್ದೆನಯ್ಯಾ ಆರೈವರಿಲ್ಲ ಅಕಟಕಟಾ ಪಶುವೆಂದೆನ್ನ ಕೂಡಲಸಂಗಮದೇವ ಕೊಂಬ ಹಿಡಿದೆತ್ತುವನ್ನಕ್ಕ."

ಈಪ್ರಕಾರ ತನ್ನ ಸ್ಥಿತಿ ಕೆಸರಲ್ಲಿ ಬಿದ್ದ ಪಶುವಿನ ಸ್ಥಿತಿಯಂತೆ ಆಗಿದೆ ಎಂದೂ, ದೇವಾ! ಈ ಸಂಸಾರವೆಂಬ ಕೆಸರೊಳಗಿಂದ ತೆಗೆದು ಎತ್ತಿ ಸಲಹು ಎಂದೂ ಮೊರೆ ಇಡುವನು. ದೇವನ ದರ್ಶನವು ತನಗೆ ಇನ್ನೂ ಏಕಾಗ ಲೊಲ್ಲದೆಂದು ತನಗೆ ತಾನೇ ಸಂದೇಹಬಟ್ಟು,

೨೯. "ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ! ವಿಚಾರಿಸಿ ದರೆ ಹುರುಳಿಲ್ಲವಯ್ಯ! ಪ್ರಪಂಚದ ಡಂಭಿನಲ್ಲಿ ಎನ್ನಗೊಂದು ರೂಪುಮಾಡಿ ನೀವಿರಿಸಿದಿರಯ್ಯ ಕೂಡಲಸಂಗಮದೇವಾ."

ಎಂದು ಇನ್ನೂ ತನ್ನ ಚಿತ್ತಶುದ್ಧವಾಗಿಲ್ಲ. ಚಿತ್ತದಲ್ಲಿ ಚಂಚಲತೆ ಇದ್ದ ಬಳಿಕ ದೇವನ ದರ್ಶನವೆಂತು ಸಾಧ್ಯವೆಂದು ತಾನೇ ಹೇಳಿಕೊಂಡು,

೩೦. "ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ ಎನ್ನೊಳಗೇನು ಶುದ್ಧವಿಲ್ಲ ನೋಡಯ್ಯ ನುಡಿಗೆ ತಕ್ಕ ನಡೆಯ ಕಂಡಡೆ ಕೂಡಲ ಸಂಗಮದೇವನೆನ್ನೊಳಗಿಪ್ಪ ನೋಡಯ್ಯ."

ಎಂದು ತನ್ನ ನಡಿನುಡಿಗೆ ತಕ್ಕ ಮೇಳ ಇಲ್ಲದಕ್ಕಾಗಿ ದೇವನ ದರ್ಶನ ವಾಗದೆ ತಡವಾಗುತ್ತ ನಡೆದಿದೆ ಹೊರತು ದೇವನದೇನೂ ತಪ್ಪಿಲ್ಲ. ಎಂದು ತನ್ನ ನಿಜಸ್ಥಿತಿಯನ್ನು ಪರಮಾತ್ಮನಿಗೆ ನಿವೇದಿಸುವನು. ಇದೇ ನಿಜವಾದ ಶರಣರ ಸ್ಥಿತಿ.

ಈಪ್ರಕಾರ ಅಣ್ಣನು ನಿತ್ಯ ಸಾಧನ ನಡಿಸಿದ್ದನು. ಇಲ್ಲಿ ಸಾಧನ ಎಂದರೆ ಏನೆಂದು ಕೆಲವರಿಗೆ ಸಂಶಯು ಬರಬಹುದು. ಅದಕ್ಕೆ ಅದರ ಬಗೆಗೆ ಸ್ವಲ್ಪ ವಿಚಾರಿಸುವೆವು. ಮಾನವನು ದೇವಮಾನವನಾಗುವ ಸಲುವಾಗಿ ಮಾಡುವ ಯಾವತ್ತೂ ಯೋಗ್ಯ ಸಾಹಸ ಪ್ರಯತ್ನಗಳಿಗೆ ಸಾಧನವೆನ್ನುವರು. ಈ ಸಾಧನ ಗಳು ಅವರವರ ಬುದ್ಧಿಭಾವ ಹೃದಯ ಮನಸ್ಸು ಇಂದ್ರಿಯ ಶರೀರಗಳನ್ನು ಅವಲಂಬಿಸುವವು. ತಾನು ಪರಮಾತ್ಮನಾಗುವದಲ್ಲದೆ ಸರ್ವಭೂತಗಳಲ್ಲಿಯೂ ಪರಮಾತ್ಮನ ದರ್ಶನವನ್ನು ಪಡೆಯುವದೇ ಸಾಧನೆಯ ಗುರಿಯಾಗಿರುವದು. ಆಗ ಇಂದ್ರಿಯ ಜನ್ಯ ಭೇದಗಳೆಲ್ಲ ಮಾಯವಾಗಿ ಸದಾ ಸುತ್ತುಕಡೆಗೂ ಪರ ಮಾತ್ಮನ ದರ್ಶನವಾಗುವದು. ಇದಕ್ಕೆ ಅವಿದ್ಯ ಅಥವಾ ಮಾಯೆ ಹೋಗಲು ಅನೇಕ ಮಾರ್ಗಗಳನ್ನು ಸಾಧಕನು ಅಥವಾ ಭಕ್ತನು ಅನುಸರಿಸಬೇಕಾಗು ವದು. ಅದೇ ಭಕ್ತಿಜ್ಞಾನ, ಅಷ್ಟಾಂಗ, ಕರ್ಮ, ಹಠ, ಲಯಮಾರ್ಗ ಗಳು. ಇವುಗಳಲ್ಲಿ ಭಕ್ತಿ ಅತಿ ಸರಳ ಸುಲಭ, ಭಾವಿಕರಿಗೆ ಇದು ಬಹು ತೀವ್ರ ಸಾಧಿಸುವದು. ಇವುಗಳಿಗೆ ಆಧ್ಯಾತ್ಮ ಸಾಧನಗಳೆನ್ನುವರು. ನಾಮ, ರೂಪ, ದೇಶ, ಕಾಲ, ನಿಮಿತ್ತಾದಿಗಳಿಂದ ಬದ್ಧವಾದ ಈ ಜಗತ್ತನ್ನು ದಾಟಿ ನಾಮರೂಪಾತೀತ, ದೇಶ ಕಾಲಾತೀತ, ಸಚ್ಚಿದಾನಂದ ಪರಮಾತ್ಮನನ್ನು ಕಾಣಬೇಕಾದರೆ ಅವಶ್ಯವಾಗಿ ಬೇಕಾಗುವ ಸಕಲ ಅಂದರೆ ಮೇಲೆ ಹೇಳಿದ ಸಲಕರಣೆ ಸಾಹಸಗಳಿಗೆ ಶಾಸ್ತ್ರಗಳು ಸಾಧನ ಎಂದು ಹೆಸರು ಕೊಟ್ಟಿರು ವವು. ಇದರಲ್ಲಿ ವೈರಾಗ್ಯ ಮೊದಲನೇದ್ದು. ತ್ಯಾಗವೇ ಧರ್ಮದ ಮೂಲ ವಯ್ಯು ತ್ಯಾಗವಿಲ್ಲದೆ ಯಾವದೂ ಸಾಧಿಸುವದೇ ಇಲ್ಲ. ಒಮ್ಮನವಿಲ್ಲದೆ ಯಾವದೂ ಸಾಧಿಸದು. ಅದಕ್ಕೆ ಅಣ್ಣನ ಈ ವರೆಗಿನ ಮೇಲಿನ ಸಾಧನಗಳಲ್ಲಿ ಅನೇಕ ಅವನ ವಚನಗಳನ್ನೇ ಹಾಕಿದ್ದಾಗಿದೆ. ಅಣ್ಣನು ಅವತಾರಿಕನು. ಆದರೂ ಸಾಧನೆ ಇಲ್ಲದೆ ಅಣ್ಣನಿಗೂ ಸಿದ್ಧಿ ದರ್ಶನಗಳಿಲ್ಲ. ಯಾಕಂದರೆ ಹರನು ಧರೆಯ ಮೇಲೆ ನರನಾಗಿ ಜನ್ಮವೆತ್ತಿದ ಮೇಲೆ ನರನಂತೆ ಆಚರಿಸಿ ನರ ನಂತೆ ಸಾಧನೆಗಳನ್ನು ಮಾಡಿ ಸಿದ್ಧಿ ಪಡೆಯಬೇಕು. ಅಂದರೆ ಉಳಿದ ಸಾಮಾ ನ್ಯರಿಗೂ ಅಣ್ಣನನ್ನು ಅನುಸರಿಸಲಿಕ್ಕೆ ಬರುವದು. ಹೀಗಾಗದೆ ಅಣ್ಣನು ಸಹಜ ಸಿದ್ಧಿಪಡೆದಿದ್ದರೆ ಇವನನ್ನು ನೋಡಿ ಜನ ಆಶ್ಚರ್ಯಬಟ್ಟು ತಮಗೆ ಇದೆಲ್ಲ ಅಶಕ್ಯ ಅಸಾಧ್ಯವೆಂದು ಅವನಿಗೆ ಕೈಮುಗಿದು ಬೆರಳು ಕಚ್ಚಿ ಸುಮ್ಮನಿರ ಹತ್ತಿದ್ದರು ಹೀಗಾಗುವದರಿಂದ ಈ ಸಾಮಾನ್ಯ ಜನರು ಏನೂ ಪ್ರಯತ್ನ ಪಡದೆ ಸುಮ್ಮನಿದ್ದು ಸಿದ್ಧಿಯ ಲಾಭವನ್ನು ಎಂದೂ ಹೊಂದುತ್ತಿದ್ದಿಲ್ಲ.

ಮೊದಲಿನ ಬರಹಕಾರರು ಅವತಾರ ಪುರುಷರ ಜೀವನ ಚರಿತ್ರೆಯನ್ನು ಬರೆಯುವಾಗ ಅವರ ಸಾಧನೆಯ ಭಾಗವನ್ನು ಸಂಪೂರ್ಣ ತೆಗೆದುಬಿಟ್ಟಿದ್ದಾರೆ. ಇದಕ್ಕೆ ಭಕ್ತನ, ಬರಹಕಾರರ ದುರ್ಬಲತೆಯೇ ಕಾರಣವಾಗಿದೆ. ಅದಕ್ಕಾಗಿಯೇ ಅವತಾರಕನಾದ ಅಣ್ಣನ ಚರಿತೆಯಲ್ಲಿ ಎಲ್ಲರಿಗೂ ನೆರವಾಗುವಂತೆ ಅವನ ವಚನಗಳಿಂದಲೇ ಅವನ ಸಾಧನೆಯನ್ನು ಚಿತ್ರಿಸುತ್ತಿರುವೆವು. ಇದರಿಂದ ಸಕಲರಿಗೂ ಅಣ್ಣನ ಆದರ್ಶವನ್ನು ಕಂಡುಕೊಂಡು ಅವನಂತೆ ಸರಿಯಾದ ಸಾಧನೆಗಳನ್ನು ಮಾಡಿ ಸಕಲಸಿದ್ಧಿಗಳನ್ನು ಹೊಂದಲೆಂಬ ಸದುದ್ದೇಶದಿಂದಲೇ ಹೀಗೆ ಅವನ ಚರಿತೆಯನ್ನು ಹೆಣೆಯಲಾಗಿದೆ.

ಅಣ್ಣನ ಸಾಧನೆಯ ಚರಿತೆ ಬಹುದೊಡ್ಡದು. ಅದನ್ನು ಆದಷ್ಟು ಸಂಕ್ಷೇಪವಾಗಿ ವಿವರಿಸುವೆವು. ಅಣ್ಣನು ನಿತ್ಯ ತರತರದಿಂದ ಸಾಧನೆಗಳನ್ನು ಮಾಡುವನು. ಪೂಜೆ, ಧ್ಯಾನ, ಜಪ, ಶಾಸ್ತ್ರದ ಅಧ್ಯಯನ, ಗುರುವಿನ ಉಪದೇಶ, ಮೌನ, ಏಕಾಂತ, ಆಸನ, ಪ್ರಾಣಾಯಾಮಗಳನ್ನು ನಿತ್ಯನೇಮದಿಂದ ಚಾಚೂ ತಪ್ಪದೆ ಮಾಡುತ್ತಿದ್ದನು. ಇನ್ನೂ ಅಣ್ಣನಿಗೆ ಲಿಂಗದೀಕ್ಷೆಯಾಗಿ ವೀರಶೈವನಾಗಿದ್ದಿಲ್ಲ. ಕೊರಳಲ್ಲಿ ಲಿಂಗ ಕಟ್ಟಿದ್ದರೂ ಸಾಮಾನ್ಯವಾಗಿ ಗುರುವಿನ ಸ್ಥಾನದಲ್ಲಿ ಇದ್ದ ಕೂಡಲಸಂಗಮನನ್ನೇ ಪೂಜಿಸಿ ಧ್ಯಾನಸ್ಥನಾಗಿ ಕೂಡ್ರುವನು. ತಮ್ಮ, ವಚನ ಹಾಡುವನು, ಒಮ್ಮೆ ಜಗತ್ತು, ಪರಶಿವ, ಮಾಯೆ, ಅವಿದ್ಯ ಮೊದಲಾದ ಜಟಿಲ ವಿಷಯಗಳ ಬಗೆಗೆ ಶಾಂತನಾಗಿ ವಿಚಾರಿಸುವನು. ಅದು ಯಾವದೂ ಬಗೆಹರಿಯಲಾರದಾಗಲು ಭಕ್ತಿಯೊಂದನ್ನೇ ಹೆಚ್ಚೆಚ್ಚಾಗಿ ಅವನು ನಿತ್ಯ ಅನುಸರಿಸುವನು. ಹೀಗಾಗಿ ತನ್ನ ಅಂತರಂಗ ಬಹಿರಂಗಗಳನ್ನು ನಿತ್ಯ ಶುದ್ಧಗೊಳಿಸುತ್ತಿರುವನು. ಆಗ ತನ್ನ ಮನಸ್ಸಿಗೆ,

೩೧. "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ಮುನಿಯಬೇಡ. ಅನ್ಯರಿಗೆ ಅಸಹ್ಯಪಡಬೇಡ; ತನ್ನ ಬಣ್ಣಿಸಬೇಡ ಇದಿರಹಳಿಯಲುಬೇಡ ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲಸಂಗನ ಒಲಿಸುವ ಪರಿ."

ಎಂದು ಹಾಡುವನು. ಬಾಹ್ಯದ ಡಂಭಾಚಾರಕ್ಕೆ ಅಣ್ಣನು ಅಷ್ಟು ಮಹತ್ವ ಕೊಟ್ಟಿದ್ದಿಲ್ಲ. ಅದಕ್ಕಾಗಿ ಹೀಗೆ ಹಾಡಿದ್ದಾನೆ.

೩೨. ಹಲವು ಮಣಿಯ ಕಟ್ಟಿ, ಕುಣಿಕುಣಿದಾಡಿ, ಹಲವು ಪರಿಯಲಿ ವಿಭೂತಿಯು ಪೂಸಿ, ಗಣಾಡಂಬರದ ನಡುವೆ ನಲಿನಲಿದಾಡಿ ಉಂಡು ತಾಂಬೂಲ ಗೊಂಡು ಹೋಹುದಲ್ಲ. ತನು ಮನ ಧನ ಸಮರ್ಪಿಸಿದವರಿಗೆ ಕೂಡಲ ಸಂಗಮದೇವರೆಂತೊಲಿವನಯ್ಯಾ ? ”

ಎಂದು ರುದ್ರಾಕ್ಷಿ ಮೈತುಂಬಹಾಕಿಕೊಂಡು ಬಹಳಷ್ಟು ಭಾಳಾಗಿ ವಿಭೂತಿ ಬಡಕೊಂಡು ಕುಣಿಕುಣಿದು ಭಜನೆ, ಧ್ಯಾನ, ಜಪ, ಮಾಡಿದರೆ ಅದು ನಿಜವಾದ ಭಕ್ತಿಯಾಗದು. ಇಂಥ ಡಂಭಾಚಾರದ ಭಕ್ತಿಗೆ ಪರಮಾತ್ಮನು ಎಂದೂ ಮೆಚ್ಚುವದಿಲ್ಲೆಂದು ಅಣ್ಣನ ಅಭಿಪ್ರಾಯ. ಅದಕ್ಕಾಗಿ ಅಂತರಂಗದ ಶುದ್ಧಿ ಹೆಚ್ಚಾದಾಗ ಮಾತ್ರ ಪರಮಾತ್ಮನ ದರ್ಶನವೆಂದು ಅಣ್ಣನು ನಿರ್ಧರಿಸಿ,

೩೩. ''ಹುತ್ತವ ಬಡಿದಡೆ ಹಾವು ಸಾಯಬಲ್ಲದೇ ಅಯ್ಯ ? ಅಘೋರ ತಪವಮಾಡಿದರೇನು? ಅಂತರಂಗದಾತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ? ಕೂಡಲಸಂಗಮದೇವ''

ಈ ಪ್ರಕಾರ ಅಘೋರತಪಗಳಾಗ ಪ್ರಾಣಾಯಾಮ ಆಸನ ಹಠಯೋಗ ರಾಜಯೋಗಗಳನ್ನು ಮಾಡುತ್ತಿದ್ದ ಅಣ್ಣನು ಇವುಗಳಿಂದ ಏನೂ ಪ್ರಯೋಜನವಿಲ್ಲವೆಂದು ಅನುಭವ ಮಾಡಿಕೊಂಡನು ಅಲ್ಲದೆ ಭಕ್ತಿ ಜ್ಞಾನ ಸತ್ಕರ್ಮಗಳೇ ಅಂತರಂಗ ಬಹಿರಂಗ ಶುದ್ಧಿಗೆ ಅವಶ್ಯಬೇಕೆಂದು ಕಂಡುಹಿಡಿದ. ಆಗ ಅಣ್ಣನು ರಾಜಯೋಗ ಹಠಯೋಗಗಳ ಸಾಧನೆಗಳನ್ನು ತ್ಯಜಿಸಿದನು.

ಆಗ ಅಣ್ಣನು ಡಂಭಾಚಾರದಿಂದ ಏನೂ ಪ್ರಯೋಜನವಿಲ್ಲೆಂದು ತಿಳಿದನು. ಐದುಶಲ ಸ್ನಾನ ಐದು ಹೊತ್ತು ಪೂಜೆ ಮಾಡಿ ಮೈಲಿಗೆಗಳೆಲ್ಲ ಡಂಭಾಚಾರವೆಂದು ಅನುಭವ ಮಾಡಿಕೊಂಡು,

೩೪. “ಹೊರಗೆ ಹೂಸಿ ಏವೆನಯ್ಯ ಮನಮುಟ್ಟದನ್ನಕ್ಕರ? ಮಣಿಯು ಕಟ್ಟಿ ಏವೆನಯ್ಯ ಮನಮುಟ್ಟದನ್ನಕ್ಕರ? ನೂರನೋದಿ ಏವೆನಯ್ಯ ನಮ್ಮ ಕೂಡಲಸಂಗಮದೇವರ ಮನವ.ಟ್ಟದನ್ನಕ ?''

ಹೊರಗೆ ತೊಳೆದು ಭಸ್ಮಲೇಪಿಸಿದರೆ ಪ್ರಯೋಜನವಿಲ್ಲ. ಅದರಂತೆ ರುದ್ರಾಕ್ಷಿಗಳ ಮಾಲೆಗಳನ್ನು ಮೈತುಂಬ ಧಸಿದರೆ ಏನೂ ಪ್ರಯೋಜನವಿಲ್ಲ. ನೂರಾರು ಗ್ರಂಥಗಳನ್ನು ಓದಿದರೂ ಪ್ರಯೋಜನವಿಲ್ಲ. ಇಂಥ ಬಾಹ್ಯ ಆಡಂಬರ ಡಂಭಾಚಾರಗಳಿಂದ ಎಳ್ಳಷ್ಟೂ ಭಕ್ತಿ ಆಗುವದಿಲ್ಲ. ಅದು ಅಂತರಂಗದಲ್ಲಿ ಅವಶ್ಯಶುದ್ಧಿ ಬೇಕು. ಮನ ಬುದ್ಧಿ ಚಿತ್ತ ಅಹಂಕಾರಗಳು ಪರಿಪೂರ್ಣಶುದ್ಧಿ

ಆಗದೆ ಯಾವದೂ ಸಾಧಿಸಲಾರದು. ಇವೆಲ್ಲ ಶುದ್ಧಿಗೆ ಆಚಾರ ವಿಚಾರ ಕ್ರಿಯೆಗಳ ಶುದ್ಧಿಯಾಗಬೇಕು. ಒಳ್ಳೇಯವರಾಗಬೇಕು. ಅಂದರೆ ಪರಮಾತ್ಮನು ಮೆಚ್ಚುವನೆಂದು ಅಣ್ಣನಿಗೆ ಅನುಭವವಾಯಿತು. ಆಗ ಅಣ್ಣನು,

೩೫. ತನು ಶುಚಿ ಇಲ್ಲದವನ ದೇಹಾರವೇಕೆ? ದೇವರು ಕೊಡನೆಂಬ ಭ್ರಾಂತಿದೇಕೆ? ಮನಕ್ಕೆ ಮನವೇ ಸಾಕ್ಷಿ ಸಾಲದೇ ಲಿಂಗ ತಂದೆ? ಹೇಗೆ ಮನ ಹಾಗೆ ಘನ ತಪ್ಪದು ಕೂಡಲಸಂಗಮದೇವಾ."

ಆಡಂಬರದ ಪೂಜೆ ಆಚರಣೆಗಳಿಂದ ದೇವನು ಮೆಚ್ಚನು. ಒಳ್ಳೇ ಆಚಾರಗಳಿಂದ ದೇಹದ ಶುದ್ಧತ್ವವನ್ನು ಗಳಿಸಿ ದೇವನಿಗಾಗಿ ದುಡಿಯುವದು ಒಳ್ಳೇದು. ಮನಸ್ಸಿನಂತೆ ಮಹಾದೇವ. ಹೇಗೆ ಮನಸ್ಸು ಹಾಗೆ ನಮ್ಮ ಸ್ಥಿತಿ. ದೇವರ ಮೇಲೆ ತಪ್ಪು ಹೊರಿಸಿದರೆ ಪ್ರಯೋಜನವಿಲ್ಲೆಂದು ಡಂಭಾಚಾರದ ಭಕ್ತಿ ಉಪಯೋಗವಿಲ್ಲೆಂದು ತಿಳದುಕೊಂಡು ಮನಸ್ಸಿನ ಸುಧಾರಣೆಗೆ ಕೈ ಹಾಕಿದನು. ಆಗ ಅಣ್ಣನು

೩೬. "ಭಕ್ತಿ ಎಳ್ಳನಿತಿಲ್ಲ ಯುಕ್ತಿ ಶೂನ್ಯನಯ್ಯಾ ನಾನು, ತನು ವಂಚಕ ಮನ ವಂಚಕ ಧನ ವಂಚಕ ನಾನಯ್ಯಾ ಕೂಡಲಸಂಗಮದೇವ ಮಳಲೊಟ್ಟನೆನ್ನ ಮಾತು.''

ಬರೆ ಅಂದಚಂದ ಮಾತಿಗೂ ದೇವರು ಮೆಚ್ಚನು. ತನು ಮನ ಧನಗಳಲ್ಲಿ ವಂಚಕನಾಗದೆ ತ್ರಿವಿಧದಾಸೋಹಿಯಾಗಿ ಭಕ್ತಿಮಾಡಿದರೆ ಒಳ್ಳೇದು. ಬರೇ ಬಾಯಿಯಿಂದ ಶಿವಶಿವಾ ಎಂದರೆ ಏನೂ ಪ್ರಯೋಜನವಿಲ್ಲ. ಅಣ್ಣನು

೩೭. "ಲೌಕಿಕರ ಕಂಡು ಆಡುವೆ ಹಾಡುವೆ. ತಾರ್ಕಿಕರ ಕಂಡು ಆಡುವೆ ಹಾಡುವೆ. ಸಹಜಗುಣ ಎನ್ನಲ್ಲಿ ಇಲ್ಲಯ್ಯಾ. ನಿಜಭಕ್ತಿ ಎನಗಿಲ್ಲ. ತಂದೆ ಏಕೋಭಾವ. ಎನಗುಳ್ಳಕ ಏಕೆ ನೀ ಕರುಣಿಸೆ ಕೂಡಲಸಂಗಮದೇವ.'' ಎಂದು ಹೇಳುವನು.

ಅನ್ಯರನ್ನು ನೋಡಿ ಅವರಂತೆ ಮಾಡುವೆ. ಆದರೆ ನಿಜವಾದ ಭಕ್ತಿ ಇಲ್ಲ, ಅನುಕರಣ ಅಂಧಾನುಕರಣ ಪ್ರಯೋಜನವಿಲ್ಲೆಂದು ಅನುಭವಗೊಂಡನು. ಪ್ರವಿತ್ರಶುದ್ಧ ಒಂದೇ ಭಾವಭಕ್ತಿ ತನ್ನಲ್ಲಿ ಆದರೆ ಪರಮಾತ್ಮನು ಯಾಕೆ ಒಲಿಯುವದಿಲ್ಲ? ಅಂದರೆ ಒಲಿಯುವನೆಂದು ಅಣ್ಣನ ಭಾವವಿದೆ.

ಆಗ ಅಣ್ಣನ ಮನಸ್ಸು ಚಂಚಲವಾಗಿ ಸರಿಯಾಗಿ ಧ್ಯಾನಪೂಜೆ ಜಪಗಳನ್ನು ಮಾಡದಾಗಲು

೩೮. "ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲದೆನ್ನ ಮನು, ಎಂತಯ್ಯ? ಎನಗಿನ್ನಾವುದು ಗತಿ? ಎಂತಯ್ಯ ? ಎನಗಿನ್ನಾವುದು ಮತಿ? ಎಂತಯ್ಯ ? ಹರಹರಾ ಕೂಡಲಸಂಗದೇವ ಮನವ ಸಂತೈಸೆನ್ನ''.

ಎಂದು ಶಿವನಿಗೆ ತನ್ನ ಮನಸ್ಸನ್ನು ಚನ್ನಾಗಿ ಶಾಂತಗೊಳಿಸಿ ಏಕ ಚಿತ್ತದಿಂದ ಶಿವನ ಧ್ಯಾನಕ್ಕೆ ಹಚ್ಚಬೇಕೆಂದು ಅಂಗಲಾಚಿ ಬೇಡಿಕೊಳ್ಳು ವನು. ಚಿತ್ತ ಚಾಂಚ್ಯಲದಿಂದ ಸಾಧಕನಿಗೆ ಮಹಾಹಾನಿ ಎಂದು ಇದು ಸೂಚಿಸುವದು. ಚಿತ್ತನ್ನು ಒಂದು ಮಾಡಿ ಶಿವಧ್ಯಾನ ಮಾಡಬೇಕೆಂದು ದೇವರಿಗೆ ಬೇಡಿಕೊಳ್ಳುವನು. ದೇವಾ ನನ್ನ ಮನವು ಮಹಾ ಚಂಚಲ. ಸರಿಯಾಗಿ ವಿಚಾರಿಸಲೊಲ್ಲದೆಂದು ಅಣ್ಣನಿಗೆ ಅನುಭವವಾಗಿ

೩೯. "ತನ್ನ ವಿಚಾರಿಸಲೊಲ್ಲದು ಇದರ ವಿಚಾರಿಸದೆಹೋಹುದೀ ಮನವು. ಏನ ಮಾಡುವೆ ನೀ ಮನವನು. ಎಂತು ನೂಡುವೆನೀ ಮನವನು। ಕೂಡಲಸಂಗನ ನಚ್ಚದ ಮೆಚ್ಚದ ಮನವನು ಕಿಚ್ಚನೊಳಗಿಕ್ಕು."

ಎಂದು ಅಣ್ಣನು ಎನ್ನ ಮನದ ಮಂಗತನನನ್ನು ತಾನೇ ಹೇಳಿಕೊಳ್ಳು ವನು. ಅಣ್ಣನ ಕಡೆಯಿಂದ ತನ್ನ ಮನಸ್ಸಿಗೆ ಏನೂ ಮಾಡುವದು ಆಗುವ ದಿಲ್ಲೆಂದು ಹೇಳುವನು, ಕೂಡಲಸಂಗನ ಮೆಚ್ಚದ ಮನವನ್ನು ಕಿಚ್ಚಿನೊಳಗೆ ಹಾಕಿ ಸುಡುವದೇ ಯೋಗ್ಯವೆಂದು ಅಣ್ಣನ ಅಭಿಪ್ರಾಯವಿರುವದು. ಈ ಮನವು ಬಹು ಭಯಂಕರ ಕಾರಣ,

೪೦. " ಮನವೇ ಸರ್ಪ. ತನುವೇ ಹೇಳಿಗೆ । ಹಾವಿನೊಡತನವ ಹುದು । ಇನ್ನಾವಾಗ ಕೊಂದಿಹುದೆಂದರಿಯೆ । ಇನ್ನಾವಾಗ ತಿಂದಿಹುದೆಂದ ರಿಯೆ. ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ ಅದೇ ಗಾರುಡ ಕೂಡಲಸಂಗಮ ದೇವ. ''

ಎಂದು ಅಣ್ಣನು ಮನವನ್ನು ಭಯಂಕರವಾದ ಘಟ ಸರ್ಪಕ್ಕೆ ಹೋಲಿ ಸಿದ್ದಾನೆ. ಈ ಶರೀರವೇ ಅದರ ಹುತ್ತು. ಹೀಗಾದ ಬಳಿಕ ಈ ಮನವೆಂಬ ಸರ್ಪವು ಶರೀರವನ್ನು ಯಾವಾಗ ಕೊಲ್ಲುವದೋ ತಿನ್ನುವದೋ ನಿಯಮ ವಿಲ್ಲ. ಅದಕ್ಕೆ ಯಾವಾಗಲೂ ಭಕ್ತಿಯಿಂದ ಶಿವನ ಪೂಜಿಸಿದರೆ ಮಾತ್ರ ಅದೇ ಗಾರುಡ ವಿದ್ಯ ಆಗಿ ಜೀವ ಶರೀರ ಉಳಿದು ಲಿಂಗಾಂಗ ಹೊಂದಿ ಬಾಳಬಹುದೆಂದು ಅಣ್ಣನ ಅಭಿಪ್ರಾಯ ಸರಿ ಅದೆ.

ಒಮ್ಮೊಮ್ಮೆ ಅಣ್ಣನು ಸಂಸಾರದಲ್ಲಿಯ ಸುಖಗಳನ್ನು ಕಂಡು ಅವನ ಮನವು ಅವುಗಳ ಕಡೆಗೆ ಹಾತೊರೆಯಲು ಕೆಡಕೆನಿಸಿ ಅಣ್ಣನು —

೪೧. ಲೇಸ ಕಂಡು, ಮನವ ಬಯಸಿ ಆಶೆ ಮಾಡಿದಡಿಲ್ಲ ಕಂಡಯ್ಯ. ತಾಳಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯ ಕೂಡ ಲಸಂಗಮದೇವ ಕೇಳಯ್ಯ ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯ? ''

ಎಂದು ಹೇಳುವನು. ದೇವರು ಕೊಡುವ ಕಾಲಕ್ಕೆ ಎಲ್ಲವು ತಾನೇ ಬರುವದು. ಬಯಿಸಿ ಬೇಡಿದರೆ ಎಂದೂ ಯಾವದೂ ಸಿಗುವದಿಲ್ಲ. ಅದರಂತೆ ಶಿವನ ದರ್ಶನವೂ ಕೂಡ ದೇವನೊಲಿದಾಗ ಶಕ್ಯವೆಂದು ಅಣ್ಣನು ನಿರ್ಧಾರಕ್ಕೆ ಬರುವನು. ಆದರೂ ಪರಮಾತ್ಮನಿಗೆ ವಿಷಯಸುಖಗಳಾದ ಹೊನ್ನು, ಹೆಣ್ಣು, ನೌಕರಿ, ಮಣ್ಣು, ಅಧಿಕಾರ, ಆರೋಗ್ಯ ಯಾವದನ್ನೂ ಅಣ್ಣನು ಬೇಡು ವದಿಲ್ಲ. ಚಂಚಲ ಮನವನ್ನು ನಿಲಿಸೆಂದೇ ದೇವನಿಗೆ ಅಂಗಲಾಚಿ ಬೇಡು ವನು. ಅದಕ್ಕೆ—

೪೨. ಅಂದಣವನೇರಿದ ಸೊಣಗನಂತೆ, ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು. ಸುಡು ಸುಡು ಮನವಿದು ವಿಷಯಕ್ಕೆ ಹರಿವುದು. ಮೃಡ ನಿಮ್ಮನನುದಿನನೆನೆಯಲೀಯದು. ಎನ್ನೊಡೆಯ ಕೂಡಲಸಂಗಮದೇವ ನಿಮ್ಮ ಚರಣವ ನೆನೆವಂತೆ ಕರುಣಿಸು. ಸೆರೆಗೊಡ್ಡಿ ಬೇಡುವೆ ನಿಮ್ಮ ಧರ್ಮ"

ಅಣ್ಣನದು ಇಂಥ ನಿಷ್ಕಾಮ ಭಕ್ತಿ. ಅಣ್ಣನು ತನ್ನ ಯಾವ ವಚನ ದಲ್ಲಿ ಇಹಕ್ಕೆ ಸಂಬಂಧಿಸಿದ ವಿಷಯಗಳನ್ನು ಎಂದೂ ಬೇಡಿಕೊಂಡಿಲ್ಲ. ಆದರೂ ಪರಮಾತ್ಮನ ದರ್ಶನವಾಗದಕ್ಕೆ ಪುನಃ ಶಿವನ ಮೇಲೆ ಕೆಲವು ಅಪವಾದಗಳನ್ನು ಸಲಿಗೆಯಿಂದ ಹೊರಿಸುವನು.

೪೩. "ದಾಸನಂತೆ ತವನಿಧಿಯ ಬೇಡುವವನಲ್ಲ. ಚೋಳನಂತೆ ಹೊನ್ನ ಮಳೆಯ ಕರಿಸೆಂಬುವನಲ್ಲ. ಅಂಜದಿರು ಅವರಂದವ ನಾನಲ್ಲ. ಎನ್ನ ತಂದೆ ಕೂಡಲಸಂಗಮದೇವ ಸದ್ಭಕ್ತಿಯನೆ ಕರುಣಿಸೆನಗೆ—"

ಎಂದು ಅಣ್ಣನು ಹಿಂದಿನ ಭಕ್ತರಲ್ಲಿ ತಪ್ಪನ್ನು ಎತ್ತಿ ತೋರಿಸಿ ಇಂಥ ಸಕಾಮ ಭಕ್ತಿಗೆ ಶಿವನು ಮೆಚ್ಚಿದನೆಂದು ಸಹ ಶಿವನ ಮೇಲೆ ಸಹ ತಪ್ಪು ಹೊರಿಸಿ ತನಗೆ ಬರೇ ದಿವ್ಯ ನಿಷ್ಕಾಮಪರ ಭಕ್ತಿಯನ್ನೊಂದೇ ಮಾತ್ರ ಕರು ಣಿಸೆಂದು ಬೇಡಿಕೊಂಡಿದ್ದಾನೆ.

ಹೀಗೆ ಹೇಳಿ ಪುನಃ ಧ್ಯಾನಸ್ಥನಾಗುವನು. ಆಗ ಮನಸು ಚಂಚಲವಿ ರುವದನ್ನು ಕಂಡು ಅಣ್ಣನು—

೪೪. "ಕೊಂಬೆಯ ಮೇಲಣ ಮರ್ಕಟನಂತೆ, ಲಂಘಿಸುವುದೆನ್ನ ಮನವು. ನಿಂದೆಲ್ಲಿ ನಿಲ್ಲಲೀಯದೆನ್ನ ಮನವು. ಹೊಂದಿದಲ್ಲಿ ಹೊಂದಲೀಯದೆನ್ನ ಮನವು ಕೂಡಲಸಂಗಮದೇವಾ ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ"

ಎಂದು ತನ್ನ ಮನಸ್ಸು ಮಂಗನಂತೆ ಹಾರಾಡುವದು ದೇವಾ! ನಿಮ್ಮ ಪಾದಕಮಲಗಳಲ್ಲಿ ಎನ್ನನ್ನು ಭ್ರಮರವಾಗಿರಿಸು ಅಂದರೆ ನೀನು ಧರ್ಮಪಾಲಕನೆಂದು ಪರಮಾತ್ಮನ ನಿಜವಾದ ಧರ್ಮವನ್ನು ದೇವರಿಗೆ ನೆನಪು ಮಾಡಿಕೊಟ್ಟಂತೆ ಹಾಡಿದ್ದಾನೆ. ಇದರಂತೆ ಮೇಲೆ ಕೆಲವು ವಚನಗಳಲ್ಲಿಯೂ ಕೂಡ "ನಿಮ್ಮ ಧರ್ಮ" ಎಂದು ನುಡಿದಿದ್ದಾನೆ.

ಹೀಗೆ ಹಾಡುತ್ತ ಲಿಂಗಕ್ಕೆ ಮಜ್ಜನಮಾಡಿಸುವನು. ಪೂಜೆಯ ಮಾಡಲು ಕುಳಿತುಕೊಂಡನು. ಶಿವಮಂತ್ರ ಹೇಳುತ್ತ ಲಿಂಗವನ್ನು ಹೊಳೆಯ ನೀರಿನಿಂದ ಎರೆಯ ಹತ್ತಿದನು. ಅಷ್ಟರಲ್ಲಿ ಮನಸ್ಸು ಸ್ವಲ್ಪ ಹೊಯ್ದಾಡಹತ್ತಿತು.—ಆಗ ಅಣ್ಣನು,

೪೫. "ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ! ಮನದ ತಾಮಸ ಬಿಡದು. ಮನದ ಕಪಟ ಬಿಡದು. ಶಿವಶರಣೆಂಬುದಳವಡದಯ್ಯ! ಎನ್ನ ಮನದಲ್ಲಿ ಎರಡುಳ್ಳನ್ನಕ್ಕ ಕೂಡಲಸಂಗಮದೇವನೆಂತೊಲಿವ?"

ಹಾಗೇ ಲಿಂಗ ಪೂಜೆ ಸಾಗಿತು. ಆದರೂ ಅಣ್ಣನ ಮುಖದಿಂದ ವಚನ ಹೊರಹೊಮ್ಮಿತು.

೪೬. "ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ. ಚಿತ್ರದ ರಬ್ಬು ಕಾಣಿರಣ್ಣಾ. ಅಪ್ಪಿದರೆ ಸುಖವಿಲ್ಲ ಮೆಲಿದರೆ ರುಚಿ ಇಲ್ಲ ಕೂಡಲಸಂಗಮದೇವ ನಿಜವಿಲ್ಲದವನ ಭಕ್ತಿ."

ಎಂದು ತನ್ನ ಭಕ್ತಿಯಲ್ಲಿ ಮನಸ್ಸು ಪೂರ್ಣ ಲೀನವಾಗದ ಸ್ಥಿತಿಯನ್ನು ಇದ್ದಕ್ಕಿದ್ದಂತೆ ದೇವರ ಮುಂದೆ ನಿವೇದಿಸಿಕೊಂಡಿದ್ದಾನೆ. ಇದು ಎಲ್ಲರಿಂದಲೂ ಶಕ್ಯವಿಲ್ಲ. ಮಹಾತ್ಮರಾಗುವವರಿಗೆ ಮಾತ್ರ ಶಕ್ಯವಿದೆ.

(ಮುಂದುವರಿದುದು.)

R. B. N. 2554

From
Shivanubhava
Office
BIJAPUR

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
ಮು— ಬನ್ನಟ್ಟಿ
ತಾ— ಜಮುಖಂಡಿ


ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ
ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨.
೧೩೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮು:
ಅಲ್ಲಿಯೇ ಪ್ರಸಿದ್ಧಿಸಿದರು.






ಸಂಚಿಕೆ ೨. ಸಂಪುಟ ೩೪

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಏ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಫೇಬ್ರುವರಿ ೧೯೬೦.

# ವಿಷಯಾನುಕ್ರಮಣಿಕೆ


೧. ಅಕ್ಕನ ಲಗ್ನ ಶಿವನೊಡನೆ! ಕೌಶಿಕನೊಡನಲ್ಲ !! .... .... ೬೫

—ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)

೨. ವೀರಶೈವರ ಆಚಾರ ವಿಧಿ ಹೇಗಿರಬೇಕು....? ೭೭

—ಶ್ರೀ ಈಶ್ವರ ಎ. ಕುಪ್ಪಸದ.

೩. ಬಸವಣ್ಣನವರ ಸಾಧನ .... .... .... ೮೧

—ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ,
( ಹಿಂದಿನ ಸಂಚಿಕೆಯಿಂದ ಮುಂದುವರಿದುದು )

೪. ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳವರ ಗುಣಗಾಯನ ೮೮

—ಶ್ರೀ ಸಿಂದಗಿ ರಾಮಕೃಷ್ಣರಾಯರು.

೫. ಪ್ರೀತಿಯ ಚಕ್ರ .... ೮೯

—ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ದೇವರನಿಂಬರಗಿ

೬. ಕಲಿಯುಗದ ಕಾಲಚಕ್ರ .... .... ೯೨

—ಶ್ರೀ ನಾ. ಮ. ಸಿದ್ಧರಾಮಯ್ಯ, ನಾಗರಾಳು

೭. ಬ್ರಹ್ಮಾದ್ವೈತಗಳ ತಾರತಮ್ಯ ೯೮

—ಸಂಗ್ರಾಹಕರು ಜಿ. ಕೆ. ಎಸ್.

೮. ಸುಖ-ಶಾಂತಿಗಳ ನೆಲೆ .... ೧೦೦

— [ ಕನ್ನಡ ಪತ್ರಿಕೆಯಿಂದ ]

೯. ಗುರು-ಶಿಷ್ಯರ ಸಂವಾದ .... .... ೧೦೩

— ಶ್ರೀ ಭೀ ಶ್ರೀ. ಕುಲಕರ್ಣಿ, ವಿಜಾಪುರ.

೧೦. ವರಶಿಷ್ಯ .... .... .... ೧೦೯

—ಸಮಾಜ ಸೇವಕ


---



# ಅಕ್ಕನ ಲಗ್ನ ಶಿವನೊಡನೆ!

## ಕೌಶಿಕನೊಡನಲ್ಲ!!

(ಲೇಖಕ:— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ ತಾ. ಇಂಡಿ)

ಹರಿಹರ ಮಹಾಕವಿಯಿಂದ ಇಲ್ಲಿಯತನಕ ಆಗಿಹೋದ ಕವಿಗಳು ಲೇಖಕರು ಗ್ರಂಥಕಾರರು ಎಲ್ಲರೂ ಅಕ್ಕನನ್ನು ಅರಿಯಲೇ ಇಲ್ಲ. ಇನ್ನೂ ಕವಿಗಳಿಗೆ ಅಕ್ಕನನ್ನು ಅರಿಯುವ ದೃಷ್ಟಿ ಹೊಳೆಯದಿರುವದು ಮಹಾ ವಿಷಾದಕರ ಸಂಗತಿ. ಈ ಕವಿಗಳೆಲ್ಲರ ತಪ್ಪಿನಿಂದ ಅಕ್ಕನ ದಿವ್ಯ, ಭವ್ಯ, ಪವಿತ್ರ, ಶುದ್ಧ, ನಿರ್ಮಲ, ತ್ಯಾಗಪೂರ್ಣ ಚರಿತ್ರೆಗೆ ಕಲಂಕು ಬಂದಿದೆ. ಅದೇನು ನಿಜವಾದ ಕಲಂಕವಲ್ಲ. ಕವಿಗಳ ಕುರುಡುತನದಿಂದ ಬಂದ ಕಲಂಕವಾಗಿದೆ ಈ ವಿಷಯವನ್ನು ಸಕಲರಿಗೂ ಹೊಳೆಯುವಂತೆ ಆಕೆಯ ವಚನಗಳಿಂದಲೇ ಪ್ರತಿಪಾದಿಸುವೆನು. ಯಾಕಂದರೆ ಆಕೆಯ ವಚನಗಳೇ ಬಲವಾದ ಆಧಾರಗಳಲ್ಲದೆ ಉಳಿದ ಯಾವ ದಂತ ಕಥೆ ರಗಳೆ ಬರಹಗಳು ಆಧಾರವಾಗಲಾರವು. ಈ ಎಂಟುನೂರು ವರ್ಷಗಳಲ್ಲಿ ಆದ ಸಕಲ ಕವಿಗಳು ಕೌಶಿಕನ

ಕೂಡ ಲಗ್ನ ಮಾಡಿದ್ದಾರೆ. ಮೂರು ಕರಾರು ಹೇಳಿ ಮುರಿಸಿದ್ದಾರೆ. ಕೆಲವರು ಕೌಶಿಕನಿಗೆ ಲಿಂಗಾಯತನಾಗೆಂದು ಕೇಳಿದಳೆಂದು ಬರೆದಿದ್ದಾರೆ. ಇವರೆಲ್ಲರ ಈ ವಿಚಾರಗಳು ಎಷ್ಟು ಅಸಮಂಜಸವೆಂದೂ ಅಸಹ್ಯವೆಂದೂ ಸತ್ಯ ಚರಿತೆಯಿಂದ ಬಹು ದೂರವಾದವುಗಳೆಂದೂ ಕೆಳಗಿನ ಲೇಖವನ್ನು ಓದಿದರೆ ಸಹಜ ಎಲ್ಲರಿಗೂ ಹೊಳೆಯದಿರಲಾರದು. ಹರಿಹರನು ಮೊದಲು ಬರೆದವನೆಂದು ಎಲ್ಲರೂ ಬರೆದಿದ್ದಾರೆ. ಅಂದರೆ ಬರೀ ಅನುಕರಣವಾಯಿತೇ ಹೊರತು ಅನುಭವದಿಂದ ಸ್ವತಂತ್ರ ವಿಚಾರದಿಂದ ಯಾರೂ ಬರೆಯಲಿಲ್ಲ. ಹೀಗೆ ಬರೆಯುವದು ಮಹಾ ಪ್ರಮಾದ ಮಾಡಿದಂತೆಯೇ ಸರಿ. ಇನ್ನುಮೇಲಾದರೂ ಸಕಲ ಲೇಖಕರು ಈ ತಪ್ಪನ್ನು ಸರಿಯಾದ ರೀತಿಯಲ್ಲಿ ತಿದ್ದಿಕೊಂಡು; ಜನರಿಗೆ ಸರಿಯಾದ ಮಾರ್ಗದಲ್ಲಿ ನಡೆಯಲಿಕ್ಕೆ ನೆರವಾಗಬೇಕೆಂದು ಸೂಚಿಸದೆ ಇರಲಾರೆವು.

ಸುಮತಿ ನಿರ್ಮಲರೆಂಬ ಪರಮಭಕ್ತರಲ್ಲಿ ಅಕ್ಕನು ಉಡುತಡಿಯಲ್ಲಿ ಜನಿಸಿದಳು. ಚಿಕ್ಕವಳಿರುವಾಗಲೇ ಅವಳು ಅಧ್ಯಾತ್ಮ ಸಾಧನೆಗಳನ್ನು ಪ್ರಾರಂಭಿಸಿದಳು. ಇವಕ್ಕೂ ಮೊದಲು ಗುರುವಿನಿಂದ ಲಿಂಗ ವಿಭೂತಿ ಮಂತ್ರಗಳನ್ನು ಪಡೆಯಲೇಬೇಕು. "ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆ. ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ ಚನ್ನಮಲ್ಲಿಕಾರ್ಜುನಯ್ಯ. **ನಾ ಹುಟ್ಟಿಲೊಡನೆ ವಿಭೂತಿಯ ಪಟ್ಟವ ಕಟ್ಟಿ ಸದ್ಗುರು ಸ್ವಾಮಿ ಲಿಂಗ ಸ್ವಾಯತವ ಮಾಡಿದನಾಗಿ ಧನ್ಯಳಾದೆನು.**" ಅಕ್ಕನು ಜನಿಸಿದ ಕೂಡಲೇ ವಿಭೂತಿ ಪಟ್ಟವ ಕಟ್ಟಿ ಲಿಂಗ ಧಾರಣ ಮಾಡಿದರೆಂದು ಇದರಲ್ಲಿ ಸ್ಪಷ್ಟ ಹೇಳಲಾಗಿದೆ.

"**ಸಂಸಾರ** ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನಗೆ ಗುರು. **ಅಂಗವಿಕಾರದ ಸಂಗವನಿಲಿಸಿ ಲಿಂಗವ ನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು.** ಹಿಂದಣ ಜನ್ಮವ ತೊಡೆದು ಮುಂದಣ ಪಥವ ತೋರಿದನೆನ್ನ ತಂದೆ ಚನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು." ಗುರುವಿನ ಕೃಪೆಯಿಂದ ಸಂಸಾರ ನಿಸ್ಸಾರವೆಂದರಿದಳು. ಅಂಗವಿಕಾರಗಳನ್ನು ತ್ಯಾಗಮಾಡಿ ಲಿಂಗವನು ಶರೀರದ ಮೇಲೆ ಧರಿಸಿದನೆಂದು ಸ್ಪಷ್ಟ ಅಕ್ಕನೇ ಹೇಳಿದ್ದಾಳೆ.

"ಶ್ರೀ ಗುರುಲಿಂಗ ದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೇ ಎನ್ನ ಭವಂ ನಾಸ್ತಿಯಾಯಿತ್ತು. ಎನ್ನ ತನ್ನಂತೆ ಮಾಡಿದ. ಎನಗೆ ತನಗೆ ತೆರವಿಲ್ಲದಂತೆ ಮಾಡಿ ತೋರಿದನು ನೋಡಾ। ತನ್ನ ಕರಸ್ಥಲದಲ್ಲಿದ್ದ ಮಾಲಿಂಗವನೆನ್ನ ಕರಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಮನಸ್ಥಲದಲ್ಲಿದ್ದ. ಮಹಾಲಿಂಗವನು ಎನ್ನ ಭಾವಸ್ಥಲದಲ್ಲಿ ಮೂರ್ತಿಗೊಳಿಸಿದ. ಎನ್ನ ಭಾವಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಜ್ಞಾನಸ್ಥಲದಲ್ಲಿ ಮೂರ್ತಿಗೊಳಿಸಿದ ಎನ್ನ ಜ್ಞಾನಸ್ಥಲದಲ್ಲಿದ್ದ ಮಹಾಲಿಂಗವನು ಎನ್ನ ಸರ್ವಾಂಗದೊಳ ಹೊರಗೆ ತೆರಹಿಲ್ಲದಳವಡಿಸಿದ. ನಮ್ಮ ಶ್ರೀ ಗುರುಲಿಂಗದೇವ ಚನ್ನಮಲ್ಲಿಕಾರ್ಜುನಾ." ಈ ಪ್ರಕಾರ ಮೊಟ್ಟಮೊದಲಿಗೆ ಕುಲಗುರುಗಳಾದ ಶ್ರೀ ಗುರುಲಿಂಗ ದೇವರು ಬಾಲ್ಯದಿಂದಲೇ ಅಕ್ಕನಿಗೆ ವೀರಶೈವರ ಎಲ್ಲ ಕ್ರಿಯಾದಿಗಳನ್ನು ಮಾಡಿದರು ಆದರಿಂದಲೇ ಅಕ್ಕನಿಗೆ ಷಟ್‌ಸ್ಥಲಗಳ ಜ್ಞಾನ ಸಂಪೂರ್ಣ ತಾರುಣ್ಯದ ಪೂರ್ವದಲ್ಲಿಯೇ ಆಗಿತ್ತೆಂದು ಈ ವಚನಗಳ ಮೇಲಿಂದ ಅನಿಸುವದು. ಸಾಮಾನ್ಯವಾಗಿ ಇಷ್ಟ ಪ್ರಾಣ ಭಾವಲಿಂಗಗಳು ಅಂದರೆ ಆಚಾರ ಲಿಂಗ ಗುರುಲಿಂಗ; ಶಿವಲಿಂಗ ಜಂಗಮಲಿಂಗ; ಪ್ರಸಾದಲಿಂಗ ಮಹಾಲಿಂಗಗಳು ಸಕಲೇಂದ್ರಿಯಗಳಲ್ಲಿ ಅಳವಟ್ಟಿದ್ದವು. ಸರ್ವಾಂಗಲಿಂಗ, ಲಿಂಗಾಂಗ ಸಾಮರಸ, ಶಿವಜೀವರೈಕ್ಯವನ್ನು ಪ್ರಾಯಬರುವ ಮೊದಲೇ ಹೊಂದಿದಳೆಂದು ಈ ವಚನಗಳಿಂದ ಸಹಜ ಹೊಳೆಯುವದು. ಅಕ್ಕಮಹಾದೇವಿಯು ಈಗಾಗಲೇ ಪರಿಪೂರ್ಣ ತ್ಯಾಗ ವಿರತಿ ವೈರಾಗ್ಯ ಇಂದ್ರಿಯ ನಿಗ್ರಹ ಮನೋನಿಗ್ರಹ ಮೊದಲಾದ ಆತ್ಮಸಾಕ್ಷಾತ್ಕಾರಕ್ಕೆ ಬೇಕಾಗುವ ಸಕಲ ಗುಣಗಳನ್ನು ಪಡೆದಿದ್ದಳೆಂದು ಅನಿಸುವದು ಸ್ವಾಭಾವಿಕವೇ ಸರಿ.

ಇಷ್ಟು ಸ್ಥಿತಿ ಪಡೆಯುವ ಮೊದಲೇ ಅಕ್ಕನು ಶಿವನ ಮಹಿಮೆ ಲೀಲೆಗಳನ್ನು ಕೇಳಿ ತಾನು ಶಿವನಸತಿ ಎಂದು ನೆರೆನಂಬಿ ಲಿಂಗಪತಿ ಶರಣಸತಿ ಭಾವವನ್ನೇ ಸಂಪೂರ್ಣ ಅಳವಡಿಸಿಕೊಂಡು ಮಧುರಭಾವದ ದಿವ್ಯ ಸಾಧನೆಯನ್ನೇ ಸದಾ ನಡಿಸಿದ್ದಳು.

"ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ. ಹಸೆಯ ಮೇಲಣ ಮಾತು ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು, ಚನ್ನಮಲ್ಲಿಕಾರ್ಜುನಯ್ಯ ನನಗೆ ನೀನಾಗಬೇಕೆಂದು." ಈ ಪ್ರಕಾರ ಮಧುರ

ಭಾವದಿಂದ ಅಕ್ಕನು ತಪಿಸುತ್ತಿದ್ದಳು. ಶಿವನೇ ಗಂಡನಾಗಬೇಕೆಂದು ಆಕೆಯ ಬಲವಾದ ಬಯಕೆಯು ಬಾಲ್ಯದಿಂದಲೇ ವ್ಯಕ್ತವಾಗಿತ್ತು. ಇನ್ನು ಮುಂದಿನ ವಚನದಲ್ಲಿ ಅಕ್ಕನು ಶಿವನ ಕೂಡ ಲಗ್ನವಾದ ಸಂಗತಿಯನ್ನು ಕಾಣಬಹುದು. "ಪಚ್ಚೆಯ ನೆಲಗಟ್ಟು, ಕನಕದತೋರಣ, ವಜ್ರದಕಂಬ, ಪವಳಗಚಪ್ಪರವನಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ ಮದುವೆಯ ಮಾಡಿದರು. ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡನೆನ್ನ ಮದುವೆಯ ಮಾಡಿದರು. ಅಕ್ಕನು ತನ್ನ ಸಾಧನದಲ್ಲಿಯೇ ಶಿವನೊಡನೆ ಲಗ್ನವಾದಳು ಮತ್ತು ಮಧುರಭಾವದ ಸಾಧನೆಯನ್ನೇ ಮುಂದುವರಿಸಿದಳು. "ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ ಆಲಿಕಲ್ಲ ಹಸೆಯ ಹಾಸಿ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು. ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ ಚನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು." ಇನ್ನೊಂದು ವಚನದಿಂದ ಅಕ್ಕನು ಶಿವನ ಕೂಡ ಆದ ಲಗ್ನವನ್ನೇ ಸಮರ್ಥಿಸಿದ್ದಾಳೆ. "ಗುರುವೇ ತೆತ್ತಿಗನಾದ ಲಿಂಗವೇ ಮದುವಣಿಗನಾದ, ಆನು ಮದುವೆಗೆಯಾದೆನು. ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ" ಈ ಪ್ರಕಾರ ಅಕ್ಕನು ಶಿವನಕೂಡ ಲಗ್ನವಾದುದನ್ನು ಬಾಲ್ಯದಲ್ಲಿಯೇ ಅನೇಕ ವಚನಗಳಿಂದ ಹೇಳಿದ್ದಾಳೆ. ಮೀರಾ ಮತವಾಲಿಯ ಬಾಲ್ಯದಲ್ಲಿ ಕೃಷ್ಣನ ಮಹಿಮೆಯನ್ನು ಕೇಳಿ ಅವನ ಕೂಡ ಲಗ್ನವಾದಂತೆ, ನೆರೆನಂಬಿ ಅಕ್ಕನಂತೇ ಮಧುರ ಭಾವದ ಸಾಧನೆಗಳನ್ನು ಮಾಡಿದಳು. ಕಾನ್ಸ್ಟೆತ್ರಾ, ಅಂದಲ್, ಕ್ಯಾಥರಾಯಿನ್ ಆಫ್ ಸಾಯನಾ ಮೊದಲಾದ ಸ್ತ್ರೀಯರು ಹಾಗೂ ಇದೇ ಪ್ರಕಾರ ಇನ್ನೂ ಕೆಲ ಸ್ತ್ರೀಯರು ಲಗ್ನವಾದದ್ದನ್ನು ಇತಿಹಾಸ ಪುರಾಣಗಳಲ್ಲಿ ಕಾಣುವೆವು. ಅಕ್ಕನು ತನ್ನ ವಚನಗಳಿಂದ ಈ ಪ್ರಕಾರ ತನ್ನ ಬಯಕೆ, ಲಗ್ನವಾದ ಸಂಗತಿ ಗಂಡನ ಹೆಸರು ಮೊದಲಾದವುಗಳನ್ನು ಸ್ಪಷ್ಟ ಹೇಳಿದ್ದರೂ ಹಿಂದಿನ ಈಗಿನ ಕವಿಗಳು ಕೌಶಿಕನಕೂಡ ಲಗ್ನ ಹೇಗೆ ಮಾಡಿದರೋ ತಿಳಿಯದಾಗಿದೆ. ಹರಿಹರ ಎಡವಿದನೆಂದು ಎಲ್ಲರೂ ಎಡವಿ ಬಿದ್ದಿದ್ದಾರೆ. ಹೊರತು ಯಾರೂ ಆಕೆಯ ವಚನಗಳನ್ನಾಗಲಿ ಅಕ್ಕನ ತ್ಯಾಗ ವೈರಾಗ್ಯದ ಆಳನ್ನಾಗಲಿ ಅಳೆದು ನೋಡದೆ ಏನಾದರೊಂದು ಬರೆದು ಬಿಟ್ಟರು. ಇದಕ್ಕೆಲ್ಲ

ಸಮ್ಯಕ್ ದೃಷ್ಟಿ ಅವಶ್ಯಬೇಕು. ಹೀಗಿದ್ದರೂ ಕವಿಗಳು ಅಕ್ಕನಿಗೆ ಎರಡನೇ ಲಗ್ನಮಾಡಿ ಸಂಸಾರ; ರಾಜ್ಯಭಾರ ಐಷಆರಾಮ್ಯ, ಕಾಮಕೇಳಿ ಚಯನಿಗಳನ್ನು ಸಹ ಮಾಡಲಿಕ್ಕೆ ಹಚ್ಚಿರಗಳೆ, ಕಾದಂಬರಿ, ನಾಟಕ, ಲೇಖ, ಕಥನ, ಗ್ರಂಥಗಳನ್ನು ಬರೆದರು. ಅಕ್ಕನ ಲಗ್ನದ ಬಗ್ಗೆ ಅನೇಕ ಬಗೆಯ ವಿವಾದಾತ್ಮಕ ಲೇಖಗಳನ್ನೂ ಸಹ ಬರೆದರು ಯಾರೂ ಅಕ್ಕನನ್ನು ಅರಿಯಲಾರದೆ ಹೋದರಲ್ಲಾ ಎಂದು ದುಃಖವಾಗುವದು. "ಇಂದೆನ್ನ ಮನೆಗೆ ಗಂಡ ಬಂದನೆಲಗವ್ವಾ। ನಿಮನಿಮಗೆಲ್ಲಾ ಶೃಂಗಾರವ ಮಾಡಿಕೊಳ್ಳಿ। ಚನ್ನಮಲ್ಲಿಕಾರ್ಜುನನೀಗಳೇ ಬಂದಿಹನು. ಇದಿರುಗೊಳ್ಳಬನ್ನಿರೆ ಅವ್ವಗಳಿರಾ॥" ಎಂದು ಅಕ್ಕನು ಸಾಧನದಲ್ಲಿ ಶಿವನಿಗಾಗಿ ಹುಚ್ಚಳಾದಾಗ ಈ ವಚನವನ್ನು ಹಾಡಿದ್ದಾಳೆ. ತನ್ನ ಸಖಿಯರನ್ನು ಈ ಪ್ರಕಾರ ಕರೆದಿದ್ದಾಳೆ. ಇದು ಸಾಧನೆಯ ಉಚ್ಚಸ್ಥಿತಿ. ಭಾವಪರವಶಳಾದಾಗ ಅವಳು ವೈಮರೆತಾಗ ಇಂಥ ವಚನಗಳು ಹೊರಹೊಮ್ಮುವವು. ಇದರಿಂದ ಬಾಲ್ಯದಲ್ಲಿಯೇ ಶಿವನಕೂಡ ಅಕ್ಕನು ಲಗ್ನವಾಗಿದ್ದಾಳೆಂದೂ ಅವನಿಗಾಗಿ ಬಾಲ್ಯದಿಂದಲೇ ಹುಚ್ಚಳಾಗಿದ್ದಳೆಂದೂ ಸಹಜ ಹೊಳೆಯುವದು. ಹೀಗಾದುದರಿಂದ ಅಕ್ಕನಿಗೆ ಶಿವನದರ್ಶನವಾಗಿ ಸಕಲಇಂದ್ರಿಯ ವಿಷಯಗಳಿಗೂ ಈ ಸಂಸಾರದ ವಿಷಯಗಳೂ ಎಂದೂ ಪುನಃ ಅಕ್ಕನಿಗೆ ಸೋಂಕಲಾರವು. ಇದಕ್ಕಾಗಿಯೇ ಅಕ್ಕನು ಕೌಶಿಕನನ್ನು ಒಳ್ಳೇ ಧೈರ್ಯವಾಗಿ ಎದುರಿಸಿ ತಿರಸ್ಕರಿಸಿದ್ದಾಳೆ. ಇದನ್ನು ಕವಿಗಳು ತಿಳಿಯದೆ ಅಕ್ಕನಿಗೆ ಲಗ್ನ ಮಾಡಿದ್ದಾರೆ. ಮೂರು ಕರಾರು ಹಾಕಿದ್ದಾರೆ. ಕೆಲವರು ಕೌಶಿಕನಿಗೆ ಲಿಂಗಾಯತನಾದರೆ ಲಗ್ನವಾಗುವೆನೆಂದೂ ಸಹ ಬರೆದಿದ್ದಾರೆ. ಇವರೆಲ್ಲರೂ ತಪ್ಪಿದ್ದಾರೆ. ಹರಿಹರನು ಬರೆದನೆಂದು ಎಲ್ಲರೂ ಬರೆದಿದ್ದಾರೆ. ಹರಿಹರನ ಕಾಲಕ್ಕೆ ಅಕ್ಕನ ವಚನಗಳು ಪ್ರಕಟವಾಗಿರಲಿಲ್ಲ. ಅದಕ್ಕೆ ಅವನು ಅಕ್ಕನ ವಚನಗಳ ನೆರವಿಲ್ಲದೆ ತನ್ನ ಕಲ್ಪನಾಶಕ್ತಿಯಿಂದ ಅಕ್ಕನನ್ನು ಚಿತ್ರಿಸಿದನು. ಅವನು ಕವಿ. ಬೇಕಾದ ಸುಳ್ಳನ್ನೇ ಸತ್ಯವಾಗಿ ಬರೆಯಬಹುದು. ಆದರೆ ಇತ್ತಿತ್ತಲಾಗಿ ಅಕ್ಕನ ಅನೇಕ ವಚನಗಳು ಪ್ರಕಟವಾಗಿವೆ. ಅವುಗಳನ್ನು ತಿಳಿದುಕೊಂಡು ಈಗಿನ ಲೇಖಕರು ವಿಚಾರಿಸಿ ಅಕ್ಕನ ನಿಜವಾದ ಚರಿತ್ರೆಯನ್ನು ಶೋಧಿಸಿ ಪ್ರಕಟಿಸಬೇಕಾಗಿತ್ತು. ಅಕ್ಕನ ವಚನಗಳು ಆಧಾರಗಳನ್ನೇ ಅಲಕ್ಷಿಸಿ ಹರಿಹರನ ಆಧಾರವನ್ನೇ ನಿಜವೆಂದು ನಂಬಿ ಎಲ್ಲ ಲೇಖಕರೂ ತಪ್ಪಿದ್ದಾರೆ. ಇನ್ನಾದರೂ ವಿಚಾರಿಸಿ ಅಕ್ಕನ ಬಗ್ಗೆ ಬರೆಯುವವರೆಲ್ಲ ಲಗ್ನವಾಗಿಲ್ಲ, ಕರಾರುಮಾಡಿಲ್ಲ, ಲಿಂಗಾಯತನಾಗೆಂದು ಕೇಳಿಲ್ಲ ಎಂದು ಬರೆಯಬೇಕು. ಆದರೆ ಅಕ್ಕನ

ಪವಿತ್ರ, ಶುದ್ಧ, ನಿರ್ಮಲ, ತ್ಯಾಗದ, ಉಜ್ವಲ ದಿವ್ಯ ಶ್ರೇಷ್ಠ ಜೀವನವು ಜನತೆಗೆ ಗೊತ್ತಾಗಿ ಅವಳ ಬಗ್ಗೆ ಭಕ್ತಿ ಪ್ರೀತಿಗಳು ಹೆಚ್ಚಾಗಿ ನಾಡಿನ ಕೀರ್ತಿ ಹೆಚ್ಚಾಗುವದು.

ಇದೇ ಪ್ರಕಾರದ ಮಧುರ ಭಾವದ ಸಾಧನೆ ಮಾಡುತ್ತಿರಲು ಒಂದು ದಿನ ಅಕ್ಕನಿಗೆ ಸ್ವಪ್ನಸಾಕ್ಷಾತ್ಕಾರವಾಯಿತು. ಅದೇನಂದರೆ-- ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದು ಕನಸ ಕಂಡೆ ಅಕ್ಕಿಯಡಕೆ ತೆಂಗಿನಕಾಯಿ ಕಂಡೆ ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು. ಭಿಕ್ಷಕ್ಕೆ ಬಂದುದ ಕಂಡೆನವ್ವ ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು" ಸಾಧನದಲ್ಲಿ ಈ ಇಷ್ಟಮೂರ್ತಿಯ ದರ್ಶನ ಮೊದಲು ಸ್ವಪ್ನದಲ್ಲಿ ಆಗುವದು ಸಹಜ ಸ್ವಾಭಾವಿಕ. ಇದರಲ್ಲಿಯೂ ಕೂಡ ಶಿವನ ಕೈವಿಡಿದು ಲಗ್ನವಾದುದನ್ನೇ ಹೇಳುವಳು. ಸದಾ ಶಿವನಕೂಡ ಲಗ್ನವಾಗ್ಯ ವದರ ಚಿಂತೆ ನೆನಹು ಇತ್ತಲ್ಲದೆ ಬೇರೆ ಯಾವದೂ ಇಲ್ಲೆಂದು ಇದು ಸಹಜ ಸೂಚಿಸುವದು.

ಇನ್ನು ಮುಂದೆ ಸಾಧನ ಬಲಿತಂತೆ ಸಗುಣ ಸಾಕ್ಷಾತ್ಕಾರ ಅಕ್ಕನಿಗೆ ಆದುದನ್ನು ಆಕೆಯ ವಚನದಿಂದಲೇ ತಿಳಿಯಬಹುದು.— "ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವಸುಲಿಪಲ್ಲ, ನಗೆಮೊಗದ ಕಂಗಳ, ಕಾಂತಿಯಿಂ ಈರೇಳು ಭುವನಮಂ ಬೆಳಗುವ, ದಿವ್ಯಸ್ವರೂಪನ ಕಂಡೆ ನಾನು ಕಂಡೆನ್ನ ಕಂಗಳ ಬರಹಿಂಗಿತ್ತೆಂದು ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ ಗುರವನ ಕಂಡೆ ನಾನು ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮ ಗುರು ಚೆನ್ನಮಲ್ಲಿಕಾರ್ಜುನನ ನಿಲುವ ಕಂಡು ಬದುಕಿದೆನು." ಈ ಪ್ರಕಾರ ಮಧುರಭಾವ ಸಾಧನೆಯಿಂದ ಸಗುಣಸಾಕ್ಷಾತ್ಕಾರವಾಗಿ ಶಕ್ತಿಯೊಳು ಶಿವನು ಬೆರೆದು ಒಡನಾಡುವದನ್ನು ಕಂಡಳು. ಅಂದರೆ ಅಕ್ಕನೊಳಗೆ ಶಿವನು ಕೂಡಿಕೊಂಡು ಲೀಲೆಮಾಡುವಂತೆ ಸಾಕ್ಷಾತ್ಕಾರದಲ್ಲಿ ಕಂಡಳು. ಇದು ಯಾವ ಅಕ್ಕನು ಮೊದಲಿನಿಂದ ಮಾಡಿದ ಲಗ್ನದ ಬಯಕೆಯ ಸಫಲವಾದುದನ್ನೇ ಸೂಚಿಸುವದು. ಶರಣಸತಿ ಲಿಂಗಪತಿ ಭಾವದಿಂದ ಸಾಧನೆ ಬಲಿಸಿ ಬಲಿಸಿ ತುತ್ತು ತುದಿಗೆ ಸಗುಣ ಸಾಕ್ಷಾತ್ಕಾರ ಮಾಡಿಕೊಂಡು ಕಣ್ಣಿನ ಬರ ಹಿಂಗಿತೆಂದು ತನ್ನ ಆನಂದವನ್ನು ವ್ಯಕ್ತಮಾಡಿದ್ದಾಳೆ.

ಇಷ್ಟು ಹೊತ್ತಿಗೆ ಅಕ್ಕನಿಗೆ ಹದಿನಾಲ್ಕು ವರ್ಷದ ಪ್ರಾಯ. ಮೊದಲೇ ಅಕ್ಕ ಒಳ್ಳೇ ರೂಪವತಿ, ಸುಂದರಿ. ಅದರಲ್ಲಿ ಪ್ರಾಯ ಮತ್ತು ತ್ಯಾಗ ಯೋಗದ ದಿವ್ಯ ತಪಸ್ಸಿನ ತೇಜ ಕಾಂತಿಗಳೆಲ್ಲ ಕೂಡಿ ಅಕ್ಕನು ಮಹಾ ರೂಪವತಿಯಾಗಿ ಕಂಡಳು. ಇವಳನ್ನು ಕಾಮುಕ ಕೌಶಿಕನು ಕಂಡು ಮತ್ತಷ್ಟು ಕಾಮಾತುರನಾಗಿ ಅಕ್ಕನನ್ನು ಲಗ್ನವಾಗಬಯಸಿ ತನ್ನ ಬಯಕೆಯನ್ನು ಅಕ್ಕನ ತಾಯಿ ತಂದೆಗೆ ತಿಳಿಸಲು ಸ್ತ್ರೀಪುರುಷರ ಒಂದು ಆಯೋಗವನ್ನು ಅವರ ಕಡೆಗೆ ಕಳಿಸಿ ವಿಚಾರಿಸಿದನು. ಅಕ್ಕನಿಗೆ ಕೌಶಿಕನನ್ನು ಲಗ್ನವಾಗೆಂದು ಆ ಬಂದವರು ಕೇಳಿದರು–ಆಗ ಅಕ್ಕನು – "ಬಾಲ್ಯದಲ್ಲಿಯೇ ತಾನು ಶಿವನ ಕೂಡ ಲಗ್ನವಾಗಿದ್ದೇನೆ. ಅದರಂತೆ ತನಗೆ ಸಂಪೂರ್ಣ ಅನುಭವವಾಗಿದೆ. ಇನ್ನೆಲ್ಲಿಯ ಲಗ್ನ ಸತಿಗೆ ಒಬ್ಬನೇ ಗಂಡನಲ್ಲದೆ ಇಬ್ಬರು ಗಂಡರೆಂದೂ ಸರಿ ಬೀಳುವದಿಲ್ಲ" ಇಬ್ಬರಾದರೆ ಏನಾಗುವದೆಂದು ಅಕ್ಕನು ತನ್ನ ವಚನದಲ್ಲಿ ಹೇಳಿದ್ದಾಳೆ. "ಒಳಗಿನ ಗಂಡನವ್ವಾ ಹೊರಗಿನ ಮಿಂಡನವ್ವಾ ಎರಡನು ನಡಿಸಲು ಬಾರದಯ್ಯ! ಲೌಕಿಕ ಪಾರಮಾರ್ಥಿಕವೆಂಬೆರಡನು ನಡಿಸಲು ಬಾರದಯ್ಯ ಚನ್ನಮಲ್ಲಿಕಾರ್ಜುನಯ್ಯ ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯ'' ಎಂದು ಕೇಳಬಂದ ಸ್ತ್ರೀಪುರುಷರಿಗೆ ನಿಷ್ಠುರವಾಗಿ ಹೇಳಿದ್ದಾಳೆ. ಇಷ್ಟಾದರೂ ರಾಜದೂತರು ಆಕೆಯನ್ನು ಪುನಃ ಹೀಗೆ ವಲ್ಲೆನ್ನಬಾರದು ರಾಜನ ರಾಣಿಯಾಗಿ ಸುಖದಲ್ಲಿ ಇರು. ನಿನ್ನ ತವರವರೂ ಸುಖದಲ್ಲಿರುವರು. ಇದಕ್ಕೆ ಅಕ್ಕನು— "ಎನಗೇಕಯ್ಯ ಸಾವಪ್ರಪಂಚನ ಪುತ್ಥಳಿ? ಮಾಯಿಕದ ಮಲಭಾಂಡ ಆತುರದ ಭವನಿಳಯ ಎನಗೇಕಯ್ಯ? ಬೆಂಳುತಾಳಹಣ್ಣ ಹಿಸುಕಿದಡೆ ಮೇಲುಂಟೆ? ಎನ್ನ ತಪ್ಪು ಒಪ್ಪುಗೊಳ್ಳಾ ಚನ್ನಮಲ್ಲಿಕಾರ್ಜುನದೇವಾ" ಈ ಸಂಸಾರ ಬೇಡ ಈ ಹೊಲಸು ಕೆಲಸ ತನಗೆ ಒಲ್ಲೆಂದು ದೂತರಿಗೆ ಬುದ್ಧಿ ಹೇಳಿ ಪುನಃ ಅಕ್ಕನು ಅಲ್ಲಿ ನೆರೆದ ಸ್ತ್ರೀಯರಿಗೆ ಕೆಳಗಿನಂತೆ ಹೇಳಿದಳು— "ಎನ್ನ ಮನವ ಮಾರುಗೊಂಡನವ್ವಾ ಎನ್ನ ತನುವ ಸೂರೆಗೊಂಡನವ್ವ ಎನ್ನ ಸುಖವನೊಪ್ಪುಗೊಂಡನವ್ವಾ ಎನ್ನಿರವ ನಿಂಬುಗೊಂಡನವ್ವಾ ಚನ್ನಮಲ್ಲಿಕಾರ್ಜುನನ ಒಲಿಮೆಯವಳಾನು'' ಎಂದು ಅಕ್ಕನು ತನು, ಮನ, ಸುಖಗಳೆಲ್ಲವೂ ಸಂಪೂರ್ಣ ಶಿವನಿಗೆ ಅರ್ಪಣವಾಗಿರುವವು. ಇನ್ನು ಬೇರೆಯ ಲಗ್ನವೇ ಇಲ್ಲ. ಇಲ್ಲದ ಉಪದೇಶವನ್ನು ಮಾಡಿ ಪ್ರಯೋಜನವಿಲ್ಲೆಂದು ಹೇಳಿದ್ದಾಳೆ. ಇದು ತರವಲ್ಲೆಂದು ತಾಯಿ ಸಖಿಯರು ರಾಜ ಸೇವಕರು ಹೇಳಲು ಅದಕ್ಕೆ ಅಕ್ಕನು ಪುನಃ "ಸಾವಿಲ್ಲದ ಕೇಡಿಲ್ಲದ

ರೂಹಿಲ್ಲದ ಚಲುವಂಗಾನೊಲಿದೆನವ್ವ ಎಡೆಇಲ್ಲದ ಕಡೆಇಲ್ಲದ ತೆರಪಿಲ್ಲದ ಕುರುಹಿಲ್ಲದ ಚಲವಂಗಾನೊಲಿದೆ ಎಲೆ ಅವ್ವಾ! ನೀಕೇಳಾ ತಾಯೆ ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೆ ನಾನೊಲಿದೆ ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡ ನೆನೆಗೆ. ಈ ಸಾವ ಕೇಡು ಗಂಡರ ನೊಯ್ದು ಒಲೆಯೊಳಗಿಕ್ಕು" ಎಂದು ಸ್ಪಷ್ಟ ಹೇಳಿದಳು. ಪುನಃ ತಾಯಿ ಕೌಶಿಕನ ಕೂಡ ಲಗ್ನವಾಗೆಂದು ಹೇಳಲು, ಅದಕ್ಕೆ ಅಕ್ಕನು— "ಮನ ಮನ ತಾರ್ಕಣೆಯ ಕಂಡು ಅನುಭವಿಸಲು ನೆನಹೇ ಘನವಹುದಲ್ಲದೆ ಅದು ಹವಣಲ್ಲಿ ನಿಲುವದೆ ಎಲೆ ಅವ್ವಾ ನೀನು ಮರುಳವ್ವೆ ಎನ್ನ ದೇವ ಚನ್ನಮಲ್ಲಿಕಾರ್ಜುನ ಗೊಲಿದು ಸಲೆ ಮಾರು ಓದೆನು ನಿನ್ನ ತಾಯಿ ತನವನೊಲ್ಲೆ ಹೋಗೇ?" ಕೌಶಿಕನನ್ನು ಲಗ್ನವಾಗೆಂದು ಹೇಳಿದ ತಾಯಿಗೆ ಛೀಹಾಕಿ ನೀನು ತಾಯಿಯಲ್ಲ ತಾನು ಮಗಳಲ್ಲೆಂದು ಹೇಳಿ ದೂರ ಸರಿ ನೀನು ಈ ರೀತಿ ನನಗೆ ಹೇಳಬೇಡೆಂದು ಹೀಯಾಳಿಸಿ ತಾಯಿಗೆ ಬೈದಿದ್ದಾಳೆ. ಇಷ್ಟಾದರೂ ಸಖಿಯರು ಅಕ್ಕನಿಗೆ ದರಿದ್ರ ಹುಚ್ಚಿಯಂತೆ ರುದ್ರಾಕ್ಷಿ ಭಸ್ಮಗಳನ್ನೇಕೆ ಧರಿಸುವಿ? ಕೌಶಿಕನನ್ನು ಲಗ್ನವಾದರೆ ಮುತ್ತು ರತ್ನ ಬಂಗಾರಗಳ ವಡವೆಗಳನ್ನು ಧರಿಸಿ ಶೃಂಗಾರದಿಂದ ಮೆರೆಯುವಿ ಎಂದು ಹೇಳಲು ಅಕ್ಕನು— "ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದರಿಸಿನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೇ ಅನುಲೇಪನವೆನಗೆ, ರುದ್ರಾಕ್ಷಿಯೇ ವೈದೊಡಿಗೆ ಎನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ, ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ." ಎಂದು ತನ್ನ ಗಂಡನ ಹೆಸರು ವಸ್ತುವಡವೆಗಳ ಹೆಸರು ಶೃಂಗಾರದ ರೀತಿ ನೀತಿಗಳನ್ನು ಹೇಳಿದ್ದಾಳೆ. ಅದರಂತೆ ತಾನು ಭವದ ಮಾಯಾ ಸಂಸಾರಕ್ಕೆ ಬಲಿ ಬೀಳುವವಳಲ್ಲ. ಪಾರಮಾರ್ಥಿಕ ಸಂಸಾರವನ್ನೇ ಮಾಡುವವಳೆಂದು ಪುನಃ ಅಕ್ಕನು ಹೇಳಿದ್ದಾಳೆ. "ಅತ್ತೆ ಮಾಯೆ, ಮಾವ ಸಂಸಾರಿ, ಮೂವರು ಮೈದುನರು ಹುಲಿಯಂಥವರು ನಲ್ಲನು ನಗೆವೆಣ್ಣು ಕೆಳದಿಯರ ಭಾವಧಲಿರುವನು. ಇವ ದೇವನಲ್ಲ ಅತ್ತಿಗೆಯರ ಮೀರಲಾರೆನು. ತೊತ್ತುವಿನ ಕಾವಲು ಹೇಳುವರೆ ಕೇಳು ಕರ್ಮವೆಂಬ ಗಂಡನ ಬಾಯ ಟೊಣೆದು. ಹಾದರವನಾಡುವೆನು ಹರನ ಕೂಡೆ, ಮನವೆಂಬ ಸಖಿಯ ಪ್ರಸಾದದಿಂದ ಅನುಭವವ ಕಲಿತೆನು. ಶಿವನೊಡನೆ ಕರಚಲ್ವ ಚನ್ನಮಲ್ಲಿಕಾರ್ಜುನ ಸಜ್ಜನ ಗಂಡನ ಮಾಡಿಕೊಂಡೆ" ಇದು

ಅಕ್ಕನು ಮಾಡುತ್ತಿರುವ ಸಂಸಾರದ ರೀತಿ ನೀತಿಯಾಗಿರುವದು; ಒಂದೂ ಅಕ್ಕನ ವಚನದಲ್ಲಿ ಕೌಶಿಕನ ಬಗ್ಗೆ ಎಳ್ಳಷ್ಟೂ ಆದರವಿಲ್ಲ ಮುಚ್ಚುಮರೆ ಇಲ್ಲ. ಎಲ್ಲವನ್ನೂ ಒಳ್ಳೇ ಸ್ಪಷ್ಟ ರೀತಿಯಲ್ಲಿ ಹೇಳಿದ್ದಾಳೆ. ಆದರಿಂದ ಅಕ್ಕನ ಧೈರ್ಯ ಸಾಹಸ ಅನುಭವ ದೃಢಸಂಕಲ್ಪ ನಿರ್ಭಯತೆಗಳು ವ್ಯಕ್ತವಾಗುತ್ತಿರುವವು.

ಈ ಪ್ರಕಾರ ಅಕ್ಕನು ತನ್ನ ವಚನಗಳಿಂದ ಕರೆಯ ಬಂದವರಿಗೆ ತಾಯಿಗೆ ಸಖಿಯರಿಗೆ ಉತ್ತರ ಹೇಳಿ ಮಲ್ಲಿಕಾರ್ಜುನನೇ ತನ್ನ ಗಂಡ, ಅನ್ಯ ಗಂಡರು ತನಗೆ ಬೇಡೆಂದು ಸ್ವಷ್ಟ ವಾದಿಸಿ ಎಲ್ಲರನ್ನೂ ನಿರುತ್ತರಗೊಳಿಸಿದಳು. ಈ ಸುದ್ದಿಯನ್ನು ಕೇಳಿ ಕೌಶಿಕನು ರೇಗಿ ಅಕ್ಕನನ್ನು ಎಳೆದು ತರಬೇಕೆಂದು ಆಜ್ಞಾಪಿಸಿದನು, ಇದನ್ನರಿತ ಅಕ್ಕನು ತಾನೇ ನಿರ್ಭಯದಿಂದ ಕೌಶಿಕನ ಅರಮನೆಗೆ ನಡೆದು ಬಂದಳು. ಆಗ ಅವನು ತನ್ನ ಆಸನದಲ್ಲಿ ಕುಳಿತುಕೊಂಡು ಅವಳನ್ನು ವಿಚಾರಿಸಲು ಸೇವಕಿಯರಿಗೆ ತಿಳಿಸಿದನು. ಅಕ್ಕನು ಆಗ ಕೌಶಿಕನ ಎದುರಿನಲ್ಲಿ ನಿಂತುಕೊಂಡಿದ್ದಳು. ಸೇವಕಿಯರು ಅಕ್ಕನಿಗೆ ಕೌಶಿಕ ಮಹಾರಾಜನನ್ನು ಲಗ್ನವಾಗಿ ಅಪ್ಪಿಕೊಂಡು ಸುಖದಲ್ಲಿ ಇರು. ಯಾಕೆ ಇಂಥ ಕಷ್ಟಕ್ಕೆ ಗುರಿಯಾಗುವಿ? ಇದೇನು ಕೆಟ್ಟ ವಿಷಯವಲ್ಲ, ಒಪ್ಪಿಕೋ. ಒಲ್ಲೆನ್ನಬೇಡೆಂದು ಕೇಳಿದರು. ಆಗ ಅಕ್ಕನು—ಉರದ ಮುಳ್ಳಿನಂತೆ ಪರಗಂಡರೆನಗವ್ವಾ. ಚನ್ನಮಲ್ಲಿಕಾರ್ಜುನನಲ್ಲದ ಗಂಡನ ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ ಈ ಪ್ರಕಾರ ಒಳ್ಳೇ ನಿಷ್ಠುರವಾದ ರೀತಿಯಲ್ಲಿ ಒಳ್ಳೇ ಧೈರ್ಯದಿಂದ ಒಳ್ಳೇ ಮಾರ್ಮಿಕವಾಗಿ ಉತ್ತರ ಹೇಳಿದ್ದಾಳೆ. ಆಗ ಅಕ್ಕನಿಗೆ ರಾಜನೇ ಸ್ವತಃ ರಾಜ್ಯದ ರಾಣಿಯಾಗಿ ಧನಧಾನ್ಯ ಪುತ್ರ ಮಿತ್ರ ಐಶ್ವರ್ಯ ಮೊದಲಾದವುಗಳಲ್ಲಿ ಲೋಲಾಡಿ ಸುಖಿಸಲು ಹೇಳುವನು. ಆಗ ಅಕ್ಕನು— ಸರ್ವ ಮೂಲಾಹಂಕಾರ ವಿಡಿದು ಕುಲಭ್ರಮೆ, ಛಲಭ್ರಮೆ, ಜಾತಿಭ್ರಮೆ, ನಾಮವರ್ಣಾಶ್ರಮ ಮತ ಶಾಸ್ತ್ರಭ್ರಮೆ, ರಾಜ್ಯಭ್ರಮೆ ಧನ ಧಾನ್ಯ ಪುತ್ರಮಿತ್ರ ಐಶ್ವರ್ಯಭ್ರಮೆ. ತ್ಯಾಗ ಯೋಗಭ್ರಮೆ, ಕಾಯ ಕಾಯ ಕರಣ ವಿಷಯಭ್ರಮೆ, ವಾಯು ಮನ ಭಾವ ಜೀವಮೋಹಭ್ರಮೆ ನಾಹಂ ಕೋಹಂಭ್ರಮೆ ಶಿವೋಹಂಭ್ರಮೆ ಮಾಯಾಮೋಹಭ್ರಮೆ ಮೊದಲಾದ ಮೂವತ್ತೆರಡು ಪಾಶಾಭ್ರಮಿತರಾಗಿ ತೊಳಲುವ ವೇಷಧಾರಿಗಳ ಕಂಡು ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತ್ತಯ್ಯ . ಚನ್ನಮಲ್ಲಿಕಾರ್ಜುನ ಈ ಪ್ರಕಾರ ಕೌಶಿಕಗೆ ಸಕಲಭ್ರಮೆಗಳನ್ನು ಹಳಿದು ತಿರಸ್ಕರಿಸಿ ಕೌಶಿಕ

ನಿಗೆ ಬಂದ ಅಹಂಕಾರದ ದರ್ಪನ್ನು ಹೇಳಿದಿದ್ದಾಳೆ. ಇಷ್ಟಾದರೂ ಕೌಶಿಕನ ಕೂಡ ಲಗ್ನವಾಗಿ ಕಾಮಕೇಳಿಯಲ್ಲಿ ಮಗ್ನಳಾಗಿ ರಾಜ್ಯಕಾರಭಾರಸಾಗಿಸುತ್ತಿದ್ದಳೆಂದು ಬರೆದವರು ಕವಿಗಳೇ ಹೇಗೋ ವಿಚಾರಿಸಿರಿ.

ಇಷ್ಟಾದರೂ ಕೌಶಿಕನು ಕಾಮಾತುರನಾಗಿ ಲಜ್ಜೆ ನಾಚಿಕೆಗಳನ್ನು ತೊರೆದು ಅಕ್ಕನ ಸೆರಗು ಹಿಡಿದು ಎಳೆಯ ಹತ್ತುವನು. ಆಗ ಅಕ್ಕನು ಏನೂ ಪ್ರತಿಕಾರ ಮಾಡದೆ ಶಿವಧ್ಯಾನದಲ್ಲಿ ತಲ್ಲೀನಳಾಗಿ ನಿಂತುಬಿಡುವಳು. ಇದರಿಂದ ಅಕ್ಕನುಟ್ಟ ಶೀರೆ ಸಂಪೂರ್ಣ ಕಳಚಿಬೀಳಲು ನಗ್ನಳಾಗಿ ಶಾಪವಾಣಿಯಿಂದ— "ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುಬಿನ ತಡಿಕೆ, ಕೀವಿನ ಹಡಿಕೆ, ಸುಡಲೀ ದೇಹವ, ಒಡಲು ವಿಡದು ಕೆಡದಿರು ಚನ್ನಮಲ್ಲಿಕಾರ್ಜುನನರಿ ಮರುಳೇ'' ಎಂದು ಶಪಿಸಲು ಕೌಶಿಕನು ಗಾಬರಿಯಾದನು. ಆಗ ಅಕ್ಕನ ಶರೀರದಿಂದ ಒಂದು ದಿವ್ಯ ಪ್ರಭೆಯು ಹೊರಟು ಕೌಶಿಕನಿಗೆ ತಾಗಲು ಮೂರ್ಛೆಯಿಂದ ನೆಲಕ್ಕೆ ಉರುಳಿದನು. ನೆರೆದವರೆಲ್ಲರು ಗಾಬರಿಯಾಗಿ ದಿಗಿಲುಗೊಂಡು, ಭ್ರಾಂತರಾಗಿ, ನಿಂತುಬಿಟ್ಟರು. ಈ ಪ್ರಕಾರ ಅಕ್ಕನು ನಗ್ನಳಾಗಿ ಹೊರಹೊರಟಳು. ಅತ್ತ ಅರಸನ ಸೇವಕರು ಅವನಿಗೆ ಶೀತೋಪಚಾರಣೆಗಳನ್ನು ಮಾಡಹತ್ತಿದರು. ಅಕ್ಕನ ದಿವ್ಯ ಪ್ರಭೆಗೆ ಎಲ್ಲರೂ ಗಾಬರಿಯಾಗಿ ಆಕೆಯನ್ನು ಯಾರೂ ತಡೆಯಲಿಲ್ಲ. ಆಗ ಸಖಿಯರು ತಾಯಿ ಮೊದಲಾದವರು ಬಹುವಾಗಿ ಗೋಳಾಡಿ ಹೀಗೆ ಹುಚ್ಚಿಯಂತೆ ನಗ್ನಳಾದಿ ಅಡವಿಗೆ ಹೋಗಬೇಡೆಂದು ಅಂಗಲಾಚಿ ಬೇಡಿಕೊಂಡರು. ಆಗ ಅಕ್ಕನು— "ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವದೇ ನವಿಲು ? ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ? ಪರಿಮಳವಲ್ಲದ ಪುಷ್ಪಕ್ಕೆಳಸುವದೇ ಭ್ರಮರ ? ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವದೇ ಎನ್ನ ಮನ? ಕೇಳಿರೆ ಕೇಳದಿಯರಿರಾ ? ಈ ಪ್ರಕಾರ ಬಾಲ್ಯದಿಂದಲೂ ಎಲ್ಲರೂ ಲಗ್ನವಾಗೆಂದೇ ಹೇಳುವರೆಂದು ಎಲ್ಲರ ಮೇಲೂ ಈ ತಪ್ಪನ್ನು ಹೊರಿಸಿ ತವರಮನೆ, ಬೇಡ ಊರ ಬೇಡ ಆಪ್ತ ಇಷ್ಟರ ಮನೆ ಬೇಡೆಂದು ಕಲ್ಯಾಣದದಾರೀ ಹಿಡಿದಳು ಇದರಲ್ಲಿ ಅಕ್ಕನು ಶಿವನ ಬಗ್ಗೆ ಮಾಡಿದ ದೃಢನಿರ್ಧಾರವನ್ನೇ ಸೂಚಿಸುವದು.

ಅಕ್ಕನು ಊರೂರಿಗೆ ಹೋಗುತ್ತಿರುವಾಗ ದಾರಿಯಲ್ಲಿ ಅಕ್ಕನನ್ನು ಕಂಡು ಜನ ಬೆರಗಾದರು. ನಿಂದೆ ಟೀಕೆ ಮಾಡಿದರು. ಕಾಡಿದರು. ಜಿಗುಪ್ಸೆ ತಾಳಿದರು. ಇಂಥ ಜನರಿಗೆ ಅಕ್ಕನು—"ಮುಡಿಬಿಟ್ಟು ಮೊಗಬಾಡಿ ತನುಕರಗಿದ

ವಳ ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ ? ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ ? ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳನ" ಎಂದು ಕೂಹಕಿಗಳಿಗೆ ವಿನಯದಿಂದ ಬುದ್ಧೀ ಹೇಳಿದ್ದಾಳೆ. ಇಲ್ಲಿ ಸಹ ಶಿವನೇ ಗಂಡನೆಂದೇ ಹೇಳಿಕೊಂಡಿದ್ದಾಳೆ.

ಕಲ್ಯಾಣಕ್ಕೆ ಹೋದಬಳಿಕ ಮೊದಲು ಬಸವಣ್ಣನವರ ಮನೆಗೆ ಹೋದಳು ಅಲ್ಲಿ ನೀಲಾಂಬಿಕೆಯ ಮುಂದೆ ತನ್ನ ಕಷ್ಟವನ್ನು ಹೇಳಿಕೊಂಡಿದ್ದಾಳೆ— ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ ! ಏರಿಲ್ಲದ ಗಾಯದಲ್ಲಿ ನೊಂದೆನವ್ವಾ ! ಸುಖವಿಲ್ಲದ ಧಾವತಿಗೊಂಡೆನವ್ವಾ ! ಚನ್ನಮಲ್ಲಿಕಾರ್ಜುನ ದೇವರಿಗೊಂದು ಬಾರದ ಭವಂಗಳಲ್ಲಿ ಬಂದೆನವ್ವಾ. ಈ ವಚನದಲ್ಲಿಯೂ ಕೂಡ ತಾನು ಯಾರಿಗೂ ಎಳ್ಳಷ್ಟು ಒಲಿಯಲಿಲ್ಲ. ಶಿವನಿಗೊಬ್ಬನಿಗೆ ಒಲಿದಿಹೆನೆಂದು ಹೇಳಿದಳು. ಇದರಿಂದಲೂ ಶಿವನೇ ಗಂಡನೆಂದು ಹೇಳಿದಂತಾಗುವದು.

ಅಕ್ಕನು ಅನುಭವ ಮಂಟಪಕ್ಕೆ ಮೊದಲನೇ ದಿನ ಬತ್ತಲೆಯಾಗಿ ಬಂದಾಗ ಆಕೆಯ ಕೂಡ ಒಳ್ಳೇ ಮಾರ್ಮಿಕವಾದ ಚರ್ಚೆ ನಡೆಯಿತು. ಪ್ರಭು—"ತಪ್ಪು ಹೊರಿಸಿ ಹೊರಟೆನೆಂಬುದು ಸತ್ಯವೇ ? ತನು ಸಿರಿಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯೆ ಅಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿಯಿತ್ತು. ಅದು ಗುಹೇಶ್ವರ ಲಿಂಗಕ್ಕೆ ಸಲ್ಲದವೇಷ ಈ ಪ್ರಕಾರ ಅಕ್ಕನಿಗೆ ಕೇಳಿದ್ದರಿಂದ ಎಲ್ಲರೂ ಕೌಶಿಕನು ಲಿಂಗಾಯತನಾಗಲಿಕ್ಕೆ ಒಲ್ಲೆಂದ ಕಾರಣ ಅವನ ಮೇಲೆ ತಪ್ಪು ಹೊರಿಸಿ ಹೊರಟು ಬಂದಳೆಂದು ಅರ್ಥ ಮಾಡುವರು. ಲಗ್ನವಾಗಿ ಮೂರು ಕರಾರು ಮಾಡಿದ್ದಳು ಕೌಶಿಕನು ಮುರಿದನೆಂಬ ತಪ್ಪು ಹೊರಿಸಿ ಹೊರಟು ಬಂದಳೆಂದು ಸಹ ಅರ್ಥ ಮಾಡುವರು. ಇದೆಲ್ಲ ಸರಿಯಲ್ಲ. ಮೇಲಿನ ವಿವರಣೆಯಿಂದ ಅಕ್ಕನು ಕೌಶಿಕನ ಕೂಡ ಲಗ್ನವಾಗಲಿಲ್ಲ. ಕರಾರುಗಳನ್ನೂ ಹಾಕಿಲ್ಲ. ಅಂದಬಳಿಕ ಮುರಿಯುವದು ಯಾರನ್ನು ? ಕೌಶಿಕನಿಗೆ ಲಿಂಗಾಯತನಾಗೆಂದೂ ಸಹ ಕೇಳಿಲ್ಲ ಆದರೆ ಅಕ್ಕನು ತಪ್ಪನ್ನು ಎಲ್ಲರ ಮೇಲೂ ಹೊರಿಸಿದ್ದಾಳೆ. ಎಲ್ಲರೂ ಅಕ್ಕನಿಗೆ ಲಗ್ನವಾಗು ಪ್ರಾಯದವಳಾದಳೆಂದು ಹೇಳುತ್ತಿದ್ದರು. ಅಕ್ಕನು ತಾನು ಶಿವನನ್ನೆ ಲಗ್ನವಾಗಿದ್ದೇನೆ ಸಂಸಾರಿಕ ಲಗ್ನವನ್ನು ತಾನು ಒಲ್ಲೆಂದೇ ಎಲ್ಲರಿಗೂ ಹೇಳಿದಳು. ಅದರಂತೆ ಕೌಶಿಕನಿಗೂ ಹೇಳಿದಳು ಇದೇ ಅವಳು ಮಾಡಿದ ಕಡೆಯ ಪ್ರಕಾರ. ಅದಕ್ಕಾಗಿಯೇ ತಾಯಿ ತಂದೆಯ ಮನೆಗೂ ಹೋಗಲಿಲ್ಲ.

ಅಪ್ತ್ರಇಷ್ಟರು ಬೀಗಬಿಜ್ಜರ ಮನೆಗೆ ಹೋಗದೆ ತನ್ನನ್ನು ಅರಿಯುತಕ್ಕಂಥ ತನ್ನ ವರ್ಗದವರಾದ ಕಲ್ಯಾಣ ಶರಣರ ಕಡೆಗೆ ಧಾವಿಸಿದಳು. ಆಕೆ ಸಕಲರ ಮೇಲೆ, ತನ್ನ ಲಗ್ನದ ಬಗ್ಗೆ ಕೇಳಿದವರ ಮೇಲೆ ತಪ್ಪನ್ನು ಹೊರಿಸಿ ಹೊರಟು ಕಲ್ಯಾಣಕ್ಕೆ ಬಂದಳು. ಆಗ ಅಲ್ಲಿ ಇವಳಿಗೆ ನೆಲೆಯೂರಿ ನಿಲ್ಲಲಿಕ್ಕೆ ಅನುಕೂಲ ಪರಿಸ್ಥಿತಿ ಇತ್ತು. ಆಗ ಆಕೆಗೆ ಶಾಂತಿ ಆನಂದಗಳಾದವು. ಮುಂದೆ ಕೆಲದಿನ ಗಳಾದ ಬಳಿಕ ಹರಳಯ್ಯ ಮಧುವರಸರ ಪ್ರಕರಣದಿಂದ ಅನೇಕರು ಕಲ್ಯಾ ಣವನ್ನು ಬಿಟ್ಟರು. ಈ ಪ್ರಸಂಗದಲ್ಲಿ ಅಕ್ಕನೂ ಶ್ರೀಶೈಲಕ್ಕೆ ಹೋಗಲುದ್ಯುಕ್ತ ಳಾದಳು. ಆಗ ಶರಣರು ಅಕ್ಕನನ್ನು ಕಳಿಹಿಸಿಕೊಡಲಿಕ್ಕೆ ನೆರೆದರು—ಅವರ ಮುಂದೆ ಅಕ್ಕನು—"ಹುಟ್ಟಿದೇ ಶ್ರೀಗುರುವಿನ ಹಸ್ತದಲ್ಲಿ ಬೆಳೆದೆ ನಾನು ಅಸಂಖ್ಯಾತರ ಕರುಣದಿಂದ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯ ನಿಕ್ಕಿದರು ನೋಡಾ। ಇಂತಪ್ಪ ತ್ರಿವಿಧಾಮೃತ ವನು ದಣಿಯಲೆರೆದು ಸಲಹಿದರೆನ್ನ; ವಿವಾಹವ ಮಾಡಿದಿರಿ. ಸಯುವಪ್ಪ ಗಂಡಂಗೆ ಕೊಟ್ಟಿರಿ, ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ; ಬಸವಣ್ಣ ಮೆಚ್ಚಲೊಗೆತನವ ಮಾಡುವೆ. ಚನ್ನಮಲ್ಲಿಕಾ ರ್ಜುನನ ಕೈವಿಡಿದು ನಿಮ್ಮ ತಲೆಗೆ ಹೂವ್ವತಾಹೆನಲ್ಲದೆ ಹುಲ್ಲತಾರೆನವದರಿಸಿ ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವುದು ಶರಣು ಶರಣಾರ್ಥಿ "ಈ ವಚನ ದಲ್ಲಿಯೂ ಕೂಡ ಅಕ್ಕನ ಗಂಡನು ಶಿವನೆಂದೂ ಅವನ ಕೂಡ ಸರಿಯಾಗಿ ಇದ್ದು, ಎಲ್ಲರಿಗೂ ಕೀರ್ತಿ ತರುವೆನೆಂದು ಹೇಳಿದ್ದಾಳೆ ಹೀಗಿದ್ದರೂ ಕಾಮುಕ ಕೌಶಿಕನ ಸಂಬಂಧವು ಅಕ್ಕನ ಕೂಡ ಎಳ್ಳಷ್ಟೂ ಇಲ್ಲ. ಹೀಗೆ ಅಕ್ಕನ ಅನುಭವಪೂರ್ಣ ವಚನಗಳಿಂದ ಸಹಜ ಹೊಳೆಯುತ್ತಿದ್ದರೂ ಹರಿಹರನ ಆಧಾರವೇಕೆಬೇಕು ? ಅವನೇನು ಆಳತೆಗೋಲಲ್ಲ. ಅವನೊಬ್ಬ ಬರಹಕಾರ ಕವಿ ಬೇಕಾದುದನ್ನು ಬೇಕಾದಂತೆ ಬರೆಯುವವನು. ಅಕ್ಕನ ವಚನಗಳನ್ನು ಸರಿಯಾಗಿ ಅಭ್ಯಾಸ ಮಾಡಿದರೆ ಇದರ ಅನುಭವವಾಗುವದು. ಅಕ್ಕನ ತ್ಯಾಗ ಪೂರ್ಣ ದಿವ್ಯ ಚರಿತೆಯನ್ನು ಬರೆದಿದ್ದೇನೆ. ಪ್ರಕಟವಾದಾಗ ನೋಡಿರಿ.

( ನನ್ನ ಎಲ್ಲ ಲೇಖಗಳನ್ನು ಬೇಕಾದವರು ಬೇಕಾದಷ್ಟು ಸಲ ಪ್ರಕಟಿಸ ಲಿಕ್ಕೆ ಎಲ್ಲರಿಗೂ ಹಕ್ಕನ್ನು ಕೊಟ್ಟಿರುವೆನು.)

————

# ವೀರಶೈವರ ಆಚಾರ ವಿಧಿ ಹೇಗಿರಬೇಕು.....?

( ಲೇಖಕಃ— ಈಶ್ವರ ಎ. ಕುಪ್ಪಸದ. )

ಆಚಾರಃ ಪರಮೋಧರ್ಮ ಆಚಾರಃ ಪರಮಂಧನಂ ।
ಆಚಾರಃ ಪರಮಾವಿದ್ಯಾ ಆಚಾರಃ ಪರಮಾಗತಿಃ ॥
ಸದಾಚಾರಣದೇವತ್ವಂ ಋಷಿತ್ವಂ ಚ ವರಾನನೇ ।
ಉಪಾಗತಾಃ ಕುಯೋನಿತ್ವಂ ಮನುಷ್ಯಾಸ್ತದ್ವಿಪರ್ಯಯೇ ॥
ಜ್ಞಾನ ಮಾಚಾರಹೀನೇಷು ಸರ್ವದೈವಸಮನ್ವಿತಂ ।
ದುಷ್ಟಚಂಡಾಲ ಭಾಂಡೇಷು ಯಥಾಭಾಗೀರಥೀಜಲಂ ॥

ಜಗತ್ತಿನಲ್ಲಿ ಸರ್ವಶ್ರೇಷ್ಠವಾದುದೆಂದರೆ (ಆಚಾರ) ಇವೇ ಎಲ್ಲ ಸಂಪತ್ತಿಗಿಂತ ಮಿಗಿಲಾದುದು. ಹಾಗೂ ವಿದ್ಯೆಯ ಮೂಲ ಸ್ಥಾನವೂ ಇದೇ. ಮಹಾನ್ ಬಸವೇಶ್ವರರು ಹೇಳಿದ್ದು ಇದೇ. "ಆಚಾರವೇ ಸ್ವರ್ಗ, ಅನಾಚಾರವೇ ನರಕ" ಮನುಷ್ಯರು ಸದಾಚಾರದಿಂದಲೇ ದೇವತ್ವವನ್ನೂ ಋಷಿತ್ವವನ್ನೂ ಪಡೆಯುತ್ತಾರೆ. ಆಚಾರವನ್ನು ಬಿಟ್ಟರೆ ನೀಚಯೋನಿಗಳಲ್ಲಿ ಜನಿಸುತ್ತಾರೆ. ಆಚಾರ ಹೀನರಲ್ಲಿದ್ದ ಜ್ಞಾನವು ಪವಿತ್ರವಲ್ಲ! ಪವಿತ್ರವಾದ ಗಂಗಾಜಲವು ಚಾಂಡಾಲರ ಪಾತ್ರೆಯಲ್ಲಿದ್ದರೆ ಹೇಗೆ ಅಪವಿತ್ರವೆನಿಸುವದೋ ಹಾಗೆ 'ಆಚಾರ' ಇಲ್ಲದ ಮನುಷ್ಯರೂ ಅಪವಿತ್ರವೆನಿಸುತ್ತಾರೆ. ಈ ಪ್ರಕಾರ ಧರ್ಮಶಾಸ್ತ್ರವು ಮಾನವ ಪ್ರಾಣಿಯ ಉದ್ಧಾರಕ್ಕೋಸ್ಕರ 'ಆಚಾರವೇ ಶ್ರೇಷ್ಠ ಸಾಧನ'ವೆಂದು ಹೇಳುತ್ತದೆ. ಆದ್ದರಿಂದ ವೀರಶೈವರು ನಿತ್ಯದ ಆಚಾರ ಕರ್ಮವನ್ನು ಹೇಗೆ ಪಾಲಿಸಬೇಕೆಂಬುದನ್ನು ತಿಳಿದುಕೊಳ್ಳಬೇಕು.

ವೀರಶೈವನು ರಾತ್ರಿಯಲ್ಲಿ ಭೋಜನವನ್ನು ಮಾಡಿ ಮಲಗ.ವಾಗ್ಗೆ ದಕ್ಷಿಣ ದಿಕ್ಕಿಗೆ ತಲೆಯನ್ನು ಮಾಡಿ ಮಲಗಬೇಕು.

"ಉತ್ಥಾನೇಶಯನೇತ್ವಾಪಿ ಪ್ರಸ್ಥಾನೇಚೋಪವೇಶನೇ ।
ನಿದ್ರಾದೌಚತದಂತೇಚ ಸ್ಮರೇತ್ಸರ್ವತ್ರ ಸದ್ಗುರುಂ" ॥

ಈ ಪ್ರಕಾರವಾಗಿ ಪಾರಮೇಶ್ವರಾಗಮದಲ್ಲಿ ಪರಮಾತ್ಮನು ಮಲಗಬೇಕಾದರೂ ಮೇಲಕ್ಕೇಳಬೇಕಾದರೂ, ನಿದ್ರಾರಂಭದಲ್ಲಿಯೂ ನಿದ್ರೆಯಿಂದ

ವಿಪ್ರನ ಬಲಭಾಗದಲ್ಲಿ ಯಾವಾಗಲೂ ದೇವತೆಗಳಿರುತ್ತಾರೆ. ಆದ್ದರಿಂದ ಕುಳಿತುಗೊಂಡು ಶೌಚಸಂಬಂಧವಾದ ಗಂಡೂಷಗಳನ್ನು ಎಡಭಾಗಕ್ಕೆ ಮಾಡಬೇಕೆಂದು 'ಪರಾಶರ ಮಹರ್ಷಿಯ' ವಾಕ್ಯವಿರುತ್ತದೆ. ಆಮೇಲೆ ಮುಖ ತೊಳೆದು ಹಲ್ಲುಗಳನ್ನು ತಿಕ್ಕಬೇಕು. ದಂತಧಾವನಕ್ಕೆ ಅತ್ತಿ, ಆಲ, ಉತ್ತರಾಣಿ, ಹಲಸು, ನೀರಲು, ಮಾವು, ಜಾಲಿ ಮುಂತಾದ ಕಾಷ್ಠಗಳು ಪ್ರಶಸ್ತಗಳಿರುತ್ತವೆ. ಹಲ್ಲು ತಿಕ್ಕುವ ಕಟ್ಟಿಗೆಯು ತೊಟಿಯಿಂದ ಕೂಡಿದ್ದು ಹನ್ನೆರಡು ಅಂಗುಲ ಪ್ರಮಾಣವುಳ್ಳದ್ದಾಗಿರಬೇಕು. ಇಂಥ ಕಟ್ಟಿಗೆಯನ್ನು ತೆಗೆದುಕೊಂಡು ಮೆಲ್ಲನೆ ತಿಕ್ಕಿ ಹೊರಗೂ ಒಳಗೂ ದಂತಗಳನ್ನು ಸ್ವಚ್ಛ ಮಾಡಿ ಆ ಕಟ್ಟಿಗೆಯನ್ನು ಸೀಳಿ ಅದರಿಂದ ನಾಲಿಗೆಯ ಮೇಲಿನ ಕೊಳೆಯನ್ನು ಸೂಕ್ಷ್ಮವಾಗಿ ತೆಗೆದುಕೊಳ್ಳಬೇಕು ಹಾಗೂ ಕರಗಳನ್ನು ತೊಳೆದುಕೊಂಡು ಪುನಃ ಬಾಯಿ ಮುಕ್ಕಳಿಸಿ ಮುಖಪ್ರಕ್ಷಾಲಿನವನ್ನು ಮಾಡಿಕೊಳ್ಳಬೇಕು. ತರ್ಜನೀ ಬೆರಳಿನಿಂದ ದಂತಧಾವನವನ್ನು ಮಾಡಬಾರದು. 'ಜ್ವರಾದಿಗಳ ನಿವಾರಣೆಗಾಗಿ ವೈದ್ಯಶಾಸ್ತ್ರದಲ್ಲಿ ಕಷಾಯಕ್ಕಾಗಿ ಹೇಳಿದ ಕಾಷ್ಠಗಳೇ ಧರ್ಮಗ್ರಂಥಗಳಲ್ಲಿ ದಂತಧಾವನಕ್ಕೆ ಹೇಳಲ್ಪಟ್ಟಿವೆ' ಮೇಲೆ ಹೇಳಿದ ಕಟ್ಟಿಗೆಗಳಿಂದ ಪ್ರತಿದಿನದಲ್ಲಿ ಹಲ್ಲುಜ್ಜುತ್ತ ಬಂದರೆ, ವಾತ-ಪಿತ್ತ-ಶ್ಲೇಷ್ಮಗಳೆಂಬ ತ್ರಿದೋಷಗಳು ಉಲ್ಬಣತೆಯನ್ನು ಹೊಂದದೆ ಹೋಗುವವು.

ಬೆಳಿಗ್ಗೆ ಏಳುವಿಕೆಯೂ ನಾನಾವನಸ್ಪತಿಗಳ ಮೇಲಿಂದ ಹಾಯು ಬರುವ ವಾಯು ಸೇವನೆಯೂ, ನಿರ್ಮಲೋದಕದಿಂದ ಗಾತ್ರ ಶುದ್ಧೀಕರಣವೂ ರೋಗಹರಕಾಷ್ಠಗಳಿಂದ ದಂತಧಾವನವೂ ಶರೀರದ ಬಲವನ್ನೂ ತೇಜಸ್ಸನ್ನೂ ಆಯುಷ್ಯವನ್ನೂ ಹೆಚ್ಚಿಸುವದು. ಆದ್ದರಿಂದ ಮೇಲೆ ಹೇಳಿದ ಕಟ್ಟಿಗೆಗಳಿಂದಲೇ ದಂತಧಾವನವನ್ನು ಮಾಡಬೇಕಲ್ಲದೆ ಬೇರೆ ನಿಷಿದ್ಧ ಕಟ್ಟಿಗೆಗಳಿಂದ ಮಾಡಬಾರದು.

ಅತ್ತಿಯ ಕಟ್ಟಿಗೆಯಿಂದ ವಾಕ್ ಶುದ್ಧಿಯನ್ನೂ, ಆಲದ ಕಟ್ಟಿಗೆಯಿಂದ ಸಂಪತ್ತನ್ನೂ, ಉತ್ತರಾಣಿಯ ಬೇರಿನಿಂದ ಸಕಲಸಿದ್ಧಿಯನ್ನೂ, ಮಾವಿನ ಕಟ್ಟಿಗೆಯಿಂದ ರಾಜಪೂಜ್ಯತೆಯನ್ನೂ, ಹಲಸಿನ ಕಟ್ಟಿಗೆಯಿಂದ ಸೌಭಾಗ್ಯವನ್ನೂ, ನೀರಲಕಟ್ಟಿಗೆಯಿಂದ ದೀರ್ಘಾಯುಷ್ಯವನ್ನೂ ಪಡೆಯುವರೆಂದು ಮಾರ್ಕಂಡೇಯಾದಿಗಳು ಹೇಳಿರುತ್ತಾರೆ.

———

# ೩. ಬಸವಣ್ಣನವರ ಸಾಧನ.

(ಲೇಖಕರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.)

[ಹಿಂದಿನ ಸಂಚಿಕೆಯಿಂದ ಮುಂದುವರಿದುದು.]

ಇದೇ ಪ್ರಕಾರ ನಿತ್ಯ ಅಣ್ಣನು ಪೂಜೆಮಾಡುವನು ಧ್ಯಾನಮಾಡುವನು. ಸಂಸ್ಕೃತ ಅಭ್ಯಾಸಮಾಡುವನು. ವೇದ, ಉಪನಿಷತ್ತು, ಗೀತೆ. ಆಗಮಗಳ ಅಭ್ಯಾಸವನ್ನು ಮಾಡುವನು. ನಿದ್ರೆಯಿಲ್ಲ, ಹಸಿವೆ ತೃಷೆಗಳ ಪರಿವೆಯಿಲ್ಲ ನಿತ್ಯ ನಿಯಮದಂತೆ ತಪ್ಪದೆ ನಡೆಯುವನು. ಏಕಾಂತದಲ್ಲಿ ಹೊಳೆಯ ತಡಿಯಲ್ಲಿ ಸಾಯಂಕಾಲ ಸಮಯಕ್ಕೆ ಧ್ಯಾನಕ್ಕೆ ಕೂಡ್ರುವನು. ಆಗ—

೪೭. "ಚಕೋರಂಗೆ ಚಂದ್ರಮನ ಬೆಳಗಿನಚಿಂತೆ, ಅಂಬುಜಕೆ ಭಾನುವಿನ ಉದಯದ ಚಿಂತೆ ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ. ಎನಗೆ ನಮ್ಮ ಕೂಡಲ ಸಂಗಮದೇವನ ನೆನೆವಚಿಂತೆ—"

ಎಂದು ಹಾಡಿ ಧ್ಯಾನದಲ್ಲಿ ತಲ್ಲೀನನಾಗುವನು. ಧ್ಯಾನದಿಂದ ಸ್ವಲ್ಪ ಜಾಗ್ರತನಾದಾಗ ಪುನಃ

೪೮. "ಎನಗೆ ನಿಮ್ಮ ನೆನಹಾದಾಗಲೇ ಉದಯ. ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವ. ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ ಸ್ವಾಮಿ. ಎನ್ನ ಹೃದಯದಲ್ಲಿ ನಿಮ್ಮ ಚರಣ ದುಂಡಿಗೆಯನೊತ್ತಯ್ಯಾ! ಮನದಲ್ಲಿ ಷಡಕ್ಷರಿಯ ಬರೆಯು ಬರೆಯಯ್ಯಾ ಕೂಡಲ ಸಂಗಮದೇವ.''

ಈಗ ಧ್ಯಾನದ ಹುಚ್ಚು ಹಿಡಿಯಿತು. ಅದರಲ್ಲಿ ಉತ್ಸಾಹ ಹರುಷ ಬಹಳಾಯಿತು. ಆದಕ್ಕೆ ಧ್ಯಾನಮರೆತರೆ ಅಸ್ತಮಾನ, ಧ್ಯಾನವೇ ಉದಯ ಧ್ಯಾನವೇ ಜೀವನದ ಜೀವಾಳ, ಧ್ಯಾನವೇ ಪ್ರಾಣ ಇದರಂತೆ ಸದಾ ಧ್ಯಾನ ಮಾಡಿಸೆಂದು ಬೇಡಿಕೊಳ್ಳುವನು. ಮತ್ತು ಅದಕ್ಕಾಗಿ ತನ್ನ ಹೃದಯದಲ್ಲಿ ನಿಮ್ಮ ಚರಣ ಮುದ್ರೆಯನ್ನು ಒತ್ತಿ ಮೂಡಿಸಿ ನಾಲಿಗೆಯಲ್ಲಿ "ಓಂ ನಮಃ ಶಿವಾಯ" ಮಹಾ ಮಂತ್ರವನ್ನು ಬರೆದು ಸದಾ ಮನಸ್ಸು ನಿಮ್ಮಲ್ಲಿ; ಧ್ಯಾನ ವದನದಲ್ಲಿ ಇರಿಸೆಂದು ಪರಮಾತ್ಮನಿಗೆ ಬೇಡಿಕೊಂಡಿದ್ದಾನೆ. ಧ್ಯಾನ ಬಲಿತರೆ

ಬೇರೆ ಏನೂ ಯಾವದೂ ಎಂದೂ ರುಚಿಸದು. ಯಾವ ವಿಷಯುಗಳೂ ಅವನನ್ನು ಎಂದೂ ಭಾಧಿಸವು. ಪಂಚ ಜ್ಞಾನೇಂದ್ರಿಯು ಪಂಚಕರ್ಮೇಂದ್ರಿಯು ಮನ, ಬುದ್ಧಿ ಚಿತ್ತ ಅಹಂಕಾರಾದಿ ಸಕಲದರಲ್ಲಿ ಧ್ಯಾನದ ಹುಚ್ಚು ತೋರಹತ್ತುವದು. ರೋಮ ರೋಮದಲ್ಲಿ ಧ್ಯಾನ ನಡೆಯುವದು. ಧ್ಯಾನವನ್ನು ಬಿಡಬೇಕೇಂದರೆ ಎಂದೂ ಈ ಉಸಿರಾಡುವದನ್ನು ಬಿಡಬೇಕೆಂದರೆ ಯಾರಿಂದಲೂ ಹೇಗೆ ಅಸಾಧ್ಯವೋ ಅದರಂತೆ ಧ್ಯಾನ ಬಲಿತರೆ ಆಗುವದು. ಒಂದು ನಿಮಿಷ ಸಹ ಧ್ಯಾನ ಬಿಡಲಿಕ್ಕಾಗದು. ಅಷ್ಟು ಮ್ಮೆ ಮನಗಳಲ್ಲಿ ನಾಟಿ ಬಿಡುವದು. ಆಗ ದಣಿವೆಯಾಗುವದಿಲ್ಲ, ಬೇಸರಾಗುವದಿಲ್ಲ. ಅದಕ್ಕೆ ಅಣ್ಣನು—

೪೯. "ಆಡಿ ಕಾಲು ದಣಿಯುವು. ನೋಡಿ ಕಣ್ಣು ದಣಿಯುವು. ಹಾಡಿ ನಾಲಿಗೆ ದಣಿಯುದು. ಇನ್ನೇನೆನ್ನಿನ್ನೇನೆ? ನಾ ನಿಮ್ಮ ಕೆಯ್ಯಾರ ಪೂಜಿಸಿ ಮನದಣಿಯಬೊಲ್ಲನಿನ್ನೇನೆನ್ನಿನ್ನೇನೆ? ಕೂಡಲ ಸಂಗಮದೇವ ಕೇಳಯ್ಯ ನಿಮ್ಮ ಉದರವ ಬಗಿದಾನು ಹೋಗುವ ಭರವೆನಗೆ."

ಈ ಪ್ರಕಾರ ಅಣ್ಣನ ಧ್ಯಾನ ಬಲಿಯಿತು. ಅವನಿಗೆ ಯಾವ ತರದಿಂದ ದಣಿವೆಯಾಗಲೇ ಇಲ್ಲ ಇದು ಧ್ಯಾನದ ಉಚ್ಚಮಟ್ಟ. ತುಟ್ಟ ತುದಿ. ಇದನ್ನು ಏರದ ಹೊರತು ಯಾರಿಗೂ ಸಿದ್ಧಿ ಸಾಕ್ಷಾತ್ಕಾರಗಳಿಲ್ಲ. ಅದಕ್ಕೆ ಅಣ್ಣನಿಗೆ ಯಾವತ್ತೂ ತನ್ನ ಚಿತ್ತವನ್ನು ಪರಮಾತ್ಮನಲ್ಲಿ ನಿಲಿಸಲಿಕ್ಕೆ ಸಹಜವಾಗಿ ಬಂದಿತು.

೫೦, "ಸುರರು, ಕಿನ್ನರರು, ಕಿಂಪುರಷರೆಂದವರ ನಾರುಬಲ್ಲರು. ಎನ್ನ ಚಿತ್ತವು ನಿಮ್ಮ ಮೇಲೆ ಸಂಗಯ್ಯ ಎನ್ನ ಚಿತ್ತವು ನಿಮ್ಮ ಮೇಲೆ ಲಿಂಗಯ್ಯ ಕೂಡಲಸಂಗಯ್ಯ ಅನ್ಯವೆಂಬುದನರಿಯೆನಯ್ಯ."

ಅಣ್ಣನ ಚಿತ್ತದ ಸ್ಥಿತಿ ಈ ತೆರನಾಯಿತು, ಯಾವದೂ ಅವನಿಗೆ ಸಮನಿಸಲಿಲ್ಲ ಸಕಲ ಚಿತ್ತವೆಲ್ಲ ಏಕ ಚಿತ್ತಾಗಿ ಪರಮಾತ್ಮನಲ್ಲೇ ಲೀನವಾಯಿತು. ಅನ್ಯವನ್ನೇನೂ ನೆನೆಯದಂತೆ ಅವನ ಚಿತ್ತದ ಸ್ಥಿತಿಯಾಯಿತು.

೫೧. "ಕಾಮಸಂಗ ನಿಸ್ಸಂಗವಾಗಿ ಇನ್ನಾವ ಸಂಗವನರಿಯೆನಯ್ಯಾ. ಮಿಗೆ ಮಿಗೆ ಒಲಿದೆನಾಗಿ ಅಗಲಲಾರೆನಯ್ಯ ನಗೆಮೊಗದರಸ ಅವಧಾರು. ಕೂಡಲಸಂಗಮದೇವ ಬಗಿದು ಹೋಗುವೆ ನಾ ನಿಮ್ಮ ಮನವನು"

ಎಂದು ಹೇಳಿದನು. ಅವನಿಗೆ ದೇವನ ದರ್ಶನವು ಇನ್ನು ಸಹಜ ಆಗುವದೆಂದು ಒಳ್ಳೇ ಮನಗಂಡನು. ಆದಕ್ಕೆ ಒಳ್ಳೇ ಧೈರ್ಯವಾಗಿ ಈ ವಚ

ನನನ್ನು ಹಾಡುವನು. ಯಾವ ಕಾಮನೆ, ಬಯಕೆ, ಚಂಚಲತೆ, ವಾಸನೆ, ಆಶೆ ಮೊದಲಾದವುಗಳೆಲ್ಲ ಹೋಗಿರುವವು. ಪರಮಾತ್ಮನಿಗೆ ಸಂಪೂರ್ಣ ಒಲಿದು ಶರಣಾಗತನಾಗಿದ್ದೇನೆ ಎಂದೂ, ಎಂದೆಂದೂ ಅಗಲಲಾರೆನೆಂದು ಧೈರ್ಯ ವಾಗಿ ಹೇಳಿದ್ದಾನೆ. ಅಲ್ಲದೆ ಪರಮಾತ್ಮನ ಹೊಟ್ಟೆಯನ್ನು ಒಡೆದು ಅವನ ಮನಸ್ಸಿನಲ್ಲಿ ತಾನು ಸಂಪೂರ್ಣ ಲೀನವಾಗುವೆನೆಂದು ಒಳ್ಳೇ ಭರವಶೆಯಿಂದ ಹೇಳಿದ್ದಾನೆ. ಪ್ರತಿಯೊಬ್ಬ ಸಾಧಕನಿಗೆ ಧ್ಯಾನ ಒಲಿತಾಗ ಈ ಸ್ಥಿತಿ ಪ್ರಾಪ್ತ ವಾಗುವದು. ಧ್ಯಾನದ ಹುಚ್ಚು ಬಹು ಹಿರಿದು. ಇದರಿಂದ ಈ ಭವವನ್ನು ಸಹಜ ಈಸಿ ಪಾರಾಗುವನು. ಯಾವ ಅಡೆತಡೆ ಅಡ್ಡಿ ಆತಂಕಗಳು ಎಂದೂ ಬರುವದೇ ಇಲ್ಲ. ಧ್ಯಾನದ ಬಲದಿಂದ ಹೀಗೆ ಅನೇಕರು ಸಹಜ ಭವದಾಟಿ ಪಾರಾಗಿದ್ದಾರೆ. ಹೀಗೆ ಧ್ಯಾನಸ್ಥನಾಗಿ ಕೂತಾಗ ಇಷ್ಟಮೂರ್ತಿಯು ಸಾಕಾರ ವಾಗಿ ಅಣ್ಣನಿಗೆ ದರ್ಶನ ಕೊಟ್ಟನು. ಅದರ ವರ್ಣನೆಯನ್ನು ಅಣ್ಣನೇ ಮಾಡಲಿ.

೫೨. "ಹೊನ್ನ ಅವುಗೆಯ ಮೆಟ್ಟಿದವನ ಮಿಡಿಯ ಮುಟ್ಟಿದ ಕೆಂಜಡೆ ಯವನ, ಮೈಯಲ್ಲಿ ವಿಭೂತಿಯ ಧರಿಸಿದವನ, ಕರದಲ್ಲಿ ಕಪಾಲನ ಪಿಡಿದವನ ಅರ್ಧ ನಾರಿಯಾದವನ ಬಾಣನ ಬಾಗಿಲ ಕಾಯ್ದವನ ನಂಬಿಗೆ ಕುಂಟಣಿ ಯಾದವನ, ಚೋಳಂಗೆ ಹೊನ್ನಮಳೆ ಕರೆದವನ, ಎನ್ನ ಮನಕ್ಕೆ ಬಂದವನ ಸದ್ಭಕ್ತರ ಹೃದಯದಲ್ಲಿ ಇಪ್ಪವನ ಮಾಡಿದ ಪೂಜೆಯಲೊಪ್ಪುವನ ಕೂಡಲ ಸಂಗಯ್ಯನೆಂಬುವನ"

ಎಂದು ಅಣ್ಣನೇ ತನ್ನ ದರ್ಶನದ ವರ್ಣನೆಯನ್ನು ಹೇಳಿದ್ದಾನೆ. ಇದು ಸಗುಣಸಾಕ್ಷಾತ್ಕಾರ ಪರಮಾತ್ಮನು ಅಣ್ಣನ ಮನಸ್ಸಿನಲ್ಲಿ ಇದ್ದ ರೂಪ ವನ್ನೇ ಶಿವನು ಧಾರಣಮಾಡಿ ಅಣ್ಣನಿಗೆ ದರ್ಶನವನ್ನು ಕೊಟ್ಟು ಅಣ್ಣನನ್ನು ಸಂತೈಸಿದ್ದಾನೆ. ಅಣ್ಣನ ಸಾಧನದ ಫಲವು ಈಗ ಪ್ರಾರಂಭವಾಗಿರುವವು. ಇದರಿಂದ ಅಣ್ಣನ ಭಕ್ತಿ ಹೆಚ್ಚಾಯಿತು. ದರ್ಶನ ಆದಕೂಡಲೇ ಅಣ್ಣನು ನಯ ವಿನಯ ಭಯಭಕ್ತಿ ಪ್ರೇಮಗಳಿಂದ ಆ ದಿವ್ಯ ಮೂರ್ತಿಗೆ ಸಾಷ್ಟಾಂಗ ಹಾಕಿದನು. ಆಗ ಆ ಮೂರ್ತಿಯಿಂದ ಆಶೀರ್ವಾದದ ವಾಣಿ ಕೇಳಿಸಹತ್ತಿತ್ತು. ಅಣ್ಣನು ಎದ್ದು ಕೈಜೋಡಿಸಿಕೊಂಡು ತಲೆಬಾಗಿ ಆ ಮೂರ್ತಿಯ ಮುಂದೆ ನಿಂತು ಶಿವನ ವಾಣಿಯನ್ನು ಕೇಳಹತ್ತಿದನು--'ಬಸವಣ್ಣಾ ಬಸವರಸಾ ನಿನ್ನ ಸಾಧನಕ್ಕೆ ನಾನು ಮೆಚ್ಚಿದೆ. ನೀನು ಇಲ್ಲಿಯತನಕ ನನ್ನ ಸ್ಥಾವರ ಲಿಂಗವನ್ನು ಪೂಜಿಸಿ ತಕ್ಕ ಫಲವನ್ನು ಪಡೆದೆ ಇನ್ನು ನೀನು ವೀರಶೈವ

ದೀಕ್ಷೆಯನ್ನು ಇದೇ ಗುರುಗಳ ಕಡೆಯಿಂದ ಹೊಂದಿ ಅಷ್ಟಾವರಣ ಪಂಚಾಚಾರದ ಮತ್ತು ಷಟ್‌ಸ್ಥಲಗಳ ಪ್ರಕಾರ ಸಾಧನೆ ಮಾಡು. ಅದು ಇನ್ನು ಅತಿ ಸುಲಭರೀತಿಯಲ್ಲಿ ಅಲ್ಪಕಾಲದಲ್ಲಿ ಸಾಧಿಸುವದು. ಅದನ್ನೇ ನೀನು ಮುಂದೆ ಪ್ರಚಾರ ಮಾಡಬೇಕಾಗಿದೆ. ಈಗ ಮಾಡಿದ ನನ್ನ ಪೂಜೆ ತಪ್ಪಲ್ಲ. ಇದರ ಮುಂದಿನ ಮೆಟ್ಟಲುಗಳನ್ನು ನೀನು ಸರಿಯಾಗಿ ಅರಿತು ನಾಡಿನ ತುಂಬ ಪ್ರಚಾರ ಮಾಡಬೇಕಾಗಿದೆ. ವೀರಶೈವವು ಬಹು ಕೀಳಮಟ್ಟಕ್ಕೆ ಇಳಿದಿದೆ. ಅದರ ಉದ್ಧಾರ ಮಾಡುವ ಭಾರ ನಿನ್ನನ್ನೇ ಕೂಡಿದೆ. ಚಿಂತಿಸ ಬೇಡ ನಾನಿನ್ನು ಹೋಗುವೆನೆಂದು" ಹೇಳಿ ಆ ದಿವ್ಯರೂಪವು ಬಯಲಾಯಿತು. ಅಣ್ಣನು ಅದನ್ನು ನೆನಿಸುತ್ತ ಅವನ ವಾಕ್ಯಗಳನ್ನು ಸ್ಮರಿಸಿಕೊಳ್ಳುತ್ತ ದಿಗಿಲುಗೊಂಡು ಆನಂದ ಆಲ್ಹಾದಗಳಲ್ಲಿ ಶಿವಧ್ಯಾನ ಮಾಡುತ್ತ ಅಲ್ಲೇ ಸ್ವಲ್ಪ ಹೊತ್ತ ಕುಳಿತು ಪುನಃ ಪುನಃ ದೇವನ ದರ್ಶನವನ್ನೇ ನೆನೆನೆದು ಆನಂದಾಶ್ರುಗಳನ್ನು ಸುರಿಸಿ ದೇವನನ್ನು ಹೃದಯ ತುಂಬಿ ಮನತುಂಬಿ ಕೊಂಡಾಡುತ್ತ ಗುರುಗಳ ಕಡೆಗೆ ನಡೆದನು. ಆಗ ಗುರುಗಳು ಈ ಮೊದಲೇ ಇದನ್ನೆಲ್ಲ ಅರಿತಿದ್ದರು. ಅಣ್ಣನು ಬಂದವನೇ ಗುರುವಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿ ದಿಗುಲುಗೊಂಡವನಂತೆ ಮಾತನಾಡದೆ ಮೌನವಾಗಿ ಕುಳಿತನು. ಆಗ ಗುರುಗಳು— ಬಸವಾ. ನಿನಗಾದ ದರ್ಶನವನ್ನು ಶಿವನ ಅಂತರ್ವಾಣಿಯು ಈ ಮೊದಲೇ ನನಗೆ ಅರಿಕೆಯಾಗಿದೆ. ಇರಲಿ ಚಿಂತೆಬೇಡ ನಾನು ಶುಭ ಸಮಯದಲ್ಲಿ ವೀರಶೈವ ದೀಕ್ಷೆಯನ್ನು ಕೊಡುವೆನು ಚಿಂತಿಸಬೇಡ ನಿನಗೇನು ಇದು ದೊಡ್ಡದಲ್ಲ. ಮೊದಲೇ ನೀನು ಪರಿಪೂರ್ಣ ಅರಿತವನು, ಹೆಸರಿಗೆ ಮಾತ್ರ ನಿನಗೆ ಇವೆಲ್ಲಬೇಕು. ಯಾಕಂದರೆ ಮುಂದೆ ವೀರಶೈವ ತತ್ವ ಸಿದ್ಧಾಂತ ಮೊದಲಾದವುಗಳನ್ನು ನೀನು ಅವತಾರ ತಾಳಿ ಬಂದಿರುವಿ. ನೀನೇನು ಸಾಮಾನ್ಯನಲ್ಲೆಂದು ಅಣ್ಣನನ್ನು ಸಂತೈಸಿ ಹೇಳಿದರು. ಆಗ ಅಣ್ಣನಿಗೆ ಬಹು ಆನಂದವಾಯಿತು. ಇದನ್ನು ಕೇಳಿ ಆಶ್ರಮದಲ್ಲಿ ಇದ್ದ ಬಾಲಕರಿಗೂ ಬಹು ಹರುಷವಾಯಿತು. ಎಲ್ಲರೂ ಬಸವನನ್ನು ಹೊಗಳಹತ್ತಿದರು. ಇದನ್ನು ಮುಗಿಸಿಕೊಂಡು ಎಲ್ಲರೂ ಸಾಯಂಕಾಲದ ಕಾರ್ಯಕ್ರಮಗಳಿಗೆ ಹೋದರು.

ಇಲ್ಲಿ ಸ್ಥಾವರ ಲಿಂಗದ ಬಗ್ಗೆ ಅಣ್ಣನ ಅಭಿಪ್ರಾಯವನ್ನೂ ಅವನ ವಚನಗಳನ್ನೂ ಸ್ವಲ್ಪ ವಿಚಾರಿಸುವದು ಅವಶ್ಯವೆನಿಸಿದೆ. ಯಾಕಂದರೆ ಅಣ್ಣನು ಮೊದಲು ಸ್ಥಾವರ ಪೂಜೆ ಮಾಡಿ ಭಕ್ತಿಯಲ್ಲಿ ಜಯಶೀಲನಾಗಿದ್ದಾನೆ.

ಅಣ್ಣನು ಆರಾಧ್ಯ ಬ್ರಾಹ್ಮಣರ ಕುಟುಂಬದಲ್ಲಿ ಜನಿಸಿದ್ದು ಅವರೆಲ್ಲರು ಸ್ಥಾವರ ಲಿಂಗಕ್ಕೆ ನಡೆದುಕೊಳ್ಳುವದು ಸಹಜ ಹಾಗೂ ಸ್ವಾಭಾವಿಕವೇಸರಿ ಅಲ್ಲದೆ ಅವನ ಆಯಿಯು ಊರಾದ ಕೂಡಲ ಸಂಗಮ ಕ್ಷೇತ್ರದಲ್ಲಿ ಕೂಡಲ ಸಂಗಮ ದೇವನೆಂಬ ಪ್ರಸಿದ್ಧ ಸ್ಥಾವರ ಲಿಂಗವೂ ಇತ್ತು. ಅವನ ಮನೆಯವರೆಲ್ಲರೂ ಆ ಲಿಂಗಕ್ಕೆ ಒಳ್ಳೇ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಅದಕ್ಕೆ ಅಣ್ಣನಲ್ಲಿಯೂ ಸ್ವಾಭಾವಿಕ ಈ ಸ್ಥಾವರ ಲಿಂಗದ ಮೇಲೆ ಭಕ್ತಿ ಹುಟ್ಟಿದ್ದೇನು ಅಚ್ಚರಿಯಲ್ಲ. ಬಾಲಕರಲ್ಲಿ ಸ್ಥಾವರ ಗುಡಿ ಲಿಂಗಗಳಲ್ಲಿ ಸಹಜ ಸರಳ ಭಕ್ತಿ ಹುಟ್ಟುವದು. ಕೊರಳಲ್ಲಿ ಕಟ್ಟಿದ ಇಷ್ಟ ಲಿಂಗದ ಮೇಲೆ ಚಿಕ್ಕ ಬಾಲಕರಿಗೆ ಬಾಲ್ಯದಲ್ಲಿ ಅಷ್ಟು ಸ್ವಾಭಾವಿಕ ಭಕ್ತಿ ಹುಟ್ಟುವದು ಕಡಿಮೆ. ಸ್ಥಾವರ ಲಿಂಗದ ಆಕೃತಿ ಅದರ ಪೂಜೆ ದೀಪಧೂಪ ಲಿಂಗದ ಆಭರಣ ಮೊದಲಾದವುಗಳನ್ನು ನೋಡಿ ಬಾಲಕರಲ್ಲಿ ಸ್ವಾಭಾವಿಕವಾಗಿ ಭಕ್ತಿ ಹುಟ್ಟುವದು. ಅದನ್ನು ನೋಡಿ ಅನೇಕ ಬಾಲಕರು ಮಳಲಿನ ಲಿಂಗಮಾಡಿ ಪತ್ರಿ ಪುಷ್ಪ ಏರಿಸಿ ಪೂಜಿಸಿ ಆಟ ಆಡಿದ ಕಥೆಗಳುಂಟು ಅನೇಕ ಹೊಳೆ ಸಮುದ್ರದ ಧಡದಲ್ಲಿಯು ಜನರು ಇದರಂತೆ ಮಾಡಿ ಮಳಲು ಲಿಂಗಗಳನ್ನು ಪೂಜಿಸಿ ವಿಸರ್ಜಿಸುವದುಂಟು. ಅಣ್ಣನಿಗೆ ಇನ್ನೂ ಇಷ್ಟಲಿಂಗದ ಕಲ್ಪನೆ ಇರಲಿಲ್ಲ. ವೀರಶೈವ ಆಚಾರವೂ ಗೊತ್ತಿಲ್ಲ. ಅವನಿಗೆ ಇನ್ನೂ ವೀರಶೈವ ದೀಕ್ಷೆಯಾಗಿರಲಿಲ್ಲ. ಜಾತವೇದ ಮುನಿಗಳು ಅಣ್ಣನು ಜನಿಸಿದಾಗ ಕೊರಳಲ್ಲಿ ತೆಗೆಯಲಿಕ್ಕೆ ಬರದಂತೆ ಲಿಂಗವನ್ನು ಕಟ್ಟಿ ಹೋಗಿದ್ದರು ಅಷ್ಟೇ ಹೊರತು ಅವನಿಗೆ ಅದರ ಪೂಜೆ ವಗೈರೆ ಯಾವ ಕ್ರಮಗಳೂ ಗೊತ್ತಿರಲಿಲ್ಲ. ಅದಕ್ಕೆ ಅಣ್ಣನು ಸ್ಥಾವರ ಲಿಂಗದ ಮೇಲೆ ಭಕ್ತಿ ಪ್ರೀತಿಗಳನ್ನು ಇಟ್ಟು ಪೂಜಿಸುತ್ತಿದ್ದನು. ಧ್ಯಾನಿಸುತ್ತಿದ್ದನು. ಜಪಿಸುತ್ತಿದ್ದನು. ಇಷ್ಟಲಿಂಗಕ್ಕೂ ಸ್ಥಾವರಲಿಂಗಕ್ಕೂ ಹೇಳಿಕೊಳ್ಳುವಂಥ ಭಯಂಕರ ಅಂತರವಿಲ್ಲ. ಇಷ್ಟಲಿಂಗವನ್ನು ನೆಲದ ಮೇಲೆ ಇಟ್ಟರೆ ಸ್ಥಾವರಲಿಂಗವಾಗುವದು. ಸ್ಥಾವರ ಲಿಂಗವನ್ನೇ ಕೊರಳಲ್ಲಿ ಕಟ್ಟಿಕೊಂಡರೆ ಇಷ್ಟಲಿಂಗವಾಗುವದು. ಕೊರಳಲ್ಲಿ ಕಟ್ಟಿಕೊಂಡರೆ ಕಟ್ಟಿಕೊಂಡವರೇ ಅದನ್ನು ಪೂಜಿಸುವರು. ಸ್ಥಾವರವನ್ನು ಅನೇಕರು ಪೂಜಿಸುವರು. ಅದು ಒಬ್ಬನಿಗೆ ಸಂಬಂಧಿಸಿದರೆ ಇದು ಬಹು ಜನರಿಗೆ ಸಾರ್ವಜನಿಕರಿಗೆ ಸಂಬಂಧವಾಗುವದು. ಇದರ ಹೊರತು ಏನೂ ಆತಂಕವಿಲ್ಲ. ಎರಡರಿಂದಲೂ ಸಿದ್ಧಿಗಳಾಗುವವು. ಆದರೆ ಇಷ್ಟಲಿಂಗವು ಸರಳ ಸುಲಭ. ಪೂಜಿಸಲು ಬಹು

ಯೋಗ್ಯ. ಗೊಂದಲ ಗದ್ದಲಗಳಾಗುವದಿಲ್ಲ. ಅಣ್ಣನು ಇದನ್ನು ಅರಿಯುದ ಕಾರಣ ಮೊದಲು ಸ್ಥಾವರ ಲಿಂಗವನ್ನೇ ಪೂಜಿಸಿದನು. ಇದಕ್ಕಾಗಿ ಅಣ್ಣನು ಸ್ಥಾವರದ ವರ್ಣನೆಯನ್ನು ತನ್ನ ವಚನದಿಂದ ಮಾಡಿದ್ದಾನೆ.

೫೩. "ಲಿಂಗ ಶಿವಾಲಯದ ಮುಂದೆ ಸಿಂಹ ಶೋದ್ರಿಕ ನಿಲ್ಲದಿಲ್ಲ। ನಂದಿಕೇಶ್ವರ ಭೃಂಗಿನಾಟ್ಯ ನಮ್ಮ ಲಿಂಗದ ಮುಂದೆ। ಇದಕ್ಕೆ ದಿಷ್ಟ ದೀವಿಗೆ ನಮ್ಮ ಲಿಂಗನ ಮುಂದೆ। ಅನ್ಯ ದೈವವೆಂಬುದ ತೋರಿಯು ಕಾಣಬಾರದು। ನೊಸಲ ಕಣ್ಣ ಭವನೊಬ್ಬನೇ ನಮ್ಮ ಕೂಡಲ ಸಂಗಮ ದೇವ'' ॥

ಇದು ಬಹುತರ ಕೂಡಲ ಸಂಗಮೇಶ್ವರ ಲಿಂಗದ ವರ್ಣನೆಯೇ ಇರಬ ಹುದೆಂದು ಅನಿಸುವದು. ಈ ಲಿಂಗವನ್ನು ನೋಡಿ ಆನಂದದಿಂದ ಭಕ್ತಿ ಭರಿತನಾಗಿ ಹಾಡಿದಂತೆ ತೋರುವದು . ಆಗ ಗುಡಿಯೊಳಗೆ ಕುಳಿತು ಅಣ್ಣನು ಪೂಜೆಮಾಡುವ ಕಾಲಕ್ಕೆ ಅನ್ಯ ದೈವದ ನೆನಪು ಅಣ್ಣನಿಗೆ ಬಂದಂತೆ ತೋರುವದು. ಆಗ ಅಣ್ಣನು—

೫೪. "ಗುಡಿಯೊಳಗಿರ್ದು ಗುಡಿಯ ನೇಣು ಕೊಯಿದರೆ। ಗುಡಿಯು ದಡಿಯು ಬಿದ್ದು ಹಲು ಹೋಹುದು ನೋಡಾ। ಪೊಡವಿಗೀಶ್ವರನ ಗರ್ಭಾಸನ ದೊಳಗಿರ್ದು। ನುಡಿವರು ಮತ್ತೊಂದು ದೈವ ಉಂಟೆಂದು। ತುಡುಗಣಿ ನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗಳುವಂತೆ ಕಾಣಾ। ಕೂಡಲ ಸಂಗಮ ದೇವಾ" ॥

ಇಲ್ಲಿ ಗುಡಿಯ ಉದಾಹರಣೆ ತಕ್ಕೊಂಡು ಅಣ್ಣನು ವಚನ ಹಾಡಿದ್ದ ರಿಂದ ಅವನು ಕೂಡಲ ಸಂಗಮೇಶ್ವರ ಲಿಂಗವನ್ನು ಪೂಜಿಸುತ್ತ ಇದನ್ನು ಹೇಳಿದ್ದಾನೆಂದು ಸಹಜ ಅನಿಸುವದು. ಮೇಲಿನ ವಚನ ಹೇಳಿ ಇದನ್ನು ಹಿಂದಿನಿಂದ ಅದೇ ಕ್ಷಣ ಹೇಳಿದಂತೆ ಕಾಣುವದು. ಇವರೆಡೂ ಲಿಂಗವೇ (ಶಿವನೇ) ದೇವರೆಂದು ಹೇಳುವವು. ಉಳಿದ ದೈವಗಳುಂಟೆಂದು ಜನರಾಡು ವದು ಶುದ್ಧ ತಪ್ಪು ಎಂದು ಅಣ್ಣನ ಅಭಿಪ್ರಾಯವಾಗಿದೆ.

೫೫. ಅಸಮಾಕ್ಷ ಲಿಂಗಕ್ಕೆ ಅನ್ಯದೈವವ ಸರಿಯೆಂಬವನ ಬಾಯಲ್ಲಿ। ಮಸದ ಕೂರಲಗ ನಿಕ್ಕದೆ ಮಾಣ್ಬನೆ? ಇದೂ ಕೂಡ ಮೇಲಿನ ವಚನಕ್ಕೆ ಪುಷ್ಟಿ ಕೊಡುತ್ತದೆ. ಅಸಮಾಕ್ಷಲಿಂಗ ಅಂದರೆ ಶಿವಲಿಂಗ ಇಷ್ಟಲಿಂಗಕೆ ಶಿವಲಿಂಗವೆನ್ನುವದು ಬಹುತರ ಕಡಿಮೆ ಎನಿಸುವದು, ಸ್ಥಾವರ ಲಿಂಗಕ್ಕೆ

ಹೆಚ್ಚಾಗಿ ಶಿವಲಿಂಗವೆನ್ನುವ ಪರಿಪಾಠವಿರುವದು. ಈ ಕಾಲಕ್ಕೆ ಅಣ್ಣನು ಸ್ಥಾವರಲಿಂಗ ಪೂಜೆಯನ್ನೇ ಮಾಡುತ್ತಿದ್ದನೆಂದು ಸಹಜ ಅನಿಸುವದು. ಅಣ್ಣನು ಸ್ಥಾವರ ಲಿಂಗಗಳ ಬಗ್ಗೆ ಹೇಳಿದ್ದನ್ನು ನೋಡಿರಿ—

೫೬. "ಕೃತಯುಗದಲ್ಲಿ ಕೇದಾರವೆಂಬ ಮೂಲಸ್ಥಾನ। ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ। ದ್ವಾಪಾರಯುಗದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ। ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ"

ಎಂದು ಅಣ್ಣನು ಜ್ಯೋತಿರ್ಲಿಂಗಗಳನ್ನು ಬಣ್ಣಿಸಿದ್ದಾನೆ. ಇದರ ಮೇಲಿಂದ ನೋಡಲಾಗಿ ಅಣ್ಣನು ಸ್ಥಾವರಲಿಂಗದ ಪೂಜೆಯನ್ನೇ ಮೊದಲು ಮಾಡಿದ್ದಾನೆಂದು ಸಹಜ ಹೊಳೆಯುವದು. ಅಣ್ಣನು ಸ್ಥಾವರವನ್ನು ಎಲ್ಲಿಯೂ ಹೇಳಿದಂತೆ ತೋರುವದಿಲ್ಲ. ಅಣ್ಣನ ಜಾತಿಯ ಮೇಲಿಂದ ವಚನದ ಮೇಲಿಂದ, ಪರಿಸ್ಥಿತಿಯ ಮೇಲಿಂದ ಸ್ಥಾವರಲಿಂಗವನ್ನೇ ಮೊದಲು ಪೂಜಿಸಿರಬೇಕೆಂದು ಧಾರಾಳವಾಗಿ ಅನಿಸುವದು. ವೀರಶೈವ ದೀಕ್ಷೆ ಆದ ಬಳಿಕ ಇಷ್ಟಲಿಂಗವನ್ನು ಪೂಜಿಸಿರುವನು.

ಜ್ಞಾನ, ಭಕ್ತಿ, ವೈರಾಗ್ಯ ಪೂರ್ಣರಾದ ಶಿವಯೋಗಿ,

# ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿ

## ಶಿವಾನಂದಮಠ, ಗದಗ

## ಇವರ ಗುಣಗಾಯನ.

ರಾಗಃ— ಭೂಪ ತಾಳಃ— ಝಂಪಾ

ಧನ್ಯರೈ! ಶಿವಯೋಗಿ ಮಲ್ಲಿಕಾರ್ಜುನಸ್ವಾಮಿ ।
ಮಾನ್ಯರೈ ನ್ಯಾಯ ವೇದಾಂತ ಕೇಸರಿ ಜಗದಿ ॥ಪಲ್ಲ॥

ಗದುಗಿನ ಶಿವಾನಂದಸ್ವಾಮಿ ಸೇವಕರಾಗಿ ।
ಸದುಪದೇಶದ ಜ್ಞಾನ ಗುರುದೀಕ್ಷೆ ಪಡೆದ ಗುರು ॥೧॥

ಆಧ್ಯಾತ್ಮ ಜ್ಞಾನದೊಳು ಸಲೆನಿರತ ವಾಗ್ಮಿಗಳು ।
ಚಿದ್ಘನ ಸ್ವರೂಪ ಪದವೊಂದಿದ ಮಹಾತ್ಮರು ॥೨॥

ಪಾತಂಜಲಿಯ ಯೋಗ ಶಾಸ್ತ್ರಾರ್ಥ ಕನ್ನಡದಿ ।
ಪಾತಂಜಲಿಯ ಭಾವ ತಿರುಳು ತಿಳಿಸಿದ ಗುರುವೆ ॥೩॥

ಮಹಾಸ್ವಾಮಿಗಳ ಗೀತೆ ಸದ್ಬೋಧ ಪ್ರವಚನವು ।
ಮಹತ್ತರದ ಸ್ವಾದಿಷ್ಟ ಜ್ಞಾನ ದೀವಿಗೆ ಜನಕೆ ॥೪

ಮಲ್ಲಿಕಾರ್ಜುನ ಸ್ವಾಮಿಗಳ ಕೀರ್ತಿ ಮಹಿಮೆಯು ।
ಎಲ್ಲಿಯೂ ಬೆಳಗುತಿದೆ ರಾಮಕೃಷ್ಣನು ಪೇಳ್ವ ॥೫

— ಸಿಂದಗಿ ರಾಮಕೃಷ್ಣರಾಯರು,
ವಿಜಾಪುರ.

# ಪ್ರೀತಿಯ ಚಕ್ರ.

(ಲೇಖಕರು:— ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ದೇವರನಿಂಬರಗಿ.)

ಈ ಜಗತ್ತು ವಾಸನಾಮಯ ಅನ್ನುವದು ಸತ್ಯವಾದುದು. ಪ್ರತಿಯೊಬ್ಬ ಜೀವಿಯು ತನ್ನ ಒಂದು ಆಶೆಗಾಗಿಯೇ ಜೀವಿಸುತ್ತಾನೆ. ಜೀವಿಸಲು ಹೋರಾಡುತ್ತಾನೆ. ಈ ಕಾರಣದಿಂದಲೇ ಮನುಷ್ಯನಿಗೆ ಒಂದರ ಮೇಲೆ ಪ್ರೇಮವುಂಟಾಗಿ ಅದಕ್ಕಾಗಿ ಹೋರಾಡಲು ಯತ್ನಿಸುತ್ತಾನೆ. ಒಂದು ವೇಳೆ ಆ ಕಾರ್ಯವು ಈಡೇರದಿದ್ದರೆ ಅವನಿಗೆ ಸುಖ ಹಾಗು ತಾಪ ಉಂಟಾಗುವದು ಸ್ವಭಾವಿಕವೇ ಆದದ್ದು

ಮನುಷ್ಯನು ಸಾಮಾಜಿಕ ಪ್ರಾಣಿಯು (Mans a saial wuṭnal) ಅವನು ಎಂದೂ ಸಮಾಜವನ್ನು ಅಗಲಲು ಇಚ್ಛಿಸುವದಿಲ್ಲ. ಸಮಾಜವೇ ತನ್ನ ಕುಟುಂಬ ಎಂದು ತಿಳಿದು ಮಾನವನು ಸಮಾಜದಲ್ಲಿಯ ಬಡವರ ಉದ್ಧಾರಕ್ಕಾಗಿ ಹೋರಾಡುತ್ತಾನೆ. ಆ ಆಶೆಯಿಂದಲೇ ಅವನು ಜೀವನದಲ್ಲಿ ಆನಂದವನ್ನು ಪಡೆಯಲು ಇಚ್ಛಿಸುತ್ತಾನೆ, ಯತ್ನಿಸುತ್ತಾನೆ. ಈ ಆಶೆಯೇ ಅವನಿಗೆ ಪ್ರೇಮಮಾಡಲು ಪುಟಕೊಡುವದು. ಆದುದರಿಂದ ಮನುಷ್ಯನು ತನ್ನ ಪ್ರೀತಿಯವರು ಯಾವಾಗಲೂ ಮುಂದೆ ಹೋಗಬೇಕೆಂದು ಇಚ್ಛೆಯಿಂದ ಅವರನ್ನು ನಂಬ ಅವರಿಗಾಗಿ ತನ್ನಿಂದ ಅಥವಾ ಪರರಿಂದ ಸಹಾಯ ಮಾಡಲು ತೊಡಗುತ್ತಾನೆ. ಆದರೆ ಅಂಥವರಿಂದ ಸಹಾಯ ತಗೆದುಕೊಂಡವರು ತಾವು ಸ್ವತಃ ಜೀವನ ಸಾಗಿಸಲು ಯೋಗ್ಯರೆಂದು ಅನಿಸಿದ ಮೇಲೆ ತಮಗೆ ಸಹಾಯ ಮಾಡಿದವರನ್ನು ಮರೆಯುತ್ತಾರೆ. ಇದರಿಂದ ಸಹಾಯ ಮಾಡಿದ ಅಥವಾ ನಂಬಿದ ಮನುಷ್ಯನಿಗೆ ಹೇಳಲಾರದಷ್ಟು ದುಃಖವಾಗುತ್ತದೆ. ಈ ದುಃಖವು ಕಡೆಗೆ ಸಿಟ್ಟಿನ ರೂಪ ತಾಳುತ್ತದೆ.

ಸಿಟ್ಟು ಅಂದರೆ ಗಂಟು ಹಾಕಿಕೊಳ್ಳುವದು. ದೊಡ್ಡ ಧ್ವನಿಯಿಂದ ಮಾತಾಡುವದು. ಎಂದು ಸಾಮಾನ್ಯವಾಗಿ ಅರ್ಥಮಾಡುತ್ತೇವೆ. ಇನ್ನು ಶಾಂತ ಸ್ವಭಾವದವರೆಂದರೆ ಬೈದರೆ ಬೈಯಿಸಿಕೊಳ್ಳುವರು. ಹೊಡೆದರೆ ಹೊಡೆಯಿಸಿಕೊಳ್ಳುವವರು ಎಂದು ನಾವು ತಿಳಿಯುತ್ತೇವೆ. ನಿಜವಾಗಿ

ನೋಡಿದರೆ ಇವೆರಡು ಸರಿಯಲ್ಲ. ಆದರೆ ನಿಜವಾದ ಕೋಪಿಗಳೆಂದರೆ ಎಂಥ ಪ್ರಸಂಗಬಂದರೂ ಕೂಡ ಆಗ ಅದನ್ನು ಸಹನ ಮಾಡಿಕೊಂಡು ಪ್ರಸಂಗ ಬಂದಾಗ್ಗೆ ಅದರ ಸೇಡು ತೀರಿಸುವವರು ಆಗಿದ್ದಾರೆ. ಇಂಥವರು ಮೇಲೆ ಶಾಂತರೆಂದು ಕಂಡರೂ ಒಳಗೆ ಅವರ ಹೃದಯವೇ ಸುಡುತ್ತಿರುತ್ತದೆ. ಇನ್ನು ನಿಜವಾದ ಶಾಂತರ ಕಡೆಗೆ ಹೊರಳುವಾ. ಶಾಂತಿಪುರುಷರು ಕ್ಷಣ-ಕ್ಷಣಕ್ಕೆ ದೊಡ್ಡ ಧ್ವನಿಯಿಂದ ಮಾತಾಡಿದರೂ ಹೆಣೆಗೆ ಗಂಟು ಹಾಕಿದರೂ ಸಹ ಮತ್ತೊಂದು ಕ್ಷಣದಲ್ಲಿಯೇ ಸಲುಗೆಯಿಂದ ಪ್ರೀತಿಯಿಂದ ವರ್ತಿಸುತ್ತಾರೆ. ಇವರ ಹೃದಯವು ವಿಶಾಲವಾದ ಗುಡ್ಡದಲ್ಲಿ ಕೊರೆದ ಗುಡಿಯಂತೆ ಶಾಂತ ವಾಗಿರುತ್ತದೆ.

ಮನುಷ್ಯನು ಒಬ್ಬರನ್ನು ಪ್ರೀತಿಸುವದರಲ್ಲಿಯೂ ಸ್ವಾರ್ಥತೆಯು ಕಂಡು ಬರುತ್ತದೆ. ತನ್ನಂತೆ ಆಚಾರ ವಿಚಾರ ಹಾಗು ತನಗೆ ಲಾಭವಾಗುವದಿದ್ದರೆ ಒಬ್ಬರನ್ನು ಪ್ರೀತಿಸುವದು. ಆದರೆ ತಾನು ಪ್ರೀತಿ ಪಡೆದವರ ಪ್ರೀತಿಯು ತನ್ನ ಮೇಲೆ ಇರುವದು ಎಂದು ತಿಳಿಯುವದು ಮಾತ್ರ ಕಡು ಮೂರ್ಖ ತನವೇ ಸೈ

ತಂದೆ ತಾಯಿಗಳು ತಮಗೆ ಮೊದಲು ಹುಟ್ಟಿದ ಮಗನನ್ನು ಪ್ರೀತಿ ಸುವದು ಆಮೇಲೆ ಅವರಿಗೆ ಮತ್ತೊಂದು ಕೂಸು ಆದರೆ ಅದರ ಕಡೆಗೆ ಅವರ ಪ್ರೀತಿಯು ಹರಿದು ಮೊದಲಿನ ಮಗನ ಮೇಲಿನ ಪ್ರೀತಿಯು ಕಡಿಮೆ ಯಾಗುವದು. ಮಗನು ಕೂಡ ತನಗೆ ತಾರುಣ್ಯ ಬರುವವರೆಗೆ ತನ್ನ ತಂದೆ ತಾಯಿಗಳನ್ನು, ಮದುವೆಯಾದ ಮೇಲೆ ತನ್ನ ಹೆಂಡತಿಯನ್ನು ನಂತರ ತನ್ನ ಮಕ್ಕಳನ್ನು ಪ್ರೀತಿಸುವನು. ಹೀಗೆ ಪ್ರೀತಿಯು ಚಕ್ರಾಕಾರದ ಗತಿಯಲ್ಲಿಯೇ ತಿರುಗುತ್ತಿರುತ್ತದೆ. ಹೀಗೆ ಪ್ರೀತಿಯು ಸರಿಯುತ ಮುಂದೆ ಮುಂದೆ ಹೋಗು ತ್ತಲಿದೆ. ಅದು ಸಿಂಹಾವಲೋಕನವನ್ನು ಮಾಡುವದಿಲ್ಲ ಆದರೆ ಇದರಿಂದ ಹಿಂದೆಯು ಸುಖ ಸಿಕ್ಕಿಲ್ಲ. ಇಂದು ಸಿಗುವದಿಲ್ಲ ಹಾಗೂ ಮುಂದೆಯೂ ಸಿಗು ವದು ದುಸ್ತರ. ಇದರಿಂದ ಸುಖ ಹೇಗೆ ಸಿಗುವದು ? ಎಂಬ ಪ್ರಶ್ನೆಯು ಏಳಬಹುದು. ಇದಕ್ಕೆ ಉತ್ತರ ಸ್ವಾರ್ಥ ಬಿಡದ ಹೊರತು ಸಿಗುವದಿಲ್ಲ. ಸ್ವಾರ್ಥವು ಎಲ್ಲರನ್ನು ಒಡಿಸಿಕೊಂಡು ಹೋಗುತ್ತಿರುವ ಒಂದು ಬೇತಾಳ. ನಾವು ಫಲಾಪೇಕ್ಷೆಯನ್ನು ಬಿಟ್ಟು ಕಾರ್ಯಮಾಡಿದರೆ ಶಾಂತಿಯು ದೊರಕೇ ದೊರಕುವದು.

ಲೋಕದ ಜನರು ತಮ್ಮ ಮಕ್ಕಳ ಸಲುವಾಗಿ ದುಃಖಪಟ್ಟರೆ ಸನ್ಯಾಸಿಗಳು ಎರಡನೇಯವರು ಹಡೆದ ಮಕ್ಕಳನ್ನು ಕಟ್ಟಿಕೊಂಡು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಅವರಿಗಾಗಿ ಹಗಲಿರುಳು ದುಃಖಿಸುತ್ತಾರೆ. ಅದಕ್ಕಾಗಿ ಸನ್ಯಾಸಿಗಳು ಮನೆಮನೆಯಿಂದ ತಿರುಗಿ ಸಂಪತ್ತು ಸಂಗ್ರಹಿಸುತ್ತಾರೆ. ಆ ಸಂಪತ್ತನ್ನು ತಮ್ಮ ಶಿಷ್ಯನಿಗೆ ಒಪ್ಪಿಸುತ್ತಾರೆ. ಲೋಕದ ಹಣವನ್ನು ಜನತೆಗಾಗಿ ವಿನಿಯೋಗಿಸುವ ಬುದ್ಧಿಯು ಅವರಲ್ಲಿಯೂ ಹುಟ್ಟುವದಿಲ್ಲ. ಪ್ರೀತಿಯು ತಾನು ನಂಬಿದವರನ್ನು ತನ್ನಂತೆ ಮಾಡಿಕೊಳ್ಳಲು ಹವಣಿಸುತ್ತದೆ. ಪ್ರೀತಿಯ ಚಕ್ರದಲ್ಲಿ ಶಿಲುಕಿ ಗಾಸಿಗೊಳ್ಳದೆ ನಿಜ ಸುಖ, ಶಾಂತಿ, ಧಾಮದೆಡೆಗೆ ಸಾಗಬೇಕಾದರೆ ಪ್ರತಿಯೋರ್ವರು ಯಾವ ವಸ್ತುವಿನಲ್ಲಿಯೂ ಆಸಕ್ತಿ ತಾಳಬಾರದು. ಅಂದರೆ ಮಾತ್ರ ಶಾಂತಿ ಪ್ರಾಪ್ತವಾಗುವದು. ಇಲ್ಲದೆ ಹೋದಲ್ಲಿ ಸಾಧು ಸನ್ಯಾಸಿಗಳಿಗೂ ದುಃಖ ತಪ್ಪಲಾರದು. ಎಂಬ ವಣಾತನ್ನು ಅರಿಯಬೇಕು.

———

# ಕಲಿಯುಗದ ಕಾಲಚಕ್ರ.

(ಲೇಖಕರು:— ನಾ. ಮ. ಸಿದ್ಧರಾಮಯ್ಯ, ನಾಗರಹಾಳು.)

ಕಲ್ಕಿಯುಗದ ಕಾಲಚಕ್ರ ತನ್ನ ಹೆರೆಯುದಲ್ಲಿ ಎಡರುತೊಡರುಗಳನ್ನು ಯಾವುದೂ ಗಣನೆಗೆ ತಾರದೇ ಮುಂದೆಸಾಗಿದೆ ವಿಜ್ಞಾನಿಗಳಿಂದ ಮುನ್ನಡದ ವಿಚಿತ್ರ ಪ್ರಪಂಚ. ಇದರಿಂದ ಹಿಂದಿನ ಸಂಸ್ಕೃತಿ ಅಲ್ಲಲ್ಲಿ ಚನ್ನಾಗಿಯೇ ಅಳಿಸುತ್ತ ಬಂದಿದೆ. ಜಸಿವಾರ-ಶಿವದಾರಗಳ ಹರಿದಾಟ ಜಾತಿವಿಜಾತಿಗಳ ಕೈಗಳ ಕುಲುಕಾಟ. ಇದೇ ಅಸಂಬದ್ಧ ಸಸಿಯೇ ಬೇರು ಬಿಡುವ ಪ್ರಸಂಗ ಬರುವುದೇನೋ? ಎಂಬ ಸಂಶಯು! ಇದೆಲ್ಲವೂ ಲಯುಕರ್ತನಾದ ಶಿವ ನೊಬ್ಬನಿಗೆ ಗೊತ್ತಲ್ಲದೆ ಆತನ ಕೈಗೊಂಬೆಗಳಾದ ನಮಗೆ (We-are all hand Puppets of god) ಗೊತ್ತೇ? ಇಲ್ಲಿ, ತಿಲಾಂಶವಾದರೂ ಈ ಮಾನವನಿಗೆ ಗೊತ್ತಿಲ್ಲ. ಹಾಗೇನಾದರೂ ಎಲ್ಲ ಮಾನವನು ತನಗೆ ಬೇಕಾದ ಹೊಸ ಪ್ರಪಂಚವನ್ನೇ ಸೃಷ್ಟಿಸಿಕೊಂಡು ಅದಕ್ಕೊಡೆಯನಾಗಿ ಮೆರೆಯಬಹುದಾಗಿತ್ತಲ್ಲ!! ಚಂದ್ರಲೋಕದವರೆವಿಗೂ ಪಯಣ ಬೆಳಸಿದ ಧೀರ ಮಾನವನು. 'ಸಾವು' ಎಂಬೆರಡಕ್ಷರಗಳನ್ನು ಸ್ಮೃತಿ ಪಥದಲ್ಲಿ ಬಂದಾಗ ತನ್ನ ಪುಂಸತ್ವವು ಮಾಯುವಾಗಿ ನಪುಂಸಕತ್ವ ಉಂಟಾಗಿ ಹೆಚ್ಚುಕಾಲ ಬಾಳುವುದಕ್ಕಾಗಿ ದೇವರಲ್ಲೇಕೆ ಮೊರೆಯಿಡುವನು? ಮಾನವನು ತನಗೆ ಬೇಕಾದಹಾಗೆ ಸನ್ನಿವೇಶಕ್ಕನುಸರಿಸಿ ಒಂದೊಂದು ಹೊಸ ಹೊಸ ಅದ್ಭುತ ಕಾರ್ಯಸಾಧಿಸಿ ತನ್ನದೇ ಆದ ಹೊಸ ಪ್ರಪಂಚ ಸೃಷ್ಟಿಸಿ, ಬೇಕಾದಹಾಗೆ ವಿಜ್ಞಾನಿಯು ಮಾರ್ಪಡಿಸಬಲ್ಲನೆಂದು ಪ್ರಖ್ಯಾತ ವಿಜ್ಞಾನಿಗಳ ಅಭಿಪ್ರಾಯ ವಿದ್ದರೂ ಅದೆಲ್ಲ ದೇವರ ಕೃಪೆ 'ಯಾ' ಯಾವುದೋ ಒಂದು ಅವ್ಯಕ್ತವಾದ ದಿವ್ಯ ಶಕ್ತಿ ಪ್ರಭಾವದಿಂದಲೇ ಮಾನವನಿಗೆ ಬೆಳಕು ಎಂದು ಮರೆಯಲಾಗದು.

ಏಕೆಂದರೆ ವಿಜ್ಞಾನಿಗಳ ನಮ್ಮ ಹಿರಿಯಣ್ಣನಾದ "ಚಾರ್ಲ್ಸ್ ಡಾರ್ವಿನ್" ವಿಕಾಸ ತತ್ವದ ಭಂಡಾರದ ಕುಡಿಕೆಯೊನ್ನೊಡೆದು ಎಲ್ಲರ ಕಣ್ಮುಂದೆರಚಿ ಅದರ ಗೂಢತ್ವವನ್ನು ಸುಲಭದಲ್ಲಿ ಅರ್ಥಗೊಳಿಸಿದನು. ಇಷ್ಟಿದ್ದರೂ ಆತ ನೇನು ನಾಸ್ತಿಕನೇ? ಛೇ ಆತನು ನಾಸ್ತಿಕನೆಂದು ಹೇಳುವವರ ಬಾಯಿಯೇ ಬಾಲಹುಳುಗಳ ನಿಲಯವಾದೀತು! ಈತನು ಮಾನವ ಕೋಟಿಗೆ ನೀಡಿದ

ದಿವ್ಯ ಹೆಸಾದವೆಂದರೆ "ಮಾನಸ ಸ್ವಾತಂತ್ರ್ಯ" ಈತನಿಗೆ ದೇವರಲ್ಲಿ ತುಂಬು ನಂಬಿಗೆ ಇತ್ತು (ಯಾವುದೋ ಒಂದು ಅವ್ಯಕ್ತ ಶಕ್ತಿ ಮಾನವನ ಮೇಲ್ವಿಚಾರಣೆಯಲ್ಲಿದೆ ಎನ್ನುವ ಅಭಿಪ್ರಾಯದಲ್ಲಿ.) ಎಲ್ಲ ಪ್ರಖ್ಯಾತ ವಿಕಾಸವಾದಿಗಳು ಒಂದಲ್ಲ ಇನ್ನೊಂದು ವಿಧದಲ್ಲಿ ಮಾನವನಿಗೂ ಮಿಗಿಲಾದ ಮಹಾ ಶಕ್ತಿಯೊಂದು ಜಗತ್ತಿನಲ್ಲಿದೆಯೆಂದು ಒಪ್ಪಿಕೊಂಡೇ ಇರುವರು.

ವಿಜ್ಞಾನದವರ ಹಾದಿಯು ರೆಂಬೆಯೊಂದಾಗಿದ್ದರೆ, ಮತಧರ್ಮದವರ ಕೊಂಬೆ ಇನ್ನೊಂದಾಗಿರಬಹುದು. ಆದರೆ ಇವುಗಳ ಅಂತಿಮ ಗುರಿ 'ಯಾ' ಧ್ಯೇಯ (All the "Aims" are same in Rinal) 'ಅರ್ಥಾತ್' ಅವರ ಉದ್ದೇಶದಲ್ಲಿ ಒಮ್ಮತ ತೋರದಿರದು. ದಾರಿ ಹಲವಾದರೂ 'ಗುರಿ' ಒಂದೇ ಎನ್ನುವ ಮಾತು ಶತಸತ್ಯವಾಗಿದೆ.

ಈಗಿನ ನವತರುಣ–ತರುಣಿಯರು ಪ್ರತಿಯೊಂದಕ್ಕೂ ವಿಜ್ಞಾನದ ಕುಂಚನ್ನು ಹಚ್ಚಿ ಹಿಂದಿನ ಸಂಸ್ಕೃತಿ ಬಹು ಬೇಗಮರೆತು ಬಿಡುವರು. ತಾವೇ ನವನಾಗರಿಕರು. ಹಿಂದಿನ ಸಂಸ್ಕೃತಿ ಹಳೆಯದು. ಅದು ತಮಗೆ ಅಳವಡದು ಎಂದು ತಮ್ಮ ಇಷ್ಟಲಿಂಗಗಳನ್ನು ಬಿಟ್ಟು (ಮೂಲೆಗೆ ಬಿಸುಡಿ) ನಗರದ ಗೂಳಿಯಾಗಿ ಪರಿಣಮಿಸುವರು. ಈಗಿನವರಿಗೆ ಇಷ್ಟಲಿಂಗಗಳು ಸಾಮಾನ್ಯವಾಗಿ ಯಾವಾಗ ಅವಶ್ಯ ಬೀಳುತ್ತವೆ ಎಂಬುದು ಇಲ್ಲಿ ಸೂಕ್ಷ್ಮ ರೂಪದಲ್ಲಿ ಉದಾಹರಿಸಿದೆ.

(೧) ಪ್ರಸಾದ ನಿಲಯ (Free Bowrdings) ಗಳಲ್ಲಿ ತಮಗೆ ಸೀಟು ಕೇಳುವಾಗ್ಗೆ,

(೨) ಚುನಾವಣೆಗಳಲ್ಲಿ ತಮಗೆ ಮತಗಳ (Votes) ನ್ನು ಕೇಳುವಾಗ್ಗೆ ಮತ್ತು,

(೩) ಪ್ರಸ್ತ-ಆರಾಧನೆಗಳು ಇತ್ಯಾದಿಗಳಲ್ಲಿ ವೀರಶೈವರಿಗೆ ಇಷ್ಟಲಿಂಗಗಳು ಅವಶ್ಯ ಬೀಳುತ್ತವೆ. ಈಗಿನ ವೀರಶೈವ ತರುಣರು (ಕಾಲೇಜು ವಿದ್ಯಾರ್ಥಿಗಳು) ಕಾಲೇಜು ಮೆಟ್ಟಲು ಹತ್ತಿದೊಡನೆಯೇ ತಮ್ಮ ಲಿಂಗಕ್ಕೆ ಕೈಕೊಟ್ಟೇ ಬಿಡುವರು. ಇಂಥವರನ್ನು ವೀರಶೈವರೆಂದು ಕರೆಯಬಹುದೇ ? ಇದಕ್ಕೆ ಅಣ್ಣನ ಕಾಲದಲ್ಲಿನ ಒಂದು ಉದಾ:—

ನಮ್ಮ ಬಸವಣ್ಣನವರು ಒಮ್ಮೆ ಅರಮನೆಯಲ್ಲಿ ಭಾರೀ ಸಂತರ್ಪಣೆವೇರ್ಪಡಿಸಿದ್ದರು. ಅದರಲ್ಲಿ ಅನ್ಯ ಜಾತಿಯವರಿಗೆ ಪ್ರವೇಶವಿಲ್ಲ. ಅದ್ದರಿಂದ ಅನ್ಯ

ಜಾತಿಯವರ ಬಾಯಲ್ಲಿ ನಿರೂರಿಸುತ್ತಿದ್ದವು. ಅಣ್ಣನವರ ನಿಲಯದಲ್ಲಿ ಸಂತರ್ಪಣೆ ಎಂದರೆ ಕೇಳಬೇಕಾದದ್ದೇನು ? ಶಿವಭಕ್ತರೆಲ್ಲರೂ ವಿದಧ ವ್ಯಷ್ಟಾನ್ನ ಭೋಜನವನ್ನು ಎತ್ತೇಷ್ಟವಾಗಿ ಕಂಠನಾಳದವರೆವಿಗೂ ತಿಂದು ತೇಗಿ ಹೊರ ಬರುತ್ತಿದ್ದರು. ಆಗ ಇದನ್ನು ನೋಡಿದ ಕೆಲ ಅನ್ಯಜಾತಿಯವರು ಇದನ್ನು ನೋಡಿ ಸಹಿಸಲಾಗದೇ ಕರಿಬದನೇಕಾಯಿಗಳನ್ನೇ ಲಿಂಗವೆಂದು ಭಾವಿಸಿ ಅವುಗಳನ್ನು ಕಾವಿವಸ್ತ್ರದಲ್ಲಿ ಕಟ್ಟಿ ತಮ್ಮ ಕೊರಳಿಗೆ ಕಟ್ಟಿಕೊಂಡು ಅಣ್ಣನವರ ನಿಲಯವನ್ನು ಪ್ರವೇಶಮಾಡಿದರು. ದಿವ್ಯದೃಷ್ಟಿಯುಳ್ಳ ಅಣ್ಣನವರು ದೂರದಿಂದಲೇ ಎಲ್ಲವನ್ನೂ ಈಕ್ಷಿಸುತ್ತಿದ್ದರು. ಎಲ್ಲರೂ ಮಜ್ಜನಕ್ಕೆರೆಯುವ ವೇಳೆಯಲ್ಲಿ ಕಳ್ಳ ಲಿಂಗ ಕಟ್ಟಿ ಕೊಂಡವರು ಒಬ್ಬರ ಮುಖ ಮತ್ತೊಬ್ಬರು ನೋಡಹತ್ತಿದರು ಆಗ ಪವಾಡಪುರುಷ ನಮ್ಮಣ್ಣನವರು ಇವರ ಇಂಗಿತವನ್ನರಿತು, ಅವರ ಭಾವನೆಯಂತೆ ಬದನೆಕಾಯಿಗಳನ್ನೇ ಲಿಂಗಗಳಾಗಿ ಮಾರ್ಪಡಿಸಿ ಏಕೆ ? ಮಜ್ಜನಕೆರೆಯಲು ಸಂಶಯವೇ? ಏನಾದರೂ ಕಡಿಮೆಯಾಗಿದಿಯೇ ಎಂದು ಕೇಳಲು ಅವರ ಮನದಲ್ಲಿ ದೇವರನ್ನು ಧ್ಯಾನಿಸಿ ನೀನೇ' ಕಾಪಾಡಬೇಕೆಂದು ಹರಸಿ ಕಣ್ಮುಚ್ಚಿ ಕಟ್ಟಿದ ಲಿಂಗವಸ್ತ್ರ ಬಿಚ್ಚಿ ಕೈಯ್ಯಲ್ಲಿ ಹಿಡಿದಾಗ ಅದರ ಆಕಾರದ ಚಿನ್ಹೆ ಬೇರಾದಾಗ ಅವರು ಕಣ್ತೆರೆದು ಆಶ್ಚರ್ಯಚಕಿತರಾದರು. ಆಗಲೇ ಅವರು ಅಣ್ಣನವರ ದಿವ್ಯಪಾದಾರವಿಂದಗಳಿಗೆ ಬಿದ್ದು ತಮ್ಮ ತಪ್ಪನ್ನು ಕ್ಷಮಿಸಬೇಕೆಂದು ಕೇಳಿದಾಗ ಅಣ್ಣನವರು ತಮ್ಮ ಕರಕಮಲದಿಂದ ಅವರನ್ನು ಆಶೀರ್ವದಿಸಿ ಶಿವಭಕ್ತರನ್ನಾಗಿ ಮಾಡಿ, ಹರಸಿ, ಅಲ್ಲಿಂದ ಬೀಳ್ಕೊಟ್ಟನು. ಇದರ ಮೇಲೆ ಕೆಲವರು ಅಣ್ಣನವರನ್ನು ಮತವಾದಿ ಎಂದೂ ಭಾವಿಸುವ ಭಾವುಕರು ಇರುವರು. ಇವರು ತಾವೇ ತಪ್ಪು ಅಭಿಪ್ರಾಯ ಕಲ್ಪಿಸಿಕೊಳ್ಳುವರು. ಅಣ್ಣನವರು ಮತವಾದಿ ಅಲ್ಲ ಎಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಏಕೆಂದರೆ:--

"ಚನ್ನಯ್ಯನ ಮಗನ ದಾಸಿಯ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲ ಸಂಗಮದೇವ ಸಾಕ್ಷಿಯಾಗಿ"

ಈ ಪ್ರಕಾರ ಅಣ್ಣನವರ ದೃಢ ಅಭಿಪ್ರಾಯವಿದ್ದಾಗ ಜಗದಣ್ಣನೆಂದು ಕರೆಯಲು ಸಂಶಯವೇ ? ತುಂಬು ಹೃದಯದಿಂದ ಕರೆಯಲೇ ಬೇಕು. ವೀರ

ಶೈವ ಶರಣರ ಎಲ್ಲರ ವಚನಗಳು ಎಲ್ಲಾ ಮತ, ಪಂಥ ವರ್ತನೆಗಳಿಗೂ ಸುಸ್ಪಷ್ಟವಾಗಿ ಅನ್ವಯಿಸುತ್ತವೆ.

ಲಿಂಗವಿಲ್ಲದ ಅಂಗ । ಅಂಗಿ ಇಲ್ಲದ ಪುರುಷ ।
ಗಂಗೆ ಇಲ್ಲದ ಶಿವಪೂಜೆ ಇವು ಮೂರು
ಭಂಗ ಕಾಣಯ್ಯ ಸರ್ವಜ್ಞ.

ಮೇಲಿನ ಸರ್ವಜ್ಞನ ತ್ರಿಪದಿಯು ವೀರಶೈವರೆಲ್ಲರಿಗೂ, ಜ್ಞಾನಜ್ಯೋತಿಯಾಗಿ ಪರಿಣಮಿಸಿ ಮುನ್ನಡೆಯಲು ಮಾರ್ಗದರ್ಶಿಯಾಗಿದೆ. ಹೀಗಿದ್ದಮೇಲೆ ಲಿಂಗವನ್ನಗಲಿ ಬತ್ತಲೆ ದೇಹ (Naked lody) ದಿಂದರಬಹುದೇ? ಇಷ್ಟಲಿಂಗವೆಂದರೆ ಕೇವಲ ಕಪ್ಪು ಬಣ್ಣದಿಂದ ಲಿಂಗಕ್ಕೆ ಕಾಂತಿಕೊಟ್ಟು ಕಾಯಿಯಲ್ಲಿಟ್ಟು ದೇಹದ ಮೇಲೋ 'ಯಾ' ವಸ್ತ್ರದಲ್ಲಿ ಕಟ್ಟಿ ರಟ್ಟೆಯ ಮೇಲೋ ಕಟ್ಟುವರು. ಇದು ಹಿಂದಿನ ಹಳಬರ ಸಂಪ್ರದಾಯ. ಇದೇಕೆ ನಮಗೆ ಪೀಡೆ? ದೇಹಕ್ಕೆ ಅತ್ತ-ಇತ್ತ ಗಡಾ-ಬಡಾ ಬಡಿಯುತ್ತಿರುತ್ತದೆ. ಎಂದು ಬಿಸಾಡುವವರು ಕೆಲವರು, ಇವರಿಗಿಂತ ಸ್ವಲ್ಪ ಸುಧಾರಿಸಿದವರೆಂದರೆ ವಿಭೂತಿ ಪೆಟ್ಟಿಗೆ (ಕರಡಿಗೆ) ಗಳಲ್ಲಿ ತಮ್ಮ ಇಷ್ಟಲಿಂಗಗಳನ್ನಿಟ್ಟು ತಮಗೆ ಕಲೆತಾಗ ಅಂದರೆ ಅಮಾವಾಸ್ಯೆ ಹುಣ್ಣಿವೆ ಕಲೆತಾಗ ಪುಜ್ಜನಕ್ಕೆರೆಯುವವರು ಕೆಲವರು ಬರೇ ತರುಣರೊಂದೇ ಅಲ್ಲ. ಈಗಿನ ಸಂಪ್ರದಾಯಸ್ಥರೆಲ್ಲಾ ವೀರಶೈವರು ೧೨ ಆಣೆ ಭಾಗ ಹೀಗೆಯೇ ಇರುತ್ತದೆಂದು ಹೇಳಬಹುದು.

ಇಷ್ಟಲಿಂಗವೆಂದರೇನು ? ಇದರರ್ಥವನ್ನರಿಯದೇ ಈಗಿನ ಜನರು ತಮ್ಮ ಸಂಕುಚಿತ ದೃಷ್ಟಿಯಿಂದ ಬಹಳೇ ಮುಂದಿ ವಿಶಾಲದೃಷ್ಟಿಯ ಕಡೆಗೆ ಮನಕೊಡದೇ ತಮ್ಮದೇ ಆದ ಅಭಿಪ್ರಾಯ ಮುಂದಿಡುವರು. ಲಿಂಗವನ್ನು ಪದಕ್ಕೆ ಅನೇಕ ಅರ್ಥಗಳನ್ನೊಳಗೊಂಡಿದೆ. ಮುಖ್ಯವಾಗಿ ಇಷ್ಟಲಿಂಗವೆಂದರೆ ಆತ್ಮಲಿಂಗ ಹೃದಯ 'ಯಾ' ಪ್ರಾಣಲಿಂಗ ಇತ್ಯಾದಿ ಎಂದು ಹೇಳುವುದುಂಟು. ಲಿಂಗಕ್ಕೆ ಕಾಂತಿ ಹಿಡಿಸಿದಾಗ ಅದರ ಆಕಾರ ಹೃದಯದ ಆಕಾರ (It nesewbles like lumon hert) ವಿರುತ್ತದೆ. ನಮ್ಮ ಹಿರಿಯರು ಬಹಳೇ ವಿಧದಿಂದ ಶೋಧಿಸಿ, ಪರಿಕಿಸಿ ವಿಜ್ಞಾನಕ್ಕೂ ಇಷ್ಟಲಿಂಗಕ್ಕೂ ನಿಕಟ ಉಂಟೆಂದು ಹೇಳುತ್ತಾರೆ. ರಾಸಾಯನಿಕ ವ್ಯಾಪಾರ(Ghemical Action) ಕಾಂತಾಕರ್ಷಣೆ (Magnetisn) ಪ್ರಕಾಶ (ಪ್ರಸರಣ) (Action of Gight) ಎಲ್ಲವೂ ಇಷ್ಟಲಿಂಗಕ್ಕೆ ಇದೆ. ಹೃದಯದ ಹೊರ ಆವರಣಕ್ಕೆ

ತೆಳುವಾದ ಹೊರೆ (Pericardium mewbrane) ಇರುವಂತೆ ಸಶಾಸ್ತ್ರೀಯುವಾಗಿ ಕಾಂತಿ ಧರಿಸಿದ ನಮ್ಮ ಇಷ್ಟಲಿಂಗವು ಹೊರ ಆವರಣದಿಂದ ಥಳ-ಥಳ ಹೊಳೆಯುತ್ತಿದೆ. ಹೃದಯುಬಡಿತ (lheoɪt bea ings) "ಲಬ್-ಡಬ್" ಎಂದು ವಿಜ್ಞಾನಿಗಳು ಹೇಳಿದರೆ ನಮ್ಮವರು ಅದನ್ನೇ ಓಂಕಾರವಾದ (ಸ್ವರೂಪ) ವೆಂದು ಹೇಳುತ್ತಾರೆ. ಇಷ್ಟೆಲ್ಲಾ ಇದ್ದ ವೇಲೆ ಲಿಂಗವು ಯಾರಿಗೆ ತಾನೇ ಬೇಕಾದೀತು? ತಮ್ಮ ಪ್ರಾಣಕ್ಕೂ ಇಷ್ಟಲಿಂಗಕ್ಕೂ ಅತ್ಯಂತ ನಿಕಟಸಂಬಂಧ ವಿದ್ದಾಗ ಅದರಿಂದ ಬೇರೆಯಾಗುವುದಾದರೂ ಹೇಗೆ? ತಮ್ಮ ಪ್ರಾಣವನ್ನು ಎಷ್ಟು ಜಾಗರೂಕತೆಯಿಂದ ನೋಡಿಕೊಳ್ಳುವರೋ ಅಷ್ಟೇ ಆಸಕ್ತಿಯನ್ನು ತಾವು ಧರಿಸಿದ ಇಷ್ಟಲಿಂಗದ ಮೇಲೆ ಇಡಬೇಕು. ಏಕೆಂದರೆ ಪ್ರಾಣವೇ ಲಿಂಗ, ಲಿಂಗವೇ ಪ್ರಾಣ. ತಾವು ಹೃದಯುದಲ್ಲಿರುವ ಜೀವವನ್ನು ಕಂಡಿರುವಿರೋ? 'ಯಾ' ಮುಂದೆ ಕಾಣುವರೋ? ಇಲ್ಲ ಎಂದಿಗೂ ಸಾಧ್ಯವಿಲ್ಲ. ಜೀವನು ಅಗೋಚರನು. ಅದಕ್ಕೋಸ್ಕರವೇ ನಮ್ಮಣ್ಣನವರು ಹೀಗೆ ಹೇಳಿದ್ದಾರೆ—

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ  
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ  
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ!  
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ.  
ಕೂಡಲ ಸಂಗಮದೇವಯ್ಯಾ,  
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ!!

ಎಂದು ಬಸವಣ್ಣನವರು ಮನಸಾರೆ ಹಾಡಿದ್ದಾರೆ

ಕಟ್ಟಿದ ಲಿಂಗನ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ  
ಹೊಟ್ಟುಡಿ ಮಾಡಿ ಬೀಳುವ ತೊಂಡು ಮೂಳನ ಕಂಡರೆ  
ಕೈಯ್ಯಲ್ಲಿ ಮಚ್ಚೆ ತಕ್ಕೊಂಡು ಲಟಲಟನೆ ಹೊಡೆ ಎಂದ  
ನಮ್ಮ ಅಂಬಿಗರ ಚೌಡಯ್ಯ.

ಆದ್ದರಿಂದ ದೇಹದಲ್ಲಿ ಧರಿಸಿರುವ ಇಷ್ಟಲಿಂಗವನ್ನು ಬಿಟ್ಟು ಅನ್ಯ ದೈವ ವನ್ನು ಪೂಜಿಸಬಾರದೆಂಬರ್ಥ. ವೀರಶೈವರು ಗುರುಮುಖದಿಂದ ಪಂಚಾಕ್ಷರಿ ಮಂತ್ರ (ಓಂ ನಮಃಶಿವಾಯ) ದಿಂದೊಡಗೂಡಿ, ಜೀವಕಳೆಯಿಂದ ಕೂಡಿ ಕೊಂಡ ಇಷ್ಟಲಿಂಗವನ್ನೇ ಹೃತ್ಕಮಲದಾಕಾರದಲ್ಲಿರುವ ಅಂಗೈಯಲ್ಲಿ (ಹಸ್ತದಲ್ಲಿ) ಧರಿಸಿ ಪೂಜೆಮಾಡುವರು. ಇದನ್ನು ಬಿಟ್ಟು ನಮ್ಮ ವೀರಶೈವರಿಗೆ ಸ್ಥಾವರ ಲಿಂಗಗಳು ಶೈವವೆಂದು ಕಂಡರೂ ಪೂಜೆ ಮತ್ತು ವಂದನಾರ್ಹವಲ್ಲ, ಇದರ

ಮೇಲೆ ಸ್ಥಾವರಲಿಂಗ ಪೂಜೆ ಆಸಕ್ತರನ್ನು ವೀರಶೈವರೇ ಅಲ್ಲವೆಂದು ಹೃದಯೋದ್ಗಾರದಿಂದ ಸ್ಪಷ್ಟವಾಗಿ ಹೇಳಬಹುದು. ಈ ಅಭಿಪ್ರಾಯವು ಶಿವ ಶರಣ ಶರಣೆಯರ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತವೆ. ಆದ್ದರಿಂದಲೇ ನಮ್ಮ ಅಂಬಿಗೆರ ಚೌಡಯ್ಯನು ಖಡಾ ಖಂಡಿತವಾಗಿ ತನ್ನ ಅಭಿಪ್ರಾಯ ವ್ಯಕ್ತಗೊಳಿಸಿದ್ದಾನೆ.

ಈಗಿನ ಕಾಲೇಜಿನ ವೀರಶೈವ ವಿದ್ಯಾರ್ಥಿಗಳಿಗೆ ಅವರವರ ಪ್ರಸಾದ ನಿಲಯುಗಳಲ್ಲಿ ವೀರಶೈವರ ಮತತತ್ವ ವಿಚಾರದ ಬಗ್ಗೆ ಮತ್ತು "ಶಿವಾನುಭವ"ದ ವಿಷಯದ ಕುರಿತು ತಿಳಿಸುತ್ತಾ ಬಂದಿದ್ದಾರೆ. ಇಷ್ಟೇಕೆ ಅದ್ಯಾಪಿ ಧಾರವಾಡದಲ್ಲಿ ಶ್ರೀ ಮ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಪ್ರಸಾದ ನಿಯದಲ್ಲಿ ಕಾಲೇಜಿನ ವಿದ್ಯಾರ್ಥಿಗಳಿಗೆ ಶಿವಾನುಭವವನ್ನು ತಿಳಿಸುತ್ತಾ ಅದಕ್ಕೆ ಪರೀಕ್ಷೆಗಳೂ ಸಹಾ ತಮ್ಮ ನೇತೃತ್ವದಲ್ಲಿಯೇ ನಡೆಸುತ್ತಿದ್ದಾರೆ. ಆದರಿಂದಲೆ ಬಳ್ಳಾರಿಯಲ್ಲಿಯೂ ಸಹಾ ಶಿವಾನುಭವ ಪರೀಕ್ಷೆಗಳು (ಶ್ರೀ. ಪಂ. ವೈ ನಾಗೇಶಶಾಸ್ತ್ರಿಗಳವರು ಪಾಠ ಪ್ರವಚನಗಳ ಮೂಲಕ) ನಡೆಯುತ್ತಿವೆ.

ಈಗಿನ ಯುವಕರೇ ಎದ್ದೇಳಿ ! ಎಚ್ಚರಗೊಳ್ಳಿ !! Illustrated weekby ಮತ್ತು Pllmbare ಇವುಗಳನ್ನು ಎಷ್ಟು ಆಸಕ್ತಿಯಿಂದ ಕೊಂಡೋ 'ಯಾ' ಗ್ರಂಥ ಭಂಡಾರದಿಂದಲೇ ಓದುತ್ತಿರೋ ಅಷ್ಟೇ ಆಸಕ್ತಿ ವಹಿಸಿ ವೀರಶೈವ ಗ್ರಂಥಗಳನ್ನು "ಆಧ್ಯಾತ್ಮ" ಶ್ರೇಷ್ಠತಮ ಮಾಸಪತ್ರಿಕೆಗಳನ್ನು ಓದಿರೆಂದು ಸವಿನಯ ಪೂರ್ವಕವಾಗಿ ಸೂಚಿಸುತ್ತೇನೆ.

# ಬ್ರಹ್ಮಾದ್ವೈತ-ಶಿವಾದ್ವೈತಗಳ ತಾರತಮ್ಯ.

ಸಂಗ್ರಾಹಕರು:— ಜಿ. ಕೆ. ಎಸ್.

---

ಬಹ್ಮಾದ್ವೈತ ಮತ್ತು ಶಿವಾದ್ವೈತಗಳಲ್ಲಿ ತಾರತಮ್ಯವನ್ನು ತೋರಿಸುವ ದಕ್ಕಿಂತ ಮುಂಚೆ ಬ್ರಹ್ಮಾದ್ವೈತ ಶಿವಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ಇವುಗಳ ಸ್ವರೂಪವನ್ನು ತಿಳಿದ ಮಟ್ಟಿಗೆ ಸಂಕ್ಷಿಪ್ತವಾಗಿ ವಿವೇಚನೆ ಮಾಡುವೆನು.

ಅದ್ವೈತ ಅಂದರೆ ಎರಡಿಲ್ಲದ್ದು. ಅಂದರೆ ಬ್ರಹ್ಮವು ಒಂದೇ ಇರುವದು, ಕಣ್ಣಿಗೆ ಕಾಣಿಸತಕ್ಕ ಈ ನಾಮರೂಪಾತ್ಮಕ ಅಂದರೆ ಘಟಪಟಾದಿ ನಾಮಗಳನ್ನೂ ವರ್ತುಲಾದಿ ರೂಪವನ್ನೂ ಧರಿಸಿತೋರುವ ಜಗತ್ತು ಸುಳ್ಳಾದದ್ದು, ಅಂದರೆ ಅಜ್ಞಾನವಿರುವತನಕ ಜಗತ್ತಿನ ಸ್ಥಿತಿಯು, ಜ್ಞಾನೋದಯವಾದ ಬಳಿಕ ಜಗತ್ತು ನಾಶವಾಗಿ ಬ್ರಹ್ಮಮಾತ್ರವೇ ಕಾಣುವುದು. ಇದೇ ಸತ್ಯವು. ಅಂದರೆ ಭೂತ ಭವಿಷ್ಯದ್ವರ್ತಮಾನಕಾಲಗಳಲ್ಲಿಯೂ ಸಹ ತೋರುವುದು. ಇಂತಹ ಬ್ರಹ್ಮದಲ್ಲಿ ಜಗತ್ತು ಅಧ್ಯಾಸವಾಗಿ ತೋರಲಿಕ್ಕೆ ಹತ್ತಿರುವುದು. ಅಂದರೆ ಜೀವನದ ಭ್ರಮೆಯಿಂದ ತೋರಲಿಕ್ಕೆ ಹತ್ತಿರುವುದು ಹೀಗೆ ಅದ್ವೈತವಾದಿಗಳು ಹೇಳುವರು ಮತ್ತು ಇದರ ನಾಶಕ್ಕಾಗಿ ಯಥಾರ್ಥಜ್ಞಾನವೊಂದೇ ಸಾಕು. ಹಗ್ಗದಲ್ಲಿ ತೋರಿದ ಹಾವಿನ ಜ್ಞಾನವು ಹೋಗಬೇಕಾದರೆ ಆ ಹಗ್ಗದ ಯಥಾರ್ಥ ಜ್ಞಾನವಾದರೆ ಸಾಕು. ಇಲ್ಲಿ ಯಾವ ಕ್ರಿಯೆಯೂ ಬೇಕಾಗಿಲ್ಲ. ಇದರಂತೆ ಬ್ರಹ್ಮದಲ್ಲಿ ತೋರಿದ ಜಗದ್ರೂಪ ಬಂಧಕಾರಿಜ್ಞಾನಕ್ಕೆ ಬ್ರಹ್ಮದ ನಿಜವಾದ ಜ್ಞಾನವಾದರೆಸಾಕು. ಇತ್ಯಾದಿ ಅದ್ವೈತ ಮತದ ಸ್ವರೂಪವಿರುವುದು.

ಇನ್ನು ಶಿವಾದ್ವೈತ (ಶಕ್ತಿವಿಶಿಷ್ಟಾದ್ವೈತಿ)ಗಳು ಹೇಳುವುದೇನಂದರೆ— ಮೊದಲು ಇಲ್ಲದೇ ಇದ್ದ ವಸ್ತುವೇ ಇಲ್ಲ. ಮೊದಲು ಬ್ರಹ್ಮದಲ್ಲಿ ಜಗತ್ತು ಅವ್ಯಕ್ತವಾಗಿದ್ದು ಅದೇ ಈಗ ವ್ಯಕ್ತವಾಗಿದೆ. 'ಸದೇವಸೌಮ್ಯೇದಮಗ್ರ ಆಸೀತ್'' ಈ ಶ್ರುತಿಯು ತಾತ್ಪರ್ಯವಾದರೂ ಇದೇ ಇರುವುದು. ಇದು ನಾಶವಾಗತಕ್ಕದ್ದಾದರೂ ಅದ್ವೈತಿಗಳು ಹೇಳುವಂತೆ ಅತ್ಯಂತ ನಾಶವಲ್ಲ. ಶಿವನಲ್ಲಿ ಲೀನವಾಗುವುದು. ಉದಾಹರಣೆಗಾಗಿ—ಹೇಗೆ ಆಮೆಯ ಕಾಲುಗಳು ತೋರುವವೊ ಮತ್ತೆ ಅಡಗುವವೋ ಆದರಂತೆ ಜಗತ್ತು ತೋರುವುದೂ ಅಡಗುವುದೂ ಕೂಡ ಶಿವನಲ್ಲಿಯ ಶಕ್ತಿಯ ವ್ಯಾಪಾರವು

ಕೇವಲ ಅದ್ವೈತಿಗಳಂತೆ ಶಕ್ತಿರಹಿತನು ಶಿವನೆಂದು ಹೇಳಿದರೆ ಅವನು ಒಂದು ಶವ (ಹೆಣ) ದಂತೆ ಆಗಬೇಕಾದೀತು. ಅಂಥವನಿಂದ ಜಗದ್ರಚನಾ ಕಾರ್ಯವು ಘಟಿಸುವ ಪರಿಯೆಂತು? ಅದು ಕಾರಣ ಶಿವನೂ ಶಕ್ತಿಯೂ ತತ್ಪರಿಣಾಮವಾದ ಜಗತ್ತೂ ಸಹ ಸತ್ಯವಾದವುಗಳು. ಹೀಗೆ ವೀರಶೈವರು ಹೇಳುವರು. ಇವರ ಮೋಕ್ಷಕ್ಕೆ ಸುಜ್ಞಾನ ಸಕ್ರಿಯೆಗಳೊಳಗೊಂಡ ನಿರ್ಮಲ ಅಚಲಭಕ್ತಿಯೆ ಸಾಧನವಾಗಿದೆ. ಹೇಗೆ ಅನ್ನಮಾಡಿಕೊಂಡು ಉಂಡು ಸಂತೋಷಪಡಬೇಕಾದರೆ ಅನ್ನ ಮಾಡುವ ಜ್ಞಾನವೂ, ಮಾಡತಕ್ಕ ಕರ್ಮಪ್ರೇಮಾಸಕ್ತಿಯೂ ಅವಶ್ಯವಾಗಿರಬೇಕೋ ಹಾಗೆ ಮೋಕ್ಷ (ನಿತ್ಯಾನಂದ)ವನ್ನು ಹೊಂದಲಿಕ್ಕೆ ಸುಜ್ಞಾನ ಸತ್ಕ್ರಿಯೆ (ಭಕ್ತಿ)ಗಳೆರಡೂ ಅವಶ್ಯವಾಗಿ ಬೇಕೆಬೇಕು. ಇತ್ಯಾದಿಯಾಗಿ ಶಿವಾದ್ವೈತಮತದ ಸ್ವರೂಪವಿರುವದು.

## ಅನುಭವ ವೈಖರಿ

ಜಗನ್ಮಯು ಶಿವನು ಶಿವಮಯುಜಗತ್ತೆಂದಿಂತು ಸಾರುತಿಹೆ—

"ಈಶಾವಾಸ್ಯಮಿದಂ ಸರ್ವಂ...."
"ಪೂರ್ಣಮದಃ ಪೂರ್ಣಮಿದಂ...."
"ಲಿಂಗಮಧ್ಯೇಜಗತ್ಸರ್ವಂತ್ರೈಲೋಕ್ಯಂಸಚರಾಚರಂ"

'ಪಂಚ ಭೂತಾತ್ಮಕೋದೇಹಃ ಶಿವಸ್ತತ್ರೈವತಿಷ್ಠತಿ । ಶಿವಾದ್ಯವನಿಪರ್ಯಂತಂ ಲೋಕೋಽಯಂಶಂಕರಾತ್ಮಕಃ

"ಪ್ರವೃತ್ತಿಂಚ ನಿವೃತ್ತಿಂಚ ಜನಾನ ವಿದುರಾಸುರಾಃ । ನಶೌಚಂನಾಪಿ ಚಾಚಾರೋನಸತ್ಯಂತೇಷು ವಿದ್ಯತೇ ॥ ಅಸತ್ಯಮ ಪ್ರತಿಷ್ಠಂತೇ ಜಗದಾಹುರ ನೀಶ್ವರಂ । ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥ ಏತಾಂದೃಷ್ಟಿಮ ವಷ್ಟಭ್ಯನಷ್ಟಾತ್ಮಾನೋ ಽ ಲ್ಪಬುದ್ಧಯಃ ।

ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯಜಗತೋಽಹಿತಾಃ ॥
ಕಾಮಮಾಶ್ರಿತ್ಯದುಷ್ಪೂರಂದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ॥

"ಮುನ್ನತಾನುಯಾರು ಎಂದು ತನ್ನ ನಿಜವರಿದ ಬಳಿಕ ।
ಚನ್ನ ಷಡಕ್ಷರಿಯ ಲಿಂಗತಾನೆಯಾಗಿಹೆ ॥

ಇನ್ನು ಸರ್ವಜಗದನದೆಲ್ಲ ತನ್ನ ನಿಲವೆಯಾಗಿತಾಗಿ ।
ಅನ್ನವಿಲ್ಲುದಾಗಿ ಮನವು ತಾನೆ ನಿಲುವುದು ॥

ಇವು ಮೊದಲಾದ ಶೃತಿ-ಗ್ರಂಥೋಕ್ತಿಮಹದುಕ್ತಿಯಿಂದ ಶಿವಾದ್ವೈತದಿರವಿನ ಯಥಾರ್ಥಾನುಭವವನ್ನು ಪರಕಿಸಿ ನೋಡಿ ಸ್ವಾನುಭವಕ್ಕೆ ತಂದುಕೊಳ್ಳದೆ ಆಸುರಿ ಸಂಪದ್ವಿಮೂಢಾತ್ಮರು ಹಲಕೆಲಬರು ಬರಿದೆ ಜಗನ್ಮಿಥ್ಯಾವಿವಾದವೆಸಗುತಿಹರಯ್ಯ! ಅಂತಹರ ಕಡುಕಷ್ಟನರಕ ಕುಂಡದಲ್ಲಿಕ್ಕದೆ ಮಾಣ್ಬನೆ ನಮ್ಮಾರಾಧ್ಯ ಚಿಲ್ಲಿಂಗಮೂರ್ತಿ ।

————

# ತತ್ವಜ್ಞಾನಿಗಳು ರಾಜ್ಯದ ಅಧಿಕಾರಿಗಳಾಗಿ ಬರುವತನಕ ರಾಜ್ಯದಲ್ಲಿ ಸುಖ-ಶಾಂತಿಗಳು ನೆಲೆಸಲಾರವು.

(ಕನ್ನಡಿಗ ಪತ್ರಿಕೆಯಿಂದ)

★

ಮಾನವ ಚರಿತ್ರೆಯಲ್ಲಿ ರಾಜ್ಯಪದವಿಗೆ ತಕ್ಕವರನ್ನು ಆರಿಸುವ ಕ್ರಮವು ಇದುವರೆಗೆ ಸಮರ್ಪಕವಾಗಿಲ್ಲ. ರಾಜವಂಶದವರ ಆಳಿಕೆಯು ಕೆಲಕಾಲ ಚೆನ್ನಾಗಿ ನಡೆದುಬಂದರೂ ಕಡೆಗೆ ಹಾನಿಕರವಾಯಿತು. ರಾಜರು ಭೋಗಸುಖಾಪೇಕ್ಷಿಗಳಾಗಿ ರಾಜ್ಯಭಾರವನ್ನು ಧರ್ಮದಿಂದಲೂ ದಕ್ಷತೆಯಿಂದಲೂ ಆಳುವದಕ್ಕೆ ತಕ್ಕಅರ್ಹತೆಯಿಲ್ಲದವರಾದರು. ಇಂಥ ರಾಜರಿಂದ ಬೇಸತ್ತ ಜನರು ಪ್ರಜಾರಾಜವನ್ನೇರ್ಪಡಿಸಲು ಪ್ರಯತ್ನಿಸಿದರು. ಈ ಕ್ರಮದಲ್ಲಿಯೂ ಸಾಮಾನ್ಯ ಜನರ ವಿಶ್ವಾಸವನ್ನು ಮೋಸದಿಂದ ಸಂಪಾದಿಸಿ ಅಧಿಕಾರ ಸ್ಥಾನವನ್ನು ಹಿಡಿದುಕೊಂಡವರು ಸಮರ್ಪಕವಾದ ರಾಜ್ಯಭಾರ ಪದ್ಧತಿಯನ್ನು ರೂಢಿಸಲಿಲ್ಲ. ಮಾನವ ಚರಿತ್ರೆಯನ್ನು ಈ ದೃಷ್ಟಿಯಿಂದ ಪರೀಕ್ಷಿಸಿದರೆ ಸಂತತವಾಗಿ ಕಾಣುವದು. ಪ್ರಭುತ್ವ, ವಿಪ್ಲವ ಇವುಗಳ ಏರುಪೇರುಗಳು ಪ್ರಭುತ್ವ ಹೋಗಿ ವಿಪ್ಲವವಾಗುತ್ತದೆ. ವಿಪ್ಲವವು ಶಾಂತವಾಗಿ ಪುನಃ ಪ್ರಭುತ್ವವೇರ್ಪಡುತ್ತದೆ. ಈ ಚಕ್ರ ನ್ಯಾಯದಲ್ಲಿ ಪ್ರಜಾಸಾಮಾನ್ಯರಿಗೆ ಒಂದೇ ಸ್ಥಾನ. ಕಡುರೆಯು

ಬೇರೆ ಬೇರೆ ಸವಾರರನ್ನು ಹೊರುವದೇ ಅದರ ಕರ್ತವ್ಯ. ಸವಾರರ ಬದಲಾವಣಿಯೇ ವಿಪ್ಲವ, ಕ್ರಾಂತಿ, ಸುಧಾರಣೆ ಎಂದು ಹೇಳಿಕೊಳ್ಳುತ್ತದೆ. ಎಂದು ಕೆಲವು ಸಮಾಜದ ಶಾಸ್ತ್ರಜ್ಞರ ನಿರಾಶಾಪೂರ್ವಕವಾದ ಅಭಿಪ್ರಾಯ. ಈ ಬಗ್ಗೆ ಗ್ರೀಸ ದೇಶದ ತತ್ವಜ್ಞಾನಿಯಾಗಿದ್ದ ಪ್ಲೆಟೋ ಎಂಬವನು ಹೇಳುವದನ್ನು ಇಲ್ಲಿ ಸ್ಮರಿಸಿ ಕೊಳ್ಳ ಬಹುದು. "ತತ್ವಜ್ಞಾನಿಗಳೇ ರಾಜ್ಯಸೂತ್ರವನ್ನು ಹಿಡಿದು ಕೊಳ್ಳಬೇಕು ಅಂದರೆ ರಾಜ್ಯದಲ್ಲಿ ಶಾಂತಿ-ಸುಖಗಳು ಸಮೃದ್ಧವಾಗುವವು.

ಗ್ರೀಕ ಭಾಷೆಯಲ್ಲಿ " ಫಿಲಾಸಫಿ ' ಎಂಬ ಪದಕ್ಕೆ ತತ್ವಪ್ರೇಮ ಎಂದು ಅರ್ಥ. ಅಂಥ ತತ್ವಪ್ರೇಮಿಗಳೇ ತತ್ವಜ್ಞಾನಿಗಳೆಂದು ಹೇಳಿಸಿಕೊಳ್ಳುವರು.

ಪ್ರಜಾರಾಜ್ಯದ ಜನರನ್ನು ಒಂದು ದೊಡ್ಡ ಹಡಗದ ಮಾಲಕನಿಗೂ ರಾಜಕೀಯ ಪಕ್ಷಗಳ ನಾಯಕರನ್ನು ನಾವಿಕರಿಗೂ ಹೋಲಿಸಬಹುದೆಂದು ಪ್ಲೇಟೋ ಹೇಳಿದ್ದಾನೆ. ಯಜಮಾನನ ಕಣ್ಣು ಮಂದ, ಕಿವಿ ಸ್ವಲ್ಪ ಕಿವುಡು, ವಯಸ್ಸೂ ಆಗಿ ಹಡಗಿನ ಪಾರಪತ್ಯವನ್ನು ನಡೆಸಲು ಅವನಿಗೆ ಅಸಾಧ್ಯವಾಗಿದೆ. ಇಂಥ ಪ್ರಸಂಗದಲ್ಲಿ ಹಡಗಿನ ನಾವಿಕರು ನಾನು ತಾನೆಂದು ಮುಂದೆ ಬಂದು ತಮಗೆಹಡಗಿನ ನಾಯಕತ್ವವನ್ನು ಒಪ್ಪಿಸುವಂತೆ ಯಜಮಾನನನ್ನು ಕೇಳಿಕೊಳ್ಳುತ್ತಾರೆ. ಆದರೆ ಅವರಲ್ಲಿ ಯಾರಿಗೂ ಹಡಗು ನಡೆಸುವದರಲ್ಲಿ ಅನುಭವ, ಶಾಸ್ತ್ರನಿಷ್ಠವಾದ ಜ್ಞಾನ, ಕಾರ್ಯದಕ್ಷತೆ ಮುಂತಾದ ಯಾವ ಅರ್ಹತೆಯೂ ಇರುವದಿಲ್ಲ. ಯಜಮಾನನನ್ನು ಕೆಲವರು ಪ್ರಾರ್ಥಿಸುವರು; ಕೆಲವರು ವಿನಯದಿಂದ ವಶಮಾಡಿಕೊಳ್ಳಲು ಪ್ರಯತ್ನಪಡುವರು. ಹೀಗೆಯೇ ಪ್ರಜಾಪಕ್ಷದ ನಾಯಕರು ರಾಜ್ಯಭಾರಕ್ಕೆ ಬೇಕಾದರರ್ಹತೆಯನ್ನು ಪಡೆಯದೆ ಅಜ್ಞರಾದ ಜನಸಾಮಾನ್ಯರನ್ನು ಹೊಗಳಿ ಅವರನ್ನು ಉದ್ರೇಕಗೊಳಿಸಿ ಅವುಗಳನ್ನು ಪೂರೈಸುವೆವೆಂದು ಸುಳ್ಳ ಭರವಸೆಕೊಟ್ಟು ಪ್ರಭುತ್ವಸ್ಥಾನಕ್ಕೆ ಬರುವ ಸಂಪ್ರದಾಯವೇ ಹೆಚ್ಚಾಗಿ ಹೋಗಿದೆ. ಈ ಸಂಪ್ರದಾಯವು ತೀವ್ರಹೋಗಬೇಕು. ಅದಕ್ಕಾಗಿ ಪ್ರಭುತ್ವಸ್ಥಾನಕ್ಕೆ ಬರಬೇಕೆಂಬುವವರು ತಮ್ಮ ಮನ ಬುದ್ಧಿ ಭಾವಗಳನ್ನು ಸಂಸ್ಕರಿಸಿ ಕೊಳ್ಳಬೇಕು. ಶೀಲ ವಿವೇಕ ಧೈರ್ಯ ಧರ್ಮಬುದ್ಧಿ ಸೇವಾಭಾವನೆಗಳನ್ನು ಅರಳಿಸಿ ಕೊಳ್ಳಬೇಕು. ಜ್ಞಾನಿಗಳಾದವರು ಅಜ್ಞಾನಿ ಸಂಸಾರಿಗಳ ಸಂಬಂಧವನ್ನು ಹರಿದುಕೊಂಡು ಏಕಾಂತ ವಾಸಿಗಳಾಗಲು ಹವಣಿಸದೆ ಅಂಥವರ ಮಧ್ಯದಲ್ಲಿದ್ದು ಅವರನ್ನು ಸುಜ್ಞರನ್ನಾಗಿಮಾಡಿ ಅವರ ಜೀವನ ಯಾತ್ರೆಯು ಸುಗಮವೂ ಸುಖಪೂರ್ಣವೂ ಆಗುವಂತೆ ಪ್ರಯತ್ನಿಸುವದು ಒಳ್ಳೇದು. ಇಲ್ಲವಾದರೆ ಮಾನವ

ಜನಾಂಗವು ಉನ್ನತಿಯನ್ನು ಹೊಂದಲು ಅವಕಾಶವೇ ಇಲ್ಲದಾಗುವದು. ಅಂತೆಯೇ ಬಸವಾದಿ ಪ್ರಮಥರು ರಾಜ್ಯಸೂತ್ರವನ್ನು ಹಿಡಿದುಕೊಂಡು ಜನಸೇವೆಯನ್ನು ಮಾಡಿರು. ವಿದ್ಯಾರಣ್ಯರುಕೂಡ ಪಂಚದಶಿಯಲ್ಲಿ "ಜ್ಞಾನಿನಾಚರಿತುಂ ಶಕ್ಯಂ ಸಮ್ಯಕ್ ರಾಜ್ಯಾದಿ ಲೌಕಿಕಂ" ಎಂದು ಶರಣರ ಅಭಿಪ್ರಾಯವನ್ನೇ ಎತ್ತಿ ಹಿಡಿದಿದ್ದಾರೆ.

ಇಂದಿನಕಾಲದಲ್ಲಿ ತತ್ವಜ್ಞಾನಿಗಳೇ ರಾಜ್ಯಸೂತ್ರವನ್ನು ಹಿಡಿದು ಕೊಳ್ಳಲು ಮುಂದೆ ಬಂದರೆ ನಮ್ಮ ರಾಜ್ಯವು ಸುಖಮಯವಾಗುವದು ಆ ತತ್ವಜ್ಞಾನಿಗಳ ಹಿರಿತನದಲ್ಲಿ ಧರ್ಮತತ್ವ ಸಂಸ್ಕೃತಿಗಳಿಗೆ ಬೆಲೆ ಬರುವದಿಲ್ಲ ಅಷ್ಟೇಕೆ ಅಂಥವರು ಅವರ ದೃಷ್ಟಿಯಲ್ಲಿ ಕೆಲಸಕ್ಕೆ ಬಾರದವರಾಗಿ ಕಂಡುಬರುವರು. ಇದು ತೀರ ಅವನತಿಯ ಸೂಚಕ. ಇದು ಮಾಯವಾಗಿ ಹೋಗಲು ಶರಣರು ಅನುಗ್ರಹಿಸಲಿ.

# ಗುರು-ಶಿಷ್ಯರ ಸಂವಾದ.

[ ಲೇಖಕರುः- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]

ಅರಿಯದ ಗ್ರಾಮದ ದಾರಿಯನ್ನು ಅರಿತವರಲ್ಲಿ ಕೇಳಿದರೆ ಮಾತ್ರ ಆ ಗ್ರಾಮವನ್ನು ತಲುಪುವಂತೆ, ಜೀವನು ತನ್ನ ಜೀವನದ ದಾರಿ ಹಾಗೂ ಮುಟ್ಟಬೇಕಾದ ಅಂತಸ್ಥನ್ನು ಗುರುಗಳೆಂಬ ಮಾರ್ಗದರ್ಶಕರಿಂದಲೇ ಅರಿತು ಸುಖಿಯಾಗಿ ಸಾಗುವನು. ಈಗಲೇ ಜೀವನಿಗೆ ಮುಕ್ತಿ. ಮರೆವು ಮಾನವನ ಸ್ವಾಭಾವಿಕ ಗುಣ. ಈ ಮರೆವೆಯೇ ಅಜ್ಞಾನ. ಮಾನವನು ತನ್ನ ಅಂತರಂಗದ ವಸ್ತುವಾದ ಪರಮಾತ್ಮನನ್ನು ಈ ಅಜ್ಞಾನದ ಅಂಧತೆಯಿಂದ ಕಾಣದಾಗಿದ್ದಾನೆ.

ವಿಶ್ವದಲ್ಲಿ ಅನೇಕ ಗುಣಗಳು ಉತ್ಪತ್ತಿಯಾದುದು ವಿಚಾರಮಂಥನ ದಿಂದ. ಈ ವಿಚಾರಮಂಥನದಿಂದ ಉತ್ಪತ್ತಿಯಾದ ವಿಷಯಗಳ ಸಮೂಹವೇ ಗ್ರಂಥರೂಪವಾಗಿವೆ. ಆಯಾ ವಿಚಾರಸ್ಥರ ಗ್ರಂಥಗಳಿಗೆ ಹಾಗೂ ಗ್ರಂಥ ಕರ್ತರಿಗೆ ಅವರವರ ಧರ್ಮದವರು ಆಶ್ರಯವಿತ್ತಕಾರಣ ಲೋಪದೋಷಗ ಳಿಗೂ ಆಶ್ರಯವಿತ್ತಂತಾಗಿ ಕಲಹಗಳಿಗೆ ಕಳೆತಂದಿರುವರೇ ವಿನಹ ಮಾನವ ಮಾನವರಲ್ಲಿ ಭೇದವನ್ನೆಣಿಸುವ ಮಾನವನು ಜಗನ್ನಿಯಾಮಕನಲ್ಲಿ ಭೇದವ ಣಿಸುವದೇನು ಮಹತ್ವದಲ್ಲ. ಇಂಥವರು ಕೇವಲ ಭ್ರಾಂತಿಯಲ್ಲಿಯೇ ಇಹ ಲೋಕವನ್ನು ತ್ಯಜಿಸುವ ಜ್ಞಾನಿಗಳೆಂದರೆ ತಪ್ಪೇನಲ್ಲ. ಹೀಗೆ ಆಯಾ ಗುಣಗಳು ಆಯಾ ಪಂಗಡಗಳಿಗೆ ಹೊಂದಿಕೊಂಡಿವೆ. ಈ ಅನೇಕ ತತ್ವಗಳ ಮತಿತಾರ್ಥವರಿ ಯದ ಶಿಷ್ಯನೋರ್ವನು ಗುರುವಿಗೆ ಕೇಳಲಿರುವ ಪ್ರಶ್ನೋತ್ತರದ ವಿಷಯವಿದು.

ಶಿಷ್ಯः— ಗುರುವೇ, ವಿಶ್ವದಲ್ಲಿ ಜನಿಸಿದ ನಾವು ಮೊದಲು ಅರಿಯಬ ಹುದಾದ ವಿಷಯವಾವುದು?

ಗುರುः— ಸಚ್ಛಿಷ್ಯನೇ ಕೇಳು, ಜೀವಿಯು ಮೊದಲು ತನ್ನನ್ನು ತಾನ ರಿತುಕೊಳ್ಳುವದೇ ಮುಖ್ಯವಾದ ವಿಷಯವು.

ಶಿಷ್ಯः— ನಾನು ನನ್ನನ್ನು ಅರಿತೇ ಇರುವ ಕಾಲಕ್ಕೆ ಇದಾವ ಮಹತ್ವದ ವಿಷಯ?

ಗುರು;— ನೀನು ನಿನ್ನನ್ನರಿಯದೆ ನುಡಿದ ನುಡಿಯೇ ಇದು ! ನೀನು ದೇಹವನ್ನೇ ನಾನು ಎಂದು ಬಗೆದು ಸುಲಭ ವಿಷಯವೆಂದು ಬಗೆದಿರುವಿ. ಇದುವೇ ಅಜ್ಞಾನದ ಅಂಧತೆ. ಈ ಅಂಧತೆಯಿಂದ ಮುಕ್ತನಾಗಲು ಗುರುವೇ ಮೂಲ ಕಾರಣ. ರೋಗಿಯು ತನ್ನ ಸರ್ವ ಕಾಹಿಲೆಯ ಗುಣವನ್ನು ವಿವ

ರವಾಗಿ ತಿಳಿಸಿದಲ್ಲಿ ಸುಲಭವಾಗಿ ವೈದ್ಯನು ಚಿಕಿತ್ಸೆಮಾಡುವನು. ಏನನ್ನು ತಿಳಿಸದಿರೆ ಸಾವಧಾನವಾಗಿ ಕಾಹಿಲೆ ಗುಣವಾಗುವದರಲ್ಲಿ ಹೇಗೆ ಬರುವದೋ ಹಾಗೆ ನೀನು ಕೇಳುವ ಪ್ರಶ್ನೆಗಳು ಹೃದಯದಲ್ಲುಳಿಯದೇ ಕೇಳಿಕೊಂಡೆ ಯಾದರೆ ತೀವ್ರವೇ ಆ ಪರಮಾತ್ಮನ ಸಾನ್ನಿಧ್ಯಕ್ಕೆ ಪಾತ್ರನಾಗುವಿ.

ಶಿಷ್ಯ:— ಹಾಗಾದರೆ ಪರಮಾತ್ಮನ ಸ್ವರೂಪವೇನು? ಆತನು ಎಲ್ಲಿರುವ? ಆತನನ್ನು ಕೂಡುವ ಬಗೆ ಹೇಗೆ?

ಗುರು:— ಪರಮಾತ್ಮನು ನನ್ನಲ್ಲಿ, ನಿನ್ನಲ್ಲಿ, ವಿಶ್ವದ ಅಣುರೇಣುಗಳ ಲ್ಲಿಯೂ ಕೂಡ ಇದ್ದಾನೆ. "ನಾನು" ಎನ್ನುವ ನೀನು ಪರಮಾತ್ಮನಿಂದ ಬೇರೆ ಅಲ್ಲ ನಾನು ಎಂಬುವದು ಅನಂತ ಪುಷ್ಪಗಳಿಗೆ ಸರವಾಗಿಸಲು ಇರುವ ದಾರದಂತಿರುವವನೇ ಪರಮಾತ್ಮ. ಅನಂತ ಪುಷ್ಪಗಳ ಮಧ್ಯೆ ಕಾಣೆ ಯಾದ ಆತನು ಇಲ್ಲೆಂದು ನಂಬುವದು ಅಜ್ಞಾನದ ಅಂಧತೆಯಿಂದ.

ಶಿಷ್ಯ:— ಪರಮಾತ್ಮನು ನಮ್ಮೆಲ್ಲರ ಆಧಾರಸ್ಥಂಭನೆಂಬುವದೇನೋ ಉದಾಹರಣ ರೂಪವಾಗಿ ತಿಳಿಸಿದಿರಿ. ಹಾಗಾದರೆ ಈ ಪುಷ್ಪಗಳಂತಿದ್ದ ನಮ್ಮಲ್ಲಿ ಅನೇಕ ತರದ ವಾಸನೆಯುಕ್ತ ಜೀವಿಗಳಿದ್ದು ಅವರೆಲ್ಲರಿಗೂ ಆತನು ಆಧಾರನೇ?

ಗುರು:— ವರಶಿಷ್ಯನೇ ಕೇಳು, ತಂದೆಯು ಮಕ್ಕಳಲ್ಲಿ ಭೇದವನ್ನೆಣಿ ಸನು. ಭೇದವನ್ನೆಣಿಸಿದರೂ ಕೂಡ ಆತನ ರಕ್ಷಣೆಗಾಗಿ ಹಾಗೂ ಆತನನ್ನು ಉಚ್ಚಮಟ್ಟಕ್ಕೆ ಮುಟ್ಟುವಂತೆ ಮಾಡಲು ಹೇಗೆ ಉದ್ಯುಕ್ತನಾಗುವನೋ ಹಾಗೆ ನಿನ್ನಲ್ಲಿರುವ ಹೀನತ್ವವನ್ನು ನಾಶಪಡಿಸಲು ಸತ್ಯಸ್ವರೂಪದಿಂದ ವಿಶ್ವದಲ್ಲಿ ಸದಾ ಸಂಚರಿಸುತ್ತಿದ್ದಾನೆ.

ಶಿಷ್ಯ:— ಗುರುವೇ, ಮಾನವನ ಗುಣಧರ್ಮವೇನು? ಆತನು ಈ ತೆರ ನಾಗಿ ಅನೇಕ ಗುಣಗಳನ್ನು ಹಿಡಿಯಲು ಕಾರಣವೇನು?

ಗುರು:— ಮಾನವನ ಮೂಲ ಗುಣ ಸಚ್ಚಿದಾನಂದ ಪರಿಪೂರ್ಣ ಗುಣ. ಆ ಗುಣದ ಮರೆವೆಯೇ ಅಜ್ಞಾನ. ಈ ಅಜ್ಞಾನದ ಅಂಧತೆಯಲ್ಲಿ ತಾಕಿಕೊಂಡಿ ರುವದೇ ದುರ್ಗುಣ. ಕಾರಣ ತನ್ನ ಸ್ವರೂಪವನ್ನು ಅರಿಯುವದೇ ಮಾನವನ ಮೂಲ ಧರ್ಮವೆಂಬುದನ್ನು ಈ ಮೊದಲು ತಿಳಿಸಲಿಲ್ಲವೇ?

ಶಿಷ್ಯ:— ಆ ಹೇಯ ಗುಣಗಳನ್ನು ಕಳೆದುಕೊಳ್ಳುವ ಬಗೆ ಹೇಗೆ?

ಗುರು:— ಅಂಧನಿಗೆ ಆಧಾರಕರು ಹೇಗೆ ಮುಖ್ಯರೋ ಹಾಗೆ ಈ ಅಜ್ಞಾನಕ್ಕೆ ಗುರುಗಳು ಮುಖ್ಯರು. ಇಲ್ಲದಿರೆ ಎಡವುತ್ತಲೇ ಸಾಗುವನು.

ಶಿಷ್ಯಃ—ಗುರುಗಳೆ, ಮಾನವನು ಸಚ್ಚಿದಾನಂದ ನಿತ್ಯಪರಿಪೂರ್ಣನೆಂಬು ದನ್ನಷ್ಟು ಸವಿಸ್ತಾರವಾಗಿ ತಿಳಿಸುವಿರಾ?

ಗುರುಃ – ವಿಶ್ವದ ಅನೇಕ ಮಾನವರು ದೇಹವನ್ನೇ ತಾವೆಂದು ಬಗೆದ ಕಾರಣ ದೇಹಕ್ಕಾಗುವ ಕಷ್ಟವನ್ನು ಕಡೆಗಾಣಿಸಲೋಸುಗವೇ ಗುರುಗಳಲ್ಲಿ ಮೊರೆಹೋಗುತ್ತಾರೆ ಎಲ್ಲರೂ ಆತ್ಮನನ್ನು ಅರಿತವರಾಗಿದ್ದಲ್ಲಿ ವಿಶ್ವದಲ್ಲಿ ಕೋಲಾಹಲಗಳೇ ಏಳುತ್ತಿದ್ದಿಲ್ಲ. ಆತ್ಮಸ್ವರೂಪವು ಸಚ್ಚಿದಾನಂದ ಸ್ವರೂಪ. ಆ ಸ್ವರೂಪರೇ ನಾವಾಗಿದ್ದೇವೆ. ಕಾರಣ ಆತ್ಮಾನಂದವನ್ನು ಬಯಸುವದೇ ದೇಹಿಗಳ ಮುಖ್ಯ ಗುಣ. ದೇಹದ ಸೌಖ್ಯತೆಗೆ ವಿಶ್ವದ ಸಂಪತ್ತು ಸಾಲದು. ಆತ್ಮ ಸೌಖ್ಯತೆಗೆ ನೆಲೆಯಿಲ್ಲದ ಸಂಪತ್ತಿಯಿದೆ; ಸವೆಸಿದರು ಸವೆಯದಷ್ಟು ಆನಂದವಿದೆ.

ಶಿಷ್ಯ;— ಗುರುವೇ? ಈ ಆತ್ಮವು ದೇಹದ ಜೊತೆಯಾಗಿಯೇ ದುಃಖಪ ಡುತ್ತಿರುವ ಕಾರಣವೇನು? ದೇಹವನ್ನು ಬಿಟ್ಟಿರಲು ಸಾಧ್ಯವಿಲ್ಲವೇ?

ಗುರುಃ— ಆತ್ಮಕ್ಕೆ ಆಗರವಾಗಿರುವದೇ ಈ ದೇಹ. ಮಾನವನು ಮನೆ ಕಟ್ಟಿಕೊಂಡು ಆ ಮನೆಯನ್ನು ನನ್ನ ಮನೆ ಎಂದು ನಂಬಿ ಕೊನೆಗೆ ತೆರ ಳುವಾಗ್ಗೆ ಇಲ್ಲಿಯೇ ಬಿಟ್ಟು ಹೋಗುವಂತೆ ಆತ್ಮವೂ ಕೂಡ ಈ ಶರೀರವನ್ನು ಇಲ್ಲಿಯೇ ಬಿಟ್ಟು ತೆರಳುತ್ತದೆ.

ಶಿಷ್ಯಃ— ಗುರುವೆ, ಆತ್ಮ ಹಾಗೂ ದೇಹದಲ್ಲಿ ಭಿನ್ನತೆಯನ್ನು ಕಾಣು ವದಾದರೂ ಹೇಗೆ ?

ಗುರುಃ— ನೀನೊಂದು ವಿಷಯದಲ್ಲಿ ತಲ್ಲೀನನಾದ ಸಮಯದಲ್ಲಿ ನಿನ್ನ ಎದುರಿನಲ್ಲಿ ನಿನ್ನ ಜೊತೆಗಾರರಾರಾದರೂ ಬಂದು ನಿಂತರೂ ನಿನಗಾಕಲ್ಪನೆ ಬಾರದೆ, ಅವರಾಗಿಯೇ ನಿನ್ನನ್ನು ಎಚ್ಚರಿಸಿದಾಗ "ನನ್ನ ಮನಸ್ಸು ಎಲ್ಲಿಯೋ ಹೋಗಿತ್ತು" ಎಂದು ನೀನು ಹೇಳುವಿಯಷ್ಟೆ. ನಿನ್ನ ಮನಸ್ಸು ಹೋದಲ್ಲಿ ನಾನು ಎಂದು ತಿಳಿದುಕೊಂಡ ದೇಹವೂ ಹೋಗಬೇಕಿತ್ತು ? ದೇಹವು ಇದ್ದಲ್ಲಿಯೇ ಇದ್ದು ಆತ್ಮವು ಹೇಗೆ ಸಂಚಾರಿಯಾಯಿತೋ ಹಾಗೆ ಒಂದು ದಿನ ಸಂಚಾರಿಯಾಗಿ ವ್ಯಾಮೋಹವನ್ನು ತ್ಯಜಿಸಿದುದಾದರೆ ಪರಮಾತ್ಮನನ್ನೂ, ವ್ಯಾಮೋಹಭರಿತನಾದಲ್ಲಿ ದೇಹವನ್ನೂ ಹೊಂದುವಿ.

ಶಿಷ್ಯಃ— ಆತ್ಮ ಹಾಗೂ ಜೀವ ಇವುಗಳ ರಹಸ್ಯವೇನು?

ಗುರು;— ಆತ್ಮವು ಪರಮಾತ್ಮ ಸ್ವರೂಪ. ಪರಮಾತ್ಮನಲ್ಲಿ ಬೆರೆಯು ಬಹುದಾದ ವಸ್ತು. ಜೀವವು ಆಶೆ (ವಾಸನಾ) ರೂಪ. ಆತ್ಮಕ್ಕೆ ಮರಣ

ವಿಲ್ಲ; ಆಶೆಗೆ ಕೊನೆಯಿಲ್ಲ. ಕೊನೆಯಿಲ್ಲದ ಕಾರಣ ಆಶಾವಾದಿಯಾಗಿ ಸದಾ ಹುಟ್ಟು ಸಾವು ನೋವುಗಳಿಗೆ ಗುರಿಯಾಗಿರುವದೇ ಜೀವ. ಈ ಜೀವಕ್ಕೆ ಮಾತ್ರ ಮರಣವಿದೆ.

ಶಿಷ್ಯಃ— ಗುರುವೇ ಮಾನವನು ಪರಬ್ರಹ್ಮಸ್ವರೂಪನೆಂಬ ಮನವರಿಕೆಯುಂಟು ಮಾಡಿದಿರಿ. ಆದರೆ ಆತನನ್ನು ಸಾಕ್ಷಾತ್ಕರಿಸಿಕೊಳ್ಳುವ ಬಗೆ ಹೇಗೆ?

ಗುರುಃ ಸಾಕ್ಷಾತ್ಕರಿಸಿ ಕೊಳ್ಳುವದು ಅಷ್ಟೇನೂ ಸುಲಭ ಸಾಧ್ಯವಲ್ಲ. ನಿನ್ನಲ್ಲಿ ವಿಶ್ವದ ಅನೇಕ ಭಾವಚಿತ್ರಗಳು ಮೂಡಿವೆ. ಆ ಭಾವಚಿತ್ರಗಳೆಲ್ಲ ಭಾವನಾಮಯವೆಂದು ಅರಿಯುವದೇ ಮೂಲಸಾಧನ. "ಅಹಂ" ಭಾವವನ್ನು ತ್ಯಜಿಸುವದು ಸಹಜವಾದುದಲ್ಲ. ಮದ, ಮಾತ್ಸರ್ಯ, ಮೋಹ, ಲೋಭ, ಇಂತೀ ಮುಂತಾದ ಗುಣಗಳಿಂದ ಕೂಡಿದ ನಿನ್ನ ಮನವು ಆತ್ಮನನ್ನು ಮೂಲೆಗೊತ್ತಿವೆ. ಅಲ್ಪಗುಣದಶಕ್ತಿ ಬಹು ಹೆಚ್ಚಿನಶಕ್ತಿ. ಆ ಶಕ್ತಿಯಿಂದ ಅಸತ್ಯವನ್ನೇ ಸತ್ಯವೆಂದರಿತು ಕೊಂಡಿರುವಿ. ದುಃಖನಿವಾರಣೆಗಾಗಿ ಪರಮಾತ್ಮನೆಂಬ ನಾಮದಿಂದ ವಿಗ್ರಹಾರ್ಚನೆಯನ್ನು ಅನೇಕರು ಮಾಡುವದು ಮೂಢತನ. ತನ್ನ ತಾನರಿಯದವನೇ ಈ ತರದ ಭಕ್ತಿಗೆ ಕಾರಣನು. ಚಿಕ್ಕ ಮಕ್ಕಳಿಗೆ ಭಕ್ತಿಯನ್ನುಂಟು ಮಾಡಲು ಮೂಲ ಮೆಟ್ಟಲು ವಿಗ್ರಹಾರ್ಚನೆಯೆಂದು ನೀನರಿ. ನಿನ್ನದಲ್ಲದ ವಸ್ತುಗಳನ್ನು ನೀನು ತೆಗೆದು ಕೊಳ್ಳದಿರು. ಈ ಮಾಯೆ ಮೋಹ ಲೋಭಗಳು ನಿನ್ನವಲ್ಲ. ನೀನು ಸಚ್ಚಿದಾನಂದನು. ಆದರೆ ಇವು ಮಾತ್ರ ದುಃಖದಾಗರಗಳು. ಇವುಗಳನ್ನು ನಿನ್ನ ಮನದಿಂದ ಹೊರದೂಡಿದಾಗಲೇ ನಿನಗೆ ಶಾಂತಿ ಲಭಿಸುವದು. ಆ ಶಾಂತಿರೂಪನೇ ಪರಮಾತ್ಮ. ದೇಹದ ಮೇಲಿನ ಪರಿವೆಯಿಲ್ಲದ ನೀನೂ ಆತನಲ್ಲಿ ಬೆರೆಯುವಿ. ಆಗ್ಗೆ ಮಾತ್ರ ನಿನ್ನ ಚರಿತೆ ಘನವಾಗುವದು. ಅಮೃತದಲ್ಲಿ ಅಮೃತ ಬೆರೆತಲ್ಲಿ ಹಂಸಪಕ್ಷಿಯು ಅಮೃತವನ್ನು ಸೇವಿಸುವದು. ಅಮೃತದಲ್ಲಿ ನೀರು ಬೆರೆತಿದ್ದಲ್ಲಿ ನೀರನ್ನಾಗಲಿ ಅಮೃತವನ್ನಾಗಲಿ ಒಂದನ್ನು ಸೇವಿಸುವಂತೆ ಆಗುವ ಕಾರಣ ನೀನು ಮತಭೇದ ಮುಂತಾದವುಗಳಿಂದಲೂ ದೂರಿರು. ಆಗ್ಗೆ ಮಾತ್ರ ನಿನ್ನ ಶ್ರೇಯಸ್ಸಿಗೆ ಕೊನೆಯಿಲ್ಲ.

ಶಿಷ್ಯಃ— ಗುರುವೆ ಪ್ರಪಂಚಿಯು ದುಃಖಿಯುಂಬ ಮನವರಿಕೆಯಾಗಿದೆ. ಪ್ರಪಂಚಿಯು ಸುಖಿಯೋ ದುಃಖಿಯೋ?

ಗುರುಃ- ಆತ್ಮ ಸ್ವರೂಪವೇ ಸಚ್ಚಿದಾನಂದ ಸ್ವರೂಪವೆಂದು ಈ ಮೊದಲೇ ನಿನಗೆ ತಿಳುಹಿದ್ದೇನೆ. ನೀನು ಆತ್ಮನೂ ಅಹುದು. ಶರೀರಿಯೂ ಅಹುದು.

ಎಂದಮೇಲೆ ನೀನು ಎರಡನ್ನೂ ಅನುಭವಿಸುವವನಾಗಿರುವಿ. ಆದುದರಿಂದ ನೀನು ಸುಖದುಃಖಗಳ ಮಧ್ಯೆ ಉಯ್ಯಾಲೆಯಾಡುವಿ. ನನ್ನವರು, ನನ್ನದು ಎಂಬ ಭ್ರಮೆಯು ಶರೀರ ಸ್ವರೂಪದಿಂದ ಆತ್ಮನಿಗೆ ಅಂಟಿಸಿಕೊಂಡಿರುವಿ. ಆತ್ಮನಿಗೆ ಸರ್ವವೂ ಶೂನ್ಯ. ಅಳಿಯುವದನ್ನು ಕಂಡು ಮರುಗದಿರುವವನೇ ಆತ್ಮನು. ಜೀವನವೆಂಬ ಸಂತೆಯಲ್ಲಿ ಕೂಡಿದ ಜನರೇ ಮಾತಾ, ಪಿತೃ, ಬಂಧು ಬಳಗ, ಮುಂತಾದವರೆಂದು ಬಗೆಯುವದೇ ಸದಸದ್ವಿವೇಕತನ. ನಮ್ಮ ಪೂರ್ವಜನ್ಮದಲ್ಲಿದ್ದ ತಾಯಿತಂದೆಗಳನ್ನು ಮರೆತು ಈ ಜನ್ಮದ ಬೇರೆ ತಾಯಿ ತಂದೆಗಳನ್ನು ನಾವು ತಂದೆತಾಯಿಗಳೆಂದು ಬಗೆದುದು ನಮ್ಮ ರಕ್ಷಣೆಯ ಆಧಾರಕರಾದ ಮೂಲಕ ತನಗೆ ಹಿತೈಷಿಯಾದವರಿಗಾಗಿ ಹಿತವನ್ನು ಬಗೆಯುವದು, ಸತ್ಯಕ್ಕೆ ಸತ್ಯವನ್ನು, ಅಸತ್ಯಕ್ಕೆ ಅಸತ್ಯವನ್ನು ಉಂಟುಮಾಡಿಕೊಳ್ಳುವದು ದೇಹಿಯ ಒಂದು ಗುಣವೆಂಬುದನ್ನು ನೀನರಿ.

ಶಿಷ್ಯ:— ಗುರುವೇ, ಹಿಂದೊಂದು ಜನ್ಮವಿದ್ದಿತೆಂಬುದನ್ನು ಆಧಾರವಿಲ್ಲದೆಂತು ನಂಬುವದು ?

ಗುರು:— ಹಿಂದಣ ಜನ್ಮವನ್ನೇಕೆ, ಇಹಜನ್ಮದ ನಿನ್ನ ಬಾಲ್ಯವನ್ನೂ ನೀನರಿಯೆ. ಈ ಕಾರಣದಿಂದ ನೀನು ಹಿಂದಣ ಜನ್ಮವನ್ನೆಂತು ಬಗೆಯುವೆ! ಹಿಂದಣ ಜನ್ಮವು ನಿನ್ನಂತರಂಗದಿಂದ ಮರೆಯಾಗಿದೆ. ಮರೆವೆಯೇ ಮಾನವನ ಸ್ವಾಭಾವಿಕ ಗುಣ. ಈ ಗುಣದಿಂದಲೇ ನೀನು ನಿನ್ನವರೆಂಬುವ ಭ್ರಾಂತಿಯು ಗುಣವಿದ್ದರೂ ಅವರು ತೆರಳಿದರೂ ನೀನು ಇರುವಿ. ಮರೆವೆ ಇಲ್ಲದಿರೆ ನೀನು ಸದಾ ದುಃಖಿಯಾಗಿರುತ್ತಿದ್ದಿ ಎಂಬುದನ್ನರಿ.

ಶಿಷ್ಯ:— ಹಾಗಾದರೆ ನನ್ನವರೆಂಬವರಾರು? ನಿಜರಾರು?

ಗುರು:— ನಿನ್ನವರಾರಿಲ್ಲ. ನಿನ್ನವನು ನೀನು. ನಿನ್ನಾತ್ಮ ನಿನ್ನಾತ್ಮ ಸ್ವರೂಪನಾದ ಪರಮಾತ್ಮನೆಂಬುದನ್ನರಿ.

ಶಿಷ್ಯ:— ಗುರುವೇ, ಅನೇಕ ಗ್ರಂಥಗಳು ಅನೇಕ ಮತಸ್ಥರು ಅನೇಕ ರೀತಿಯಾಗಿ ಪರಮಾತ್ಮನ ಸ್ವರೂಪವನ್ನು ತಿಳಿಸುವಾಗ್ಗೆ ಮಾನವನು ಯಾವುದನ್ನು ನಂಬಬೇಕು?

ಗುರು:— ವರಶಿಷ್ಯನೆ, ಮಾನವನು ಅಜ್ಞಾನದ ಅಂಧತೆಯಲ್ಲಿ ಸಿಲುಕಿ ಅಲೆಯುವಾಗ ಒಂದು ಚಿಕ್ಕ ಕಿಡಿಯನ್ನೇ ಪ್ರಕಾಶವೆಂದರಿತು ಸಾಗುವನು.

ಪ್ರಕಾಶದಲ್ಲಿ ಪ್ರಶಾಂತತೆ ಹಾಗೂ ದಹಿಕೆಗಳೆರಡುಂಟು. ಮಾನವನು ತನ ಗಿಷ್ಟವಾದ ವಿಷಯವನ್ನು ಜ್ಞಾನವೆಂಬ ತೈಲದಿಂದ ಉಜ್ವಲಗೊಳಿಸಿಕೊಳ್ಳಲೂ ಬಹುದು. ಹೇಯವಾದುದನ್ನು ದಹಿಸಿಕೊಳ್ಳಲೂಬಹುದು.

ಶಿಷ್ಯ:— ಗುರುವೆ, ಮಾನವನಲ್ಲಿ ಯಾವ ಕಾಲಕ್ಕೆ ಈ ಸುಜ್ಞಾನವು ಪ್ರಾಪ್ತಿಯಾಗುತ್ತದೆ ?

ಗುರು:— ಯಾವ ಕಾಲಕ್ಕೆ ಧರ್ಮ ಧರ್ಮಗಳಲ್ಲಿ ಕೋಲಾಹಲಗಳು ಉಂಟಾಗುವವೋ, ಯಾವ ಜೀವನದಲ್ಲಿ ಸುಖಸಂತೋಷಗಳಿಲ್ಲದಾಗುವವೊ, ದೇಶವು ದುರ್ಭಿಕ್ಷೆಗೀಡಾಗುವದೋ ಆ ಕಾಲಕ್ಕೆ ಸಹಜವಾಗಿ ಅಜ್ಞಾನಿಯಲ್ಲಿಯೂ ಕೂಡ ಸುಜ್ಞಾನವು ಪ್ರಾಪ್ತವಾಗುವದು. ಅದುಕಾರಣ ಶ್ರೀಕೃಷ್ಣನು ಗೀತೆ ಯಲ್ಲಿ " ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ " ಎಂದು ನುಡಿ ದಿದ್ದಾನೆ. " ನಾನು ಜನ್ಮಿಸುವೆ " ಎಂದಲ್ಲಿ ಸ್ವಶರೀರರೂಪ ಸಮೇತನಾಗಿ ಜನ್ಮಿಸುವೆನೆಂದು ಹೇಳಲು ಆತನೇನು ಅಜ್ಞಾನಿಯಲ್ಲ. ಕೇವಲ ಆತ್ಮಸ್ವ ರೂಪದಿಂದ ಆತನು "ನಾನು" ಎಂದು ನುಡಿದದ್ದು. ಆತ್ಮಸ್ವರೂಪವು ಒಂದೇ ಒಂದಾಗಿದ್ದು, ದೇಹಸ್ವರೂಪವು ಭಿನ್ನ ಭಿನ್ನವಾಗಿವೆ. ಒಂದೇ ಒಂದು ಮಣ್ಣು ಮುದ್ದೆಯಲ್ಲಿ ಅನೇಕ ತರದ ಪಾತ್ರೆಗಳನ್ನೂ, ಅನೇಕ ತರದ ಗೊಂಬೆಗಳನ್ನೂ, ರಚಿಸಿ, ಮರಳಿ ಎಲ್ಲವನ್ನೂ ನಾಶಗೊಳಿಸಿದಲ್ಲಿ ಮೂಲರೂಪವಾದ ಆ ಮಣ್ಣು ಮುದ್ದೆಯ ರೂಪವನ್ನೇ ಆ ಅನೇಕ ರೂಪಗಳು ನಾಶವಾಗಿ ಹೇಗೆ ತೋರುವದೋ ಹಾಗೆ ಪಶುಪಕ್ಷಾದಿ ಮೊದಲ್ಗೊಂಡು ಸಜೀವಪ್ರಾಣಿಕೋಟಿಗಳೆಲ್ಲ ಒಂದೇ ಒಂದೆಂಬುದೇ ಪರಬ್ರಹ್ಮ. ಅನೇಕ ವೆಂಬುದೇ ಜೀವರಾಶಿ. ಇದನ್ನರಿಯದ ಹಲವು ಮತಸ್ಥರು ಇನ್ನೂ ಮೂಢ ಭಾವನೆಯಿಂದ ಶ್ರೀಕೃಷ್ಣನ ಜನ್ಮವನ್ನೂ, ಬಸವೇಶ್ವರ ಜನ್ಮವನ್ನೂ, ಬುದ್ಧನ ಜನ್ಮವನ್ನೂ ನಿರೀಕ್ಷಿಸುತ್ತಿರುವರು ಇವರ ದೃಷ್ಟಿಗೆ ಕನ್ನಡಕ ಬೇಕಾಗಿದೆ; ಜ್ಞಾನ ಜ್ಯೋತಿಬೇಕಾಗಿದೆ. ಆಮೇಲೆ ಕಾಣುವ ಶ್ರೀ ಮಹಾತ್ಮಾಗಾಂಧಿ ಮುಂತಾದ ಪ್ರತಿಷ್ಠಿತ ಜನರನ್ನು ಪರ ಮಾತ್ಮ ಸ್ವರೂಪರೆಂದು ಬಗೆಯಬಹುದು.

ಶಿಷ್ಯ:- ಜನನ ಮರಣವೆಂದರೇನು ?

ಗುರು:— ಪರಿಶುದ್ಧತೆಗಾಗಿ ಮರೆಯಾಗಿ ಮರಳಿ ಜನ್ಮಿಸುವದು.

ಶಿಷ್ಯಃ— ಗುರುವೆ, ನಾನಿಂದು ಕೃತಾರ್ಥನಾದೆ. ತಮ್ಮ ನುಡಿಗಳಿಂದ ಪಾವನನಾದೆ ! ಈ ಭವಚಕ್ರದಿಂದ ಬಿಡುಗಡೆಯ ದಾರಿ ತಿಳಿಸಿ, ಅಂಧಕಾರ ದಲ್ಲಿ ದಾರಿದೀಪವಿಡಿದ ನೀವೇ ನನ್ನ ಜೀವನದ ನಾಂದಿ ದೀಪ !

— — —

# ವರ ಶಿಷ್ಯ.

ಲೇಃ— ಸಮಾಜ ಸೇವಕ.



ಶಿಷ್ಯ ಇದರರ್ಥವಾವುದು ? ಶಿಷ್ಯನೇಕಾಗಬೇಕು ? ಶಿಷ್ಯನ ಲಕ್ಷಣಗಳಾವವು ಎಂಬ ಹಲವು ಪ್ರಶ್ನೆಗಳು ಒಡಮೂಡುವವು. ಅವುಗಳನ್ನು ತಿಳಿಯುವಾ.

ವರಶಿಷ್ಯ ಹಾಗು ಅವನ ಲಕ್ಷಣಃ—

ವರ ಶಿಷ್ಯನೆಂದರೆ ಶ್ರೇಷ್ಠನಾದ ಶಿಷ್ಯನೆಂದೆನಿಸುವನು.

ಲಕ್ಷಣ:— ಇಂಥ ವರಶಿಷ್ಯನಾಗಲೂ ಪ್ರಥಮದಲ್ಲಿ ವಿರಕ್ತಿಯುಳ್ಳಾತನಾಗಬೇಕು. ಅಂದರೆ ಸಂಸಾರ ಹೇಯವಂತದ್ದಾಗಿ ಕಂಡುಕೊಂಡು, ದೇಹ ಹಾಗು ಬ್ರಹ್ಮಾಂಡದಲ್ಲಿಯ ಯಾವವಸ್ತುವಿಗೂ ಆಸೆ ಆವಿಷ ಬಡದೆ ಯಾವಾಗಲು ಲೋಕದಿಂದ ದೂರಿರುವಾತನೇ ವಿರಾಗಿಯು ಎಂದೆನಿಸುವನು. ಮುಂದೆ ಗುರುವನ್ನು ಹಡೆಯಲೇಬೇಕು. ಯಾಕಂದರೆ ಅಬುಧ್ಯಾಂಧಕಾರವನ್ನು ತೆಗೆಯಲು ಸಹಾಯವಾಗತಕ್ಕಂಥವರು. ಹಾಗು ಮುಂದಿನ ಕ್ರಿಯಾಚರಣೆ ತಿಳುಹಲುತಕ್ಕ ನಮ್ಮಂಥವರು ಗುರುಗಳು ನಮಗೆ (ಶಿಷ್ಯನಿಗೆ) ಅಂಥ ಜ್ಞಾನವೆಲ್ಲ ನರಕರೂಪ ಸಂಸಾರಕೂಪದಲ್ಲಿ ಬಿದ್ದು ತ್ರಿಲೋಕಜ್ಞಾನುಂಟಾದ ಮೊದಲಿನ ಸ್ಥಿತಿಯು ಪ್ರಸೂತವಾಯು ಕೋಟಿಸಿಡಿಲಿನಂಥ ಪೆಟ್ಟನ್ನು ಕೊಡುವದು ಅದರಿಂದ ಪ್ರಥಮಸೃಜ್ಞಾವೃಜ್ಞವಾಗಿ ಅಜ್ಞಾನಾಂಧಕಾರವು ಮುಸಕಲ್ಪಡುವದು. ಆದ್ದರಿಂದ ಇಂಥದನ್ನು ಮುಂದೆಂದು ಆಗಬಾರದೆಂಬ ಭಯದಿಂದ ವಿರಕ್ತನಾಗುವನು. ಅದರಿ ಮುಂದಿನ ಕ್ರಿಯೆಯು ಸಾಗಲಾರದು ವೈರಾಗ್ಯಕ್ಕೆ ತಕ್ಕಂತೆ ಆತ್ಮಜ್ಞಾನವಿದ್ದರೆ ಅದು ಬಹುಶ್ರೇಷ್ಠವಾದದ್ದು ಆದ್ದರಿಂದ ಗುರು ಮಾಡಿಕೊಳ್ಳಬೇಕು. ಬಳಿಕ ಆಸದ್ಗುರುವಿನಲ್ಲಿ ಭಕ್ತಿಯುಕ್ತನಾಗಿರಬೇಕು. ಅಂದರೆ ಸದ್ಗುರುವೆ ಶ್ರೇಷ್ಠವೆಂದು ತಿಳಿದು. ತನ್ನನ್ನೇ (ಜೀವವನ್ನೇ) ಅರ್ಪಿಸುವ ಬಲವುಳ್ಳವನಾಗಬೇಕು. ಅವರು ಹೇಳಿದಂತೆ ಆಚರಿಸಬೇಕು. ಅಂಥ ಸದ್ಗುರುಗಳು ಎಂದೂ ಒಬ್ಬರನ್ನು ದುಷ್ಕೃತಿಗೆ ಮುಟ್ಟಿಸುವ ಯತ್ನ ಮಾಡರು. ಅದ್ದರಿಂದ ಅಂಥ ಗುರುಗಳಲ್ಲಿ ಆಸಕ್ತಿಯುಳ್ಳವನಾಗಿ ಭಕ್ತಿ ಕೂಡಿದವನಾಗಿ ಇರುವದೇ ವರಶಿಷ್ಯನ ಲಕ್ಷಣ ಅದರಂತೆ

ವಿಶ್ವಾಸಿಕನಾಗಿರಬೇಕು. ಯಾರು ಎಷ್ಟು ಹೇಳಿದರು ವಿಶ್ವಾಸವಿಲ್ಲದಿದ್ದರೆ ಆ ಕಾರ್ಯ ಹಾಗು ಆ ವ್ಯಕ್ತಿ ನಂಬಿಗೆಯುಕ್ತವಾಗಿರಲಾರವು. ಒಂದು ಒಳ್ಳೆಯ ಕಾರ್ಯವಾಗ ಬೇಕಾದರೆ ವಿಶ್ವಾಸದಿಂದ ಕೂಡಿಕೊಂಡಿದ್ದರೆ ನಮಗೆ ಆ ವ್ಯಕ್ತಿಯು ಅವನ ಕೃತಿಯು ಅವನ ಭಾಷೆಯು ನಮಗೆ ಒಳ್ಳೆಯವೆನಿಸಿ ಅವನು ನಮ್ಮ ಪ್ರೀತಿಗೆ ಪಾತ್ರನಾಗುವನು ಅದರಂತೆ ಸದ್ಗುರುವಿನಲ್ಲಿ ವಿಶ್ವಾಸವಿಡದಿದ್ದರೆ ಅವನ ದೃಷ್ಟಿ ಯಿಂದ ನಾವು ಬಾಹಿರರಾಗುವೆವು. ನಮ್ಮ ಮುಂದಿನ ಆತ್ಮಸಾಕ್ಷಾತ್ಕಾರದ ಕೃತಿಯ ) ತಟಸ್ಥವಾಗುವದಿಷ್ಟೆಯಲ್ಲ ನಾವು ನರಕಕ್ಕೆ ಇಳಿಯಲಿಕ್ಕೆ ಬೇಕಾಗು ವದು. ಇದೆಲ್ಲ ಕಳೆದುಕೊಳ್ಳಲು ವಿಶ್ವಾಸಯುಕ್ತನಾಗಿ ಗುರುವಚನಬದ್ಧನಾಗಿ ನಡೆದರೆ ಸದ್ಗುರುವಿನ ಕೃಪೆಯಾಗುವದು. ಇಂಥ ಗುಣಯುಕ್ತ ಶಿಷ್ಯನೇ ವರಶಿಷ್ಯನು ಎಂದು ಅನಿಸುವನು.

ಇನ್ನು ಇಂಥ ಶಿಷ್ಯನಲ್ಲಿ ಅಹಂಕಾರವಿರಬಾರದು. ಅಹಂಕಾರವಿದ್ದರೆ ಎಲ್ಲ ಕಾರ್ಯಗಳಲ್ಲಿಯೂ ತಾನು ಮಾಡಿದೆನು ಎಂಬುದು ಉತ್ಪನ್ನವಾಗುವದು. ಗುರುಕಾ ರ್ಯವು ತನ್ನದೆಂಬಭಿಮಾನದಿಂದ ಬಳಲುವಾಗ ಯೋಗದಲ್ಲೂ ಅದೇ ಕೃತಿಗಳು ಬಂದು ಬುದ್ಧಿಯನ್ನು ಮಂಕು ಗೊಳಿಸುವದು. ಹಾಗು ಇನ್ನೊಂದು ದೃಷ್ಟಿ ಯಿಂದ ತಾನೇ ಮಾಡಿದೆನೆಂಬಭಿಮಾನದಿಂದ ಆನಂದ ಉಂಟಾಗಲು ಅದರಿಂದ ಗುರುವನ್ನು ಮತ್ಸರಭಾವದಿಂದ ಕಾಣಲುದ್ಯುಕ್ತರಾಗುವರು. ಅದರಿಂದ ಅವಿಶ್ವಾ ಸಿಕರಾಗಿ ಷಡ್ರಿಪುಯುಕ್ತರಾಗುವದರಿಂದ ವರಶಿಷ್ಯರೆನಿಸಿ ಕೊಳ್ಳಲಾರರು. ಆದ್ದ ರಿಂದ ಯಾವದೇ ಕಾರ್ಯ, ಕಾರಣ ಭಾವದಲ್ಲಿ ಅಹಂಕಾರ ತ್ಯಜಿಸಬೇಕಾಗುವದು. ಅದರಿಂದ ಗುರುವಿನ ಪ್ರೀತಿಗೆ ಪಾತ್ರನಾಗಿ ಅವರಾಶೀರ್ವಾದ ಮೂಲಕ ವರಶಿಷ್ಯ ನೆನ್ನಿಸಿಕೊಂಬನು.

ಇಷ್ಟಾದರಾಗದು ಇವೆಲ್ಲ ಗುಣಗಳಿದ್ದರೂ, ಯಾವದಾದರೊಂದು ಮನ ಮೋಹಕ ವಸ್ತುವಿನಲ್ಲಿ ಮೋಹಯುಕ್ತರಾಗಿದ್ದಾರೆ. ಮೋಹದಿಂದ ಉಳಿದೈದು ಜನಮಿತ್ರರು ಬೆನ್ನುಬಿಡರು. ಹಾಗಾದಲ್ಲಿ ಗುರುವಿನಲ್ಲಿಯು ಭಕ್ತಿತಕ್ಕಾ ಅಪ್ರೀಯು ನೆನ್ನಿಸಿಕೊಂಡು ನರಕ ರೂಪದಲ್ಲಿ ಬೀಳಬೇಕಾಗುವದು ಆದ್ದರಿಂದ ಸದ್ಗುರುವಿ ನಲ್ಲಿ ಯಾವದಕ್ಕೂ ಆಶಿಸದೆ ಪರಮ ವಿರಕ್ತಿಯಿಂದಿರುವದಕ್ಕೆ ನಿರಪೇಕ್ಷೆ ಅನ್ನು ವರು. ಅದರಿಂದ ಶಿಷ್ಯನು ಗುರುವಿನ ಪ್ರೀತಿಗೆ ಪಾತ್ರನಾಗಿ ಅವರಾಶಿರ್ವಾದ ಮೂಲಕ ವರಶಿಷ್ಯನಾಗಲು ಸಂದೇಹವೆ? ಇನ್ನು ಮತ್ತೊಂದು ಶಿಷ್ಯನಲ್ಲಿರಬೇ ಗುಣವೆಂದರೆ ಪ್ರೇರಣೆಯು. ಅರ್ಥಾತ್ ತಾಳ್ಮೆಯು ಗುಣವು ಎಂದರ್ಥವಾಗುವದು. ಕೆಲವು ವೇಳೆಯಲ್ಲಿ ತಾಳ್ಮೆಯಾಗದೆ ಹೋದರೆ ಪಾಶದಲ್ಲಿಯೂ ಸಹ ಜನಪ್ರೀ

ಯುನಾಗುವದಕ್ಕೆ ಸಂದೇಹವಿಲ್ಲ. ಏಕೆಂದರೆ ಭವದಲ್ಲಿ ಬನಣಿಸಿದ ಬಳಿಕ ಪೂರ್ಣ ನಿಂದೆಗಳಿಗೂ ಸರಿಯಾಗಿ ನೋಡಿ ನಡೆದು ತಿಳಿದರೆ ತಾಳ್ಮೆಯುಕ್ತನಾದರೆ ಅವನನ್ನು ಒಳ್ಳೆಯವನೆಂದು ಭಾವಿಸುವರು. ಅದರಂತೆ ಗುರು ಪರೀಕ್ಷಿಸಲು ಅಥವಾ ಯಾವದೊಂದೋ ಕಾರಣದಿಂದ ಸ್ತುತಿ ನಿಂದೆಗಳು ಬಂದರೆಗಿದರೂ ಅದಕ್ಕೆ ಕಿವಿಗೊಡದೆ ತಾಳ್ಮೆಯಿಂದಿರುವಾತನು ಹಾಗೂ ಕ್ರೋಧಾಗ್ನಿಯಲ್ಲಿ ಬೆರೆಯದೆ ಕ್ರೋಧ ನಾಶಕನಾಗಿರುವದು ಶ್ರೇಷ್ಟ ತರವಾದದ್ದು ಈ ಕ್ರೋಧವು ಎಲ್ಲರನ್ನು ಕದನ ಮೂಲಕ ನಾಶ ಮಾಡುವದು. ಅಂಥ ಕ್ರೋಧವನ್ನು ನ ಶಮಾಡುವಶಕ್ತಿಯುಕ್ತಶಿಷ್ಯನಾಗಬೇಕಾದರೆ ಮೇಲಿನ ಸರ್ವ ಗುಣಯುಕ್ತನಾಗಿದ್ದರೆ ಮಾತ್ರ ಸಾಧ್ಯ ಇಲ್ಲದಿದ್ದರೆ ಇಲ್ಲ. ಆದ್ದರಿಂದ ವರಶಿಷ್ಯನು ತಾಳ್ಮೆಯ ಗುಣವುಳ್ಳವನಾಗಬೇಕು. ಇಂದು ಜೀವ ಪರರಿಂದ ಗತವಾಗುತ್ತಿದ್ದರೂ ಪದಕ್ಕೆ ದುಃಖಿಸದೆ ಅಥವಾ ಅಂಥವರು ಶಾಪಿಸದೆ ತಾಳ್ಮೆಯಿಂದಿರುವಾತನನ್ನು ಗುರುವು ವರಶಿಷ್ಯನನನ್ನಾಗಿ ಪರಿವರ್ತಿಸುವನು.

ಇನ್ನು ಶಿಷ್ಯನಲ್ಲಿ ಮೇಲಿನ ಎಲ್ಲ ಗುಣವಿದ್ದರೂ ಕರಣಾನುಕೂಲತೆಯಿಲ್ಲದಿದ್ದರೆ ಅವನು ವರಶಿಷ್ಯನೆ ಅಲ್ಲ ಹೇಗೆಂದರೆ ಕರಣಗಳು ಒಟ್ಟು ನಾಲ್ಕು ಒಂದನೆಯದು ಮನಸ್ಸು ಎರಡನೆಯದು ಬುದ್ಧಿ ಮೂರನೆಯದು ಚಿತ್ತ ನಾಲ್ಕನೆಯದು ಅಹಂಕಾರ ಹೀಗೆ ನಾಲ್ಕು ಹಾಗು ಐದನೆಯದು ಇವುಗಳ ರಾಜಾಜ್ಞೆಯವನಿರುವನು. ಈ ತುರಿಯ ಕರಣಗಳು ತನ್ನ ವಶದಲ್ಲಿರಬೇಕೆ ಇದಲ್ಲದಿದ್ದರೆ, ಮನಸ್ಸು ಎತ್ತಬೇಕತ್ತ ಹರಿಯುವದು. ಅದರಿಂದ ಆಗಬಾರದ ದಾಡಬಾರದ (ಶಾಸ್ತ್ರ ಸಮ್ಮತವಲ್ಲದ) ಕಾರ್ಯಗಳು ಜರಗುವವು ಅದೇನಂದರೆ. ದಶೇಂದ್ರಿಯ ಒಡೆಯನು ಮನಸ್ಸು ಈತನ ಇಚ್ಛೆಯಂತೆ ಇಂದ್ರಿಯಗಳ ಕಾರ್ಯಸಾಗಿಸುವವು. ಮನವು ಇಚ್ಛಿಸಿದ್ದನು ಇಂದ್ರಿಯಗಳು ಪೂರೈಸುವವು. ಅದರಿಂದ ಮನಸ್ಸು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಬೇಕು. ಮನಸಿಂದರೆ ಸಾವಿರಾರು ಗಾವುದಗಳಷ್ಟು ದೂರು ಒಮ್ಮೆಲೆ ಹಾರುವ ಶಕ್ತಿಯುಳ್ಳದ್ದಾಗಿದೆ ಆದ್ದರಿಂದೆ ಯತಿಗಳು ಮನಸ್ಸನ್ನು ನಿಯಂತ್ರಣ ಮಾಡಬೇಕೆಂದಿದ್ದಾರೆ. ಒಬ್ಬನು ಯುದ್ಧದಲ್ಲಿ ಸಾವಿರಾರು ಜನರನ್ನು ಗೆಲ್ಲಬಹುದು ಆದರೆ ಮನಸ್ಸು ಗೆಲ್ಲುವದು ಕಷ್ಟವೆಂತಲೆ ಶೂರನಿಗಿಂತ ಯತಿಯು ಶ್ರೇಷ್ಠನು. ಆದ್ದರಿಂದ ಸರ್ವಕ್ಕೂ (ಹೀನಕಾರ್ಯಗಳಿಗೆ) ಇಚ್ಛಿಸುವಂತ ಮನಸ್ಸನ್ನು ತನ್ನಾಧೀನದಲ್ಲಿಟ್ಟುಕೊಳ್ಳುವದು ಶ್ರೇಷ್ಠತನವು. ಇನ್ನು ಇದರ ಮುಂದಿನದಾದ ಬುದ್ಧಿಯು ಇಂತು ವಿಚಿತ್ರವಾದದ್ದು. ಮನವು ನಿಂತಲ್ಲಿ ಇದು ನಿಲ್ಲುವದೇ ಹೊರತು ನಿಲ್ಲ

ಬಾರದು. ಬುದ್ಧಿಯಲ್ಲಿ (೧) (ಅಚಲ) ನಿತ್ಯ ಬುದ್ಧಿ (೨) ಯುಕ್ತಬುದ್ಧಿ (೩) ಸಂಯುಕ್ತಬುದ್ಧಿ (೪) ಹೀನಬುದ್ಧಿ (೫) ಉಕ್ತಬುದ್ಧಿ (೬) ಅನಿತ್ಯಬುದ್ಧಿ (ಅಚಲ) ಎಂದು ಷಷ್ಠ ಪ್ರಕಾರ ಕೆಲವರು ಇದಕ್ಕೂ ಹೆಚ್ಚಿಗೆ ಮಾಡುವರು. ಆದರೆ ಅವನ್ನು ಇವುಗಳಲ್ಲಿ ಸಮರಸಮಾಡಬಾರು ಇಗಕ್ಕೂ ಸೂಕ್ಷ್ಮವಾಗಿ ಎಷ್ಟೋ ಬುದ್ಧಿಗಳನ್ನು ಮಾಡುವರು. ಇದರಲ್ಲಿ ಮೇಲಿನವುಗಳ ವಿವರಣೆ ನೋಡುವಾ. (೧) ನಿತ್ಯ (ಅಚಲ) ಬುದ್ಧಿ ಅಂದರೆ ಯಾವದೇ ಕಾರ್ಯ ದಲ್ಲಿ ಬುದ್ಧಿ ದ್ವಿಭೇದವಾಗದೆ ಅಚಲವಾಗಿ ಅರ್ಥಾತ್ ಸ್ಥಿರವಾಗಿ ನೆಲಿಸಿರ ಬೇಕು. ಮತ್ತಾವ ಕಡೆಗೂ ಚಲಿಸುತ್ತಿರಬಾರದು. ನಾವು ಒಂದು ಉದ್ಯೋಗ ಮಾಡುತ್ತೇವೆಂದು ತಿಳಿಯೋಣ. ಆ ಉದ್ಯೋಗವು ನೆರೆಯವರ ಉದ್ಯೋಗ ಕ್ಕಿಂತ ಕೀಳ್ತರವಾಗಿದ್ದರೆ ಆಗ ನಾವು ಅವರ ಉದ್ಯೋಗದಲ್ಲಿ ಕೈಹಾಕದೆ ನಮ್ಮ ಉದ್ಯೋಗದಲ್ಲಿಯೇ ತತ್ಪರರಾಗಬೇಕು. ಇವಕ್ಕೂ ಹೆಚ್ಚು ಸ್ಪಷ್ಟೀ ಕರಿಸಿದಲ್ಲಿ ಒಬ್ಬರು ಸನ್ಯಾಸಿಯಾಗಿದ್ದಾರೆಂದೆನ್ನಿರಿ. ಆವಾಗ ತಾಯಿತಂದಿಯರು ಅಥವಾ ಇತರೇ ಜನರು. ಬಹುವಾಗಿ ದ್ರವ್ಯ ಕೊಡುವೆವೆಂದರೂ ಆ ಸನ್ಯಾ ಶಾಸ್ತ್ರಮವನ್ನು ಅಚಲನಾಗಿ ಕಾಯ್ದುಕೊಳ್ಳಬೇಕು. ಇದಿಲ್ಲದೆ ಹೋದರೆ ಎಲ್ಲವು ಹಾಳಾಗಿ ಹೋಗುವದರಲ್ಲಿ ಯಾವ ಸಂದೇಹ !|!

(ಮುಂದುವರಿದುದು)



ಸಂಚಿಕೆ ೩.                                        ಸಂಪುಟ ೩೪

# ಶಿವಾನುಭವ

*

ಸಂಪಾದಕರು

**ಡಾ. ರಾ. ಬ. ಫ. ಗು. ಹಳಕಟ್ಟಿ,**

ಬಿ. ಎ. ಎಲ್; ಎಲ್. ಬಿ.

**ವಿಜಾಪುರ.**

**ವಾರ್ಷಿಕ ಚಂದಾ ೫ ರೂ. ೭೫ ನ.ಪೈ.**

**ಮಾರ್ಚ ೧೯೬೦.**

# ವಿಷಯಾನುಕ್ರಮಣಿಕೆ.




೧. ವೀರಶೈವ ಸಮಾಜ ಸಂಸ್ಕೃತಿಯೂ ಶಿವಾನುಭವವೂ. ೧೧೩

—ರಾ|| ರಾ|| ಸಿ. ನಾ. ಮಹಾಂತಣ್ಣನವರ, ಮು—ಬೆಳಗಾವ.

೨. ವಚನಕಾರರು. ೧೨೪

—ಶ್ರೀ. ಬಿ. ವ್ಹಿ. ಡಂಬಳ, ರೋಣ.

೩. ಅಂಗವೇ ಲಿಂಗ ೧೨೯

—ಸರ್ವಭಾಷಾರತ್ನ, ಹಿತ್ತಲಮನೆ ಪಂಡಿತ ಮಲ್ಲಣಾರ್ಯರು

೪ ಶಿವಶರಣರದೇ ಪರಿಪೂರ್ಣಯೋಗ ೧-೧೬

—ಶ್ರೀ ಶಿವಾನಂದ ಸ್ವಾಮಿಗಳು ತೆಗ್ಗಿಹಳ್ಳಿ (ತಾ. ಇಂಡಿ)



# ವೀರಶೈವ ಸಮಾಜ ಸಂಸ್ಕೃತಿಯೂ ಶಿವಾನುಭವವೂ.

ಲೇಖಕಃ— ರಾ॥ ರಾ॥ ಸಿ. ನಾ. ಮಹಾಂತಣ್ಣನವರ, ಮು— ಬೆಳಗಾವ.

ವಿಶ್ವವನ್ನು ಬೆಳಗುವ, ವಿಶ್ವಧರ್ಮವಾದ ವೀರಶೈವ ಮತತತ್ವಗಳು ಅಖಂಡವಾಗಿ ಅಜರಾಮರವಾಗಿ ಅದ್ವಿತೀಯವಾಗಿ ಅಂತರ್ಬಹಿರಂಗದಲ್ಲಿ ಅಚಲವಾದ ಭಕ್ತಿಭೂಮಿಯಾಗಿ, ಅನುಭವದ ಅನಂತವಾದ ಶಕ್ತಿಯುಕ್ತವಾಗಿ, ಸದ್ವಾಸನೆಯೇ ಸದಾಚಾರವಾಗಿ ಸತ್ಕ್ರಿಯಾಚಾರವೇ ಸದಾನಂದವಾಗಿ, ಶಿವಾಚಾರವೇ ಸಚ್ಚರಿತ್ರವಾಗಿ, ಭೃತ್ಯಾಚಾರವೇ ಭುವನವಾಗಿ ವಿಷಮಯವಾದ ವಿಷಯ ಪಂಚಕಗಳನ್ನು ಅರಿದು ಆಯಾ ಹಸ್ತಗಳಿಂದ ಆಯಾ ಲಿಂಗಮುಖಗಳಿಗೆ ಅರ್ಪಿಸಿ, ಶೇಷಪ್ರಸಾದ ಪಂಚಕಗಳನ್ನು ಪಂಚಜ್ಞಾನದಿಂದ ಉಂಡು ಅನುಭವಿಸಿ, ತೃಪ್ತಿಯನ್ನು ಮಹಾಲಿಂಗಕ್ಕೆ ಮುಟ್ಟುವಂತೆ ಸದ್ಭಾವಿಯಾಗಿ, ಅಂಗೇಂದ್ರಿಯಗಳನ್ನೆಲ್ಲ ಲಿಂಗೇಂದ್ರಿಯಗಳನ್ನಾಗಿ ಮಾಡಿ, ಅಂಗವನ್ನೆಲ್ಲ ಲಿಂಗವನ್ನಾಗಿರಿಸಿಕೊಂಡು ಲಿಂಗದೇಹಿಯಾಗಿ, "ಲಿಂಗದೇಹಿ ಸದಾ ಶುಚಿಃ"

ಎಂಬ ಅನುಭವೋಕ್ತಿಯಂತೆ. ಪ್ರತಿಯೊಬ್ಬ ವೀರಶೈವನು ತನ್ನ ಒಂದೇ ಜನ್ಮದಲ್ಲಿ ಶರಣರಂತೆ ಸತ್ಕಾಯಕವ ಕೈಕೊಂಡು ತಾನೊಬ್ಬನಲ್ಲದೆ ತನ್ನ ಕುಟುಂಬವೇ ಕೈಲಾಸವಾಸಿಯಾಗಿರುವಂತೆ "ದಯವೇ ಧರ್ಮದ ಮೂಲವಯ್ಯ" ಎಂಬ ಈ ಬಸವೇಶ್ವರನ ನುಡಿಯನ್ನು ನಡೆಯಲ್ಲಿ ತಂದು ಸಮಾಜದ ಸಂಘಟನೆಗಳಿಗೊಳಗಾಗಿ, ತನುತ್ರಯ, ಮನತ್ರಯ, ಭಾವತ್ರಯ, ಆತ್ಮತ್ರಯ, ಅವಸ್ಥಾತ್ರಯ, ಗುರುತ್ರಯ, ಲಿಂಗತ್ರಯ, ಜಂಗಮತ್ರಯಗಳನ್ನು ಅರಿದು ಆಚರಿಸುತ್ತ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಏಕಲಿಂಗನೈಷ್ಠಿಕಾಪರನಾಗಿ, ಷಟ್ ಸ್ಥಲ ಸಿದ್ಧಾಂತವನ್ನನುಸರಿಸಿ, ನೂರೊಂದು ಸ್ಥಲಗಳನ್ನರಿಯುತ್ತ, ಸಕೀಲಗಳನ್ನು ಪ್ರಸ್ಥಾಪಿಸುತ್ತ, ಗುರುಲಿಂಗ ಜಂಗಮಗಳಲ್ಲಿ ತತ್ಪರನಾಗುತ್ತ ಸೋಹಂ ಭಾವವೇ ದಾಸೋಹಂ ಎಂಬದಾಗಿ ಕರಣತ್ರಯಗಳಿಂದ ಕಡೆಗಾಣಿಸುತ್ತ ಜೀವನ್ಮುಕ್ತನಾಗಿರುವದೇ ವೀರಶೈವ ಮತ ಸಿದ್ಧಾಂತವು.

ಈ ಮಟ್ಟಕ್ಕೇರಲು ವೀರಶೈವ ಸಮಾಜವೆಲ್ಲ ಸುಶಿಕ್ಷಿತರಾಗಿ, ಸದ್ಧರ್ಮಿಗಳಾಗಿ ಬಾಳಲು ಇಂಗ್ಲಿಷರ ರಾಜ್ಯದಾಡಳತೆಯಲ್ಲಿ ಮುಂಧೋರಣೆಗಳೂ ಮುಖಂಡರೂ ಆದ ನಮ್ಮ ಡೆಪುಟಿ ಚನಬಸಪ್ಪನವರೂ, ಶ್ರೀ ಗಿಲಗಂಚಿ ಗುರುಸಿದ್ದಪ್ಪನವರೂ, ಶ್ರೀ ಅರಟಾಳ ರುದ್ರಗೌಡರೂ, ಶ್ರೀಮಂತ ರಾವಬಹಾದ್ದೂರ ಶಿರಸಂಗಿ ದೇಸಾಯಿಯವರೂ ಪರಿಸ್ಥಿತಿಗನುಸರಿಸಿ, ಇಂಗ್ಲಿಷ ಪದವೀಧರರ ಸಂಖ್ಯೆಯು ಸಮಾಜದಲ್ಲಿ ಬೆಳೆಯಲೆಂದು ಎಷ್ಟೋ ಕಷ್ಟನಷ್ಟಗಳನ್ನು ಸೋಸಿದರು. ಅವರಂತೆ ಇತ್ತಿತ್ತಲಾಗಿ ದಾಸೋಹಮೂರ್ತಿಗಳಾದ ನಿರಂಜನ ಸ್ವರೂಪಿಗಳಾದ ವಿರಕ್ತರೂ ಗುರುವರ್ಗದವರೂ ಬಡ ವಿದ್ಯಾರ್ಥಿಗಳಿಗೆ ಅನ್ನ ಸಂತರ್ಪಣ ಮಾಡುತ್ತಿರುವದೂ ಅವರವರ ಧೋರಣಕ್ಕನುಗುಣವಾಗಿ ಧನವಂತರಾದ ವಿಶಾಲಹೃದಯಿಗಳಾದ ಸದ್ಭಕ್ತರು ಧನಸಹಾಯಮಾಡುವದೂ ಸಮಾಜಕ್ಕೆ ಅತ್ಯಂತ ಭೂಷಣವು.

ಆದರೆ ಇಂಗ್ಲಿಷ ಶಿಕ್ಷಣದ ಪ್ರಗತಿಯಿಂದ ಸಾಮಾಜಿಕ ರಾಜಕೀಯ ಬಹಿರಂಗ ಸುಧಾರಣೆಗಳು ಕೆಲಮಟ್ಟಿಗೆ ಬೆಳೆದದ್ದು ಕಂಡುಬಂದರೂ ಧಾರ್ಮಿಕ ಸಂಸ್ಕೃತಿಯು ಅವನತಿಹೊಂದುತ್ತ ನಡೆದಿರುವದೆಂಬದನ್ನುಸುರಲು ವಿಷಾದವೆನಿಸುವದು. ಇಂದಿನ ಯುಗದಲ್ಲಿ ವಿಜ್ಞಾನಶಾಸ್ತ್ರವು ಪರರಾಷ್ಟ್ರಗಳಲ್ಲೆಲ್ಲ ಮುಂದುವರಿದದ್ದನ್ನು ಕಂಡುಹಿಡಿದು, ನಮ್ಮಲ್ಲಿಯ ಮುಖಂಡರು ಭಾರತವು ಮುಂದುವರಿಯುವಂತೆ ಪ್ರಯತ್ನಿಸುವದು ಸರ್ವಮಾನ್ಯವು. ಆದರೆ ಸಮಾಜದಲ್ಲಿ

ಸತ್ಯ, ಅಹಿಂಸೆ, ಶಾಂತಿಸಮಾಧಾನಗಳು ಬೆಳೆಯದ ಕಾರಣ ಅಸಮಾಧಾನ ಸ್ಥಿತಿಯು ಬೇರೂರಹತ್ತಿದೆ. ಆದಕಾರಣ ಇದನ್ನರಿತು ವೀರಶೈವ ಸಮಾಜದ ರೀತಿನೀತಿ, ಕ್ರಿಯಾಜ್ಞಾನಗಳು ಅಳಿಯದಂತೆ, ಧರ್ಮಾಚಾರ, ಭಾವಾಚಾರ. ಜ್ಞಾನಾಚಾರಗಳು ಮುಂದರಿಯುತ್ತ ನಡೆದಲ್ಲಿ ಭಾರತದ ಉಳಿದ ಎಲ್ಲ ಧಾರ್ಮಿಕ ಸಮಾಜಗಳು ವೀರಶೈವ ಸಮಾಜದ ಅನುಕರಣವನ್ನು ಮಾಡುದೆ ಇರವು. ಆದ್ದರಿಂದ ನಮ್ಮ ಸಮಾಜದಲ್ಲಿ ಉಂಟಾದ ಕಟ್ಟುನಿಟ್ಟುಗಳನ್ನು ಮನದಂದು ವಿರಕ್ತರೂ ಮಠಸ್ಥರೂ ಸದ್ಭಕ್ತರೂ ಶಿವಶರಣರೂ ಶಿವಶರಣೆಯರೂ ನವಜಾಗ್ರತೆಯನ್ನುಂಟುಮಾಡುವದು ಅತ್ಯವಶ್ಯವು.

ನಮ್ಮೀ ವೀರಶೈವ ಸಮಾಜದ ಮುಖ್ಯಸ್ಥರು ನಮ್ಮೀ ಸಮಾಜದಲ್ಲಿ ಕಂಡುಬರುವ ಭೇದಭಾವ, ಅಜ್ಞತೆ, ದುರಭಿಮಾನ, ದುಶ್ಶೀಲ, ದುಶ್ಚಟ ಅನೈಕ್ಯತೆಗಳನ್ನು ಹೊಡೆದುಹಾಕುವ ಶಿವಶರಣರ ತತ್ವಗಳನ್ನು ಮನದಂದು ರಾಜಕೀಯ ರಂಗದಲ್ಲಿ ಹಳ್ಳಿ, ಗ್ರಾಮ, ಸರಕಲ್, ಪೇಠಾ, ತಾಲೂಕ, ಜಿಲ್ಹೆ, ಪ್ರಾಂತಗಳನ್ನು ಮಾಡಿಕೊಂಡಂತೆ ಮಠಪತಿ, ಗಣಾಚಾರಿ, ಗಣಕುಮಾರ, ಮಠಸ್ಥ, ಹಿರೇಮಠ, ಚರ. ಪಟ್ಟ, ವಿರಕ್ತರುಗಳು, ತಮ್ಮ ತಮ್ಮ ಅಧಿಕಾರಾನುಸಾರವಾಗಿ, ಭಾಗ, ವಿಭಾಗಗಳನ್ನು ಮಾಡಿ ಹಂಚಿಕೊಂಡು ವೀರಶೈವ ಭಕ್ತರ ಪ್ರತಿಯೊಂದು ಮನೆಯ ಕಾಯಕವೂ ನೈತಿಕವೂ ಸದಾಚಾರವೂ, ಲಿಂಗಾಚಾರವೂ, ಗಣಾಚಾರವೂ, ಶಿವಾಚಾರವೂ, ಕ್ರಿಯಾಚಾರವೂ, ಜ್ಞಾನಾಚಾರವೂ, ಸತ್ಯಾಚಾರವೂ, ನಿತ್ಯಾಚಾರವೂ, ಧರ್ಮಾಚಾರವೂ ಭೃತ್ಯಾಚಾರಗಳೆಲ್ಲವೂ ಸರಿಯಾಗಿರುವಂತೆ ಸುವ್ಯವಸ್ಥೆಯನ್ನುಂಟುಮಾಡುವದು ಸದ್ಯದ ಸದ್ಭಕ್ತರ ವೀರಮಾಹೇಶ್ವರರ ಆದ್ಯ ಕರ್ತವ್ಯವಾಗಿದೆ. ಶ್ರೀ ಶಿವಶರಣರು ಹಾಕಿಕೊಟ್ಟ ಕ್ರಿಯಾಚಾರಣೆ ಜ್ಞಾನಯೋಗಗಳನ್ನು ಸುವ್ಯವಸ್ಥಿತವಾಗಿ ಸಾಗಿಸುವ ಭಾಗವೂ ಆಯಾ ಮನೆತನದ ಗುರುಗಳ ಮೇಲೆಯೂ ಆಯಾ ಓಣಿಯ ಮಠಸ್ಥರ ಮೇಲೆಯೂ ಇದ್ದು, ಅವರೂ ಅವರ ಭಕ್ತರೂ (ಶಿಷ್ಯರೂ) ಧಾರ್ಮಿಕ ಸಾಮಾಜಿಕ ನೇಮಗಳನ್ನು ಸದುಹೃದಯರಾಗಿ ಆಚರಿಸಿದರೆ, ಸಹಜವಾಗಿ ಓಣಿ, ಊರು, ಹಳ್ಳಿ. ಗ್ರಾಮ, ಸರಕಲ್, ತಾಲೂಕ ಜಿಲ್ಹೆ, ಪ್ರಾಂತಗಳು ಸುಧಾರಿಸುವದೆಂಬುದಕ್ಕೆ ಯಾವ ಸಂಶಯವೂ ಇಲ್ಲ. ಇದಕ್ಕೆ ಪ್ರತಿಯೊಬ್ಬ ಭಕ್ತನೂ, ಮಹೇಶನೂ ನಡಕಟ್ಟಿ ನಿಂತದ್ದಾದರೆ, ವೀರಶೈವ ಮಠದ ಬೆಳಕು, ಉಳಿದ ಸಮಾಜಗಳ ಮೇಲೆ ಬಿದ್ದು, ಉಳಿದ ಸಮಾಜಗಳೂ ಸಹ ಸುಧಾರಿಸುವದಕ್ಕೆ ಆಸ್ಪದವಾಗುತ್ತದೆ.

### ತನ್ನ ಕೈಯಲಿ ಪರುಷವಿರಲು ಪರರನು ಬೇಡಲೇಕೆ?

ಎಂಬ ಉಕ್ತಿಯಂತೆ, ಪ್ರತಿಯೊಬ್ಬ ವೀರಶೈವನು ಚಿಕ್ಕವನಿರುವಾಗಲೇ ಅಂದರೆ ತನ್ನ ೨೫ ವರ್ಷದೊಳಗಾಗಿ, ಬುದ್ಧಿಜೀವಿ, ಶ್ರಮಬುದ್ಧಿ ಜೀವಿಗಳಲ್ಲಿ, ತನಗೆ ಸಾಧಿಸಿದ ಜೀವಿಯಾಗಿ, ಸದ್ಯದ ಪರಿಸ್ಥಿತಿಗನುಸಾರವಾಗಿ ಸತ್ಕಾಯಕ ವನ್ನು ಕೈಕೊಂಡು, ತನ್ನ ಕಾಯಕಕ್ಕೆ ಅನುರೂಪವಾದ ಕನ್ಯೆಯನ್ನು ಆರಿಸಿ ವಿವಾಹವಾಗಿ, ಶ್ರೀ ದೇವರದಾಸ ಶ್ರೀ ಶಂಕರದಾಸ ಮೊದಲಾದ ಶರಣರಂತೆ, ಗುರುಲಿಂಗ ಜಂಗಮಕ್ಕೆ ತನುಮನಧನಗಳನ್ನು ಸವಿಸುತ್ತ ತಾನಿದ್ದ ಗ್ರಾಮದಲ್ಲಿ ಸ್ಥಾಪಿತವಾದ ಶಿವಾನುಭವ ಮಂಟಪದ ಸದಸ್ಯನಾಗಿ, ಅಲ್ಲಿ ನಡೆಯುವ ಶಿವಾ ನುಭವದ ಶಿವಶರಣರ ವಚನಾಮೃತವನ್ನು ಸೇವಿಸುತ್ತ ದಂಪತಿಗಳೀರ್ವರೂ ಗುರುಸೇವೆ, ಲಿಂಗಾರ್ಚನೆ, ಜಂಗಮದಾಸೋಹಗಳಲ್ಲಿ ನಿರತರಾಗುತ್ತ ಷಟ್ ಸ್ಥಲ ಸಿದ್ಧಾಂತಕ್ಕನುಗುಣವಾಗಿರುತ್ತ, ಶಿವಾನುಗ್ರಹದಿಂದ ಮಕ್ಕಳ ಸಂಪತ್ತನ್ನು ಪಡೆದು, ಸುಶೀಲರಾಗಿ, ಸದ್ಭಕ್ತರೆಂದೆನಿಸಿಕೊಂಡು ಪ್ರಪಂಚ ಪಾರಮಾರ್ಥ ಗಳನ್ನು **ಇಹಪರಲೋಕಯಾತ್ರೆಯನ್ನು** ಆನಂದದಿಂದ ಅನುಭವಿಸುತ್ತ, ತಮ್ಮ ಮನೆತನವು ಶಿವಶರಣರ ಮನೆತನವೆಂಬ ಹೆಸರು ಪಡೆಯುತ್ತ ಲಿಂಗಾಂಗ ಸಾಮರಸ್ಯವಾಗಿರುವದೇ ಶಿವಪಥದ ಗುರಿಯು.

ಮಾನವನು ಯಾವ ನೈಸರ್ಗಿಕ ಸ್ಥಿತಿಯಲ್ಲಿ ಜನ್ಮತಾಳಿ ಬೆಳೆದು ದೊಡ್ಡವನಾಗುವನೋ, ಆ ಪರಿಸ್ಥಿತಿಯಂತೆ, ಆತನ ಸ್ವಭಾವ ನಡೆನುಡಿಗ ಳಾಗುವವು. "ಗಿಡವಾಗಿ ಬಾಗದ್ದು ಮರವಾಗಿ ಬಾಗೀತೇ" ಎಂಬ ನಾಣ್ಣುಡಿ ಯಂತೆ, ಮಾನವನ ಮೊದಲಿನ ೨೫ ವರ್ಷದ ಕಾಲಾವಧಿಯು ಬಹು ಮಹ ತ್ವದ್ದು. ಶಿಶುವಿರುವಾಗ ತಾಯಿಯ ಸಂಸರ್ಗ, ಬಾಲಕನಾದಾಗ ಮನೆ, ನೆರೆಮನೆಗಳ ಸಂಸರ್ಗ, ೧೫ ೧೬ ವರ್ಷಗಳತನಕ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣಾಲಯಗಳ ಸಂಸರ್ಗ; ಇಂತೀ ಸಂಸರ್ಗಗಳಿಂದ ಸುಸಂಸ್ಕೃತಿಯಾಗಿ ಜೀವನ ಸಾಗಿಸುವ ಮಟ್ಟಕ್ಕೆ ಬಂದವನಾಗಿ, ತನ್ನ ಧರ್ಮ, ಮತ, ಪಂಥ ಗಳನ್ನು ಪರಿಷ್ಕರಿಸುತ್ತ ಶಿವಾನುಭಾವಿಯೂ ಸತ್ಕಾಯಕಿಯೂ. ಆಗಿ, ಬಾಳಲು ಅರ್ಹನಾಗಿ, ತನ್ನ ಮನೆಯ ಗುರುಗಳಾಗಮನದಿಂದ ಹುಟ್ಟಲಿಂಗ, ಕಟ್ಟಿದ ಲಿಂಗ, ಪಟ್ಟಲಿಂಗಗಳ ಪರಿಯನ್ನರಿತು ಗುರುವಿನಿಂದ ಅರ್ಥಾತ್ ಗುರುತ್ರ ಯಗಳಿಂದ ಜ್ಞಾನ, ಸುಜ್ಞಾನ, ಮಹಾಜ್ಞಾನಗಳನ್ನು ಹೊಂದುತ್ತ ಹಾಗು ಕ್ರಿಯಾಲಿಂಗ, ಭಾವಲಿಂಗ ಜ್ಞಾನಲಿಂಗಾನುಸಂಧಾನದಿಂದ ಶಿವಯೋಗವನ್ನು ಸಾಧಿಸುವದೇ ವೀರಶೈವನ ಸಮ್ಯಜ್ಞಾನವು.

ನಾವು ಎಸ್. ಟಿ. ಮೋಟಾರದಿಂದಾಗಲಿ, ರೇಲ್ವೆಯಿಂದಾಗಲಿ ಪ್ರವಾಸ ಮಾಡುವಾಗ ಅವುಗಳೊಳಗೆ ಸೇರುವದಕ್ಕೂ, ಸೇರಿ ಕೂಡ್ರುವದಕ್ಕೂ ಘನ ಗದ್ದಲವಿದ್ದಾಗ ಎಷ್ಟು ತೊಂದರೆಗಳಿಗೊಳಗಾಗುತ್ತೇವೆಂಬದು ಪ್ರತಿಯೊಬ್ಬರಿಗೆ ಅನುಭವವಾದ ಸಂಗತಿಯು. ಇಂಥ ಪರಿಸ್ಥಿತಿಯಲ್ಲಿ ಗದ್ದಲದಿಂದ ಪಾರಾಗಿ ಒಳಸೇರಿದಾಗ, ಅಂತಃಕರಣಿಯಾದ ಒಬ್ಬಾನೊಬ್ಬ ವ್ಯಕ್ತಿಯು, ತನಗೆ ಅಡ ಚಣಿಯಾದರೂ ಸಹಿಸಿ, ಬಂದ ವ್ಯಕ್ತಿಯನ್ನು ತನ್ನ ಮಗ್ಗುಲಲ್ಲಿ ಕೂಡ್ರಿಸಿ ಕೊಂಡು ಪ್ರೇಮದ ಮಾತುಕತೆಗಳನ್ನಾಡಿದರೆ ಎಷ್ಟು ಆನಂದ ? ಇದರಂತೆ ಜನನ ಮರಣಗಳನ್ನು ದಾಟಿಸುವ ಶ್ರೀ ಗುರುವು ಶಿಷ್ಯನ ಸ್ಥಾನಮಾನಗಳ ನ್ನರಿತು ಆತನಲ್ಲಿ ದಯಾದೃಷ್ಟಿಯಿಟ್ಟು ಆತನ ಕ್ಷೇಮ ಸಮಾಚಾರಗಳನ್ನೂ ಸತ್ಕಾಯಕವನ್ನೂ ವಿಚಾರಿಸಲು ಗುರುವಿನಲ್ಲಿ ಶಿಷ್ಯನ ಭಕ್ತಿಭಾವವು ಬೆಳೆದಿ ರಲು "ಗುರು ಕರುಣಿಸಲು ಸಂಸಾರ ವಿಷಯ ಕಟ್ಟಿತ್ತು, ಮಾಯಾಪ್ರಪಂಚ ಬಿಟ್ಟಿತ್ತು, ಹುಟ್ಟರತು ಹೋಯಿತ್ತು, ನೆಟ್ಟಗೆ ಗುರುಪಾದವ ಮುಟ್ಟಿ ಭವಗೆ ಟ್ಟೆನು. ರಾಮನಾಥಾ" ಈ ವಚನಾನುಭವದಂತೆ ಸೂಜಿಗಲ್ಲಿನ ಸ್ಪರ್ಶದಿಂದ ಸೂಜಿಯಲ್ಲಿ ಸೂಜಿಗಲ್ಲಿನ ಗುಣವೇ ಆವರಿಸುವಂತೆ, ಆ, ಆ, ಬೀಜಗಳ ಬಿತ್ತು ವಿಕೆಯಿಂದ ಆಯಾ ಧಾನ್ಯಗಳು ಅಂಕುರಿಸಿ ಬೆಳೆದು ಪ್ರಜ್ವಲಿಸುವಂತೆ, ಯಥಾ ಭಾವಸ್ತಥಾಶಿವಃ" ಎಂಬಂತೆ " ಶ್ರೀ ಗುರು ಶಿಷ್ಯನ ಮಸ್ತಕದಲ್ಲಿ ಹಸ್ತಾಬ್ಜವ ಘನದಿಂದೊತ್ತಿ ಭಸ್ಮವ ಮಾಡಿ, ಮತ್ತು ಪಂಚಾಕ್ಷರಿಯ ಮರುಜೀವಣಿಯಂ ಚಿತ್ತ ಶ್ರೋತ್ರದೋಳೂದುತ್ತ ಧಾರೆಯನೆರೆಯಲು ಸತ್ಯವಿದು ನಿನ್ನಂತೆ ಕಾಣಾ ರಾಮನಾಥಾ.

ಶಿಷ್ಯನು ಗುರುಕರುಣ ತ್ರಿವಿಧವನರಿದು, ಅದರಂತೆ ಆಚರಿಸಿ, ಗುರು ಕೃಪೆಯು ತನ್ನ ಮೇಲೆ ಅನವರತ ಅಚ್ಚಳಿಯದೆ ಉಳಿಯುವಂತೆ ತನ್ನ ಭಕ್ತಿ ಭಾವಗಳನ್ನು ಬೆಳೆಯಿಸುತ್ತ ತ್ರಿಕರಣಪೂರ್ವಕವಾಗಿ ಅಂಗದ ಕಾಯಾ ವಾಚಾ ಮನಸಾ ದೃಢಭಕ್ತಿಯುಳ್ಳಾತನಾಗಿರುವವನೇ ನಿಜಶಿಷ್ಯನು.

ವೀರಶೈವ ಐತಿಹ್ಯವನ್ನು ಮನದಂದರೆ, ಪೂರ್ವಪುರಾತನರೂ ನೂತನ ಪುರಾತನರೂ ಆಗಿರುವರೆಂಬದಾಗಿ ತಿಳಿಯುತ್ತದೆ. ಪೂರ್ವಪುರಾತನರು ಅಷ್ಟಾ ವರಣಗಳಲ್ಲಿ ಯಾವದಾದರೊಂದನ್ನು ಮುಖ್ಯವಾಗಿಟ್ಟುಕೊಂಡು ಅದರಲ್ಲಿಯೇ ಒಳ್ಳೇ ನಿಷ್ಠೆಯುಳ್ಳವರಾಗಿ, ತಾವು ಹಿಡಿದ ವ್ರತಗಳನ್ನು ಜೀವಹೋದರೂ ಬಿಡದಷ್ಟು ದೃಢಭಕ್ತಿಯುತರಾಗಿ ಶಿವನನ್ನು ಪ್ರತ್ಯಕ್ಷಿಸಿಕೊಂಡು ಶಿವನಾಗಿ

ಹೋದರು. ಅದರಂತೆ ಶ್ರೀ ದೇವರದಾಸಿಮಾರ್ಯರ ಕಾಲದಲ್ಲಿಯೂ ಅವರಿಂ ದೀಕ್ಷೆಯ ಶ್ರೀ ಬಸವಾದಿ ಪ್ರಮಥರ ಕಾಲದಲ್ಲಿಯೂ ತಾವು ನೂತನ ಪುರಾತನರೊಳಗೆ ಗಣನೆಯಾಗಿ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಸಕೀಲ, ಉದ್ಧರಣೆಗಳನ್ನು ಉದ್ಘೋಷಿಸುತ್ತ ಬಯಲೊಳು ಬೆರೆದ ಸಂಗತಿಗಳು ಅವರು ಆಚರಿಸಿದ ವೀರಶೈವ ಸಂಪ್ರದಾಯದ ಸರ್ವಾಚಾರ ಸಂಪತ್ತಿನ ಆಚಾರಗಳ ಅನುಭವದಿಂದ ಗೊತ್ತಾಗುವವು. ಈ ಆಚಾರಗಳ ಅನುಭಾವಿಗಳೇ ಈಗಿನ ಸದ್ಭಕ್ತ, ಗುರುಪರಂಪರೆ ಜಂಗಮಾದಿಗಳೆಂದು ಹೇಳಲೇ ಬೇಡ. ನಿರಂಜನ ನಿರವಯಲ, ನಿರಾಧಾರ, ನಿರ್ಗುಣ, ನಿಷ್ಕಲ, ನಿಃಕಳಂಕ, ಘನಲಿಂಗಿಯು ತಾನೇ ತಾನಾಗಿದ್ದು, ಅಕಸ್ಮಾತ್ ವಿಶ್ವದ ನೆನಹು ಆದೊಡೆ, ಈ ವಿಶ್ವಕ್ಕೆ ಕಾರಣವಾಯಿತೆಂದೂ ಅದರ ರೂಪಗಳೇ ಗುರು ಲಿಂಗ ಜಂಗಮವೆಂದೂ "ಏಕೋದೇವತ್ರಯೋಭರ್ಾಗಂ ಗುರುಲಿಂಗಜಂಗಮಂ" ಎಂಬದಾಗಿ, ಮಾನವನ ಶರೀರವು ಸ್ಥೂಲ ಸೂಕ್ಷ್ಮ ಕಾರಣಗಳಿಂದ ಒಂದೇ ಇದ್ದರೂ, ಮೂರು ಪ್ರಕಾರವಾಗಿ ಹೇಗೆ ತೋರುವದೋ ಅದರಂತೆ ಅಂತರ್ಬಹಿರಂಗಗಳಲ್ಲಿ ಗುರು ಲಿಂಗ ಜಂಗಮಗಳು ಇರುವವು. ಇದರಂತೆ ಇಷ್ಟಲಿಂಗವು ಒಂದೇ ಎಂದು ಕಂಡರೂ ಪೀಠ, ಗೋಮುಖ, ಗೋಳಕಗಳೆಂದೂ, ತನುಮನ ಭಾವಗಳೆಂದೂ, ಇಷ್ಟ, ಪ್ರಾಣ, ಭಾವ ಲಿಂಗಗಳೆಂದೂ, ಈ ಮೂರು ಕಾಯ, ದೇಹ, ಲಿಂಗ ಒಂದೇ ಎಂದೂ ಆಚಾರಸ್ಥರ ಅನುಭಾವವು.

ಈ ಅನುಭವಾಮೃತವು ಸದ್ಗುರುವಿನಿಂದ ದೀಕ್ಷಾಬದ್ಧರಾಗಿ, ಲಿಂಗಾರ್ಚನೆ ಗುರುಭಕ್ತಿ ಜಂಗಮದಾಸೋಹಿಗಳಾಗಿ, ಶರಣರ ಸಂಗಿಗಳಾಗಿ, ನಡೆನುಡಿಗಳೊಂದಾಗಿ ಇರಲು ಸಾಧ್ಯವಲ್ಲದೆ, ವಿಷಯಾಸಕ್ತರಾಗಿರುವವರಿಗೆ ಸಾಧ್ಯವಿಲ್ಲ. ಎಷ್ಟು ಓದಿದರೇನು? ಎಷ್ಟು ಕೇಳಿದರೇನು? ಶಿವಾಚಾರವು ಅಳವಡದನ್ನಕ್ಕ? "ಪುನರಪಿ ಜನನಂ ಪುನರಪಿ ಮರಣಂ" ಎಂಬಂತೆ ಮಾಯಾ ಪ್ರಪಂಚದಲ್ಲಿ ಬಿದ್ದು ಶಿವನ ಪಂಚಕೃತ್ಯವನ್ನು ಅರಿಯದೆ, ಹುಟ್ಟಿಸುವದು ಬ್ರಹ್ಮನಕೃತ್ಯ; ರಕ್ಷಿಸುವದು ವಿಷ್ಣುವಿನ ಕೃತ್ಯ; ಲಯಗೊಳಿಸುವದು ರುದ್ರನ ಕೃತ್ಯ; ಆಯಾಜೀವಿಗಳ ಕರ್ಮದಂತೆ, ಅವವುಗಳ ಪಾಪ ಪುಣ್ಯಾನುಸಾರ ತಿರೋಧಾನವೆಸಗುವದೇ ಈಶ್ವರನ ಕತ್ಯ. ಈ ನಾಲ್ಕು ಕೃತ್ಯಗಳ ಹೊರತಾಗಿ ಪಂಚಕೃತ್ಯವಾದ ಅನುಗ್ರಹವೆಂಬ ಸದಾಶಿವನ ಕೃತ್ಯವಿರುವದು. ವೀರಶೈವಾನುಭಾವಿಯು ಸದಾಶಿವನ ಅನುಗ್ರಹಕ್ಕೆ ಪಾತ್ರನಾಗಿ ಲಿಂಗಾಂಗ ಸಾಮರಸ್ಯವುಳ್ಳವನಾಗಿ ಭವಬಾಧೆಯನ್ನು ಪರಿಹರಿಸುವನು. ಇದನ್ನರಿತು ಶ್ರೀ ದೇವರ

ದಾಸಿಮಾರ್ಯರು "ತಾಯಿಯ ಗರ್ಭದಲ್ಲಿರುವ ಶಿಶುವು ತಾಯಿಯ ಮುಖವನರಿಯದು, ಆ ತಾಯಿ ಶಿಶುವಿನ ಕುರುಹನರಿಯಳು. ಮಾಯಾಮೋಹದಲ್ಲಿಪ್ಪ ಭಕ್ತ ದೇವರನ ಅರಿಯನು ಆ ದೇವರು ಆ ಭಕ್ತನೆಂದೂ ಅರಿಯನು ನೋಡಾ ರಾಮನಾಥಾ"

ಈ ಅನುಭವದಿಂದ ಸಂಸಾರದೊಳಗಿನ ಮಾನವನು ಮಾಯಾ ಮೋಹವನ್ನು ಬಿಟ್ಟು, ಶಿವಶರಣರ ಸಂಗದಿಂದ ದಾಸೋಹಿಯಾಗಿ, ಪಿಂಡಸ್ಥಲ, ಪಿಂಡಜ್ಞಾನಸ್ಥಲಗಳಿಂದ ಸಂಸಾರಹೇಯಿಯಾಗಿ ಸಂಸಾರ ಹೇಯಸ್ಥಲವನರಿದಬಳಿಕ ಗುರುಕಾರುಣ್ಯ ಸ್ಥಲಕ್ಕೆ ಯೋಗ್ಯನಾಗುವನು, "ಘಟದೊಳಗೆ ತೋರುವ ಸೂರ್ಯನಂತೆ ಸರ್ವರಲ್ಲಿ ಶಿವನ ಚೈತನ್ಯವಿಪ್ಪುದು, ಇದ್ದರೇನು? ಅದು ಸರ್ವರಿಗೆ ಸಾಧ್ಯವಲ್ಲ. ಮುಟ್ಟಿ ಮುಟ್ಟದು, ಅದನ್ನು ಕಂಡುಪರಿ ಗುರುವಿನಿಂದಲ್ಲದೆ ಆಗದು ಕಾಣಾರಾಮನಾಥಾ" ಈ ಅನುಭವದ ಮೇಲಿಂದ ಸದ್ಗುರುವಿನ ಕೃಪೆಯು ಮೊದಲು ಬೇಕೆಂಬದು ಸಹಜ ಗೊತ್ತಾಗುವದು. ಆದ್ದರಿಂದ ಗುರುತ್ರಯಗಳಿಂದ ಲಿಂಗತ್ರಯಗಳನ್ನು ಪಡೆಯಲೇಬೇಕು. ಅಥವಾ ತನ್ನ ಮನೆಯ ಗುರುವಿನಲ್ಲಿ ಗುರುತ್ರಯಗಳ ಜ್ಞಾನವಿದ್ದರೂ ಅಡ್ಡಿಯಿಲ್ಲ. ಅಂತೂ ಪ್ರತಿಯೊಬ್ಬ ವೀರಶೈವನು ಸದಾಚಾರ ಸಂಪನ್ನನಾಗಿ, ಶಿವಶರಣರ ದಾಸೋಹಿಯಾಗಿ, ದೀಕ್ಷಾಬದ್ಧನೂ, ಸತ್ಕ್ರಿಯಾವಂತನೂ ಸುಜ್ಞಾನಿಯೂ ಆಗಲು, ಆತನ ಹಿಂದಿನ ಜನ್ಮದ ಸುಕೃತವು ಸಂಧಿಸಿದಲ್ಲದೆ ಆಗದು. "ನೆನಹಿನಿಂದೀ ವಿಶ್ವಕಾರಣವೆನಿಸಿ ವಿಶ್ವಾತೀತವಾಗಿಹ | ಮನುಮುನೀಶ್ವರರಿಂಗೆ ನಿಲುಕದೆ ಗುರುವು ತೋರಿದೊಡೆ || ತನುಮನೋಭಾವದಲ್ಲಿ ತುಂಬಿಹ | ಘನಮಹಾಚಿಜ್ಜ್ಯೋತಿಯದುತಾ | ನನಘ |ಭಕ್ತನ ಹಸ್ತನಳಿನದೊಳೆಸೆವ ಸ್ಪಷ್ಟತೋ ||೧|| ಈ ಪದ್ಯಕ್ಕನುಸಾರವಾಗಿ, ಪ್ರತಿಯೊಬ್ಬನು ಪುಣ್ಯಶಾಲಿಯಾಗಬೇಕೆಂತಲೂ, ಆತನು ವಿಶ್ವ (ತತ್ವ) ಜ್ಞಾನಿಯಾಗಲು ಆತುರಪಡಬೇಕೆಂತಲೂ ಇದರಿಂದ ಸದ್ಗುರುಗಳ ಕೃಪೆಯಾಗಿ ಚಿಜ್ಜ್ಯೋತಿರೂಪವಾದ ಲಿಂಗಜ್ಞಾನವು ಘಟಿಸುವದೆಂತಲೂ ಎಚ್ಚರ ಕೊಟ್ಟಂತಾಯಿತು.

ಇಂತು ಶ್ರೀಗುರು ಕೃಪೆಯಾಗಿ, ತನ್ನ ಸ್ವರೂಪವಾದ ಇಷ್ಟಲಿಂಗವನ್ನು ಆತನಿಂದ ಪಡೆದ ಬಳಿಕ ಆ ಲಿಂಗವನ್ನು ಸದಾಶರೀರದಲ್ಲಿ ವಿಶಿಷ್ಟವಾದ ಸ್ಥಳಗಳಲ್ಲಿ ವೀರಮಾಹೇಶ್ವರರೂ ಭಕ್ತರೂ ಧರಿಸಲೇ ಬೇಕು. ಪ್ರತಿ ಮಾನವನು ಯಾವ ಪ್ರಕಾರವಾಗಿ ವೇಳೆಯರಿತು ಮುಂಜಾನೆ ಶೌಚಾದಿ ಕ್ರಿಯೆಗಳನ್ನೂ, ಮಧ್ಯಾಹ್ನದವರೆಗೆ ಕಾಯಕವಮಾಡಿ, ಆ ಮಧ್ಯಾಹ್ನದ ವೇಳೆ

ಯಲ್ಲಿ ಪ್ರಾಣಧಾರಣಕ್ಕೆ ಬೇಕಾದ (ಪ್ರಸಾದ) ಭೋಜನವನ್ನು ಸಂಜೆಗೆ ಸಂಜೆಯ ಭೋಜನ (ಪ್ರಸಾದ)ವನ್ನು ತೀರಿಸಿ, ರಾತ್ರಿಯಲ್ಲಿ ನಿದ್ರಾವಸ್ಥೆಯನ್ನು ನೀಗಿ, ಬೆಳಗು ಮುಂಜಾನೆ ೪ ಗಂಟೆಗೆ ಎದ್ದು ಶೌಚಾಚಮನಗಳ ಮಾಡಿಕೊಂಡು ಸ್ತೋತ್ರಾರ್ಹನಾಗುವನೋ, ಅದರಂತೆ, ಮುಂಜಾನೆಯ ಕ್ರಿಯೆಯು ಇಷ್ಟಲಿಂಗದ್ದೆಂದೂ, ಮಧ್ಯಾಹ್ನದ ಕ್ರಿಯೆಯು ಪ್ರಾಣಲಿಂಗದ್ದೆಂದೂ, ಸಂಜೆಯ ಕ್ರಿಯೆಯು ಭಾವಲಿಂಗದ್ದೆಂದೂ ಭಾವಿಸಿ, ಅರುಹಿನಿಂದ ಲಿಂಗತ್ರಯಗಳು ಒಂದೇ ಎಂದು ಸಮಯತ್ರಯಗಳಲ್ಲಿ ಲಿಂಗತ್ರಯಗಳ ಪೂಜಾರ್ಚನೆಗಳನ್ನು ಮಾಡಿ, ಗುರುಲಿಂಗ ಜಂಗಮಾದಿಗಳನ್ನು ತೃಪ್ತಿಬಡಿಸಿ, ಶೇಷ ಪ್ರಸಾದ ಪಡೆದು ನಿಜಾನಂದದಲ್ಲಿ ಇರುವವನೇ ನಿಜ ವೀರಶೈವ ಸಂಪ್ರದಾಯಕನು.

"ಗುರು, ಲಿಂಗ, ಒಂದೆಂಬರು, ಗುರುಲಿಂಗ ಒಂದಾಗಿರುವ ಠಾವ ತಿಳಿದು ನೋಡಿರೋ ಗುರುಕಾರುಣ್ಯವಾದ ಬಳಿಕ ಅಂಗದ ಮೇಲೆ ಲಿಂಗವಿರಲೇಬೇಕು. ಲಿಂಗವಿಲ್ಲದ ಗುರುಕಾರುಣ್ಯವು, ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ ಕಾಣಾ ರಾಮನಾಥಾ"॥ ಈ ವಚನಾನುಸಾರವಾಗಿ, ಅಂಗದೊಳು ಲಿಂಗವನಗಲಿ ಇರಲೇಬಾರದು.

ಶ್ರೀ ಗುರುವಿನ ಕರಂಗಳು ಹೃದಯ ಮಧ್ಯದಲ್ಲಿ ಉದಯವಾದ ಇಷ್ಟ ಮಹಾಲಿಂಗವೇ ಪರಮ ಪಾವನಯ್ಯ. ಆ ಮಹಾಲಿಂಗವೇ ಪರಮ ಪ್ರಕಾಶವಯ್ಯ, ಆ ಮಹಾಲಿಂಗವೇ ಪರಂಜ್ಯೋತಿ ಸ್ವರೂಪವಯ್ಯ. ಆ ಮಹಾಲಿಂಗವೇ ಪರಮ ನಿಷ್ಕಳಂಕನಯ್ಯ, ಚಿದ್ಘನ ವಸ್ತುವಯ್ಯ. ಆ ಮಹಾಲಿಂಗವೇ ಚಿನ್ಮಯ ಸ್ವರೂಪನಯ್ಯ ಆ ಮಹಾಲಿಂಗವೇ ಚಿದಾನಂದ ಮೂರ್ತಿಯಯ್ಯ. ಚಿತ್ಪ್ರಕಾಶ ಮೂರ್ತಿಯಯ್ಯ. ಆ ಮಹಾಲಿಂಗವೇ ಚಿದ್ರೂಪ ಮೂರ್ತಿಯಯ್ಯ ಸಹಜ ಸನ್ಮಾರ್ಗ ಸ್ವರೂಪವಯ್ಯ, ಆ ಮಹಾಲಿಂಗವೇ ಸತ್ತು ಚಿತ್ತಾನಂದ ಮೂರ್ತಿಯಯ್ಯಾ, ಸರ್ವಸಾಕ್ಷಿಕ ಮೂರ್ತಿಯಯ್ಯಾ, ಸರ್ವ ಚೈತನ್ಯ ಮೂರ್ತಿಯಯ್ಯಾ, ಆ ಮಹಾಲಿಂಗವೇ ಸರ್ವಾಂತರ್ಯಾಮಿ ನೋಡಾ ಅದೆಂತೆಂದೊಡೆ "ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ। ಲಿಂಗಬಾಹ್ಯ ಪರಂನಾಸ್ತಿ ತಸ್ಮಾತ್ ಲಿಂಗಂ ಪ್ರಪೂಜಯೇತ್ ॥೧॥ ಲೀಯತೇ ಗಮ್ಯತೇ ಯತ್ರ ಯೇನ ಸರ್ವಚರಾಚರಂ। ತದೇವ ಲಿಂಗಮಿತ್ಯುಕ್ತಂ ಲಿಂಗತತ್ವ ಪರಾಯಣೈಃ ॥೨॥ ಎಂದುದಾಗಿ ಇಷ್ಟ ಮಹಾ ಚಿದ್ಘನ ಲಿಂಗವೇ ಸರ್ವತತ್ವಂಗಳಿಗೆ ಮೂಲಾಧಾರ ಮೂರ್ತಿ ನೋಡಾ ಸಂಗನ ಬಸವೇಶ್ವರಾ

ಹರಹರಾ ಶಿವಶಿವಾ, ಕರುಣಾಕರ ಮತ್ಪ್ರಾಣನಾಥಾ ಮಹಾಪ್ರಭು ಜಂಗಮವೇ ಸರ್ವದಾ ಪರಬ್ರಹ್ಮ ಘನ ಗಂಭೀರ ಪರತತ್ವ ಮೂರ್ತಿನೋಡಾ. ಜಂಗಮವೇ ನಿರುಪಮ ನಿರವಯನೋಡಾ, ನಿಶ್ಚಿಂತ ನಿಃಕಳಂಕ ನೋಡಾ, ಜಂಗಮವೇ ಸ್ವಯ ಚರ ಪರವಸ್ತು ನೋಡಾ, ಭೂರುದ್ರ ಮೂರ್ತಿ ನೋಡಯ್ಯ ಸತ್ಯ ಸದಾಚಾರ ಮೂರ್ತಿ ನೋಡಯ್ಯ ಜಂಗಮವೇ ಸತ್ಕ್ರಿಯಾ ಸದಾಚಾರ ಮೂರ್ತಿ ನೋಡಯ್ಯಾ, ಜಂಗಮವೇ ಸತ್ಕ್ರಿಯಾ ಸಮ್ಯಜ್ಞಾನ ಮೂರ್ತಿ ನೋಡಯ್ಯಾ, ಸದ್ಭಕ್ತಿಪ್ರಿಯ ಜಂಗಮವೆ ಗುರುಲಿಂಗ ಭಕ್ತಂಗೆ ಹರಣ ಕಿರಣ ಚೈತನ್ಯ ಮೂರ್ತಿ ನೋಡಯ್ಯಾ, ಪರಮಾನಂದ ಪರಿಣಾಮಿ ನೋಡಯ್ಯಾ, ಜಂಗಮವೇ ಸಚ್ಚಿದಾನಂದ ಮೂರ್ತಿನೋಡಯ್ಯಾ, ಜಗತ್ಪಾವನ ಮೂರ್ತಿ ನೋಡಯ್ಯಾ; ಕಾರಣಾವತಾರ ಮೂರ್ತಿ ನೋಡಯ್ಯಾ; ಜಂಗಮವೆ ಅಂಗಲಿಂಗವೆರಡಕ್ಕೆ ಹರಣ ಕಿರಣ ಚೈತನ್ಯ ಮೂರ್ತಿ ನೋಡಯ್ಯ; ಅದೆಂತೆಂದೊಡೆ " ಭೂಸುರೋ ಬ್ರಾಹ್ಮಣಶ್ಚೈವ ಭೂರುದ್ರೋ ಜಂಗಮಸ್ತಥಾ। ಸುರರುದ್ರದ್ವಯೋರ್ಮಧ್ಯೇ ರುದ್ರ ಏವ ವಿಶೇಷಿತಃ ॥೧॥ ನಾದ ಬಿಂದು ಕಲಾತೀತಂ ವೇದಶಾಸ್ತ್ರಾತಿ ವರ್ತನಂ। ಆದಿ ಮಧ್ಯಾಂತರಹಿತಂ ನಿತ್ಯಾನಂದಾತ್ಮಕಂ ನಿಜಂ ॥೨॥ ಎಂದುದಾಗಿ ಜಂಗಮವೇ ಸದ್ಭಕ್ತ ಮಾಹೇಶ್ವರ ಸದ್ಧರ್ಮ ಸರ್ವಾಚಾರ ಸಂಪತ್ತಿನಾಚರಣೆಗೆ ಕಾರಣ ಕರ್ತನೋಡಾ ಸಂಗನಬಸವೇಶ್ವರಾ.

ಅಯ್ಯಾ ಜಂಗಮವೆಂದೊಡೆ ಬಾಯಿಲಿಕ್ಕವೇ? ಜಂಗಮವೆಂದೊಡೆ ಉಪಾಧಿಕನೇ? ಜಂಗಮವೆಂದೊಡೇನು ಸ್ತ್ರೀಲಂಪಟನೇ? ಈ ಗುಣವುಳ್ಳವನ ಚರಜಂಗಮವೆಂಬೆನೆ? ಎನ್ನನು. ಈ ಪಾತಕದ ನುಡಿಯ ಕೇಳಲಾಗದು. ಜಂಗಮವೆಂಥವನೆಂದೊಡೆ— ನಿರ್ಲೇಪ, ನಿರುಪಾಧಿಕ, ನಿರ್ಬೋಧ, ನಿರಾಶ್ರಿತ, ನಿಷ್ಕಾರಣ, ನಿರ್ಲಂಪಟ ಜಂಗಮ ಈ ಷಡ್ಗುಣ ಭರಿತನಾದೊಡೆ ಜಂಗಮವೆಂಬೆನಯ್ಯಾ. ಇಂತಿಪ್ಪುದೆ ಕಾರಣವಾಗಿ ಪ್ರಭುದೇವರೇ ಶರಣೆಂದು ಬದುಕನೇ ಬಸವಣ್ಣ? ಇವರಿಬ್ಬರು ಒಕ್ಕುದಕೊಂಡು ನಾನು ಬದುಕಿದೆನು ಕಾಣಾ; ಇಂತು ಪ್ರಮಥಗಣ ಮಾರ್ಗದಲ್ಲಿ ದೃಢಚಿತ್ತದಿಂದ ನಿಂದ ಮಹಂತ ಶರಣಂಗೆ ನಾನು ನೀನು, ಗುರುವು ಶಿಷ್ಯ, ಭಕ್ತ ಜಂಗಮ, ಸತಿಪತಿ, ತಂದೆ ಮಗನೆಂಬ, ಉಭಯ ಶಬ್ದ ಉಂಟೇ ನೋಡಾ ಸಂಗನಬಸವೇಶ್ವರಾ.

"ಬತ್ತಿ (ಕುಂಚ) ಇಲ್ಲದೆ ಬರೆಯಬಹುದೆ ಚಿತ್ತಾರವ? ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ? ಜಂಗಮವಿಲ್ಲದೆ ಲಿಂಗಾರ್ಚನೆ ಮಾಡಬಹುದೆ?

ರೂಢೀಶ್ವರನ ಭೇದಿಸಬಹುದೆ ? ಒಡಲಿಲ್ಲದ ನಿರಾಳ ಕರ್ತೃ ಕೂಡಲಸಂಗಮ ದೇವಾ ಜಂಗಮಮುಖ ಲಿಂಗನಾಗಿ, ಮತ್ತೊಂದನರಿಯೆನಯ್ಯಾ"

ಈ ಗುರುಲಿಂಗ ಜಂಗಮಗಳ ಮಹತ್ವವನ್ನೂ ಕ್ರಿಯಾಚಾರವನ್ನೂ ಅರಿತ ಶ್ರೀ ದೇವರದಾಸಿಮಾರ್ಯರು ಸೂತ್ರದಂತಿರುವ ಒಂದೇ ವಚನದಿಂದ ಹೇಳಿರುವದೇನಂದರೆ— "ಪರವಧುವನೆರೆಯದೆ, ಪರಧನವ ತುಡುಕದೆ, ಪರ ದೈವದಿಚ್ಛೇ ನಡೆಯದೆ, ಗುರುಲಿಂಗಜಂಗಮಕ್ಕೆ ವರದಾಸನಾಗುವಾತನೇ ಧರೆ ಮೂರಕ್ಕೆ ಗುರುವಾಗಿಪ್ಪನಯ್ಯಾ ರಾಮನಾಥಾ,

ಶ್ರೀಗುರುಲಿಂಗ ಜಂಗಮದ ಪಾದೋದಕದಿಂದ ತನುವಿನ ಜಡತ್ವವ ಳಿದು, ಲಿಂಗೇಂದ್ರಿಯಗಳ ಮಾಡುವದಯ್ಯ, ಪಾದೋದಕದಿಂದ ಕರಣಂಗಳ ಕಾಮವಿಕಾರವಳಿದು, ಲಿಂಗನಡೆ, ಲಿಂಗನುಡಿ, ಲಿಂಗನೋಟ, ಲಿಂಗಕೂಟ, ಲಿಂಗಭೋಗ, ಲಿಂಗಾಚಾರವ ತೋರುವದಯ್ಯ, ಪಾದೋದಕದಿಂದ ಪ್ರಾಣ ಸಂಚಲ ಗುಣವಳಿದು, ಮಂತ್ರಧ್ಯಾನದೊಳು ನಿಲಿಸುವುದಯ್ಯ; ಮತ್ತು ಅಜ್ಞಾನ ಜಡತ್ವವಳಿದು, ಅಜಡ ಸ್ವರೂಪ ಮಾಡಿ ಸುಜ್ಞಾನ ಸುಖವ ತೋರುವ ದಯ್ಯ. ಪಾದೋದಕದಿಂದ ಮಲಮಾಯಾ ಕರ್ಮ ಪಾಶವ ಹರಿದು, ನಿರ್ಮಲ ನಿರ್ಮಾಯ ಸ್ವರೂಪವ ಮಾಡಿ ಚಿಜ್ಜ್ಯೋತಿಸ್ವರೂಪವೆಂದೆನಿಸುವದಯ್ಯ. ಶ್ರೀಗುರುಲಿಂಗ ಜಂಗಮದ ಪಾದೋದಕವೇ ಪರಾತ್ಪರ ದೇವಲೋಕದ ದೇವ ಗಂಗಾಜಲ, ಶಿವಲೋಕದ ಶಿವಗಂಗಾಜಲ; ಸಂಭವಲೋಕದ ಪರಮಗಂಗಾ ಜಲವಾಗಿ ನೆಲಿಸಿರ್ದುದು ನೋಡಾ ಸಂಗನಬಸವೇಶ್ವರಾ॥

ಶ್ರೀಗುರುಲಿಂಗ ಜಂಗಮದ ಹಸ್ತಪರುಷದಿಂದ ಪವಿತ್ರವಾದ ಶುದ್ಧ ಪ್ರಸಾದದಿಂದ ತನುವಿನ ಕಾಮವಿಕಾರವಳಿವುದಯ್ಯಾ, ಶ್ರೀ ಗುರುಲಿಂಗ ಜಂಗಮದ ಸಿದ್ಧ ಪ್ರಸಾದದಿಂದ ಮನದ ಕಾಂಕ್ಷೆ ಹರಿವುದಯ್ಯ, ಶ್ರೀ ಗುರು ಲಿಂಗಜಂಗಮದ ಪ್ರಸಿದ್ಧ ಪ್ರಸಾದದಿಂದ ಭಾವದ ಭ್ರಮೆ ಕೆಡುವುದಯ್ಯ, ಕಾರಣ ಶ್ರೀ ಗುರುಲಿಂಗ ಜಂಗಮದ ಪ್ರಸಾದವೇ ಪರಮಾಮೃತ ಸುಧಾ ಜ್ಯೋತಿರ್ಮಯ ಲಿಂಗ ನೋಡಾ ಸಂಗನ ಬಸವೇಶ್ವರಾ.

ವಿಭೂತಿ ವಿಭವಶ್ಚೈವ ವಿಧಿಕರ್ಮ ವಿನಾಶನಂ। ಯಮಲೋಕ ಭಯ ನ್ನಾಸ್ತಿ ಶಿವಲೋಕಂ ಮಹೀಯತೇ॥ ಪಾದ ಭಿನ್ನಾಹಿ ಲೋಕಾನಾಂ ಮೌಳಿ ಬ್ರಹ್ಮಾಂಡ ಭಿತ್ತಯೇ ಭುಜಪ್ರಾಂತ ದಿಗಂತಾನಾಂ ಭೂತಾಯ ಪತಯೇ ನಮಃ ॥

ನೇತ್ರಾತ್ ಸೂರ್ಯಾತ್ ಮನಃ ಶಂಭೋಃಕಪಿನಾದ್ದ್ವಾದಶಾನ್ವಿತಃ । ಶ್ವೇತಷೋಡಶ ಸಂಜಾತಂ ಸೋಮರೂಪ ದ್ವಿಲೋಚನಾತ್ ॥೧॥ ಕೃಷ್ಣೋ ದಶವಿಧ ಜಾತಾವಹಿ ರೂಪ ತ್ರಿಲೋಚನಾತ್ । ರುದ್ರ ನಯನಾಂಬು ಜಾತಾನಿ ರುದ್ರಾಕ್ಷಾಣಿ ಸರ್ವೋತ್ತಮಾ ॥೨॥ ಯೋ ಧತ್ತೇ ಭಸ್ಮರುದ್ರಾಕ್ಷಂ ಸರುದ್ರೋ ನಾತ್ರ ಸಂಶಯಃ ॥

ಶ್ರೀ ಮಹಾಮಂತ್ರ ಜಪಿಸಿದಾತಂಗೆ, ಮೃತ್ಯಲೋಕ ಮೊದಲಾಗಿ ಆವ ಲೋಕದಲ್ಲಿ ಹೋದರೂ, ಸಮಸ್ತಲಿಂಗ ಭೋಗದೊರೆವುದಯ್ಯಾ ಮಹಾ ಮಂತ್ರವ ಜಪಿಸಿದಾತಂಗೆ ಸತ್ಯ ಸಾತ್ವಿಕ ಪರೋಪಕಾರ ಗುಣದೊರೆವದಯ್ಯಾ ಸಾರಸದ್ಭಕ್ತಿಯೂ, ಕ್ಷಮೆ, ದಯೆ, ಶಾಂತಿ, ಸೈರಣೆ, ಸತ್ಕ್ರಿಯಾಜ್ಞಾನ ಸದಾಚಾರಗಳೂ ನಿಜಶಿವಯೋಗವೂ ದೊರೆಯುವವಯ್ಯಾ.

ಭಕ್ತನೆಂತೆಂಬೆನಯ್ಯಾ ಭವಿಸಂಗ ಬಿಡದನ್ನಕ್ಕ? ಮಹೇಶನೆಂತೆಂಬೆ ನಯ್ಯಾ ಪರಸ್ತ್ರೀ ಪರಾರ್ಥ ಬಿಡದನ್ನಕ್ಕ? ಪ್ರಸಾದಿಯೆಂತೆಂಬೆನಯ್ಯಾ ಅಧಿವ್ಯಾಧಿ ನಷ್ಟವಾಗದನ್ನಕ್ಕ? ಪ್ರಾಣಲಿಂಗಿ ಎಂತೆಂಬೆನಯ್ಯಾ ಪ್ರಾಣ ಸ್ವಸ್ಥಿರವಾಗದನ್ನಕ್ಕ? ಶರಣನೆಂತೆಂಬೆನಯ್ಯಾ ಪಂಚೇಂದ್ರಿಯ ನಾಶವಾಗ ದನ್ನಕ್ಕ? ಐಕ್ಯನೆಂತೆಂಬೆನಯ್ಯಾ ಜನನ ಮರಣವಿರಹಿತವಾಗದನ್ನಕ್ಕ? ಇಂತಪ್ಪ ಭಾಷೆವ್ರತ ವೇಷಂಗಳ ನಾನರಿಯೆನಯ್ಯಾ; ಅಘಟಿತ ಘಟಿತ ವರ್ತಮಾ ನಂಗಳ ನಾನರಿಯೆನಯ್ಯಾ. ನಿಮ್ಮ ತೊತ್ತು ಭೃತ್ಯಾಚಾರವ ಮಾಡಿದೆ ಕೂಡಲಸಂಗಮದೇವಾ॥

ಒಟ್ಟಿನಲ್ಲಿ ದ್ವಾದಶಾಚಾರಗಳಿಂದೊಡಗೂಡಿದ ಪಂಚಾಚಾರಗಳ ಮೆಟ್ಟು, ಅಷ್ಟಾವರಣ ಕ್ರಿಯೆಗಳ ಕಟ್ಟು, ಸರ್ವಾಚಾರ ಸಂಪತ್ತಿನಾಚಾರದ ನಿಟ್ಟು, ಸಕೀಲುಗಳ ಗುಟ್ಟು, ಷಟ್ಕಾಯಕವಳವಟ್ಟ ಸದ್ಭಕ್ತನು ಲಿಂಗಸೂತ್ರ ಗುರು ಗೋತ್ರ, ಜಂಗಮವೇತ್ರ ಪಾದೋದಕಪಾತ್ರ, ಪ್ರಸಾದ ಕ್ಷೇತ್ರ, ವಿಭೂತಿ ಗಾತ್ರ, ರುದ್ರಾಕ್ಷಿ ನೇತ್ರ, ಮಂತ್ರಸ್ತೋತ್ರಗಳಿಂದ ಅಂಗವಿಕಾರವಳಿದು ಲಿಂಗವೇ ತಾನಾಗಿ, ಲಿಂಗಭೋಗೋಪಭೋಗಿಯಾಗಿ ಜೀವನ್ಮುಕ್ತನಾಗಿ, ಶೋಭಿಸು ವವನೇ ನಿಜವೀರಶೈವನು,

# ವಚನಕಾರರು

( ಲೇಖಕರುಃ- ಶ್ರೀ. ಬಿ. ವ್ಹಿ. ಡಂಬಳ ರೋಣ )



ವಚನಕಾರರೆಂದರೆ ದೇವರೂಪಿ ಮಾನವರು, ಅಮೃತವಾಣಿಯ ಸೆಲೆಗಾರರು. ಅವರ ವಚನಗಳೆಂದರೆ ಅಮೃತವಿದ್ದಂತೆ. ಹಾಲತೊರೆಗೆ ಬೆಲ್ಲದಂತೆ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ತೆರೆನೊರೆಗಳಿದ್ದರೆ ಅದು ಹೇಗೆ ಉತ್ತಮೋತ್ತಮವೊ ಹಾಗೆ ವಚನಕಾರರ ವಚನಗಳು ಅನುಭಾವ, ಸ್ಫೂರ್ತಿ, ನುಡಿಗಳ ಮೇಳ ಮತ್ತು ಸುಲಭ ಶೈಲಿ ಇವೆಲ್ಲವುಗಳ ಸಂಗಮ ಸ್ಥಾನವಾಗಿದೆ. ಶುದ್ಧ ಆಚಾರ ವಿಚಾರಗಳನ್ನು ಅರಿಯಲು ಅಥವಾ ಅವು ತಪ್ಪಿದರೆ ಅವುಗಳನ್ನು ತಿದ್ದಲು ವಚನಗಳನ್ನೇ ನೋಡತಕ್ಕದ್ದು ಯಾಕಂದರೆ ಸತ್ಯ ಶರಣರ ವಚನಗಳು ಸುಖದ ಬೀಡು! ದೇವರ ನಾಡು!! ಮತ್ತು ಮಾಯೆಯಕೇಡು !!!

ವಚನಕಾರರು ಸಂಸ್ಕೃತದಲ್ಲಿದ್ದ ಆಧ್ಯಾತ್ಮಜ್ಞಾನವನ್ನು ಕನ್ನಡಕ್ಕಿಳಿಸಿದರು. ಸುಸಂಸ್ಕೃತರಲ್ಲಿದ್ದ ಜ್ಞಾನವನ್ನು, ಅಸಂಸ್ಕೃತರಲ್ಲಿ ಹರಡಿ ಅವರನ್ನು ಧನ್ಯಗೊಳಿಸಿದರು. ಉಚ್ಚತತ್ವಗಳೇ ಪ್ರತ್ಯಕ್ಷ ಆಚರಣೆಯನ್ನು ಮಾಡುತ್ತಾ ಅವರು ಜನರಲ್ಲಿ ಕೂಡಿಕೊಂಡು ನಡೆದಿದ್ದರಿಂದ, ವಚನಗಳನ್ನು ಕನ್ನಡದಲ್ಲಿ ಬರೆದುದರಿಂದ ಮತ್ತು ಸರ್ವಗುಣವಾದ ಭಕ್ತಿಯನ್ನೇ ತಮ್ಮ ಸಂಪ್ರದಾಯಕದ ಮುಖ್ಯ ಲಕ್ಷಣವನ್ನಾಗಿ ಮಾಡಿದ್ದರಿಂದ, ಧರ್ಮರಾಜ್ಯದಲ್ಲಿ ಲೋಕ ಸತ್ಯೆಯನ್ನು ಸ್ಥಾಪಿಸಿದರೆಂದು ಹೇಳಬಹುದು.

ವಚನಕಾರರು ಬಸವಣ್ಣನ ಕಾಲಕ್ಕಿಂತಲೂ ಒಂದು ಶತಮಾನ ಪೂರ್ವದಲ್ಲಿ ವಚನಗಳನ್ನು ಬರೆಯಲು ಪ್ರಾರಂಭಿಸಿದ್ದರೆಂದು ಊಹೆ ಇದೆ. ಸಕಲೇಶ ಮಾದರಸನೂ ಮತ್ತು ದೇವರ ದಾಸಿಮಯ್ಯನೂ ಬಸವಣ್ಣನಿಗಿಂತಲೂ ಪೂರ್ವಜರು. ದೇವರ ದಾಶಿಮಯ್ಯನು ಬಿಜಾಪೂರ ಜಿಲ್ಹೆಯ ಶಿಂದಗಿ ತಾಲೂಕಿನ ಮುದನೂರ ಎಂಬ ಊರಿನವನು. ಏನೆ ಇರಲಿ, ಒಟ್ಟಿಗೆ ನೋಡಲಾಗಿ, ವೃಕ್ಷದೊಡ್ಡದಾಗಿ ರಸಪೂರ್ಣವಾದ ಹಣ್ಣುಗಳಾಗುವ ಪೂರ್ವದಲ್ಲಿಯೇ, ಅದು ಮೊಳೆತು ಚಿಗಿತು ಕವಲೊಡೆದು, ಬೆಳೆದು, ಹೂತು,

ಮಿಡಿ ಕಾಯಿಗಳಾಗುವದು ಹೇಗೆ ಅವಶ್ಯವೋ ಹಾಗೆ ಕರ್ನಾಟಕದಲ್ಲಿ ಬಸವಾದಿ ಭಕ್ತರು ಉದಯವಾಗುವ ಮೊದಲೆ, ಅನೇಕ ಶರಣರು ತಮ್ಮ ಕೈಲಾದ ಮಟ್ಟಿಗೆ ಧರ್ಮ ಜಾಗೃತಿಯ ಕಾರ್ಯವನ್ನು ಮಾಡಿದ್ದರು, ಬಸವನ ಕಾಲಕ್ಕೆ ಈ ಜಾಗ್ರತಿಯು ಮಿಕ್ಕು ಎಲ್ಲಕ್ಕೂ ಮೇಲಕ್ಕೇರಿತು. ಅಗ ಕಲ್ಯಾಣದ ಮಧ್ಯಬಿಂದುವಿನಿಂದ ಸುತ್ತಲೂ ಧರ್ಮ ಪ್ರವಾಹವು ಕರ್ನಾಟಕದಲ್ಲೆಲ್ಲ ಹರಿಯಿತು. ಅನುಭವಮಂಟಪದ ಸಂಘಟನೆಯು ಈ ಪ್ರಚಂಡ ಜಾಗ್ರತಿ ರೂಪ ದೇವಾಲಯಕ್ಕೆ ಕಳಸವಿಟ್ಟಂತೆ ಕಂಗೊಳಿಸಿತು.

ಒಂದು ಮನೆಯನ್ನು ಕಟ್ಟಬೇಕಾದರೆ ಕಲ್ಲು, ಇಟ್ಟಂಗಿ ಮುಂತಾದವುಗಳೇ ಹೆಚ್ಚು ಬೇಕಾದರೂ, ಗಚ್ಚು ಇಲ್ಲದಿದ್ದರೆ ಅಥವಾ ತಿಳಿಗಚ್ಚು ಇಲ್ಲದಿದ್ದರೆ ಆ ಮಂದಿರವು ಕತ್ತರಿಸಿ ಬೀಳುವಂತೆ ಸಮಾಜವೆಂಬ ಕಟ್ಟಡಕ್ಕೆ ಅನ್ನ, ವಸ್ತ್ರ, ಧನ, ಸಂಪತ್ತು ಎಷ್ಟೇ ಇದ್ದರೂ, ಧರ್ಮ ನೀತಿಯೆಂಬ ತಿಳಿಗಚ್ಚು ಇಲ್ಲದಿದ್ದರೆ ಅದು ಕೂಡಲೆ ಕುಸಿಬಿದ್ದು ಹೋಗುವದೆಂಬಲ್ಲಿ ಸಂಶಯವಿಲ್ಲ. ಮಣಿಯೊಳಗಿನ ಸೂತ್ರದಂತೆ, ಕಟ್ಟಡದೊಳಗಿನ ಕಂಬಗಳಂತೆ, ಅಂಗಾಂಗಗಳಲ್ಲಿರುವ ಪ್ರಾಣದಂತೆ, ಧರ್ಮವು ಮನುಷ್ಯನ ಪ್ರತಿಯೊಂದು ವ್ಯವಹಾರ ಮತ್ತು ಚಲನವಲನ ಆಧಾರವಾಗಿದೆ, ಆ ಧರ್ಮವೇ ಈ ವಚನ ವಾಙ್ಮಯದ ಮುಖ್ಯ ವಿಷಯವಾಗಿರುವದು. ಇದೇ ಇಡೀ ಮಾನವಕುಲದ ಅಡಿಗಲ್ಲಾಗಿದೆ, ಆಕರ್ಷಕವಾಗಿದೆ ಇಂಥ ವಚನವಾಙ್ಮಯವನ್ನು ಹೆಣೆದವರು ವಚನಕಾರರು. ಅವರಲ್ಲಿ ಸ್ತ್ರೀ ವಚನಕಾರ್ತಿಯರೂ ಇರುವರು. ಇದರಿಂದ ಅವರಲ್ಲಿಯೂ ಎಂಥ ಉತ್ಕಟ ವ್ಯಕ್ತಿ ಭಾವವು ಮತ್ತು ಧ್ಯೇಯ ನಿಷ್ಠೆಯು ಇರಬಲ್ಲುದೆಂಬುದು ಒಡೆದುಕಾಣುವದು. ಈ ಶ್ರೇಷ್ಠ ಗೌರವ ಪೂರ್ಣಗುಣಗಳಿಗೆ ಆಶ್ರಯ ಸ್ಥಾನವಾದ ಇಡೀ ಸ್ತ್ರೀ ಜಾತಿಯನ್ನು "ಅನದಿ ಕೃತೆ" ಎಂಬ ಮುದ್ರೆ ಹೊಡೆದು ದೂರ ಸರಿಸಿ ಬಿಡುವದು ಯೋಗ್ಯವಲ್ಲವೆಂದು ವಚನಕಾರರು ಅವರನ್ನು ಸನ್ನಿಧಿಗೆ ಕರೆದು ಅವರಿಗೆ ಪುರುಷರಂತೆ ದೀಕ್ಷೆಯನ್ನು ಕೊಟ್ಟರು; ಮುಂದೆಬಂದು ತಮ್ಮ ಗುಣದರ್ಶನ ಮಾಡಲಿಕ್ಕೆ ಅನುವು ಮಾಡಿಕೊಟ್ಟರು. ಅವರಾದರೂ ಅದರಂತೆ ನಡೆದು, ಸಾಧ್ವೀಮಣಿಗಳಾದರು.

ಹಲವರು ಭಕ್ತಿಪ್ರಧಾನರಿದ್ದರೆ ಅನ್ಯರು ಜ್ಞಾನಪ್ರಧಾನರಿರುವರು; ಮತ್ತೆ ಕೆಲವರು ಕರ್ಮಯೋಗಗಳಿದ್ದರೆ ಹಲವರು ಜ್ಞಾನಯೋಗಿಗಳಿರುವರು. ಹೇಗಿ

ದ್ದರೂ ಅವರು ತಮ್ಮ ತಮ್ಮ ಉದ್ಯೋಗಗಳನ್ನು ಮಾಡುತ್ತ ದಾಸೋಹ ವೃತ್ತಿಯಿಂದ ಇರುತ್ತಿದ್ದರು. ಅವರ ಅನುಭವವು ಪ್ರಕಾಶಮಾನವಿದ್ದಂತೆ ಅವರ ತತ್ವಜ್ಞಾನ ಓಜಸ್ಸು ಇದ್ದಂತೆ ಅವರ ನೀತಿಯು ನಿರ್ಮಲವಿದ್ದಂತೆ, ಅವರ ನಡತೆಯು ವರ್ಚಸ್ಸುಗಳವಿದ್ದಂತೆ, ಅವರ ಜೀವನವು ಪರೋಪಕಾರ ಪೂರ್ಣವಿದ್ದಂತೆ, ಅವರ ವಚನ ಶೈಲಿಯಾದರೂ ಈ ಎಲ್ಲ ಶ್ರೇಷ್ಠಗುಣಗಳ ಪ್ರತಿಬಿಂಬ ರೂಪವಾಗಿ ಕಂಗೊಳಿಸುತ್ತಿರುವದು ವಚನಗಳಲ್ಲಿ ಕೆಲವು ಅನ್ಯ ಭಕ್ತರೊಡನೆ ಅನುಭಾವಗೋಷ್ಠಿ ಮಾಡುವಾಗ ಪ್ರಶ್ನೋತ್ತರ ರೂಪ, ಇಲ್ಲವೆ ಉತ್ತರ ಪ್ರತ್ಯುತ್ತರದಂತಿರುವವು, ಹಲವು ಆತ್ಮಭಾವವನ್ನು ವ್ಯಕ್ತಮಾಡುವ ಆತ್ಮಗತ ಭಾಷಣದಂತೆ ಮತ್ತೆ ಕೆಲವು ಅನ್ಯರಿಗೆ ಹೇಳಿದಂತೆ ಇರುವವು. ಇವೆಲ್ಲವುಗಳೂ ನೂರಾರು ಬಾಯಿಂದ ನೂರಾರು ಸಮಯಗಳಲ್ಲಿ ಹೊರಬಿದ್ದಿದ್ದರೂ, ಯಾವನೋ ಒಬ್ಬನು ಅಧ್ಯಕ್ಷನಾಗಿ ಅವೆಲ್ಲವುಗಳನ್ನು ಏಕಪ್ರಕಾರ ನುಡಿಸಿದಂತೆ ಅವೆ. ಅನೇಕ ಸ್ತ್ರೀ ಪುರುಷ ಭಕ್ತರಿಂದ ವಚನವಾಙ್ಮಯವೇ ರೂಪಗೊಂಡಿತು. ಒಟ್ಟಿಗೆ ನೂರೆಂಟು ಕೋಟಿ ವಚನಗಳು ಇರುವವೆಂದು ಐತಿಹ್ಯವಿದೆ. ೧೬೩೧೧೩೦೩೦೦ ವಚನಗಳು ಇರುವವೆಂದು ಸಿದ್ಧರಾಮನ ಒಂದು ವಚನದಿಂದ ತಿಳಿದುಬರುವದು! ಈ ಎಲ್ಲ ವಚನಗಳು ೨೧೩ ವಚನಕಾರರ ಹೃದಯದಿಂದ ನುಸುಳಿಬಂದ ಧರ್ಮಜಾಗ್ರತಿಯ ಕಿಡಿಗಳು; ಅವರಲ್ಲಿ ೨೯ ಜನ ಸ್ತ್ರೀಯರೂ ಆ ಮಾಲಿಕೆಯಲ್ಲಿ ಸೇರಿರುವರು. ಅವರೆಲ್ಲರೂ ಬೇರೆ ಬೇರೆ ಮತಸಂಗಡಗಳಿಗೆ ಸೇರಿದವರಾಗಿದ್ದರೂ ತಾವೆಲ್ಲರೂ ಮಾನವ ಜಾತಿಯರು; ಮಾನವ ಜಾತಿಯೊಂದೆ, ತಾವೆಲ್ಲರೂ ಒಂದೇ ಎಂದು ಭಾವಿಸಿದ್ದರು; ಅದರಂತೆ ನಡೆಯುತ್ತಿದ್ದರು. ನಡೆದು ತೋರಿಸಿದರು! ಅದೊಂದೆ ಜಾತಿಯೊಂದು ತಿಳಿದು ಆಚರಿಸುತಿದ್ದರು.

ಹೀಗೆ ಅವರು ಬರೆದುದರಿಂದ ಬಹುಜನ ಸಮಾಜದ ಮೇಲೆ ದೊಡ್ಡ ಉಪಕಾರವಾಯಿತು. ಅವರ ವಾಣಿಯಿಂದ ಕರ್ನಾಟಕದಲ್ಲೆಲ್ಲ ಜನಸಾಮಾನ್ಯರಲ್ಲಿ ಧಾರ್ಮಿಕ ಜಾಗೃತಿಯಾಯಿತು; ಆಧ್ಯಾತ್ಮಿಕ ಜ್ಞಾನ ಪ್ರಸರಿಸಿತು. ಈ ಲೋಕಜಾಗ್ರತಿಯ ಕಾರ್ಯವೇ ವಚನಕಾರರ ಮೂಲೋದ್ದೇಶವಾಗಿತ್ತು. ಅದನ್ನು ಸಾಧಿಸುವದಕ್ಕಾಗಿಯೇ ಅನ್ನದಂತೆ ವಚನಗಳನ್ನು ಬಡಿಸಿ, ವಚನಕಾರರು ಬಾಲಮನಸ್ಸಿನ ಕನ್ನಡ ಜನತೆಯ ಮುಂದೆ ಇಟ್ಟರು. ತಾನು ಪಂಡಿತ ಶ್ರೇಷ್ಠನಿದ್ದರೂ ತಂದೆಯು ತನ್ನ ಚಿಕ್ಕಮಕ್ಕಳೊಡನೆ ಒಬ್ಬ ಮಗು

ವಾಗಿಯೇ ಮಾತನಾಡುವಂತೆ, ಇವರು ಕರ್ನಾಟಕ ಜನತೆಗೆ ತಿಳಿನುಡಿಯು ಲ್ಲಿಯೇ ಉಪದೇಶಾಮೃತವನ್ನು ಉಣಿಸಲೆತ್ನಿಸಿದ್ದಾರೆ. ಒಟ್ಟಿಗೆ ಅವರು ವಿಚಾರಕ್ಕಿಂತ ಆಚಾರಕ್ಕೆ, ನುಡಿಗಿಂತ ನಡೆಗೆ, ಬುದ್ಧಿಗಿಂತ ಭಾವಕ್ಕೆ, ತರ್ಕಕ್ಕಿಂತ ಅನುಭವಕ್ಕೆ, ಕುಲಕ್ಕಿಂತ ಶೀಲಕ್ಕೆ ಹೆಚ್ಚು ಮಹತ್ವಕೊಡುತ್ತಿದ್ದರು. ಆಯಾ ಗುಣಗಳು ಅಳವಟ್ಟು, ಆಯಾ ಆಚಾರಗಳು ನೆಲೆಗೊಂಡು, ಅವು ಅವರೊಡನೆ ತನ್ಮಯವಾದಾಗ ಅವರ ಅಂತಃಕರಣದಲ್ಲಿ ಉದಯಿಸಿದ ಸ್ಫೂರ್ತಿಯ ಕಾರಂಜಿಗಳು. ವಾಙ್ಮಯಸೇವೆ ಮಾಡಬೇಕೆಂದು ಹೊರಟ ಆಧುನಿಕ ಭಾಷಾ ಸೇವಕರಂತೆ ಅವರು ಅವುಗಳನ್ನು ಬರೆಯಲಿಲ್ಲ. ಶರಣನೆಂಬ ಬಿರುದಿಗೆ ಅವರು ಅಭಿಮಾನಗೊಳ್ಳುವರು. ತಮ್ಮ ವಚನಗಳಿಂದರೆ ತಮ್ಮ ತಮ್ಮ ಹೆಸರುಗಳನ್ನು ಹಾಕದೆ, ತಮ್ಮ ತಮ್ಮ ಇಷ್ಟದೇವತೆಗಳ ಹೆಸರುಗಳನ್ನು ತಮ್ಮ ಮುದ್ರಿಕೆಗಳನ್ನಾಗಿ ಮಾಡಿಕೊಂಡಿರುವರು. ಈ ಬಗೆಯ ನಿರ್ಮಲ ಮತ್ತು ನಿರಹಂಕಾರವಾದ ಭಾವಭೂಮಿಯಲ್ಲಿ ಭಕ್ತಿಬೀಜವು ಮೊಳೆತು, ಭರದಿಂದ ಬೆಳೆದು ಪೇರ್ಮರವಾಗಿ, ಅದು ಕರ್ನಾಟಕದ ಸಂತಪ್ತರಿಗೆ ನೆಳಲ ನೀಡಿ, ಅವರನ್ನು ಸಂತೈಸಿತು. ಆರ್ತರಿಗೆ ಅನಾಥರಿಗೆ ಆಶ್ರಯಕೊಟ್ಟು ಸಲುಹಿತು. ಸಂಸಾರ ಯಾತ್ರೆಯಲ್ಲಿ ದಣಿದವರಿಗೆ ತಂಪು ಕಂಪಾದ ಪುಷ್ಪ ಪರಿಮಳವನ್ನು ಬೀರಿ ಅವರ ದಣಿವಾರಿಸಿತು. ಮತ್ತು ಜಿಜ್ಞಾಸುಗಳಿಗೆ ಜ್ಞಾನಫಲವನ್ನು ಕೊಟ್ಟು ಅವರ ಹಸಿವನ್ನು ಹಿಂಗಿಸಿತು. “ವ್ಯಾಸನ ಪುರಾಣ, ಶತರುದ್ರ, ಗಾಯತ್ರಿ ಜಪ ಯಾವವೂ ಶರಣ ಸಾಹಿತ್ಯಕ್ಕೆ ಸರಿಯಾಗಲಾರವು.”

ವಚನಕಾರರು ಪ್ರತ್ಯಕ್ಷವಾದ ಗದ್ಯರಚನೆಯ ರೀತಿಯನ್ನು ರೂಢಿಯಲ್ಲಿ ತಂದಿರುವರು. ಪೂರ್ವದ ಚಂಪೂ ಗ್ರಂಥಗಳಲ್ಲಿರುವ ಗದ್ಯ, ಇವುಗಳಿಗಿಂತ ಬೇರೆ ಬಗೆಯ ಹೆಚ್ಚು ಶ್ರೇಷ್ಠವಾದ ಶೈಲಿಗಳಲ್ಲಿ ವಚನಗಳು ಬರೆಯಲ್ಪಟ್ಟಿರುವವು. ಸ್ವಲ್ಪ ಶಬ್ದಗಳಲ್ಲಿ ಬಹಳ ಮತ್ತು ಗೂಢ ಅರ್ಥವನ್ನು ವ್ಯಕ್ತಮಾಡುವ ಗುಣಗಳು ವಚನವಾಙ್ಮಯದಲ್ಲಿ ಪರಮಾವಧಿಯನ್ನು ಮುಟ್ಟಿವೆ ಅವುಗಳಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯವು ಶುದ್ಧವೂ, ಅನುಭಾವಶಿಷ್ಟವೂ ಮತ್ತು ಆಧಾರಭೂತವೂ ಇರುವದು. ವಚನಕಾರರು ಸತ್ಯವನ್ನು ನೋಡಿ, ಅನುಭವಿಸಿ, ಅದನ್ನು ಸ್ಫೂರ್ತಿಯಿಂದ ನುಡಿದುದರಿಂದಲೇ ಅವರ ವಾಣಿಯಲ್ಲಿ ತೇಜವೂ, ಬಲವೂ, ವರ್ಚಸ್ಸೂ ಕಂಡುಬರುವವು.

ಇಂಥ ವಾಙ್ಮಯವನ್ನು ನಿರ್ಮಾಣ ಮಾಡುವಷ್ಟು ಶಕ್ತಿಯುಳ್ಳವರು ಕನ್ನಡನಾಡಿನವರು ಮತ್ತು ಉಚ್ಚ ಹಾಗೂ ಕಠಿಣ ವಿಚಾರಗಳನ್ನು ಸಹಜವಾಗಿ ವ್ಯಕ್ತಮಾಡುವ ಸಾಮರ್ಥ್ಯವು ಕನ್ನಡ ನುಡಿಯಲ್ಲಿರುವದು ಎಂದು ವಚನಕಾರರು ತೋರಿಸಿರುವರು. ಇದು ಕನ್ನಡ ಭಾಷೆಯ ಗೌರವವನ್ನಷ್ಟೆ ಅಲ್ಲ, ಕನ್ನಡಿಗರ ಗೌರವವನ್ನೂ ಅರಳಿಸುತ್ತದೆ. ಅದರಲ್ಲಿಯೂ ಎಷ್ಟೋ ಸ್ತ್ರೀಯರು ವಚನಕಾರರಿದ್ದರೆಂಬ ಸಂಗತಿ ಮತ್ತಷ್ಟು ಕನ್ನಡದ ಕಂಪನ್ನು ಸೂಸುವದು.

# ಅಂಗವೇ ಲಿಂಗ

(ಲೇ:- ಸರ್ವಭಾಷಾರತ್ನ, ಹಿತ್ತಲಮನೆ ಪಂಡಿತ ಮಲ್ಲಣಾರ್ಯರು ಬಾಗಿಲಕೋಟೆ)

## ೧. ನರಜನ್ಮ

ಜಗನ್ನಿವಾಸ, ವಿರಾಟಾತ್ಮಾ, ಸರ್ವಾಧಾರ, ಸರ್ವಸ್ವರೂಪ, ಸರ್ವಾಂತರಾತ್ಮಾ, ಸರ್ವಜ್ಞ, ಸರ್ವೇಶ್ವರ, ಸರ್ವಮಯ, ಸರ್ವಗುಣೈಶ್ವರ್ಯ, ಇಚ್ಛಾ, ಜ್ಞಾನ, ಕ್ರಿಯಾಖ್ಯ, ಶಕ್ತಿತ್ರಯ ಸಂಪನ್ನನಾದ ಪರಬ್ರಹ್ಮ ಪರಶಿವನು ಚಿದಚಿದಾತ್ಮಕ ಅದ್ಭುತ ವಿರಾಟ ವಿಶ್ವವನ್ನು ತನ್ನ ಲೀಲಾಭುವನವಾಗಿ ಹಾಗೂ ಅದರಲ್ಲಿ ನಿವಾಸ ಮಾಡಲೋಸುಗ ೮೪ ಲಕ್ಷ ಜೀವರಾಶಿಗಳನ್ನು ಸೃಜಿಸಿದ್ದಾನೆ. ಈ ತತ್ವವನ್ನು ಅಶೇಷ ನಿಯಮಾಗಮಗಳು ಮತ್ತು ನಿಖಿಲ ಧರ್ಮಶಾಸ್ತ್ರಗಳು ಅಸಂದಿಗ್ಧವಾಗಿ ಘೋಷಿಸುತ್ತವೆ. ಈ ಸಮಸ್ತ ಜೀವರಾಶಿಗಳಲ್ಲಿ ಆತ್ಮಾನಾತ್ಮ ವಿವೇಚನಶಕ್ತಿ ಸಂಪನ್ನನಾದ ಮಾನವನೇ ಶಿರೋಮಣಿಯಾಗಿದ್ದಾನೆ. "ಮತ್ವಾ ಕರೋತಿ ಇತಿ ಮಾನವಃ" "ಮನುತೆ ಇತಿ ಮಾನವಃ" ಸಾರಾಸಾರ ವಿಚಾರ ಮಾಡಿ ಕಾರ್ಯಪ್ರವೃತ್ತನಾಗುವದರಿಂದ ನರನಿಗೆ ಮಾನವನೆಂಬ ಅಭಿಧಾನವು ಪ್ರಾಪ್ತವಾಗಿದೆ. ನರಜನ್ಮವು ಎಷ್ಟು ದುರ್ಲಭವಾಗಿದೆಂದು ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಶಂಕರಾಚಾರ್ಯರು ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. "ಜಂತೂನಾಂ ನರಜನ್ಮ ದುರ್ಲಭಮತಃ ಪುಂಸ್ತ್ವಂ ತತೋ ವಿಪ್ರತಾ। ತಸ್ಮಾದ್ವೈದಿಕ ಧರ್ಮ ಮಾರ್ಗ ಪರತಾ ವಿದ್ವತ್ತ್ವಮಸ್ಮಾತ್ಪರಮ್। ಆತ್ಮಾನಾತ್ಮ ವಿವೇಚನಂ ಸ್ವನುಭವೋ ಬ್ರಹ್ಮಾತ್ಮನಾ ಸಂಸ್ಥಿತಿಃ। ಮುಕ್ತಿರ್ನೋ ಶತಕೋಟಿ ಜನ್ಮ ಸುಕೃತೈಃ ಪುಣ್ಯೈರ್ವಿನಾ ಲಭ್ಯತೆ ॥೧॥" ಸಕಲ ಪ್ರಾಣಿಗಳಲ್ಲಿ ಮನುಷ್ಯಪ್ರಾಣಿಗಳಾಗಿ ಜನಿಸುವದು ಅತ್ಯಂತ ದುರ್ಲಭವಾಗಿದೆ. ಮನುಷ್ಯನಾಗಿ ಜನ್ಮಿಸಿದರೂ ಪುರುಷನಾಗಿ ಹುಟ್ಟುವದು ಶ್ರೇಷ್ಠವಾಗಿದೆ. ಪುರುಷರಲ್ಲಿ ವಿಪ್ರನಾಗಿ ಜನಿಸುವದು ಶ್ರೇಷ್ಠವಾದದ್ದು. ವಿಪ್ರನೆಂದರೆ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನೀಭೂತವಾದ ವಿದ್ಯೆವುಳ್ಳವನು ಅರ್ಥಾತ್ ಬ್ರಹ್ಮಜ್ಞಾನಿಯು. "ಜನ್ಮನಾ ಜಾಯತೆ ಶೂದ್ರಃ ಸಂಸ್ಕಾರಾದ್ವಿಜ ಉಚ್ಯತೆ। ವಿದ್ಯಯಾಯಾತಿ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ

ಉಚ್ಯತೆ" ಜನ್ಮದಿಂದ ಪ್ರತಿಯೊಬ್ಬ ಮನುಷ್ಯನು ಶೂದ್ರನೇ ಆಗಿದ್ದಾನೆ. ಸಂಸ್ಕಾರದಿಂದ (ಕ್ರಿಯಾಚಾರ ದೀಕ್ಷಾದಿಗಳಿಂದ) ದ್ವಿಜನೆನ್ನಿಸಿಕೊಳ್ಳುತ್ತಾನೆ. ವಿದ್ಯೆಯು ದ್ವಿಮುಖವಾಗಿದೆ ಪರಾವಿದ್ಯಾ, ಅಪರಾವಿದ್ಯಾ. ಯಾವ ವಿದ್ಯೆಯಿಂದ ಪರಬ್ರಹ್ಮ ಪರಶಿವನ ಸಾಕ್ಷಾತ್ಕಾರವಾಗುವದೋ ಅದೇ ನಿಜವಾದ ವಿದ್ಯೆ ಅಪರಾ ವಿದ್ಯೆ ಎಂದರೆ ಪುಸ್ತಕೀಯ ಪಾಂಡಿತ್ಯ ಮಾತ್ರ. "ಸಾವಿದ್ಯಾ ಪರಾವಿದ್ಯಾಯಯಾ ಮುಕ್ತಿರ್ಹಿ ಲಭ್ಯತೆ। ಯದ್ವಿದ್ಯಾ ಪ್ರಭಾವೇಣ ಭವಪಾಶೋಪಿ ಛಿದ್ಯತೆ ॥೧॥" ಮುಕ್ತಿಯನ್ನು ಪ್ರಾಪ್ತಮಾಡಿಕೊಡುವ ವಿದ್ಯೆಯೇ ವಿದ್ಯೆ. ಸಂಸಾರಪಾಶವನ್ನು ನಾಶಮಾಡಿ ಮೋಕ್ಷ ಕೊಡುವದೇ ವಿದ್ಯೆ. ವಿಪ್ರನಿಗಿಂತಲೂ ವೈದಿಕಧರ್ಮ ಮಾರ್ಗನಿರತನು ಅರ್ಥಾತ್ ಕ್ರಿಯಾಶೀಲನಾಗಿರುವ ಜ್ಞಾನಿಯು ಶ್ರೇಷ್ಠನು. ಇದಕ್ಕಿಂತಲೂ ವಿದ್ವತ್ವವಿರುವದು ಶ್ರೇಯಸ್ಕರವು. ಬ್ರಹ್ಮಜ್ಞಾನವು ಇದಕ್ಕೂ ಶ್ರೇಷ್ಠವಾದದ್ದು. ಆತ್ಮಾನಾತ್ಮ ವಿವೇಕವು ಇದಕ್ಕೂ ಮಿಗಿಲಾದದ್ದು. ಸ್ವಾನುಭವವು ಅಂದರೆ ಲಿಂಗಾಂಗಸಾಮರಸ್ಯ ಜ್ಞಾನವು ಸರ್ವಶ್ರೇಷ್ಠವಾದದ್ದು. "ಮಹತಾ ಪುಣ್ಯ ಪಣ್ಯೇನ ಕ್ರೀತೆಯಂ ಕಾಯನೌಸ್ತ್ವಯಾ। ಪಾರಂ ದುಃಖೋದ ಧೇರ್ಗಂತುಂ ತರಯಾವನ್ನ ಭಿದ್ಯತೆ" ಮಾನವನು ಈ ಅಗಾಧ ಈ ಭವಜಲಧಿಯನ್ನು ದಾಟಿ ಹೋಗಲು ಅನೇಕ ಜನ್ಮಗಳ ವಿಹಿತ ಕರ್ಮಾನುಷ್ಠಾನದಿಂದ ತನಗೆ ಪ್ರಾಪ್ತವಾದ ಪುಣ್ಯವೆಂಬ ಬೆಲೆಯನ್ನು ಕೊಟ್ಟು ಶರೀರವೆಂಬ ನೌಕೆಯನ್ನು ಕೊಂಡಿದ್ದಾನೆ. ಆದುದರಿಂದ ಈ ನಾವವು ಭಿನ್ನವಾಗುವ ಮೊದಲೇ ಅಂದರೆ ಶರೀರಪಾತವಾಗುವ ಮೊದಲೇ ಭವಸಾಗರವನ್ನು ದಾಟಿ ಹೋಗಬೇಕು. ಇಲ್ಲವಾದರೆ ಮಾನವ ಶರೀರವು ಪ್ರಾಪ್ತವಾದದ್ದು ನಿರರ್ಥಕವಾಗುವದು. ಇಂಥ ದುರ್ಲಭವಾದ ಮಾನವ ಶರೀರವು ಲಭಿಸಿರುವಾಗ 'ಕಾ ತವ ಕಾಂತಾ ಕಸ್ತೇಪುತಃ ಸಂಸಾರೊಯ ಮತೀವ ವಿಚಿತ್ರಃ। ಕಸ್ಯತ್ವಂವಾ ಕುತಃ ಅಯಾತಸ್ತತ್ವಂಚಿಂತಯ ತದಿದಂ ಭ್ರಾತಃ" ನೀನು ಯಾರು? ಎಲ್ಲಿಂದ ಬಂದಿರುವಿ? ನಿನ್ನ ಪತ್ನಿ ಯಾರು? ನಿನ್ನ ಪುತ್ರರಾರು? ಈ ವಿಶ್ವವೆಂದರೇನು? ಮುಂತಾದ ವಿಷಯಗಳನ್ನು ವಿಚಾರಿಸಿ ನೋಡು.

## ಮಾನವನ ಅಪೇಕ್ಷೆ.

ಬ್ರಹ್ಮಾಂಡದಲ್ಲಿ ವಾಸಿಸುವ ಸಮಸ್ತಪ್ರಾಣಿಗಳು ತಮಗೆ ಯಾವಾಗಲೂ ಸುಖವೇ ಪ್ರಾಪ್ತವಾಗಬೇಕೆಂದು ಅಪೇಕ್ಷಿಸುತ್ತವೆ. ದುಃಖಾಪೇಕ್ಷೆಯನ್ನು

ಯಾರೂ ಸ್ವಪ್ನದಲ್ಲಿಯೂ ಮಾಡುವದಿಲ್ಲ. ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿಗಳಿಂದ ಲಭ್ಯವಾದ ಸುಖವು ಕ್ಷಣಿಕವೆಂದು ಅನುಭವಕ್ಕೆ ಬಂದ ನಂತರ ಮಾನವನು ನಿರತಿಶಯ ಸುಖಾನ್ವೇಷಣ ಮಾಡಲು ಪ್ರಾರಂಭಿಸುತ್ತಾನೆ. ಇಂಥ ನಿಕ್ಷಯ ಸುಖ ಪ್ರಾಪ್ತವಾಗಬೇಕಾದರೆ ಯಾವ ವಸ್ತು ಮಾನವನಿಗೆ ಅಪರಿಹಾರ್ಯವಾಗಿದೆ? ಧರ್ಮವೇ ಅತ್ಯಾವಶ್ಯಕವಾಗಿದೆ. ಪ್ರತಿಯೊಬ್ಬ ಮಾನವನಿಗೆ ಧರ್ಮವು ಅನಿವಾರ್ಯವೆಂದು ಸಿದ್ಧಾಂತವಿದೆ. ಮನುಷ್ಯನಲ್ಲಿ ಧರ್ಮಪ್ರವೃತ್ತಿ ಇದ್ದರೆ ಮಾತ್ರ ಅವನು ಮಾನವನಾಗಬಲ್ಲ. ಧರ್ಮವಿಹೀನನಾದ ಮರ್ತ್ಯನು. ಪಶುಸದೃಶನು. ಇದನ್ನೇ ಈ ಶ್ಲೋಕವು ವಿಶದೀಕರಿಸುತ್ತಿದೆ. "ಆಹಾರ ನಿದ್ರಾಭಯ ಮೈಥುನಂಚ ಸಾಮಾನ್ಯ ಮೇತತ್ ಪಶುಭಿರ್ನರಾಣಾಂ। ಧರ್ಮೋಹಿ ತೇಷಾಮಧಿಕೋ ವಿಶೇಷೋ ಧರ್ಮೇಣ ಹೀನಾಃ ಪಶುಭಿಃ ಸಮಾನಾಃ ॥" ಭೋಜನ ನಿದ್ರೆ ಭಯ ಕಾಮಕ್ರೀಡೆ ಮೊದಲಾದ ಗುಣಗಳು ಮಾನವರಲ್ಲಿಯೂ ಪಶುಗಳಲ್ಲಿಯೂ ಸಮಾನವಾಗಿವೆ. ಹಾಗಾದರೆ ಮಾನವರಲ್ಲಿ ಹಾಗೂ ಪಶುಗಳಲ್ಲಿ ಅಂತರವೇನು? ಮನುಷ್ಯರಲ್ಲಿ ಧರ್ಮವು ಒಂದು ವೈಶಿಷ್ಟ್ಯವಾಗಿದೆ. ಧರ್ಮರಹಿತರಾದ ಮಾನವರು ಪಶುಗಳೇ ಆಗಿದ್ದಾರೆ. ಇನ್ನು ಧರ್ಮವೇನೆಂಬುದನ್ನು ವಿಚಾರಿಸುವಾ.

## ಧರ್ಮ.

ಧರ್ಮ' ಶಬ್ದವು ವಿಶ್ವಸಾಹಿತ್ಯದಲ್ಲಿಯೇ ಮೊದಲನೇಸಲ ಯಾವ ಗ್ರಂಥದಲ್ಲಿ ಉಪಯೋಗಿಸಲ್ಪಟ್ಟಿದೆ. ಹಾಗೂ ಅದರ ಭಿನ್ನಾರ್ಥಗಳಾವವು ಎಂಬುದನ್ನು ವಿಚಾರಿಸುವಾ. ಈ ಶಬ್ದವು ಋ. ಪ್ರ. ಮಂಡಲ ೨೨ನೇ ಸೂಕ್ತ ೧೮ ನೇ ಮಂತ್ರದಲ್ಲಿ ಪ್ರಯುಕ್ತವಾಗಿದೆ. (೧) ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ। ಅತೊ **ಧರ್ಮಾಣಿ** ಧಾರಯನ್ । ಇಚ್ಛಾ, ಜ್ಞಾನ, ಕ್ರಿಯಾ ಎಂಬ ಶಕ್ತಿತ್ರಯವು ಯಾವ ಸಚ್ಚಿದಾನಂದ ಪರಬ್ರಹ್ಮ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ನಿತ್ಯನಿರಂತರ ನೆಲೆಸಿದೆಯೋ ಅಂಥ ಸರ್ವಾಂತರ್ಯಾಮಿಯಾದ ಪರಮೇಶ್ವರನು ಚರಾಚರಾತ್ಮಕವಾದ ವಿಶ್ವವನ್ನು ಸೃಜಿಸಿ ಸರ್ವಪದಾರ್ಥಗಳಿಗೆ ತಮ್ಮ ತಮ್ಮ ಧರ್ಮದಂತೆ ವ್ಯವಹರಿಸಲಿಕ್ಕೆ ಹಚ್ಚಿದ್ದಾನೆ. ವಸ್ತು, ಅವಸ್ತು, ಆತ್ಮ, ಅನಾತ್ಮಾ ಇವುಗಳ ವಿಧಾಯಕ ವೃತ್ತಿಗಳಿಗೆ ಅವುಗಳ ಧರ್ಮವೆನ್ನುತ್ತಾರೆ. ಪ್ರತಿಯೊಂದು ಪದಾರ್ಥದ ವ್ಯಕ್ತಿತ್ವವು ಯಾವ ವೃತ್ತಿಯನ್ನು ಅವಲಂಬಿಸಿರುತ್ತದೋ ಆ ವೃತ್ತಿಗೆ

ಆ ಪದಾರ್ಥದ ಧರ್ಮವೆನ್ನುತ್ತಾರೆ. ಪದಾರ್ಥದಲ್ಲಿಯ ಧರ್ಮವು ಕಡಿಮೆ ಯಾದರೆ ಆ ಪದಾರ್ಥವು ಕ್ಷಯ ಹೊಂದುತ್ತದೆ. ಧರ್ಮದ ವೃದ್ಧಿಯಿಂದ ಪದಾರ್ಥವು ವಿಕಾಸ ಹೊಂದುತ್ತ ಹೋಗುತ್ತದೆ. "ಧರ್ಮೇಣ ಗಗನಮೂರ್ಧ್ವಂ ಗಗನ ಮಧಸ್ತಾತ್ತರ ಭವತ್ಯ ಧರ್ಮೇಣ" ಧರ್ಮಾಚರಣೆಯಿಂದ ಮಾನವನಿಗೆ ಉನ್ನತಗತಿ ಪ್ರಾಪ್ತವಾಗುತ್ತದೆ. ಅಧರ್ಮದಿಂದ ಅಧೋಗತಿ ಪ್ರಾಪ್ತವಾ ಗುತ್ತದೆ.

(೨) ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥ ಮಾನ್ಯಾಸನ್ । ತೇ ಗ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇದಿಧ್ಯಾಃ ಸಂತಿದೇವಾಃ । (ಋ. ಪುರುಷ ಸೂಕ್ತ ೧೬) ಸನಾತನ ಕಾಲದಿಂದಲೂ ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಅಗ್ನಿ, ವರುಣ ಮೊದಲಾದ ದೇವತೆ ಗಳು ಪರಶಿವ ಧ್ಯಾನ ಪರಾಯಣರಾಗಿದ್ದರು. ಮತ್ತು ಶಿವಸಾಕ್ಷಾತ್ಕಾರ ಹೊಂದಿದ ಮಹಾನುಭಾವರು ಸರ್ವಭಾವಗಳಿಂದ ಪರಬ್ರಹ್ಮ ಪರಶಿವನ ಸ್ತುತಿ ಪ್ರಾರ್ಥನೆ, ಉಪಾಸನೆ, ಧ್ಯಾನ, ಜಪತಪಾದಿಗಳನ್ನು ನೆರವೇರಿಸುತ್ತ ವೇದ ವಿಹಿತ ಕರ್ಮಾನುಷ್ಠಾನದಲ್ಲಿ ರತರಾಗಿ ಕೃತಕೃತ್ಯರಾದರು. ಅವರು ಪರಶಿವನ ಉಪಾಸನೆ ಮಾಡಿ ಸಕಲ ದುಃಖಗಳಿಂದ ವಿಮುಕ್ತರಾಗಿ ಜಗತ್ತಿನಲ್ಲಿ ಸಂಪೂಜ್ಯ ರಾದರು. ಇಂಥ ದಿವ್ಯ ವಿಭೂತಿಗಳಿಗೆ ಪುನರಾವೃತ್ತಿಯ ಭಯವಿಲ್ಲ.

## ಧರ್ಮವೆಂದರೇನು ಮತ್ತು ಅದರ ಮಥಿತಾರ್ಥವೇನು?

(೩) ಧಾರಣಾತ್ ಧರ್ಮವೆತ್ಯಾಹುಃ ।ಧಾರಣ ಮಾಡುವದಕ್ಕೆ ಧರ್ಮ ವೆನ್ನುತ್ತಾರೆ. (೪) ಧರತಿ ಲೋಕಾನ್ ಧ್ರಿಯತೆ ಪುಣ್ಯಾತ್ಮಭವಾ । ಲೋಕೋದ್ಧಾರ ಮಾಡುವ ಕಾರ್ಯಕ್ಕೆ ಹಾಗೂ ಪುಣ್ಯಾತ್ಮರು ಅಂಗೀ ಕರಿಸಿದ, ಅನುಷ್ಠಾನ ಮಾಡುವ ವಿಧಾನಕ್ಕೆ ಧರ್ಮವೆನ್ನುತ್ತಾರೆ. (೫) ಧರ್ಮೋಧಾರಯತಿ ಪ್ರಜಾಃ । ಧರ್ಮವು ಮಾನವರನ್ನು ಕಾಪಾಡುತ್ತದೆ. (೬) ಧರ್ಮಾತ ಪರಂನಾಸ್ತಿ । (ಬೃಹದಾರಕಣ್ಯೋಪನಿಷತ್ ೧-೪-೧೪) ಧರ್ಮಕ್ಕಿಂತಲೂ ಶ್ರೇಷ್ಠವಾದ ವಿಷಯವೇ ಇಲ್ಲ. (೭) ಧರ್ಮಾನ್ನಾ ಪ್ರಮ ದಿತವ್ಯಂ । (ತೈತರೀಯ ೧-೧೧-೧) ಧರ್ಮಾಚರಣೆಯಲ್ಲಿ ಚ್ಯುತಿಯಾಗ ಕೂಡದು. (೮) ವೇದಾಃ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ। ಎತಶ್ ಚತುರ್ವಿದಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ (ಮನುಸ್ಮೃತಿ ೨-೧೨) ವೇದಸ್ಮೃತಿ ಸದಾಚಾರ ತನ್ನ ಆತ್ಮಕ್ಕೆ ಪ್ರಿಯ ಹಾಗೂ ಪಥ್ಯ

ಕರವಾದ ಪದ್ಧತಿ ಇವುಗಳಿಗೆ ಧರ್ಮವೆನ್ನುತ್ತಾರೆ. (೯) ಧರ್ಮಏವ ಹತೋ ಹಂತಿ ಧರ್ಮೋರಕ್ಷತಿ ರಕ್ಷಿತಃ | (ಮನುಸ್ಮೃತಿ ೮-೧೫) ಧರ್ಮವನ್ನು ತ್ಯಜಿಸುವದರಿಂದ ಧರ್ಮವು ನಾಶಹೊಂದುವದಿಲ್ಲ. ಆದರೆ ಧರ್ಮಭ್ರಷ್ಟನು ನಾಶಹೊಂದುತ್ತಾನೆ. (೧೦) ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯೈಚ ಪ್ರಿಯಮಾತ್ಮನಃ | ಸಮ್ಯಕ ಸಂಕಲ್ಪಜಃ ಕಾಮೋಧರ್ಮ ಮೂಲಮಿದಂ ಸ್ಮೃತಂ (ಯಾಜ್ಞವಲ್ಕ್ಯ ಸ್ಮೃತಿ ೧-೮) ಶ್ರುತಿ, ಸ್ಮೃತಿ, ಸದಾಚಾರ, ಆತ್ಮಕ್ಕೆ ಒಪ್ಪುವ ರೀತಿ, ಸಾರಾಸಾರಾ ವಿಚಾರದಿಂದ ಹುಟ್ಟಿದ ವಾಸನಾ, ಇವೇ ಧರ್ಮದ ಪ್ರಧಾನ ಲಕ್ಷಣದಳು. (೧೧) ಅಥಾತೋಧರ್ಮಂ ವ್ಯಾಖ್ಯಾಸ್ಯಾವಃ| ಯತೋಽಭ್ಯುದಯ ನಿಶ್ರೇಯಸ ಸಿದ್ಧಿಃ ಸ ಧರ್ಮಃ (ಕಣಾದರ ವೈಶೇಷಿಕ ದರ್ಶನ ೧-೨) ಆದಿಭೌತಿಕ ಮತ್ತು ಆಧ್ಯಾತ್ಮಿಕ ಉನ್ನತಿಯನ್ನು ಮಾಡುವದೇ ಧರ್ಮವು (೧೨) ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ | (ಮಹಾನಾರಾಯಣ ೨-೬) ಧರ್ಮವೇ ಜಗತ್ತಿನ ಆಧಾರವು. (೧೩) ಮೃತಂಶರೀರಮಂ ತ್ಸೃಜ್ಯ ಕಾಷ್ಠಲೋಷ್ಠಸಮಂ ಕ್ಷಿತಾ | ವಿಮುಖಾ ಬಾಂಧವಾಯಾಂತಿ ಧರ್ಮಸ್ತಮನುಗಚ್ಛತಿ || (ಮನುಸ್ಮೃತಿ) ಮೃತ ಶರೀರವನ್ನು ಕಟ್ಟಿಗೆ ಮಣ್ಣುಗಳಿಗೆ ಸಮಾನವೆಂದು ಭಾವಿಸಿ ಅದನ್ನು ವಿಸರ್ಜಿಸಿ ಬಂಧುಬಾಂಧವರು ತಿರುಗಿ ಮನೆಗೆ ಬರುತ್ತಾರೆ. ಆದರೆ ಧರ್ಮವು ಮಾತ್ರ ಮೃತದೇಹದಲ್ಲಿಯು ಜೀವಾತ್ಮವನ್ನು ಅನುಸರಿಸುತ್ತದೆ. (೧೪) ತಸ್ಮಾಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿಯುರ್ಯಚ್ಛನೈಃ | ಧರ್ಮೇಣ ಹೀ ಸಹಾಯ್ಯೇನ ತಮಸ್ತಿರತಿ ದುಸ್ತಿರಂ | (ಮನುಸ್ಮೃತಿ) ಈ ಘೋರ ಸಂಸಾರವನ್ನು ದಾಟಬೇಕಾದರೆ ನಿತ್ಯ ಧರ್ಮವನ್ನು ಸಂಚಯಿಸಬೇಕು. (೧೫) ಯತೋಧರ್ಮ ಸ್ತತೊ ಜಯಃ ಧರ್ಮದಂತೆ ಜಯದೊರೆಯುವದು. (೧೬) ಧರ್ಮೋಹಿ ಪರಮೋಲೋಕೆ | ಧರ್ಮೋ ಸತ್ಯಂ ಪ್ರತಿಷ್ಠಿತಂ । (ರಾಮಾಯಣ ಅಯೋಧ್ಯಾಕಾಂಡ ೨೧-೨೬) ಲೋಕದಲ್ಲಿ ಧರ್ಮವೇ ಶ್ರೇಷ್ಠವು. ಸತ್ಯ ಧರ್ಮಾನುಷ್ಠಾನದಲ್ಲಿಯೆ ಸತ್ಯ ಸ್ವರೂಪನಾದ ಪರಶಿವನು ವಾಸವಾಗಿದ್ದಾನೆ. (೧೭) ನಾನಾತ್ಮಪಂತಶ್ಶುವನೇ ಚರಂತಿ ಧರ್ಮಂಚೆ ವಾಸಂ ಚ ಪರಿಶ್ರಮಂ ಚ | ವಿಹ್ಞಾನತೊ ಧರ್ಮಮುಚಾ ಹರಂತಿ । ತಸ್ಮಾತ್ಸಂತೋ ಧರ್ಮ ಮಾಹುಃ ಪ್ರಧಾನಂ । (ಮಹಾಭಾರತವನ ಪರ್ವ-೨೫) ಅನೇಕಪುಣ್ಯಾತ್ಮರು ವನದಲ್ಲಿದ್ದು ಪರಿಶ್ರಮಪೂರ್ವಕ ಧರ್ಮಾಚರಣೆ ಮಾಡಿ ತಮ್ಮ ವಿಶಿಷ್ಟ ಜ್ಞಾನದಿಂದ ಧರ್ಮವೇ ಶ್ರೇಷ್ಠವೆಂದು ಬೋಧಿಸಿರುತ್ತಾರೆ. (೧೮) ಏಕಸ್ಯ ಧರ್ಮೇಣ ಸತಾಂ ಮತೇನ ಸರ್ವೇ ಸ್ಮೃತಂ

ಮಾರ್ಗ ಮನುಪ್ರಪನ್ನ: । ಮಾ ವೈದ್ವಿತೀಯಂ ಮಾ ತೃತೀಯಂಚ ವಾಂಛೇ ತಸ್ಮಾತ್‌ಸ್ಸಂತೋ ಧರ್ಮ ಮಾಹುಃ ಪ್ರಧಾನಂ। (ಮಹಾಭಾರತ ವನಪರ್ವ ೨೬ ) ಸತ್ಪುರುಷರಿಗೆ ಸಮ್ಮತವಾದ ಸತ್ಯಧರ್ಮವು ಒಂದೇ ಆಗಿರುತ್ತದೆ. ಮಾನವರು ಸಜ್ಜನರ ಮಾರ್ಗವನ್ನೇ ಅನುಸರಿಸಬೇಕು. ಇದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲೆಂದು ಸತ್ಪುರುಷರು ಹೇಳುತ್ತಾರೆ. (೧೯) ಅದ್ರೋಹಃ ಸರ್ವಭೂತೇಷು ಕರ್ಮಣಾ ಮನಸಾ ಗಿರಾ । ಅನುಗ್ರಹಶ್ಚ ದಾನಂ ಚ ಸತಾಂ ಧರ್ಮಃ ಸನಾತನಃ । (ಮಹಾಭಾರತ ವನಪರ್ವ ೩೬) ಕಾಯಾ, ವಾಚಾ, ಮನಸಾ, ಸಕಲ ಪ್ರಾಣಿಗಳನ್ನು ದ್ರೋಹವಿಲ್ಲದೇ ನೋಡುವದು ಮತ್ತು ಅನುಗ್ರಹಪೂರ್ವಕ ದಾನಮಾಡುವದೇ ಸತ್ಪುರುಷರ ಸನಾತನ ಧರ್ಮವಾಗಿದೆ. (೨೦) ಅಹಿಂಸಾ ಪರಮೋಧರ್ಮಃ । ಜಗದ್ವಿದಿತವಾದ ಎಲ್ಲ ಪ್ರಾಣಿಗಳಲ್ಲಿಯೂ ಅಹಿಂಸೆಯಿಂದ ನಡೆಯುವದೇ ಶ್ರೇಷ್ಠ ಧರ್ಮವಾಗಿದೆ.

## ಚತುರ್ವಿಧ ಧರ್ಮವು.

ಧರ್ಮ ಶಬ್ದದ ಅರ್ಥವಾಯಿತು. ಇನ್ನು ಧರ್ಮದ ಪ್ರಕಾರಗಳನ್ನು ನೋಡೋಣ. ಹಿಂದೂ ಧರ್ಮಶಾಸ್ತ್ರದಲ್ಲಿ ಧರ್ಮವು ಚತುರ್ವಿಧವಾಗಿದೆ. [೧] ವೈದಿಕ ಧರ್ಮ. [೨] ತಾಂತ್ರಿಕ ಧರ್ಮ. [೩] ವೈದಿಕ ತಾಂತ್ರಿಕ ಧರ್ಮ. [೪] ತಾಂತ್ರಿಕ ವೈದಿಕ ಧರ್ಮ.

ಕೆಲವು ಜನರು ವೇದ ಪ್ರತಿಪಾದಿತ ವಿಧಿ ವಿಧಾನಗಳಂತೆ ವ್ಯವಹರಿಸುವದರಿಂದ ಅವರಿಗೆ ವೇದ ಮತಾನುಯಾಯಿಗಳು ಅಥವಾ ವೈದಿಕರೆಂದು ಕರೆಯುತ್ತಾರೆ. ಇನ್ನು ಹಲವರು ತಂತ್ರಗಳ ಆದೇಶದಂತೆ ನಡೆಯುವದರಿಂದ ಅವರಿಗೆ ತಾಂತ್ರಿಕ ಮತಾನುಯಾಯಿಗಳೆಂದು ಹೇಳುತ್ತಾರೆ. ಇನ್ನು ಕೆಲವರು ವೇದಗಳಿಗೆ ಪ್ರಾಧಾನ್ಯತೆ ಕೊಟ್ಟು ತಂತ್ರಗಳನ್ನು ಪುರಸ್ಕರಿಸುತ್ತಾರೆ. ಇವರು ವೈದಿಕ ತಾಂತ್ರಿಕರು. ಮತ್ತೆ ಕೆಲವರು ತಂತ್ರಗಳನ್ನು ಅಂಗೀಕರಿಸಿ, ವೇದಗಳನ್ನು ಪುರಸ್ಕರಿಸುತ್ತಾರೆ. ಅವರು ತಾಂತ್ರಿಕ ವೈದಿಕರು. ಆಗಮುಗಳಿಗೆ ಹೆಚ್ಚಾಗಿ ತಂತ್ರಗಳೆನ್ನುತ್ತಾರೆ. “ಅಸ್ಯ ನಿಶ್ವಸಿತಂ ವೇದಾ: ” ವೇದಗಳು ಪರಂಬ್ರಹ್ಮ ಪರಶಿವನ ಉಸಿರಾಗಿವೆ. ಆಗಮುಗಳು ಅದೇ ಪರಶಿವನ ಮುಖದಿಂದ ಹೊರಟ ಶಬ್ದಗಳಾಗಿವೆ. ವೇದ ಆಗಮುಗಳೆರಡೂ ಪರಶಿವನಿಂದಲೇ ಜನಿಸಿವೆ. ಆದ್ದರಿಂದ ವೇದಾಗಮುಗಳು ಒಂದೇ ಆಗಿವೆ. ‘‘ ಅನೇನಾವಗಮ್ಯತೆ ಸರ್ವಂ

ಇತಿ ಆಗಮಃ" ಎಲ್ಲವನ್ನೂ ಪ್ರಕಾಶಿತವಮಾಡುವ ಶಿವನಲ್ಲಿ ಸ್ವಯಂ ಸಿದ್ಧವಾದ ಜ್ಞಾನವೇ ಆಗಮವು. "ಶಿವಾಸ್ಯೈಭ್ಯಃ ಆಗತಃ ಇತಿ ಆಗಮಃ" ಶಿವನ ಮುಖಾರವಿಂದದಿಂದ ಹೊರಬಂದಿರುವದೇ ಆಗಮವು. ವೇದಗಳಿಗೆ ಶೃತಿಗಳೆಯುವ ರೂಢಿಯೂ ಇದೆ. ಇದನ್ನೇ ಹಾರಿತ ಮಹರ್ಷಿಯು ತನ್ನ ಸ್ಮೃತಿಯಲ್ಲಿ "ಶೃತಿ ಪ್ರಮಾಣಕೋ ಧರ್ಮಃ ಶೃತಿಶ್ಚದ್ವಿವಿದಾ ವೈದಿಕೀ ತಾಂತ್ರಿಕೀಟ ಎಂದು ಉಲ್ಲೇಖಿಸಿದ್ದಾನೆ.

## ವೈದಿಕಧರ್ಮ (ದ್ವೈತಮತ)

ಶೃತಿಗಳಲ್ಲಿ ಉಪಾಸ್ಯೋಪಾಸಕವೆಂಬ ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಪ್ರಮಾಣಗಳಾದರೂ ಉಂಟು. "ದ್ವಾಸುವರ್ಣಾ ಸಮುಜಾ ಸಖಾಯಾ ಸಮಾನಂ ವೃಕ್ಷಂ ಪರೀಷಸ್ವಜಾತೆ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನಯೋ ಅಭಿಚಾಕಶೀತಿ'' (ಮುಂಡುಕೋಪನಿಷತ್ ೩-೧) ಭಗವದ್ಗೀತೆಯಲ್ಲಿ ಅಶ್ವತ್ಥ ವೃಕ್ಷದ ರೂಪದಿಂದ ಜಗದ್ವರ್ಣನೆ ಇದೆ. ಕಠೋಪನಿಷತ್ತಿನಲ್ಲಿ ಗುಹ್ಯಾ ಛಾಯಾ ಪ್ರಕಾಶ ರೂಪದಲ್ಲಿ ಅರ್ಥಾತ್ ಶರೀರಾಂತರ್ಗತವಾದ ಹೃದಯವೆಂಬುದೇ ಗುಹೆ, ಅವಿದ್ಯಾವೃತ ಜೀವಾತ್ಮನೇ ಛಾಯೆ, ಮಸ್ತಕದ ಬ್ರಹ್ಮರಂಧ್ರದಲ್ಲಿರುವ ಚಿತ್‌ಕಲೆಯು ಪ್ರಕಾಶ ಮಾನವಾದ ಈಶ್ವರ, ಪ್ರಸ್ತುತ ಶ್ಲೋಕದಲ್ಲಿ ಮನುಷ್ಯನ ಸೂಕ್ಷ್ಮಶರೀರವೇ ಒಂದು ವೃಕ್ಷ. ಆ ವೃಕ್ಷದಲ್ಲಿ ಯಾವಾಗಲೂ ಏಕತ್ರಿತವಾಗಿರುವ ಜೀವ ಮತ್ತು ಈಶ್ವರವೆಂಬ ಎರಡು ಪಕ್ಷಿಗಳು. ಜೀವವೆಂಬ ಪಕ್ಷಿಯು ತನ್ನ ಕರ್ಮ ಫಲವನ್ನು ಪ್ರಾರಬ್ಧಾನುಸಾರ ಪ್ರಾಪ್ತವಾದ ಸುಖದುಃಖಗಳನ್ನು ಅನುಭವಿಸುತ್ತದೆ. ಎರಡನೇ ಪಕ್ಷಿಯು (ಈಶ್ವರ) ಇಂಥಹ ಕರ್ಮ ಫಲಗಳಿಂದ ಅಲಿಪ್ತವಾಗಿದ್ದು ಕೇವಲ ಸಾಕ್ಷೀಭೂತವಾಗಿದೆ.

## ಅದ್ವೈತ ಮತ.

"ಏಕಂ ಸದಾ ವಿಪ್ರಾ ಬಹುಧಾವದಂತಿ'' (ಋ ೧-೧೬೪-೪೬)ಪರಬ್ರಹ್ಮ ಪರಶಿವನು ಒಬ್ಬನೇ ಒಬ್ಬನಾಗಿದ್ದಾನೆ. ವಿದ್ವಾನರು ಆ ಪರಾಶಿವನನ್ನು ಅನೇಕನಾಮಗಳಿಂದ ಸಂಭೋದಿಸುತ್ತಾರೆ. ಇದನ್ನೇ ವೀರಶೈವ ವಚನಕಾರರು 'ದೇವನೊಬ್ಬ ನಾಮ ಹಲವು' ಎಂದು ಹೇಳಿದ್ದಾರೆ. "ನಾಸದಾಸೀನ್ನೊ ಸದಾಸೀತ್ತದಾನೀಂ'' (ಋ ೧೦-೧೨೯-೧) ಈ ಕಾರ್ಯ ಸೃಷ್ಟಿಯು ಉತ್ಪನ್ನವಾಗುವ ಮೊದಲು ಸರ್ವಶಕ್ತಿಯುತ ಪರಶಿವನೊಬ್ಬನೇ

ಇದ್ದನು. "ಸಜೀವ ಸೋಽವ್ಯೇದ ಮಗ್ರ ಆಸೀದೇಕಮೇವಾದ್ವಿತೀಯಂ" (ಛಂದೋಗ್ಯೋಪನಿಷದ ದ್ವಿತೀಯ ಖಂಡ ೧) "ಅನುಮಾತ್ಮಾಬ್ರಹ್ಮ (ಬ್ರಹದಾರಣ್ಯಕೋಪನಿಷದ ೪-೪-೪ "ನೇಹನಾನಾಸ್ತಿ ಕಿಂಚನ" ಬ್ರಹದಾರಣ್ಯಕೋಪನಿಷದ ೪-೪-೧೯) "ಇಂದ್ರೋ ಮಾಯಾಭಿಃ "(ಋ ೬-೪೭-೧೮) ಮೊದಲಾದ ಅದ್ವೈತ ಸಿದ್ಧಾಂತವನ್ನು ಪುಷ್ಟೀಕರಿಸುವ ಪ್ರಮಾಣಗಳಾದರೂ ಅನೇಕ ಉಂಟು. ಭಕ್ತಿ ಪ್ರಧಾನವೆಂದು ಪ್ರತಿಪಾದಿಸುವ ಶಾಂಡಿಲ್ಯಸೂತ್ರ, ನಾರದ ಸೂತ್ರ ಮೊದಲಾದ ಭಕ್ತಿಸೂತ್ರಗಳುಂಟು. ಕರ್ಮವೇ ಪ್ರಧಾನವೆಂದು ಹೇಳುವ ಜೈಮಿನಿ ಕರ್ಮ ಮೀಮಾಂಸೆಯುಂಟು. ಬಾದರಾಯಣ ಕೃತ ಉತ್ತರ ಮೀಮಾಂಸೆ ಹಾಗೂ ಬ್ರಹ್ಮಸೂತ್ರಗಳಲ್ಲಿ ಜ್ಞಾನವೇ ಪ್ರಧಾನವೆಂದು ಹೇಳಿದ್ದುಂಟು.

## ಶಕ್ತಿವಿಶಿಷ್ಟಾದ್ವೈತ ತಾಂತ್ರಿಕ ವೈದಿಕ ಧರ್ಮ

ಶಕ್ತಿವಿಶಿಷ್ಟಾದ್ವೈತವು ಕೇವಲ ದ್ವೈತಸಿದ್ಧಾಂತವನ್ನಾಗಲಿ ಕೇವಲ ಅದ್ವೈತ ಸಿದ್ಧಾಂತವನ್ನಾಗಲಿ ಪ್ರತಿಪಾದಿಸುವದೇ ಉಭಯ ಸಿದ್ಧಾಂತಗಳ ಸಮನ್ವಯವನ್ನು ಬೋಧಿಸುತ್ತದೆ. ಸಾಧಕಾವಸ್ಥೆಯಲ್ಲಿ ಭೇದೋಪಾಸನೆಯನ್ನು ಅರ್ಥಾತ್ ಪೂಜ್ಯ ಪೂಜಕ ಭಾವವನ್ನು, ಸಿದ್ಧಾವಸ್ಥೆಯಲ್ಲಿ ಪರಿಪೂರ್ಣ ಅದ್ವೈತ ಭಾವವನ್ನು ಬೋಧಿಸುತ್ತದೆ. ಅದ್ದರಿಂದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಭೇದಾಭೇದ, ದ್ವೈತಾದ್ವೈತ, ಶಿವಾದ್ವೈತವೆಂಬ ಪರ್ಯಾಯ ನಾಮಗಳು ಬಂದಿವೆ. ಶಿವಾದ್ವೈತ ಸಿದ್ಧಾಂತವು ನಿಗಮಾಗಮ ಪ್ರಬಲ ಪ್ರಮಾಣ ಸಾಮಂಜಸ್ಯ ಲಕ್ಷಣ ಲಕ್ಷಿತವಾಗಿರುವದರಿಂದ ಇದರಲ್ಲಿ ವಿಶ್ವದ ಸಕಲ ಧರ್ಮಗಳ ಸಿದ್ಧಾಂತಗಳು ಅಂತರ್ಭೂತವಾಗಿರುವದರಿಂದ ಸಮಸ್ತ ಸಿದ್ಧಾಂತಗಳ ಉಜ್ವಲ ಶಿರೋಮಣಿಯಾಗಿದೆ. ವೀರಶೈವರು ವೇದಗಳನ್ನು ಪುರಸ್ಕರಿಸುತ್ತಾರೆ. ಮತ್ತು ಸಗಮಗಳನ್ನು ಅಂಗೀಕರಿಸುತ್ತದೆ. ಆದುದರಿಂದ ಇವರಿಗೆ ತಾಂತ್ರಿಕ ವೈದಿಕರೆಂದು ಅಭಿಮಾನವು ಪ್ರಾಪ್ತವಾಗಿದೆ.

## ಜ್ಞಾನ ಕ್ರಿಯಾ ವಿಚಾರ.

ಶಿವಾದ್ವೈತ ಸಿದ್ಧಾಂತವು ಜ್ಞಾನಕ್ರಿಯಾತ್ಮಕವಾಗಿದೆ. ಜ್ಞಾನಕ್ಕೆ ಎಷ್ಟು ಮಹತ್ವವಿದೆಯೋ ಅಷ್ಟೇ ಕ್ರಿಯೆಗೂ ಮಹತ್ವವಿದೆ. ಕ್ರಿಯೆಯನ್ನು ಪರಿತ್ಯಜಿಸಿ ಕೇವಲ ಜ್ಞಾನಾನುಸಂಧಾನವನ್ನೇ ಆಶ್ರಯಿಸಲಿಕ್ಕೆ ಬರುವದೇ ಇಲ್ಲ. ಏಕೆಂದರೆ ಚಿದ್ರೂಪ ಪರಬ್ರಹ್ಮಪರಶಿವನಲ್ಲಿ ಇಚ್ಛಾ, ಜ್ಞಾನ, ಕ್ರಿಯಾ ಎಂಬ ಶಕ್ತಿತ್ರಯವು ಅವಿನಾಭಾವಸಂಬಂಧದಿಂದ ನಿತ್ಯ ನಿರಂತರ ಸಮವೇತವಾಗಿದೆ.

ಕ್ರಿಯೆಯನ್ನು ಅಲ್ಲಗಳೆಯುವದೆಂದರೆ ಪರಶಿವನ ಸಕ್ತಿಯನ್ನೇ ಅಲ್ಲಗಳೆದಂತೆ ಯಾಗುವದು. ಈ ಕ್ರಿಯಾಶಕ್ತಿಯು ಪರಶಿವನಿಂದ ಪೃಥಕವಾಗಿಲ್ಲ. ಅದನ್ನು ಪೃಥಕರಿಸಲಿಕ್ಕೆ ಬರುವದಿಲ್ಲ. ಕುಸುಮದಲ್ಲಿಯ ಪರಿಮಳವನ್ನು, ದಿನಕರನ ಪ್ರಕಾಶವನ್ನು, ಚಂದ್ರನ ಚಂದ್ರಿಕೆಯನ್ನು, ಹಿಮದ ಶೈತ್ಯವನ್ನು ಮತ್ತು ಅನಲದ ದಾಹಕತ್ವವನ್ನು ಹೇಗೆ ಬೇರ್ಪಡಿಸಲು ಬರುವದಿಲ್ಲವೋ ಹಾಗೆ ಕ್ರಿಯೆಯನ್ನಾದರೂ ಪರಶಿವನಿಂದ ಪೃಥಕರಿಸಲು ಬರುವದಿಲ್ಲ "ಜ್ಞಾನಾ ದೇವತು ಕೈವಲ್ಯಂ"ವೆಂಬ ಶೃತಿಪ್ರಮಾಣವನ್ನು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಖಂಡಿಸುವದಿಲ್ಲ. ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇರ್ಜುನ" ವೆಂಬ ಗೀತಾ ವಚನವನ್ನು ತಿರಸ್ಕರಿಸುವದಿಲ್ಲ. ಆದರೆ ಕೆಲವರು ಇದರ ಅರ್ಥ ಕಲ್ಪಿಸುವಂತೆ ಇದರ ನಿಜಾರ್ಥವಿರುವದಿಲ್ಲ. ಜ್ಞಾನಾಗ್ನಿಯು ಕರ್ಮ ವನ್ನು ಭಸ್ಮಮಾಡುವದಿಲ್ಲ. ಕರ್ಮಾನುಷ್ಠಾನದಲ್ಲಿರುವ ಆಸಕ್ತಿ, ಫಲಾ ಶಾದಿ ಆಸುರೀ ಗುಣಗಳನ್ನು ಭಸ್ಮ ಮಾಡಿ ಅನಾಸಕ್ತಿ ಫಲಾಶಾವಿರಹ ತತ್ವಾದಿ ದೈವಿಕ ಗುಣಗಳನ್ನು ಹುಟ್ಟಿಸುತ್ತದೆ. ಕರ್ಮವನ್ನು ಆಚರಿಸಲೇ ಬೇಕು. ಆದರೆ ಆದನ್ನು ನಿಷ್ಕಾಮ ಬುದ್ಧಿಯಿಂದ ಆಚರಿಸಬೇಕು. ಕ್ರಿಯೆಯು ಇದನ್ನೇ ಬೋಧಿಸುತ್ತದೆ. ಬ್ರಹ್ಮೇಂದ್ರಾದಿಗಳ ವಿಭಾವವನ್ನು ಸಹ ತೃಣೀ ಕರಿಸಿ ಕೇವಲ ಶಿವಾರ್ಪಣ ಭಾವದಿಂದಲೇ ಕ್ರಿಯೆಗಳನ್ನು ಆಚರಿಸಬೇಕೆಂಬುದೇ ಕ್ರಿಯಾನುಷ್ಠಾನದ ಮೂಲೋದ್ದೇಶ.

ಕ್ರಿಯೆಯನ್ನು ಪಾಲಿಸುವವನ ಮನವು ಅತ್ಯಂತ ನಿರ್ಮಲ, ಹಾಗೂ ಪರಿಶುದ್ಧವಾಗಿರುವದು ಅತ್ಯವಶ್ಯವಾಗಿದೆ. ಮನಸ್ಸು ನಿರ್ಮಲವಾಗಿದ್ದರೆ ವಿಚಾರಗಳು ನಿರ್ಮಲವಾಗಿರುತ್ತವೆ. ವಿಚಾರಗಳು ಪವಿತ್ರವಾಗಿದ್ದರೆ ಕ್ರಿಯೆಯು ನಿಷ್ಕಲಂಕವಾಗಿರುತ್ತದೆ. ಮನ, ಸಂಕಲ್ಪ ಹಾಗೂ ಕ್ರಿಯೆಗಳಲ್ಲಿ ಅನ್ಯೋನ್ಯ ಸಂಬಂಧವಿದೆ. ಇವುಗಳಲ್ಲಿ ಒಂದು ಆಕ್ಷೇಪಣೀಯವಾಗಿದ್ದರೆ ಉಳಿದೆರಡು ಆಕ್ಷೇಪಣೀಯವಾಗಿಯೇ ತೀರುವವು. ಆದ್ದರಿಂದಲೇ ಅನುಭಾವಿಗಳು "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಅಂದರೆ ಮನವೇ ಭವ ಬಂಧನಕ್ಕೂ ಮೋಕ್ಷಕ್ಕೂ ಕಾರಣವಾಗಿದೆಂದು ಅಭಿಪ್ರಾಯಪಟ್ಟಿದ್ದಾರೆ. ಇನ್ನು ವಿಚಾರಗಳ ವಿಷಯವಾಗಿ "ಆನೋ ಭದ್ರಾಃ ಸಕ್ರತವೋ ಮಂತು ವಿಶ್ವತಃ" (ಋ. ೧-೮೯-೧) ಅಂದರೆ ಜಗತ್ತಿನ ಸಕಲ ಉದಾತ್ತ ವಿಚಾರಗಳು ನಮ್ಮ ಹೃದಯದಲ್ಲಿ ಜನಿಸಲಿ ಎಂಬ ವೇದ ಪ್ರಮಾಣವಿದೆ. ಆದ್ದರಿಂದ ಕ್ರಿಯಾ ವಂತರ ಮನ ಹಾಗೂ ವಿಚಾರಗಳು ನಿರ್ಮಲವಾಗಿರಬೇಕು.

ಇನ್ನು ಕ್ರಿಯಾವಿಹೀನರಾಗಿ ವರ್ತಿಸಿ ಕೇವಲ "ಅಹಂಬ್ರಹ್ಮಾಸ್ಮಿ" "ಶಿವೋಹಂ" ಎಂದು ವೇದಾಂತಮಯವಾದ ಮಹಾವಾಕ್ಯಗಳನ್ನು ಮುಖದಿಂದ ಉಚ್ಚರಿಸುವದು ಕೇವಲ ವಾಗಾಡಂಬರವು. ಇದರಿಂದ ಸದ್ಗತಿಯೆಂದೂ ಲಭಿಸಲಾರದು. ಹಿಂಸಾಚಾರ, ಅತ್ಯಾಚಾರ, ವ್ಯಭಿಚಾರ, ಲೋಭಾಚಾರ, ಪಾಪಾಚಾರಗಳಿಗೆ ಆಶ್ರಯಭೂತರಾಗಿ ಯಾವತ್ತೂ ಆಚಾರ ವಿಚಾರಗಳು ಜೀವಾತ್ಮನಿಗೆ ಇಲ್ಲವೇ ಇಲ್ಲವೆಂದು ಪ್ರತಿಪಾದಿಸಿ ತಮ್ಮನ್ನು ತಮ್ಮ ಶ್ರೋತೃಗಳನ್ನು ಅಧೋಗತಿಗೆ ಗುರಿಮಾಡುವ ಜ್ಞಾನಿಗಳೆಂದು ಹೇಳಿಕೊಳ್ಳುವ ಜನರು ಜಗತ್ತಿನಲ್ಲಿ ಅನೇಕರುಂಟು. ಹೀಗೆ ಹೇಳುವದು ನಿಗಮಾಗಮವು ಸ್ಮೃತಿಪುರಾಣ ವಚನಗಳಿಗೆ ದ್ರೋಹ ಬಗೆದಂತೆ ಅಲ್ಲದೇ ಆತ್ಮವಂಚನೆಮಾಡಿ ಅನ್ಯರನ್ನು ಅಸತ್ಯಪೂರ್ಣ ಮಾರ್ಗಕ್ಕೆ ಪ್ರೇರೇಪಿಸಿದಂತಾಗುತ್ತದೆ. ವೇದಾಗಮ ಧರ್ಮ ಸೂತ್ರಗಳ ಆದೇಶದಂತೆ ವಿಹಿತ ಕ್ರಿಯೆಗಳನ್ನು ಮಾಡಲೇಬೇಕು. ನಿಷಿದ್ಧ ಕ್ರಿಯೆಗಳನ್ನು ತ್ಯಜಿಸಲೇಬೇಕು. ನಿಷಿದ್ಧ ಕರ್ಮ ಜಾಲದ ವ್ಯಾಮೋಹದಿಂದ ವಿಮುಕ್ತನಾಗಿ ವಿಹಿತ ಕರ್ಮಾನುಷ್ಠಾನದ ಬಲದಿಂದ ಜ್ಞಾನ ಸ್ವರೂಪವನ್ನು ಹೊಂದಿದ ಮಹಾನುಭಾವನು ಪುನಃ ಹೀನ ಕೃತಿಗಳನ್ನು ಮಾಡಲು ಎಂದೂ ಪ್ರವೃತ್ತನಾಗಲಾರನು. ಒಂದುವೇಳೆ ಆಧುನಿಕ ಸ್ವಾರ್ಥಪರಾಯಣ ಪ್ರಚಾರಕರಿಂದ ಜ್ಞಾನಿ ಎನಿಸಿಕೊಳ್ಳುವವನು ನಿಷಿದ್ಧಕರ್ಮಗಳನ್ನು ಆಚರಿಸುತ್ತಿದ್ದರೆ ಅವನು ಜ್ಞಾನಿಯಲ್ಲವೆಂದೇ ಭಾವಿಸಬೇಕು.

ಕ್ರಿಯಾಭ್ರಷ್ಟರಾಗಿ ಇಹದಲ್ಲಿ ವರ್ತಿಸುವದರಿಂದ ಎಂತಹ ದಾರುಣ ದುಃಖವು ಪ್ರಾಪ್ತವಾಗುತ್ತದೆಂಬುದನ್ನು ವಿಚಾರಿಸೋಣ. ಜಗನ್ನಾಥ ಪಂಡಿತರು ಲೋಕೋತ್ತರ ವಿದ್ಯಾವಂತರು. ಆದರೆ ಕಾಮಿನಿಪಾಶ ನಿಬದ್ಧರಾಗಿ ಕ್ರಿಯಾಹೀನರಾಗಿ ವರ್ತಿಸಿದ್ದರಿಂದ ಘೋರವಿಪತ್ತಿನ ಆವರ್ತದಲ್ಲಿ ಪತನ ಹೊಂದಬೇಕಾಯಿತು. ನಿಶಾಚರೇಂದ್ರನು ಮಾಯೆಯು ಬೆನ್ನು ಹತ್ತಿ ದಾರುಣ ಪರಿಣಾಮವನ್ನು ಹೊಂದಿದನು. ಭಸ್ಮಾಸುರನು ಕ್ರಿಯಾಭ್ರಷ್ಟನಾಗಿ ಮೋಹಿನೀ ಮನೋಹರ ರೂಪಕ್ಕೆ ಮೋಸಹೋಗಿ ಭಸ್ಮೀಭೂತನಾದನು. ವಿಶ್ವಾಮಿತ್ರನು ಶೀಲಭ್ರಷ್ಟನಾಗಿ ಮೇನಕೆಯ ಜಾಲದಲ್ಲಿಸಿಕ್ಕು ತಪೋಭಂಗಮಾಡಿಕೊಂಡನು. ನಾರದನು ಕ್ರಿಯಾಹೀನನಾಗಿ ಅರವತ್ತು ಮಕ್ಕಳನ್ನು ಹಡೆದನು. ಈ ಎಲ್ಲ ಉದಾಹರಣೆಗಳು ಮಾನವರು ಆಚಾರ ಸಂಪನ್ನರಾಗಿರಬೇಕೆಂಬುದನ್ನೇ ಬೋಧಿಸುತ್ತವೆ.

ಜ್ಞಾನಿಯು ನಿರ್ವಿಕಲ್ಪ ಸಮಾಧಿಯಲ್ಲಿದ್ದಾಗ ಕ್ರಿಯೆಯು ಅವನಲ್ಲಿ ಲಯಹೊಂದುತ್ತ. ನಷ್ಟವಾಗಿರುವದಿಲ್ಲ. ಅವನು ಸಮಾಧಿಯಿಂದ ಬಹಿರ್ಮುಖನಾದಾಗ ಅಂದರೆ ಸವಿಕಲ್ಪ ಸ್ಥಿತಿಗೆ ಬಂದಾಗ ಕ್ರಿಯೆಯು ಅವನನ್ನು ಅವಿನಾಭಾವದಿಂದ ಅನುಸರಿಸುತ್ತದೆ. ನಾಶ ಹಾಗೂ ಲಯ ಶಬ್ದಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿದೆ. ಕ್ರಿಯೆಯು ಹೊರಗಿನಿಂದ ಬಂದ ವಸ್ತುವಲ್ಲ. ಅದು ಪರಶಿವನ ಶಕ್ತಿತ್ರಯದಲ್ಲಿ ಬಂದು ಅದು ಅವನಲ್ಲಿಯೇ ಸಮರಸವಾಗಿರುವದು. ನಾಶವಾಗಿರುವದಿಲ್ಲ "ನಾಸತೊ ವಿದ್ಯತೆ ಭಾವೊನಾಭಾವೊ ವಿದ್ಯತೆ ಸತಃ" ಇಲ್ಲದೆ ಇರುವ ವಸ್ತು ಎಂದೂ ಬರಲಾರದು. ಇದ್ದದ್ದು ಎಂದೂ ನಾಶವಾಗಲಾರದು.

" ಶಿವೋಽಹಂ " ಎಂಬ ಜ್ಞಾನವು ಪ್ರಾಪ್ತವಾದಾಗಲೂ ಜ್ಞಾನಿಯು ಸ್ವೈರವೃತ್ತಿಯಿಂದ ಕರ್ಮಗಳನ್ನು ಆಚರಿಸಕೂಡದು. ಸ್ವಚ್ಛಂದವಾಗಿ ನಿಷಿದ್ಧವೆನಿಸಿದ ಆಹಾರವನ್ನು ಸೇವಿಸಬಾರದು. ಇಚ್ಛಾನುಸಾರ ಸಂಗಮಾಡಬಾರದು. ಒಂದು ವೇಳೆ ನಿಷಿದ್ಧ ಕ್ರಿಯೆಗಳನ್ನು ಮಾಡಿದ್ದಾದರೆ " ಆರೂಢ ಯೋಗೋಪಿ ನಿಪಾತ್ಯತೇಧಃ " ಯೋಗದಲ್ಲಿ ಆರೂಢನಾಗಿದ್ದ ಮನಷ್ಯನೂ ಸಹ ಪತನ ಹೊಂದುತ್ತಾನೆ. ವಶಿಷ್ಠ ಸ್ಮೃತಿಯು ಇದನ್ನೇ ಆದೇಶಿಸುತ್ತದೆ. "ಆಚಾರ ಹಿನಂ ನಪುನಂತಿ ವೇದಾಃ । ಯದ್ಯಪ್ಯಧಿತಾಃ ಸಹ ಷಡ್ಭಿರಂಗೈಃ ॥ ಛಂದಾಂಸ್ಯೇನಂ ಮೃತ್ಯುಕಾಲೆತ್ಯಜಂತಿ। ನೀಡಂ ಶಕುಂತಾ ಇವ ಜಾತ ಪಕ್ಷಾಃ ॥" ವೇದ ಚತುಷ್ಟಯವನ್ನು ವೇದಗಳ ಶಿಕ್ಷಾ, ಕಲ್ಪ, ವ್ಯಾಕರಣ, ಛಂದಸ್ಸು' ಜ್ಯೋತಿಷ್ಯ, ನಿರುಕ್ತಾದಿ ಷಡಂಗಗಳನ್ನು ಚನ್ನಾಗಿ ಅಧ್ಯೇಯನ ಮಾಡಿದರೂ ಮನುಷ್ಯನು ಆಚಾರ ಹೀನ ಕ್ರಿಯಾಭ್ರಷ್ಟನಾಗಿದ್ದರೆ ವೇದಗಳಾಗಲೀ ವೇದಾಂಶಗಳಾಗಲೀ ಅವನನ್ನು ಪುನೀತಗೊಳಿಸಲಾರವು. ರೆಕ್ಕೆಬಂದಾಕ್ಷಣವೇ ಪಕ್ಷಿಗಳು ಗೂಡುಗಳನ್ನು ಬಿಟ್ಟು ಹೋಗುವಂತೆ ಮೃತ್ಯುಕಾಲ ಪ್ರಾಪ್ತವಾದಾಗ ಪ್ರಾಣಪಕ್ಷಿಯು ಶರೀರವೆಂಬ ಗೂಡನ್ನು ಬಿಟ್ಟು ಹಾರಿಹೋಗುವದು. ಕ್ರಿಯಾಹೀನನಾದ ಮನುಷ್ಯನಿಗೆ ಪುನರಾವೃತ್ತಿಯ ಚಕ್ರದಲ್ಲಿ ಸಿಕ್ಕು ಚೂರ್ಣವಾಗಬೇಕಾಗುತ್ತದೆ. ಆದುದರಿಂದ ಬಾದರಾಯಣರ "ಆಚಾರಃ ಪರಮೋ ಧರ್ಮಃ" ವೆಂಬ ವಚನದಂತೆ ಹಾಗೂ ಶ್ರೀ ಬಸವೇಶ್ವರರ "ಆಚಾರವೇ ಸ್ವರ್ಗ ಅನಾಚಾರವೇ ನರಕ" ವೆಂಬ ವಚನದಂತೆ ವರ್ತಿಸಬೇಕು.

" ನ ಜಾತು ಕಾಮನ್ನ ಭಯಾನ್ನಲೋಭಾದಾ | ಧರ್ಮಂತ್ಯಜೇಜ್ಜೀವಿತಸ್ಯಾಪಿಹೇತೋಃ ॥ ಧರ್ಮೋನಿತ್ಯಃ ಸುಖದುಃಖೇತ್ವನಿತ್ಯೇ | ಜೀವೋ ನಿತ್ಯೋ ಹೇತುರಸ್ಯಾಸ್ತ್ವ ನಿತ್ಯಃ" ॥೧॥ (ಭಾರತ ಸಾವಿತ್ರಿ, ಮಹಾಭಾರತ) ಕಾಮದಿಂದಾಗಲಿ, ಭಯದಿಂದಾಗಲಿ, ಲೋಭದಿಂದಾಗಲಿ, ಪ್ರಾಣ ಹೋಗುವ ಪ್ರಸಂಗ ಬಂದಾಗಲೂ ಧರ್ಮವನ್ನು ತ್ಯಜಿಸಬಾರದು. ಧರ್ಮವು ನಿತ್ಯ ಹಾಗೂ ಸತ್ಯವಾಗಿದೆ. ಜೀವಾತ್ಮನಾದರೂ ನಿತ್ಯ ಹಾಗೂ ಸತ್ಯನಾಗಿದ್ದಾನೆ. ಇಲ್ಲಿ ಧರ್ಮವೆಂಬ ಶಬ್ದಕ್ಕೆ ಜೈಮಿನಿ ಮಹರ್ಷಿಗಳು ಕ್ರಿಯೆಯೆಂದು ತಮ್ಮ ಕರ್ಮ ಮೀಮಾಂಸೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. " ಅಥಾತೊ ಧರ್ಮ ಜಿಜ್ಞಾಸಾ" ಇಲ್ಲಿ ಧರ್ಮದ ಲಕ್ಷ್ಯಾರ್ಥವು ಧರ್ಮಾನುಕೂಲ ಆಚರಣೆ ಎಂದಿದೆ. ಕ್ರಿಯಾಶಕ್ತಿಯನ್ನು ಪರಶಿವನಿಂದ ಬೇರ್ಪಡಿಸಲಿಕ್ಕೆ ಹೇಗೆ ಬರುವದಿಲ್ಲವೋ ಆ ಶಕ್ತಿಯು ಪರಶಿವನಲ್ಲಿ ನಿತ್ಯವಾಗಿರುವದೋ ತದ್ವತ್ ಜೀವಾತ್ಮನು ಪರಶಿವನ ಅಂಶವಾಗಿರುವದರಿಂದ, ಈಶ್ವರೀಯ ಕ್ರಿಯಾಶಕ್ತಿಯ ಅಂಶನೇ ಜೀವಾತ್ಮನ ಕ್ರಿಯಾಶಕ್ತಿಯಾಗಿರುವದರಿಂದ ಕ್ರಿಯಾನುಷ್ಠಾನವು ಜೀವಾತ್ಮನನ್ನು ಎಂದೂ ತ್ಯಜಿಸಲಾರದು ಕ್ರಿಯೆಯು ಯಾವಾಗಲೂ ಜೀವಾತ್ಮನಲ್ಲಿ ಅಂತರ್ಗತವಾಗಿರುವದರಿಂದ ಅದು ಬಿಡಲಿಕ್ಕೆ ಬಾರದ ವಿಷಯವಾಗಿದೆ.

## ಅಂಗ.

ಅನೇಕಾನೇಕ ಜನ್ಮಗಳಲ್ಲಿ ಆಚರಿಸಿದ ಸದ್ಧರ್ಮದ ಪ್ರಭಾವದಿಂದ ಮಾನಸಿಕ, ವಾಚಿಕ, ಕಾಯಿಕ, ಪಾಪರಾಶಿಯು ಸಮೂಲ ನಷ್ಟವಾಗಲು ನಿರ್ಮಲಾಂತಃಕರಣವಾದ ಜೀವನೇ ಪಿಂಡನೆಂದು ಹೇಳಿಕೊಳ್ಳುತ್ತಾನೆ. ಜೀವನು ಸದ್ಗುರು ಉಪದೇಶ, ಸ್ವಾನುಭಾವಗಳಿಂದ ಜ್ಞಾನಹೊಂದುತ್ತಾನೆ. ಜ್ಞಾನವೇ ಅಂಗ ಜ್ಞೇಯವೇ ಲಿಂಗ ದೇಹೀ, ಪಿಂಡ, ಲಿಂಗ. ಜೀವ, ಜೀವಾತ್ಮ, ಆತ್ಮ ಮುಂತಾದವುಗಳು ಪರ್ಯಾಯವಾಚಕ ನಾಮಗಳು ರೆಕ್ಕೆಗಳು ಎರಡಾಗಿದ್ದರೂ ಗಮನವು ಒಂದೇ ಆಗಿರುತ್ತದೆ. ನೇತ್ರಗಳು ಎರಡಾಗಿದ್ದರೂ ನೋಟವು ಒಂದೇ ಆಗಿರುತ್ತದೆ. " ಆತ್ಮಲಾಭಾನ್ನಪರೋ ವಿದ್ಯತೆ" ಆತ್ಮೇತರ ವಸ್ತುವೇ ಇಲ್ಲಾ. "ನಾತ್ಮನಃ ಪರದೇವತಾ" ಆತ್ಮಕ್ಕಿಂತಲೂ ಬೇರೆ ದೇವತೆ ಇಲ್ಲಾ. ಇಂತಹ ವೇದಾಗಮಗಳ ಪ್ರಮಾಣಗಳಿಂದ ಪ್ರತಿಪಾದಿತವಾದ ಈ ಪಿಂಡವು ಶಿವಾಭಿನ್ನವಾಗಿದೆ. "ಸತ್ಯಂ ಜಾನ ಮನಂತಂ ಬ್ರಹ್ಮ "ಸತ್ಯ ಸ್ವರೂಪ, ಜ್ಞಾನಮಯ ಹಾಗೂ ಅನಂತವಾದದ್ದೇ ಬ್ರಹ್ಮವೆಂಬ ಶೃತಿಪ್ರಮಾಣದಂತೆ ಸತ್, ಚಿತ್, ಆನಂದ ಸ್ವರೂಪನು ಸರ್ವಾಂತ

ರ್ಯಾಮಿಯೂ, ಭೇದರಹಿತನೂ, ವರ್ಣಾಕಾರರಹಿತನೂ, ಸತ್ವಾದಿಗುಣವಿಹಿತನೂ, ಮಾಯಾಪ್ರಪಂಚ ಶೂನ್ಯನೂ, ಸಕಲ ಕಲ್ಯಾಣಧಾಮನೂ ದೇಶ ಕಾಲ ಅವಸ್ಥಾ ಅಪರಿಚ್ಛಿನ್ನನೂ ಆದ ಪರಶಿವನು ಒಬ್ಬನೇ ಇರುವನು. "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶೃತಿಪ್ರಮಾಣದಂತೆ ಶಿವೇತರ ವಿಷಯವೇ ಇಲ್ಲಾ. ಇಂತಹ ಸಚ್ಚಿದಾನಂದ ರೂಪನಾದ ಶಿವನ ಚಿತ್, ಕ್ರಿಯಾ ಲಕ್ಷಣವ ದ ಅಂಶವೇ ಜೀವನೆಂಬ ನಾಮಧರಿಸಿ ಅನಾದಿ ಮಾಯಾ ಸಂಬಂಧದಿಂದ "ಮಮೈವಾಂಶೋ ಜೀವಲೋಕೆ ಜೀವಭೂತಃ ಸನಾತನಃ" (ಭಗವದ್ಗೀತಾ) "ಅಂಶೋ ನಾನಾವ್ಯಪದೇಶಾತ್, ( ಬ್ರಹ್ಮ ಸೂತ್ರ ೨-೩-೪೩ ) ವೆಂಬ ಪ್ರಮಾಣದಂತೆ ೮೪ ಲಕ್ಷ ಭೇದಗಳುಳ್ಳ ಸುರನರೋರಗಾದಿ ಜಾತಿಗಳಲ್ಲಿ ಇರುವದು. "ಮಾಯಾಂತು ಪ್ರಾಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಃ" ಎಂಬ ಶ್ವೇತಾಶ್ವತರ ಶೃತಿ ವಚನದಂತೆ ಮಾಯಾ ಶಕ್ತಿ ಸಮೇತನಾದ ಪರಶಿವನು ಪಿಂಡರೆಂದು ಕರೆಯಿಸಿಕೊಳ್ಳುವ ಜೀವಾತ್ಮರ ಹೃತ್ಕಮಲದಲ್ಲಿ ಇರುತ್ತಾನೆ. ಶಿವನು ಪ್ರೇರಕನು. ಜೀವನು ಪ್ರೇರ್ಯನು. ಚಂದ್ರಕಾಂತ ಜಲಬಿಂದು, ಸೂರ್ಯಕಾಂತ ಅನಲಬೀಜ-ಅಂಕುರ ಇವುಗಳ ನ್ಯಾಯದಂತೆ ಶಿವನು ಜೀವಾತ್ಮನಲ್ಲಿ ತಾನಾತ್ಮ್ಯಭಾವದಿಂದ ಇದ್ದಾನೆ. ಜೀವ ಈಶ್ವರರು, ಪರಬ್ರಹ್ಮ ಪರಶಿವನಿಗಿಂತ ಭಿನ್ನರಾದವರಲ್ಲಿ ಶುದ್ಧ, ಸತ್ವ ಗುಣೋಪಾಧಿಯುಳ್ಳ ಬ್ರಹ್ಮಚೈತನ್ಯವೇ ಈಶ್ವರನೆನಿಸಿಕೊಳ್ಳುತ್ತದೆ. ಸ್ವಲ್ಪ ತತ್ವ ರಜೋ ಗುಣೋಪಾಧಿಯುಳ್ಳದ್ದೇ ಜೀವವೆನ್ನಿಸಿಕೊಳ್ಳುತ್ತದೆ. ಮಾಯೆಯು ಮಹಾಮಾಯಾ, ಅಧೋಮಾಯಾಯೆಂದು ದ್ವಿವಿಧವಾಗಿದೆ. ಮಹಾಮಾಯೆಗೆ ವಿದ್ಯೆ ಎಂತಲೂ ಅಧೋಮಾಯೆಗೆ ಅವಿದ್ಯೆ ಎಂತಲೂ ಕರೆಯುತ್ತಾರೆ. ಮಹಾಮಾಯೆಯು ಈಶ್ವರನಿಗೆ ಉಪಾಧಿಯಾಗಿದೆ.

## ಲಿಂಗ.

ಪರಬ್ರಹ್ಮ ಪರಶಿವನಿಗೆ 'ಲಿಂಗ'ವೆಂಬ ನಾಮಾಂತರವು ಪ್ರಲಯಕಾಲದಲ್ಲಿ ಚರಾಚರ ಸೃಷ್ಟಿಯು ಪರಶಿವನಲ್ಲಿ ಲಯಹೊಂದುವದರಿಂದ ಅವನಿಗೆ ಲಿಂಗವೆಂಬ ನಾಮಬಂದಿದೆ. ಬ್ರಹ್ಮ ವಿಷ್ಣುಗಳು ತಮ್ಮ ತಮ್ಮ ಪ್ರತಿಷ್ಠೆಗಾಗಿ ವಿವಾದ ನಡೆಯಿಸಿದ ಕಾಲಕ್ಕೆ ಶಿವನು ಲಿಂಗರೂಪದ ಸ್ತಂಭನಾಗಿ ಆವಿರ್ಭವಿಸಿದನು. ಈ ಸ್ತಂಭನ ನಿಜಸ್ವರೂಪವು, ಬ್ರಹ್ಮ ವಿಷ್ಣು ಆದಿಗಳಿಗೆ ವಿದಿತವಾಗಲಿಲ್ಲ. ಆಗ ಪರಶಿವನು ತಾನೇ ಲಿಂಗಾಕಾರನಾಗಿದ್ದೇನೆ. (ಸ್ತಂಭ) ಎಂದು ಹೇಳಿ ಅವರ ವೃಥಾ ಅಭಿಮಾನವನ್ನು ಖಂಡಿಸಿದನು (ಅಥರ್ವ ಸಂಹಿತೆ ೧೦-೭-೧೪)

ಬ್ರಹ್ಮ ಇಂದ್ರಾದಿ ದೇವತೆಗಳು ಅಸುರರನ್ನು ಪರಾಜಿತಗೊಳಿಸಿ ತಾವೇ ಸ್ವರ್ಗಲೋಕದಲ್ಲಿ ಶ್ರೇಷ್ಠರೆಂದು ಗರ್ವಿಷ್ಠರಾದಾಗ ಪರಶಿವನು ದಿವ್ಯನಾಕಾರ ಯಕ್ಷನ ರೂಪ ಧರಿಸಿ ಅವರ ಎದುರಿಗೆ ವ್ಯಕ್ತನಾದನು. ಈ ಯಕ್ಷ ರೂಪಿ ಯಾದ ಶಿವನನ್ನು ವಾಯು, ಅಗ್ನಿ, ಇಂದ್ರ ಮೊದಲಾದವರು ಗುರುತಿಸ ಲಿಲ್ಲ. ಆಗ ಹೈಮವತಿ (ಉಮೆಯು) ಅವರಿಗೆ ಆ ಯಕ್ಷನು ಪರಶಿವನೆಂದು ಬೋಧಿಸಿದಳು. ಇಂಥ ಯಕ್ಷರೂಪಿಯಾದ ಪರಶಿವನೇ ಲಿಂಗರೂಪಿಯು. (ಕೇನೋಪನಿಷತ್ತು) "ಯೋ ಬ್ರಹ್ಮಾಣಂ ವಿದಧಾ ಟಿ ಪೂರ್ವ" (ಶ್ವೇತಾಶ್ವತ ರೋಪನಿಷತ್ತು) ಪರಶಿವನು ಬ್ರಹ್ಮ, ವಿಷ್ಣು, ರುದ್ರ, ಇಂದ್ರಾದಿ ಸಮಸ್ತ ದೇವತೆಗಳನ್ನು ಹುಟ್ಟಿಸಿದವನು.

## ಜೀವೇಶ್ವರರ ಅವಸ್ಥಾತ್ರಯ

ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಂತೆ ಅಂಗವೇ ಲಿಂಗ ಹೇಗೆ ಎಂಬು ದನ್ನು ಇನ್ನು ಸ್ಪಷ್ಟೀಕರಿಸಲಾಗುತ್ತಿದೆ. ಅಂಗವೆಂದರೆ ಜೀವಾತ್ಮ, ಲಿಂಗವೆಂದರೆ ಸತ್, ಚಿತ್, ಆನಂದ ಸ್ವರೂಪನಾದ ಪರಶಿವನು. ಭೂಮಿ, ಅಪ, ತೇಜ ವಾಯು, ಆಕಾಶವೆಂಬ ಪಂಚಮಹಾಭೂತ ವಿನಿರ್ಮಿತವಾದ ಸ್ಥೂಲ ಶರೀರವೇ ಜೀವಾತ್ಮನ ವಾಸಭುವನವಾಗಿದೆ. ಪಂಚಭೌತಿಕ ಶರೀರವು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಕೋಶ ಗಳು, ಮನ, ಬುದ್ಧಿ, ಚಿತ್, ಅಹಂಕಾರವೆಂಬ ಅಂತಃಕರಣ ಚತುಷ್ಟಯವು, ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಎಲ್ಲವೂ ಜಡ ವಾದುದರಿಂದ ನಶ್ವರವಾಗಿದೆ ಜೀವಾತ್ಮನು ಈ ೧೯ ತ್ರಿಪುಟಗಳಿಂದ ಅಲಿಪ್ತ ನಾಗಿದ್ದು ಅವಿನಾಶಿಯೂ ಸಾಕ್ಷೀಭೂತನೂ, ಕೂಟಸ್ಥನೂ ಆಗಿದ್ದಾನೆ. ದೇಹ ಗಳು ಸ್ಥೂಲ, ಸೂಕ್ಷ್ಮ, ಕಾರಣವೆಂದು ತ್ರಿವಿಧವಾಗಿವೆ. ಇವುಗಳಿಗೆ ಭೋಗಾಂಗ, ತ್ಯಾಗಾಂಗ, ಯೋಗಾಂಗವೆಂಬ ಪರ್ಯಾಯ ನಾಮಗಳಿವೆ. ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಅವಸ್ಥಾತ್ರಯವಿದೆ. ಜೀವಾತ್ಮನು ಅವ ಸ್ಥಾತ್ರಯಕ್ಕೆ ಸಾಕ್ಷಿಭೂತನಾಗಿದ್ದಾನೆ. ಜಾಗ್ರದವಸ್ಥೆಯಲ್ಲಿ ಜೀವನಿಗೆ ಬಹಿರ್ ಪ್ರಜ್ಞೆ, ಸ್ವಪ್ನಾವಸ್ಥೆಯಲ್ಲಿ ಅಂತಃಪ್ರಜ್ಞೆ, ಸುಷುಪ್ತಿ ಅವಸ್ಥೆಯಲ್ಲಿ ಪ್ರಾಜ್ಞ ವೆಂಬ ಹೆಸರುಗಳಿವೆ. ಇವುಗಳಿಗೆ ವೈಶ್ವ, ತೈಜಸ, ಪ್ರಾಜ್ಞವೆಂಬ ಪರ್ಯಾಯ ನಾಮಗಳೂ ಇವೆ. ಇದರಂತೆ ಈಶ್ವರನಿಗೆ ದೇಹತ್ರಯ, ಅವಸ್ಥಾತ್ರಯ, ಗಳುಂಟು. ವಿಶ್ವದಲ್ಲಿಯ ಅಶೇಷ, ಸ್ಥೂಲ, ಪೃಥ್ವಿ ಶರೀರಗಳೇ ಈಶ್ವರನ

ಸಮಷ್ಟಿ ಅಥವಾ ಸ್ಥೂಲ ಶರೀರವು ಇದಕ್ಕೆ ವಿರಾಟ ಶರೀರವೆನ್ನುತ್ತಾರೆ. ಜೀವರಾಶಿಗಳ ಸಮಸ್ತ ಸೂಕ್ಷ್ಮ ಶರೀರಗಳೇ ಈಶ್ವರನ ಸೂಕ್ಷ್ಮ ಶರೀರಗಳು. ಇದಕ್ಕೆ ಅವನಿಗೆ ಹಿರಣ್ಯಗರ್ಭನೆನ್ನುತ್ತಾರೆ. ಜೀವರಾಶಿಗಳ ಸಮಸ್ತ ಕಾರಣ ಶರೀರಗಳು ಈಶ್ವರನ ಕಾರಣ ಶರೀರವು.

ಸ್ಥೂಲದೇಹೋಪಾಧಿಯಿಂದ ಜೀವಾತ್ಮನಿಗೆ ಮಲದೋಷ, ವಿಕ್ಷೇಪ ದೋಷ, ಆವರಣದೋಷ ಅಥವಾ ಆಣವ, ಮಾಯಿಕ, ಕಾರ್ಮಿಕವೆಂಬ ಮಲಗಳು ಅಂಟಿಕೊಂಡಿವೆ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನುವನ್ನು ನಿಷ್ಕಾಮ ಬುದ್ಧಿಯಿಂದ ಆಚರಿಸುವದರಿಂದ ಮಲದೋಷವು ( ಆಣವ ) ನಾಶಹೊಂದುತ್ತದೆ. ಕೇವಲ ಶಿವಾರ್ಪಿತ ಬುದ್ಧಿಯಿಂದ ಫಲಾಶಾ ವಿಸರ್ಜಿತ ನಾಗಿ ಈಶ್ವರೋಪಾಸನೆ ಮಾಡುವದರಿಂದ ವಿಕ್ಷೇಪದೋಷವು ಲೋಪವಾಗು ತ್ತದೆ. (ಮಾಯಿಕಮಲ) "ಸಮಾಧಿ ಸಿದ್ಧಿರೀಶ್ವರ ಪ್ರಣಿಧಾನಾತರ" (ಪಾತಂಜಲಿ) ಹೀಗೆ ಮಲವಿಕ್ಷೇಪ ದೋಷಗಳಿಂದ ವಿಮುಕ್ತನಾಗಿ ನಿರ್ಮಲ ದರ್ಪಣದಂತೆ ತನ್ನ ಅಂತಃಕರಣವನ್ನು ಪರಿಶುದ್ಧಗೊಳಿಸಿ ಜೀವಾತ್ಮನು ಶ್ರೋತ್ರಿಯ ಬ್ರಹ್ಮನಿಷ್ಠ ಗುರುವಿಗೆ ಶರಣಾಗತನಾಗಬೇಕು.

ಪರಶಿವನ ಪರಮಾವತಾರವೆನಿಸಿದ ಗುರುಲಿಂಗ ಜಂಗಮರೆಂಬ ತ್ರಿಮೂ ರ್ತಿಗಳಲ್ಲಿ ಒಬ್ಬನಾದ ಗುರು ಭಕ್ತನನ್ನು ಶಿವಪಂಚಾಕ್ಷರಿ ಮಂತ್ರ, ಸಂಸ್ಕಾ ರಾದಿಗಳಿಂದ ದೀಕ್ಷಾಬದ್ಧನನ್ನಾಗಿ ಪರಿವರ್ತಿಸಿ ಭಕ್ತನ ಜೀವನ ಕಲೆಯನ್ನು ಅವನಲ್ಲಿಯೇ ಇದ್ದ ಚಿದ್ರೂಪ ಕಲೆಯನ್ನು ವಿಧಿಪೂರ್ವಕ ಸಮರಸ ಗೊಳಿಸಿ "ತತ್‌ತ್ವಮಸಿ" ನೀನೇ ಆ ಪರಶಿವನಿದ್ದೀ ಎಂದು ಬೋಧಿಸಿ ಶಿವಜೀವೈಕ್ಯ ದ್ಯೋತಕವಾದ ಜ್ಯೋತಿರ್ಮಯ ಇಷ್ಟಲಿಂಗನನ್ನು ವಿಚಾರಿಸುತ್ತಾನೆ. ಹೀಗೆ ಮಾಡುವದಕ್ಕೆ ದೀಕ್ಷೆಯನ್ನುತ್ತಾರೆ. "ದೀಯತೆ ಶಿವಜೀವೈಕ್ಯ ಜ್ಞಾನಂ ಕ್ಷೀಯತೆ ಮಲತ್ರಯಂ ಅನಯಾ" ಇತಿ ದೀಕ್ಷಾ ಸದ್ಗುರುವಿನ ಕಟಾಕ್ಷ ಮಾತ್ರದಿಂದ ಹಸ್ತ ಮಸ್ತಕ ಸಂಯೋಗದಿಂದ ಜೀವಾತ್ಮನ ಅಜ್ಞಾನ ತಿಮಿ ರವು ನಷ್ಟವಾಗಿ ಜ್ಞಾನಜ್ಯೋತಿಯು ಪ್ರಜ್ವಲಿತವಾಗುತ್ತದೆ. ಭಕ್ತನು ನಾನೇ ಶಿವನು ಎಂಬ ಭಾವನೆಯಿಂದ ಗುರುಬೋಧೆಯಂತೆ ಅನುದಿನ ಮನನ ನಿಧಿ ಧ್ಯಾಸಪೂರ್ವಕ ಅನುಸಂಧಾನ ಮಾಡುತ್ತ ಶಿವಧ್ಯಾನೈಕರತನಾಗಿ ಸದಾಚಾರ ಸಂಪನ್ನನಾಗಿ ವ್ಯವಹರಿಸುವದರಿಂದ ಜೀವಾತ್ಮನಿಗೆ ಸದ್ಗತಿಯಾಗುತ್ತದೆ. ಜೀವಾತ್ಮನು ಇಷ್ಟಲಿಂಗದ್ವಾರಾ ಪ್ರಾಣಲಿಂಗವನ್ನು, ಪ್ರಾಣಲಿಂಗದ್ವಾರಾ

ಭಾವಲಿಂಗವನ್ನು ಅನುಸಂಧಾನ ಮಾಡುತ್ತಾ ಕೀಟ–ಭ್ರಮರನ್ಯಾಯದಂತೆ ತನಗೆ ಉಪಾಧಿಯಾಗಿದ್ದ ಅವಿದ್ಯೆಯನ್ನು ಕಳೆದುಕೊಂಡು ಶಿವಸಾಕ್ಷಾತ್ಕಾರ ವನ್ನು ಹೊಂದುತ್ತಾನೆ. ಇದೇ ಲಿಂಗಾಂಗ ಸಾಮರಸ್ಯವು. ಇದಕ್ಕೆ "ಅಂಗವೇ ಲಿಂಗ ಲಿಂಗವೇ ಅಂಗವೆನ್ನುತ್ತಾರೆ.

ಇಂತಹ ಶಿವಜೀವೈಕ್ಯದ ನಿರುಪಮ ಸುಖವನ್ನು ಅನುಭವಿಸಲಿಕ್ಕೆ ಸಕಲ ಮಾನವರು ಸ್ತ್ರೀಪುರುಷರು ಅರ್ಹರಾಗಿದ್ದಾರೆ. ಜಾತಿ, ಮತ, ಪಂಥ, ಧರ್ಮ ಯಾವದೇ ಆಗಿದ್ದರೂ ಸದ್ಗುರುವಿನಿಂದ ಪವಿತ್ರ ಪಂಚಾಕ್ಷರಿಮಂತ ದಿಂದ ಸಂಸ್ಕಾರಹೊಂದಿದ ಮೇಲೆ ಭಕ್ತನ ಪೂರ್ವ ಸ್ಥಿತಿಯು ಸಂಪೂರ್ಣ ಲೋಪವಾಗಿರುವದು. ಅವನು ಶಿವಜೀವಿಯಾಗಿ ಪರಿಣಮಿಸುತ್ತಾನೆ. ಮಲ ತ್ರಯವಿರಹಿತನಾಗಿ ಶುದ್ಧ ಚಿತ್ತದಿಂದ ಶಿವಧ್ಯಾನರತನಾಗಿ ವರ್ತಿಸುವದರಿಂದ ಶಿವಸಾಕ್ಷಾತ್ಕಾರವು ಆಗೇ ತೀರುವದು. ಸರ್ವ ಮತಸಿದ್ಧಾಂತ ಸಮನ್ವಯ ವಾದೀ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ವರ್ಗಾತೀತವಾಗಿದೆ. ಕೆಳಗಿನ ಶ್ಲೋಕವು ಈ ಸಿದ್ಧಾಂತವನ್ನೇ ಪುಷ್ಟೀಕರಿಸುತ್ತದೆ.

"ಶೂದ್ರೋವಾಯದಿ ವಾನ್ಯೋಪಿ । ಚಂಡಾಲೋಪಿ ಜಟಾಧರಃ ।
ದೀಕ್ಷಿತಃ ಶಿವ ಮಂತ್ರೇಣ । ಪುಷ್ಪಮೇಕಮಪಿ ಸ್ವಯಂ ॥
ಲಿಂಗಸ್ಯ ಮೂಧ್ನಿಯೋದದ್ಯಾತ್ । ಸ ಭೂಯೋಪಿನ ಜಾಯತೆ ॥"

ಶೂದ್ರನಾಗಲಿ ಅನ್ಯನಾಗಲಿ ಚಂಡಾಲನಾಗಲಿ ಯಾವನೇ ಆಗಲಿ ಶಿವದೀಕ್ಷೆ ಯನ್ನು ಹೊಂದಿ ಭಕ್ತಿಪೂರ್ವಕ ಶಿವಲಿಂಗದ ಮೇಲೆ ಪುಷ್ಪವನ್ನು ಅರ್ಪಿ ಸಿದ್ದಾದರೆ ಅವನಿಗೆ ಪುನರ್ಜನ್ಮವೇ ಇಲ್ಲ. ಈ ತತ್ವವನ್ನೇ ಶ್ರೀ ಶಂಕರಾಚಾರ್ಯರು " ಜೀವೊ ಬ್ರಹ್ಮೈವನಾಪರಃ ಎಂದು ಹೇಳಿದ್ದಾರೆ.



ಸಂಚಿಕೆ ೪.

ಸಂಪುಟ ೩೪

# ಶಿವಾನುಭವ



ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಎಪ್ರೀಲ ೧೯೬೦.

# ವಿಷಯಾನುಕ್ರಮಣಿಕೆ.


೧. ಬಸವೇಶ್ವರರ ಭಕ್ತಿ. ೧೪೫

— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ-ಹಲಗೂರು

೨. ಉಪನಿಷತ್ತು ೧೫೩

— ಶ್ರೀ ಸಾ. ಮ. ಬಸವರಾಜ ಹೆಡ್ಮಾಸ್ತರು, ನಾಗರಹಾಳು

೩. ಅನುಭವಸಾರ .... .... ೧೫೭

—ವೇ|| ಎಚ್. ವ್ಹಿ. ಅಯ್ಯನಗೌಡ, ೦|| ಹೆ॰ ಮಾಸ್ತರ-ಗದಗ

೪ ಹದಿನೇಳನೆಯ ಅಖಿಲಭಾರತ ವೀರಶೈವ ಮಹಾಸಭೆಯಲ್ಲಿ
ಅಧ್ಯಕ್ಷರಾದ ಶ್ರೀ ಡಿ. ಸಿ. ಪಾವಟೆಯವರು ನಿರೂಪಿಸಿದ
ಭಾಷಣದ ಸಂಕ್ಷಿಪ್ತ ವರದಿಯು ೧೫೫

— ಶ್ರೀಯುತ ವೀರಬಸಪ್ಪನವರು ಕುಪ್ಪಸ್ತ, ಗುಡೂರ

೫. ವೀರಶೈವ ಸಮಾಜದೇವನ ನೆನಹು ೧೬೫

— ಶಿವಯೋಗಮಂದಿರ ಸುವರ್ಣಮಹೋತ್ಸವ ಪತ್ರಿಕೆಯಿಂದ

೬. ವೀರಶೈವರ ಆಚಾರವಿಧಿ ಹೇಗಿರಬೇಕು....? ೧೭೨

—ಈಶ್ವರ ಎ. ಕುಪ್ಪಸದ ಗುಡೂರ

೭. ಶಿವಶರಣರದೇ ಪರಿಪೂರ್ಣಯೋಗ ೧೭-೩೨

— ಶ್ರೀ ಶಿವಾನಂದ ಸ್ವಾಮಿಗಳು ತೆಗ್ಗಿಹಳ್ಳಿ (ತಾ. ಇಂಡಿ)



# ಬಸವೇಶ್ವರರ ಭಕ್ತಿ.

(ಲೇಖಕರುಃ— ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ-ಹಲಗೂರು)

ನಮ್ಮ ನಾಡುಭಕ್ತಿಯ ನೆಲೆವೀಡು ಮೊಹಂಜದಾರೋ. ಅವಶೇಷಗಳಿಂದ ಭಕ್ತಿಯ ಪಂಥಕ್ಕೆ ಐದಾರುಸಾವಿರ ವರ್ಷದ ಪ್ರಾಚೀನತೆಯು ಲಭಿಸುತ್ತದೆ. ಪೂಜ್ಯರ ವಿಷಯವಾಗಿ ಪೂಜಕರು ತಾಳುವ ಪ್ರೀತಿಯೇ ಭಕ್ತಿಯು. ಪೂಜ್ಯೇಷು ಅನುರಾಗ: ಭಕ್ತಿಃ ಸಾತ್ವಸ್ಮಿನ್ ಪರಮಪ್ರೇಮರೂಪಾ. ಅಮೃತ ಸ್ವರೂಪಾಚ ಎಂದಿದೆ ನಾರದ ಸೂತ್ರವು. ಒಂದುಕಡೆ ಭಗವಂತ, ಇನ್ನೊಂದು ಕಡೆ ಭಕ್ತ. ಒಂದೆಡೆ ಶಿವ, ಮತ್ತೊಂದೆಡೆ ಜೀವ. ಈ ಇಬ್ಬರಲ್ಲಿ ಪರಸ್ಪರ ಆಕರ್ಷಣವು ಸತತವಾಗಿ ಸಾಗಿರುತ್ತದೆ. ಶಿವನನ್ನು ಸೇರಲು ಜೀವನು ಹಾತೊರೆಯುವಂತೆ ಜೀವನನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಶಿವನೂ ಕಾತರನು. ಈ ಉಭಯರ ಪರಿಣಾಮವಾಗಿಯೇ ಶಿವಜೀವರ ಸಂದರ್ಶನ, ಸಂಸ್ಪರ್ಶನ ಸಮ್ಮೇಲನ ಸಾಮರಸ್ಯಗಳು. ಶಿವನ ಭಾವಕೋಟಿಯು ಕರುಣ. ಜೀವನ ಭಾವಕೋಟಿಯು ಭಕ್ತಿ. ಇಂತಿವೆ ಶಿವಜೀವರ ಆಕರ್ಷಣ ಕೋಟಿ

ಗಳು. ಭಕ್ತಿಯ ಸ್ವರೂಪವು ಅನಿರ್ವಚನೀಯವು. ಭಕ್ತಿಯು ಶಾಂತ್ಯಾನಂದ ದಿಂದ ಕೂಡಿರುತ್ತದೆ. ಈ ಅಮೃತಸ್ವರೂಪಿಯಾಗಿದ ಭಕ್ತಿ ರಸವನ್ನು ಮನ ಸಾರೆ ತೃಪ್ತಿಕರವಾಗಿ ಸವಿದ ಅನನ್ಯ ಭಕ್ತನು ಮೈಮರೆಯುತ್ತಾನೆ; ನಲಿ ನಲಿದಾಡುತ್ತಾನೆ ಎಂದು ನಾರದ ಮಹರ್ಷಿಗಳು ಅಭಿಪ್ರಾಯಪಡುತ್ತಾರೆ ಸಜ್ಜನರ ಸಹವಾಸದಲ್ಲಿ ಕಾಲಕಳೆದು, ಅವರ ಕೃಪೆಯಿಂದೆ ಭಕ್ತಿಭಾವವನ್ನು ಪಡೆದ ಭಕ್ತನು ದಿವ್ಯಕಾಂತಿಯನ್ನೂ, ಕುಂದದ ಆನಂದವನ್ನೂ ಹೊಂದು ತ್ತಾನೆ. ವೀರಶೈವರಲ್ಲಿ ಭಕ್ತಿಯು ತ್ರಿವಿಧದಾಸೋಹದ ಸ್ವರೂಪವನ್ನು ತಾಳಿದೆ. ಪರಮಾತ್ಮನ ಪ್ರತಿಸ್ವರೂಪಿಗಳಾದ ಗುರುಲಿಂಗಜಂಗಮರಿಗೆ ತನುಮನ ಧನಗಳನ್ನು ಸಮರ್ಪಿಸುವುದೇ ತ್ರಿವಿಧದಾಸೋಹ. ಈ ದಾಸೋಹವನ್ನು ನಿಷ್ಕಾಮದಿಂದ ಮಾಡಿದರೆ ಸಾಮರಸ್ಯ ಸುಖವು ಸಿಕ್ಕುತ್ತದೆ ವೀರಶೈವರಿಗೆ ಭಕ್ತಿಯು ಪಂಚಮಪುರುಷಾರ್ಥ. ಮುಕ್ತಿಗಿಂತ ಭಕ್ತಿಯು ಹಿರಿದಾಗಿದೆ. ಭಕ್ತಿಯು ಜೀವದ ಗುಣ. ಜ್ಞಾನ ಕ್ರಿಯೆಗಳು ಭಕ್ತಿಯ ಅಂಗಗಳು.

ಬಸವೇಶ್ವರರ ಭಕ್ತಿಯು ಪರಮಪದ ಸೋಪಾನಕ್ಕೇರಿಸುವ ಸಾತ್ವಿಕ ಭಕ್ತಿಯು. ಶರೀರಾಭಿಮಾನ ಅಳಿಯುವ ವರೆಗೂ ಉನ್ನತಮಟ್ಟಕ್ಕೇರುವುದು ಅಸಾಧ್ಯವು. ಈ ದೇಹಾಭಿಮಾನ ಅಳಿಯಲು ಯತ್ನಿಸಿದರೇ ಹೊರತು ಇದನ್ನು ಉಳಿಸಲು ಇವರು ಯತ್ನಿಸಲಿಲ್ಲ. ಬಿಜ್ಜಳನಲ್ಲಿ ಅಮಾತ್ಯರಾಗಿದ್ದು ಪದವಿ ಪ್ರತಿಷ್ಠೆಗಳನ್ನು ಪಡೆದಿದ್ದರೂ ಇವರಿಗೆ ವೈರಾಗ್ಯವು ಜನಿಸಿದ್ದು ಮಹತ್ತ ರದ ಸಂಗತಿಯೇ ಸರಿಯು. "ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ" ಎಂಬ ನುಡಿಯೇ ಈ ವೈರಾಗ್ಯವನ್ನು ಎತ್ತಿ ತೋರಿಸುತ್ತದೆ. ಮನಸ್ಸಿನ ಹತೋಟಿಯಿಲ್ಲದೆ ಏನೂಮಾಡಲು ಸಾಧ್ಯವಿಲ್ಲ ಎಂಬುದು ಬಸವೇಶ್ವರರಿಗೆ ಮನವರಿಕೆಯಾಗಿತ್ತು.

ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತಲಿವೆನು
ನಿಂದಲ್ಲಿ ನಿಲದು ಬೆಂದವ ಮನವನಾನೆಂತುನಂಬುವೆನಯ್ಯಾ.
ಎನ್ನ ತಂದೆ ಕೂಡಲಸಂಗವಲ್ಲಿಗೆ ಹೋಗಲೀಯದಯ್ಯಾ.

ನಿತ್ಯಾನಿತ್ಯ ವಿವೇಕದ ಒಳತೋಟ ಇವರ ಮನಸ್ಸಿನಲ್ಲಿ ಎಷ್ಟು ಪ್ರಬಲ ವಾಗಿತ್ತು ಎಂಬುದು ಗೊತ್ತಾಗುತ್ತದೆ. ಐಹಿಕ ಜೀವನ ಸಾಧನಸಂಪತ್ತನ್ನೊ

ದಗಿಸಿಕೊಳ್ಳುವುದನ್ನೇ ಮುಖ್ಯವಾಗಿ ಎಣಿಸದೆ ಇರಬೇಕೆಂಬುದೇ ಹೊರತು ಐಹಿಕ ಜೀವನವನ್ನು ಅಲಕ್ಷಿಸು ಎಂದು ಹೇಳರು. ಭವಭಕ್ತರ ಸಂಬಂಧವನ್ನು ಇಂತು ವ್ಯಕ್ತಪಡಿಸಿದ್ದಾರೆ.

ಮಾಡುವಾತನಾನಲ್ಲವಯ್ಯ
ನೀಡುವಾತನಾನಲ್ಲವಯ್ಯ
ಬೇಡುವಾತನಾನಲ್ಲವಯ್ಯಾ
ನಿಮ್ಮ ಕಾರುಣ್ಯವಲ್ಲದೆ ಎಲೆ ದೇವಾ !
ಮನೆಯು ತೊತ್ತಲಸಿದರೆ ಒಡತಿ ಮಾಡಿಕೊಂಬಂತೆ
ನಿನಗೆ ನೀಮಾಡಿಕೋ ಕೂಡಲಸಂಗಮದೇವಾ.

ಭಕ್ತಿಯ ಬೆಲೆಯನ್ನು ಇಂತು ವರ್ಣಿಸಿದ್ದಾರೆ.

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ
ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯು ಮೇಲೆ ವಿಚಾರವೆಂಬ
ಹೂವಾಯಿತ್ತು ಆಚಾರವೆಂಬ ಕಾಯಾಯಿತ್ತು.
ನಿಷ್ಪತ್ತಿಯೆಂಬ ಹಣ್ಣಾಯಿತ್ತು. ನಿಷ್ಪತ್ತಿಯೆಂಬ
ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆಬೇಕೆಂದುಕೊಂಡ.

ತ್ರಿವಿಧ ದಾಸೋಹದಲ್ಲಿ ಬಸವೇಶ್ವರರದು ಎತ್ತಿದ ಕೈ. ಸೋಹಂ ಎನ್ನದೆ ದಾಸೋಹಂ ಎಂದವರು ಇವರು. ಭಕ್ತನಾಗಿ ಗುರುಲಿಂಗಜಂಗಮವ ಪೂಜಿಸಬೇಕಲ್ಲದೆ ತನ್ನತಾ ಪೂಜಿಸಿಕೊಂಬುದು ಎಂದ ಇವರು ತ್ರಿವಿಧದಾಸೋಹದಲ್ಲಿ ವಿಚಾರಪರರಾದಂತೆ ಆಚಾರಪರರಾಗಿದ್ದಾರೆ. ಸಕಲ ಮತಗಳಲ್ಲಿಯೂ ಸರ್ವ ವಿಚಾರಗಳಿಗೂ ಗುರುವೇ ಮೂಲವೆಂದು ನಿರೂಪಣೆಯಿದೆ. ಗುರು ಮಹಿಮೆಯಲ್ಲಿ ಇವರಿಗೆ ನೆಚ್ಚಿನ ನಂಬಿಕೆ ನೆಟ್ಟಿದೆ.

ಮಡಕೆಯ ಮಾಡುವರೆ ಮಣ್ಣೇ ಮೊದಲು
ತೊಡಿಗೆಯ ಮಾಡುವರೆ ಹೊನ್ನೇ ಮೊದಲು
ಶಿವಪಥವನರಿವಡೆ ಗುರುಪಥವೇ ಮೊದಲು
ಕೂಡಲ ಸಂಗಮ ದೇವನ ಅರಿವುದಕ್ಕೆ ಶರಣರ ಸಂಗವೇ ಮೊದಲು.

ಸಾಧನೆಯು ಪರಿಪಕ್ವವ ತೋರೆಯ ದಂಡೆ ದಂಡೆಗಳಲ್ಲಿ ಹಾಯಾಗಿ ನಡೆದು ಕಳವಳವ ಮಡುವಿನಲ್ಲಿ ಈಜಿ ಸೊಗಸಿನ ಸುಗ್ಗಿಯಲ್ಲಿ ನಲಿದು ಪ್ರೇಮದ ಮಾಂದಳಿರ ಗೊಂಚಲಲ್ಲಿ ಕುಳಿತು ಉಲಿದು ಕೇಕೆ ಹಾಕಿ ಬಾಳ ಸಾಗರದ ತಳದಲಿ ಮುಳುಗಿ ಬೆಳಕು ದಾರಿಗೆ ತರುವ ಪರುಷಮಣಿಯನ್ನು ಹಿಡಿದ ಬಸವೇಶ್ವರರು ಬಾಳಿನಲ್ಲಿ ಬರುವ ಎಡರು ತೊಡರುಗಳಿಗೆ ಅಂಜದೆ ಅಳುಕದೆ ಬೆಚ್ಚದೆ ಬೆದರದೆ ಮುಂದೆ ಸಾಗಲು ಇವರ ಗುರುಭಕ್ತಿ ಗುರು ಸೇವೆಯೇ ಮೂಲಕಾರಣವಾಗಿದೆ. ಗುರುವಿನ ಇದಿರಿನಲ್ಲಿ ಇವರು ಒಂದು ಹಸುಳೆ. ವಿಚಾರದ ಬಿಸಿಪಾಕದಲ್ಲಿಹೃದಯ ಹಿಗ್ಗಿ ಭಾವದ ಬಿಸಿ ಬೆಂಬೂದಿ ಯಲ್ಲಿ ಮನದ ಒಗರು ಕರಗಿ ಕಾವುಕಟ್ಟಿ ಮನವು ಪರಿಪಕ್ವವಾಗಿ ರಸದುಂಬಿದ ತನಿವಣ್ಣಾಗಲು ಗುರುಕೃಪೆಯು ಗೂಡೇ ಇವರ ಆಶ್ರಯದಾಣವಾಗಿದೆ. ಗುರೂ ಪದೇಶ ಮಂತ್ರ ವೈದ್ಯ ಎಂದು ನೆರೆನಂಬಿ ಗುರುಸೇವೆ ಮಾಡಿ ಧನ್ಯರಾಗಿ ದ್ದಾರೆ. ಶಿವನರಿಯಲು ಗುರುವೇ ಕುರುಹು ಎಂದು ಬಾಳಿನ ಸಾಧನ ಜೀವಿ ಬಸವೇಶ್ವನು ಸರ್ವಾರ್ಪಣ ಮಾಡಿ ಜೀವನ ಸವಿಯನ್ನು ಸವಿದಿದ್ದಾನೆ.

ಹೊತ್ತಾರೆ ಎದ್ದು ಅಗ್ಗವಣಿ ಪತ್ರೆಯ ತಂದು ಹೊತ್ತು ಹೋಗದ ಮುನ್ನ ಲಿಂಗವ ಪೂಜಿಸುವುದು ಸಂಗಮದೇವರ ಕೂಡುವುದಕ್ಕೆ ಲಿಂಗವ ಪೂಜಿಸಿ ಇಲ್ಲಿ ಸಲ್ಲದ ಆಟವುಟವನ್ನಾಡುವುದು ಎಂದರೆ ಅದು ಒಂದು ಡೊಂಬರಾಟ ತಾಪತ್ರಯಗಳನ್ನು ಮನದಲ್ಲಿಟ್ಟುಕೊಳ್ಳದೆ ಏಕಾಗ್ರತೆಯಿಂದ ಲಿಂಗವನ್ನು ಬಸವೇಶ್ವರರು ಪೂಜಿಸುತ್ತಿದ್ದರು. ಕ್ರೋಧಕುಹಕವಿಲ್ಲದಿರಬೇಕು ಲಿಂಗಪೂಜಕನು ಎನ್ನುತ್ತಿದ್ದರು. ಶಿವಲಿಂಗಕ್ಕೆ ಸಮರ್ಪಿಸದೆ ಯಾವ ಆಹಾರ ಪಾನೀಯವನ್ನೂ ಮುಟ್ಟುತ್ತಿರಲಿಲ್ಲ.

ಲಿಂಗ ಮುಖದಿಂದ ಬಂದ ಪ್ರಸಾದವಲ್ಲದೆ ಬೇರೆ ಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ.

ಲಿಂಗಾರ್ಪಿತವಲ್ಲದೆ ಉದಕವ ಮುಕ್ಕಳಿಸಿದಡೆ
ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯ.
ಲಿಂಗಾರ್ಪಿತವಲ್ಲದೆ ಹುಲ್ಲು ಕಡ್ಡಿಯ
ಕೊಂಡರೆ ಮುಂದೆ ಘನ ಘೋರ ನರಕವಯ್ಯಾ.
ಕಡೆ ಮುಟ್ಟದಿದ್ದೊಡೆ ತಲೆದಂಡ ಕೂಡಲಸಂಗಯ್ಯ.

ಲಿಂಗಧಾರಕರ ಸಹವಾಸ ಸಂಭಾಷಣೆಯು ಇವರಿಗೆ ಪರಮಾನಂದ. ಲಿಂಗಪೂಜೆ ಮಾಡದ ಉಗುಳನ್ನೂ ನುಂಗರು. ಲಿಂಗಾರ್ಪಿತ ಮಾಡಿ ತೃಪ್ತಿಗೊಮ್ಮೆ ಶಿವಶಿವಾ ಎನ್ನುತ್ತಿದ್ದರು. ಪರಬ್ರಹ್ಮವೇ ಲಿಂಗವು. ಸಿದ್ಧಾಂತ ಶಿಖಾಮಣಿಯ ಶ್ರುತಿ ಇಂತಿದೆ.

ಲಯಂಗಚ್ಛತಿ ಯತ್ರೈವ ಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಂ ॥

ಶ್ರೀಗುರುವು ಕೃಪೆಗೈದು ಲಿಂಗವನ್ನು ಶಿಷ್ಯನಿಗೆ ಕರುಣಿಸುತ್ತಾನೆ. ಜಗವಗಲ ಮುಗಿಲಗಲಗಳಿಗಿಂತ ಘನವಾದ ಪರಶಿವಲಿಂಗವನ್ನು ದಿನವೂ ತನ್ನ ಕೈಯಿಂದಲೇ ಪೂಜಿಸಿ, ಕಣ್ಣಿಂದ ನಿಟ್ಟಿಸಿ ನೋಡಿ ನಾಲಿಗೆಯಿಂದ ನುತಿಸಿ ಧನ್ಯರಾಗುವ ಭಾಗ್ಯವು ಬಸವೇಶ್ವರರಿಗೆ ಬಂದು ಧನ್ಯಜೀವಿಗಳಾಗಿದ್ದಾರೆ. ತಾಮಸಿಯು ಇಷ್ಟಲಿಂಗ ಪೂಜೆಯಿಂದ ರಾಜಸಿಯ ಮಟ್ಟಕ್ಕೆ ಬಂದಾಗ ದೀಕ್ಷಾ ಜೀವಿಯಾಗಿ ಭಕ್ತಿಯುಕ್ತ ಧ್ಯಾನವಾದ ಪ್ರಾಣಲಿಂಗೋಪಾಸನೆಯನ್ನು ಕೈಗೊಳ್ಳುತ್ತಾನೆ. ಭಾವಲಿಂಗ ಸಮಾಧಿಯು ಸಮಾವೇಶದಿಂದ ಸಾತ್ವಿಕ ಭಕ್ತಿಯಲ್ಲಿ ಸಂಪನ್ನರಾದವರು ಮರ್ತ್ಯದಲ್ಲಿ ಮಹಾದೇವರಾಗಿ ಬೆಳಗುತ್ತಾರೆ ಎಂಬುದನ್ನು ಬಸವೇಶ್ವರರು ನಿದರ್ಶಿಸಿದ್ದಾರೆ.

ಭಕ್ತನ ಭವಬಾಧೆಯನ್ನು ಬಗೆಹರಿಸಿ ಜೀವನ ಗುಣಗಳನ್ನು ಜಂಗಮನು ತೊರೆಯಿಸಿ ಆತ್ಮಾನುಸಂಧಾನದಲ್ಲಿಯೇ ಇರುವಂತೆ ಮಾಡುತ್ತಾನೆ ಜಂಗಮವನ್ನು ಚರಲಿಂಗವೆಂದು ವೀರಶೈವರು ಭಾವಿಸುತ್ತಾರೆ. ಲಿಂಗಮುಖವೇ ಜಂಗಮವು.

ಮರಕ್ಕೆ ಬಾಯಿಬೇರೆಂದು ತಳಕ್ಕೆ ನೀರನೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ. ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ ಮುಂದೆ ಸಕಳಾರ್ಥವನೀವನು. ಆ ಜಂಗಮವ ಹರನೆಂದು ಕಂಡಲ್ಲದೆ ನರನೆಂದು ಭಾವಿಸಿದಡೆ ನರಕ ತಪ್ಪದು ಕೂಡಲಸಂಗಮದೇವಾ.'' ಲಿಂಗಕ್ಕೆ ಅರ್ಪಿಸಿದರೆ ಲಿಂಗ ಪ್ರಸಾದ, ಜಂಗಮಕ್ಕೆ ಅರ್ಪಿಸಿದರೆ ಜಂಗಮ ಪ್ರಸಾದವಾಗುತ್ತದೆ. ತನುಮನಧನಗಳನ್ನು ಗುರುಲಿಂಗಜಂಗಮದ ಸೇವೆಯಲ್ಲಿ ಸವೆಯಿಸುವುದು ಭಕ್ತನ ಆದಿಕರ್ತವ್ಯವೆಂಬುದು ಬಸವೇಶ್ವರರ ಅಭಿಪ್ರಾಯವು.

"ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ ಉಣ್ಣದೇ ಹೋಗುವಿರಿ? ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ. ಶರಣರಿಗೆ ಒಡಲ ಸವಿಸುವುದು.

ಗುರುವಿನಗುರು ಜಂಗಮ. ಧನವ ಕೊಟ್ಟು ಜಂಗಮವನೊಲಿಸಬೇಕು. ಶರಣರಿಗಲ್ಲದ ಅರ್ಥ ವ್ಯರ್ಥ. ಇವರಿಗೆ ಜಂಗಮರೆಂದರೆ ಪಂಚಪ್ರಾಣ. ಏನು ಬೇಕೆಂದರೆ ಅದನ್ನು ಜಂಗಮರಿಗೆ ಸಮರ್ಪಿಸಲು ಸಿದ್ಧರು. ಯಾವ ಅಡೆ ತಡೆ ಬಂದರೂ ಅವುಗಳನ್ನು ಲೆಕ್ಕಿಸದೆ ಜಂಗಮರನ್ನು ತೃಪ್ತಿಪಡಿಸುವುದೇ ಇವರ ಕಾಮನೆ. ಜಂಗಮರ ಆಂತರಿಕ ಸೌಂದರ್ಯದ ವ್ಯಾಪಾರಕ್ಕೆ ಇವರ ಆತ್ಮ ಶರಣು ಹೊಕ್ಕಿದೆ. ಅವರ ಲೆಂಕರ ಲೆಂಕರನೆಂಬುದೇ ಇವರ ಅಂತರಂಗಿತ ವಾಣಿ. ಇವರ ಮನ ಅವರ ಧೈರ್ಯ ಸಾಹಸಕ್ಕೆ ತಬ್ಬಿಬ್ಬಾಗಿವೆ. ಜಂಗಮಾರಾಧನೆಯೇ ಇವರಿಗೆ ಘನಪರ್ವ. ಜಂಗಮಸೇವೆಯೇ ಜಗದೀಶನ ಸೇವೆ. ಬಲಿದಧೀಚಿಶಿಬಿ ಕರ್ಣಾದಿದಾನಿಗಳಿಗಿಂತ ಒಂದು ಹೆಜ್ಜೆ ಮುಂದು ಇವರದು ಜಂಗಮರ ವಿಚಾರದಲ್ಲಿ ಭಕ್ತಿಶರಧಿಯಲ್ಲಿ ಮಿಂದು ಪುನೀತನಾದವನಿಗೆ ಮಾತ್ರ ಬಸವೇಶ್ವರರ ಭಕ್ತಿಯು ಗೊತ್ತಾಗುತ್ತದೆ. ಶರಣರ ಆಚರಣೆಯನ್ನು ಕಂಡು ಬಸವೇಶ್ವರರ ಬಗೆಗಣ್ಣು ತೆರೆದಿದೆ. ಗುರುಗಳಿಂದ ಕ್ರಮಬದ್ಧವಾಗಿ ದೀಕ್ಷಿತರಾಗಿ ಅವರು ಅರುಹಿದ ರೀತಿಯಿಂದ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಲಿಂಗವನ್ನು ದಿನವೂ ಅರ್ಚಿಸಿ ಆರಾಧಿಸಿ ಓಂ ನಮಃಶಿವಾಯ ಮಂತ್ರವನ್ನು ಬಿಡದೆ ನೆನೆಯುತ್ತಿದ್ದರು. ಶಿವಮಂತ್ರಕ್ಕಿಂತ ಮತ್ತೆ ಬೇರೆ ಅಮೋಘವಾದದ್ದು ಯಾವುದೂ ಇಲ್ಲ ಎಂಬುದೇ ಇವರ ಮನೀಷೆ. ಆದರಿಂದ ಇವರಿಗೆ ಸಂಸಾರದ ಯಥಾರ್ಥ ಜ್ಞಾನವು ದೊರಕಿದೆ. ಅದರ ವಿಚಾರದಲ್ಲಿ ದಿನದಿನಕ್ಕೆ ಹೇಯ ಭಾವವೂ ಉದಿಸತೊಡಗಿದೆ. ಸಂಸಾರವು 'ಸರ್ಪನ ನೆಳಲ್ಲಿರ್ಪ ಕಪ್ಪೆಯತೆರ'ನಾಗಿ ಇವರಿಗೆ ಪರಿಣಮಿಸುತ್ತದೆ.

ಎಂದೋ ಸಂಸಾರದ ದಂದುಗ ಹರಿಯುವುದು ?
ಎಂದೋ ಮನದಲ್ಲಿ ಪರಿಣಾಮವಹುದು ?
ಇನ್ನೆಂದೋ ಪರಮ ಸಂತೋಷದಲ್ಲಿಹುದೆನಗೆಂದೋ ?

ಈ ತೆರನ ಸಾಧನೆಯಿಂದ ಇವರ ಅಂತರ್ನಿರೀಕ್ಷಣೆಯು ಹೆಚ್ಚುತ್ತದೆ. ನಿಶ್ಚಲ ಮನಸ್ಸಿಗಾಗಿ ಕಾಮಿನೀ ಕಾಂಚನ ವಿದೂರನಾಗಲು ದೇವಾಧಿದೇವನಲ್ಲಿ ಮೊರೆಯಿಡುತ್ತಾರೆ.

ವಿಷಯವೆಂಬಹಸುರೆನ್ನ ಮುಂದೆ ಪಸರಿಸಿದೆಯಯ್ಯಾ
ಪಶುವೇನಬಲ್ಲುದು? ಹಸುರೆಂದೆಳಸುವುದು
ವಿಷಯ ರಹಿತನಾಗಿ ಮಾಡಿ, ಭಕ್ತಿ ರಸವ

ದಣಿಯ ಮೇಯಿಸಿ, ಸುಬುದ್ಧಿಯೆಂಬ
ಉದಕವನೆರೆದು ನೋಡಿ ಸಲಹಯ್ಯಾ.

ತಮ್ಮಲ್ಲಿ ಯಾವತೆರನ ಭಕ್ತಿಯಾಗಲೀ, ಭಕ್ತನ ಸಹಜ ಗುಣವಾಗಲೀ ಇಲ್ಲವೆನ್ನುತ್ತಾರೆ. ತಮ್ಮ ಅನುಷ್ಠಾನ ಪ್ರಭಾವಗಳಿಂದ ಶಿವಭಕ್ತಿಯನ್ನು ಮೊಗೆ ಮೊಗೆದು ಹೃದಯಕ್ಕೆ ತುಂಬಿಕೊಂಡು ಭಕ್ತಿ ಭಾಂಡಾರಿಗಳಾಗಿದ್ದೂ ನಿರಹಂಕಾರಿಗಳಾಗಿ ಜನರ ಹೊಗಳಿಕೆಗಾಗಿದ್ದೂ ಅಸಹ್ಯಪಡುತ್ತಾರೆ.

ಎನ್ನಲ್ಲಿ ಭಕ್ತಿ ಸಾಸುವೆಯ ಷಡ್ಭಾಗವಿನಿತಿಲ್ಲ.
ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿ ಎಂಬವರು !
ನಾನೇನ ಪಾಪವ ಮಾಡಿದೆನೋ ?
ಬೆಳೆಯದ ಮುನ್ನ ಕೊಯ್ಯುವರೆ ? ಹೇಳಾ, ಅಯ್ಯಾ !
ಇರಿಯದ ವೀರ ! ಇಲ್ಲದ ಸೊಬಗವ
ಎಲ್ಲಾ ಒಡೆಯರ ಏರಿಸಿ ನುಡಿವರು !
ಎನಗಿದು ವಿಧಿಯೇ ಕೂಡಲ ಸಂಗಮ ದೇವಾ ?

ಇಡೀ ತನ್ನ ಶರೀರವನ್ನೇ ಶಿವನಿಗಾಗಿ ಧಾರೆಯೆರೆದು ಆತ್ಮಾರ್ಪಣ ಮಾಡಿದ್ದಾರೆ.

ಎನ್ನ ಕಾಯವ ದಂಡಿಗೆಯ ಮಾಡಯ್ಯ.
ಎನ್ನ ಶಿರವ ಸೋರೆಯ ಬರುಡೆಯ ಮಾಡಯ್ಯ.
ಎನ್ನ ನರವ ತಂತಿಯ ಮಾಡಯ್ಯ.
ಎನ್ನ ಬೆರಲ ಕಡ್ಡಿಯ ಮಾಡಯ್ಯ.
ಬತ್ತೀಸ ರಾಗವ ಹಾಡಯ್ಯ ಕೂಡಲ ಸಂಗಮದೇವ.

ಶಿವನಾಮನುತಿಗಾಗಿ ನಿರಂತರವೂ ಇಪ್ಪದೆ ಇವರು ಹಾತೊರೆಯುತ್ತಿದ್ದಾರೆ.

ಹುಂಣವುಳ್ಳನಕ ನಿಮ್ಮ ಚರಣವ
ನೆನೆವುದ ಮಾಣೆ ನರಹರಿದು ಅಟ್ಟೆ
ನೆಲಕ್ಕೆ ಬಿದ್ದರೆ ನಾಲಗೆ ಶರಣೆನ್ನುತಿದ್ದಿತಯ್ಯಾ
ನಿಮ್ಮಲ್ಲದೆ ಅನ್ಯರ ನೆನೆದರೆ ತಲೆದಂಡ !
ಎನಗೆ ನಿಮ್ಮ ನೆನಹೇ ಜೀವ ।

ಈ ಬಗೆಯ ಅನನ್ಯ ಭಾವದಿಂದ ನೆನೆದವರಿಗೆ ಪರಮಾತ್ಮನು ಪ್ರತ್ಯಕ್ಷವಾಗದಿರುವನೇ ? ಈ ರೀತಿಯ ಸಾಧನೆಯಲ್ಲಿ ನಿರತರಾದ ಬಸವೇಶ್ವರರಿಗೆ ಶಿವನ ದಿವ್ಯದರುಶನವಾಗಿ ಆನಂದಾತಿರೇಕರಾಗಿರುತ್ತಾರೆ.

ನಿಮ್ಮ ನೋಟ ಅನಂತಸುಖ
ನಿಮ್ಮ ಕೂಟ ಪರಮ ಸುಖವಯ್ಯಾ
ಅಪ್ಪಕೋಟಿ ರೋಮಗಳೆಲ್ಲ
ಕಂಗಳಾಗಿ ನೋಡುತಿದೇನು.

ಶಿವನ ಕರುಣೆಯ ಮಳೆಯು ಇವರ ಮೇಲೆ ಸುರಿದು, ಪರತತ್ತ್ವ ಲಿಂಗವು ಕೈಸಾರಿ ನಿಬ್ಬೆರಗಾಗಿ ಸಚ್ಚಿದಾನಂದದಿಂದ ಮೈಮರೆದು ಪೂರ್ವಗುಣವಳಿದು ಇವರು ಪುನರ್ಜಾತರಾಗಿದ್ದಾರೆ.

# ಉಪನಿಷತ್ತುಗಳು.

(ಅನುವಾದಕರಃ— ನಾ. ಮ. ಬಸವರಾಜ, ಹೆಡ್ಮಾಸ್ಟರು, ನಾಗರಹಾಳು.)

---

ನಮ್ಮ ಧರ್ಮವು ಅತಿ ವಿಶಾಲವಾದದ್ದು. ಬಹು ವಿಧವಾದ ಶಾಖಾ ಪ್ರಶಾಖೆಗಳಿಂದ ಶೋಭಿತವಾದದ್ದು. ಅದರ ಮೂಲವು ಗಂಭೀರತಮವಾದ ಜ್ಞಾನದಲ್ಲಿ ಅಧಿಷ್ಠಿಸಿದೆ. ಅದರ ಶಾಖೆಗಳು ಕರ್ಮದಅತಿ ದೂರ ಪ್ರಾಂತದ ವರೆಗೂ ವಿಸ್ತರಿಸಿದ ಗೀತೆಯಲ್ಲಿ ಅಶ್ವಥವೃಕ್ಷ ಹ್ಯಾಗೆ ಊರ್ಧ್ವ ಮೂಲವು ಅಧಶ್ಯಾಖೆಯೋ ಹಾಗೆ ಈ ಧರ್ಮವು ಜ್ಞಾನದಲ್ಲಿ ಆಶ್ರಯಿಸಿದೆ. ಕರ್ಮಕ್ಕೆ ಪ್ರೇರಕವಾಗಿದೆ. ನಿವೃತ್ತಿ ಅದರ ಬುನಾದಿ ಪ್ರವೃತ್ತಿ ಅದರ ಗೃಹವು, ಮೇಲಿನ ಗೋಡೆಗಳು ಮುಕ್ತಿ ಅದರ ಶಿಖರವು ಮಾನವ ಜಾತಿಯ ಸಮಸ್ತ ಜೀವನವನ್ನು ವಿಸ್ತಾರವಾದ ಈ ಹಿಂದೂಧರ್ಮವೆಂಬ ವೃಕ್ಷದ ನೆರಳಿನಲ್ಲಿ ಆಶ್ರಯಿಸಿರುವುದು. ಅಪಾಯ. ಹಿಂದೂ ಧರ್ಮದ ಬುನಾದಿ ವೇದವೆಂದು ಎಲ್ಲರೂ ಹೇಳುವರು ಆದರೆ ಕೆಲವು ಮಂದಿ ಮಾತ್ರ ಆ ಬುನಾದಿಯ ಸ್ವರೂಪ ರಹಸ್ಯಗಳನ್ನು ಅರಿತಿರುವರು. ಸಾಧಾರಣವಾಗಿ ನಾವೆಲ್ಲರು ಕೊಂಬೆಯ ಮೇಲ್ಭಾಗ ಕೂತು ಸುಸ್ವಾದಗಳೂ ನಶ್ವರಗಳೂ ಆದ ಯಾವ ಒಂದು ಎರಡು ಫಲಗಳನ್ನು ಆಸ್ವಾದಿಸುವಲ್ಲಿ ಸಂತೋಷಪಟ್ಟಿರುವೆವು. ಮೂಲದ ಸಂದರ್ಭ ಯಾವುದೂ ನಮಗೆ ತಿಳಿಯದು.

ವೇದದ ಕರ್ಮಕಾಂಡ ಜ್ಞಾನಕಾಂಡಗಳೆಂದು ಎರಡು ಭಾಗಗಳು ಇರುವ ವಿಷಯ ಕೇಳಿರುವುದು ನಿಜವು. ಅಸಲು ಕರ್ಮಕಾಂಡವೆಂದರೇನೋ, ಜ್ಞಾನಕಾಂಡವೆಂದರೇನೋ ಅದು ನಮಗೆ ತಿಳಿಯದು. ಮೋಕ್ಷ ಮೂಲವೆಂದು ಬರೆದ—ಋಗ್ವೇದ ಋಷಿಗಳು ಪ್ರಕೃತಿಯ ಬಾಹ್ಯಪದಾರ್ಥಗಳನ್ನೇ ಅಥವಾ ಭೂತ ಸಮುದಾಯಗಳನ್ನೇ, ಪೂಜಿಸುವರೆಂದೂ ಸೂರ್ಯ ಚಂದ್ರಾಗ್ನಿ ವಾಯುಗಳು ಮೊದಲಾದವುಗಳ ಸ್ಥಾವಕಗಳೇ? ಸನಾತನ ಹಿಂದೂ ಧರ್ಮದ ಅನಾದಿ ಅನಂತವೂ ಅಪೌರೇಷಯುವೂ ಎಂದು ಹೇಳಲ್ಪಟ್ಟ ಮೂಲ ಜ್ಞಾನವೆಂತಲೂ ಮೋಕ್ಷ ಮೂಲಪವರೆಗೂ ದತ್ತಮುಹಾಶಯನವರೆಗೂ ನಾವು ಕಲಿತುಕೊಂಡಿರುವೆವು. ನಾವು ಇದನ್ನೇ ವಿಶ್ವಾಸ ಮಾಡಿ ವೇದ ಋಷಿಗಳನ್ನು

ಹಿಂದೂಧರ್ಮವನ್ನು ಅವಮಾನಿಸಿ ದೊಡ್ಡ ವಿದ್ವಾಂಸರೆಂದೂ ಜ್ಞಾನಲೋಕವನ್ನು ಮುಟ್ಟಿದವರೆಂದೂ ತಲೆಹೊಡೆದುಕೊಳ್ಳುತ್ತಿರುವೆವು. Enlightened) ಅಸಲು ವೇದದಲ್ಲಿ ನಿಜವಾಗಿ ಏನಿರುವದೋ ಶಂಕರ ಪ್ರಭೃತಿಗಳಾದ ಮಹಾ ಜ್ಞಾನಿಗಳು ಮಹಾಪುರುಷರು ಈ ಸ್ಥಾವಕಗಳನ್ನು ಅನಾದ್ಯಂತವೂ ಸಂಪೂರ್ಣವೂ ಭ್ರಾಂತಿರಹಿತವೂ ಆದ ಜ್ಞಾನವೆಂದು ಏಕೆ ಸ್ವೀಕರಿಸಿದರೋ? ನಾವು ಆ ವಿಷಯವನ್ನು ಮಾತ್ರ ಪರೀಕ್ಷಿಸಲಿಲ್ಲ.

ಉಪನಿಷತ್ತುಗಳೆಂದರೇನೋ ಆ ವಿಷಯವನ್ನು ಕೂಡಾ ಕೆಲವು ಜನರು ಮಾತ್ರ ಅರಿತಿರುವರು. ಉಪನಿಷತ್ತುಗಳ ಮಾತು ಹೇಳಲು ಪ್ರಾಯಶಃ ನಾವು ಶಂಕರಾಚಾರ್ಯನ ಅದ್ವೈತ ವಾದವು ರಾಮಾನುಜನ ವಿಶಿಷ್ಟಾದ್ವೈತವಾದವೂ ಮಧ್ವನ ದ್ವೈತವಾದವೂ ಇವೇ ಮೊದಲಾದ ದಾರ್ಶನಿಕ ವ್ಯಾಖ್ಯಗಳನ್ನೇ ಕುರಿತು ತಲೆಹೊಡೆಸಿಕೊಳ್ಳುವೆವು. ಅಸಲು ಉಪನಿಷತ್ತುಗಳಲ್ಲಿ ಏನು ಬರೆದಿರುವದೋ ಅದರ ನಿಜವಾದ ಅರ್ಥವು ಯಾವುದೋ ಒಂದಕ್ಕೊಂದು ವಿರೋಧಿಸುವ ಷಡ್‌ದರ್ಶನಗಳೂ ಆ ಏಕ ಮೂಲದಿಂದ ಹೇಗೆ ಉತ್ಪನ್ನವಾಗಿರುವವೋ ಷಡ್ದರ್ಶನಗಳಿಗೆ ಮಿಕ್ಕಿದ ಯಾವುದೋ ಒಂದು ಗೂಡಾರ್ಥವು ಅಜ್ಞಾನ ಭಾಂಡಾರದಲ್ಲಿ ಅಭ್ಯವಾಗುವುದೋ ಎಂಬ ವಿಷಯಗಳನ್ನು ಕುರಿತು ನಾವು ಚಿಂತಿಸುವುದಿಲ್ಲ ಶಂಕರಾಚಾರ್ಯರು ಮಾಡಿದ ಅರ್ಥವನ್ನೇ ನಾವು ಸಾವಿರ ವರ್ಷದ ವರೆಗೂ ಅದನ್ನೇ ಪ್ರಮಾಣವನ್ನಾಗಿ ತಿಳಿದಿರುವೆವು. ಶಂಕರನ ವಾಕ್ಯವೇ ನಮಗೆ ವೇದ, ಉಪನಿಷತ್ತುಗಳು. ಕ್ರಮದಿಂದ ಅಸಲು ಉಪನಿಷತ್ತುಗಳನ್ನು ಯಾರು ಓದುವರು? ಒಂದು ವೇಳೆ ಓದಿದರೂ ಶಂಕರನ ವ್ಯಾಖ್ಯಾನಕ್ಕೆ ವಿರೋಧವಾಗಿರುವ ಇತರ ವ್ಯಾಖ್ಯಾನವನ್ನು ನೋಡಿದ ಕೂಡಲೇ ನಾವು ತಟ್ಟನೆ ಅದನ್ನು ತಪ್ಪೆಂದು ನಿರಾಕರಿಸುವೆವು ಆದರೂ ಉಪನಿಷತ್ತುಗಳಲ್ಲಿ ಕೇವಲ ಶಂಕರ ಲಬ್ಧವಾದ ಜ್ಞಾನವು ಇಲ್ಲವೇ ಇಲ್ಲ. ಭೂತ ವರ್ತಮಾನ ಭವಿಷ್ಯಗಳಲ್ಲಿ ಆಧ್ಯಾತ್ಮಿಕ ಜ್ಞಾನವು ಅಥವಾ ತಪ್ಪುಜ್ಞಾನವು ಅಬ್ಧವಾಗುವದೋ ಅಥವಾ ಆಗದೋ ಆ ಸರ್ವವನ್ನು ಆರ್ಯ ಋಷಿಗಳು ಮಹಾಯೋಗಿಗಳನ್ನು ನಿಗೂಢಾರ್ಥ ಪ್ರಕಾಶವಾದ ಶ್ಲೋಕಗಳಲ್ಲಿ ಹೆಚ್ಚು ಸಂಕ್ಷೇಪವಾಗಿ ಸಿಂತು ಓದಿದ್ದಾರೆ.

ಉಪನಿಷತ್ತುಗಳೆಂದರೇನು? ಅನಾದ್ಯನಂತವೂ ಗಭೀರತಮವೂ ಸನಾತನವೂ ಆದ ಯಾವ ಜ್ಞಾನದಲ್ಲಿ ಸನಾತನ ಧರ್ಮವು ಆಶ್ರಯಿಸಿರುವುದೋ

ಅಜ್ಞಾನದ ಭಾಂಡಾರವೇ ಉಪನಿಷತ್ತುಗಳು. ನಾಲ್ಕು ವೇದಗಳ ಸೂಕ್ತಿಗಳಲ್ಲಿ ಈ ಜ್ಞಾನವು ಪಡೆಯಬಹುದು ಅಲ್ಲದೆ ಇದು ಉಪಮಾನೆವನದಿಂದ ಸ್ತೋತ್ರಗಳ ಬಾಹ್ಯಾರ್ಥದಲ್ಲಿ ಮರೆಯಾಗಿರುವದು. ಇಲ್ಲಿ ಜ್ಞಾನವು ಮಾನವನ ಪ್ರತಿಬಿಂಬವು ಕನ್ನಡಿಯಲ್ಲಿದ್ದ ರೀತಿಯಂತೆ. ಉಪನಿಷತ್ತುಗಳು ಆಚ್ಛಾದನವಿಲ್ಲದ ಪರಮಜ್ಞಾನವು. ಈ ಜ್ಞಾನವು ಮಾನವನ ಅಚ್ಛಸ್ವಶರೀರದಂತೆ ಋಗ್ವೇದ ವಕ್ತರಾದ ಋಷಿಗಳು ಈಶ್ವರ ಪ್ರೇರಣದಿಂದ ಆಧ್ಯಾತ್ಮಿಕ ಜ್ಞಾನವನ್ನು ಶಬ್ದಗಳಲ್ಲಿ ಛಂದಸ್ಸಿನಲ್ಲಿ ಪ್ರಕಾಶ ಮಾಡಿದರು. ಉಪನಿಷದ್ ಋಷಿಗಳು ಸಾಕ್ಷಾತ್ ದರ್ಶನದಿಂದ ಅಜ್ಞಾನದ ಸ್ವರೂಪವನ್ನು ದರ್ಶಿಸಿ ಪರಮಗಭೀರಾರ್ಥವಾದ ಸ್ವಲ್ಪ ಮಾತುಗಳಲ್ಲಿ ಅದ್ವೈತವಾದವು ಮಾತ್ರವೇ ಅಲ್ಲ. ಭಾರತದೇಶದಲ್ಲಿಯೂ ಯುರೋಪದಲ್ಲಿಯೂ ಏಷ್ಯಾದಲ್ಲಿಯೂ ಎಷ್ಟು ವಿಧವಾದ ದಾರ್ಶನಿಕರು ಪರ್ಯಾಲೋಚಿಸಿದರೂ ವಾದಗಳು ಸೃಷ್ಟಿಸಲ್ಪಟ್ಟಿರುವವು. Nominalisrn, Realisrn, Nihilisrn, Darwinis Evolution, Gomtes Porittvism, Hegel, Kant, Spidaqa, Schopeuhauer, Utilitarianism, ಈ ಸರ್ವವು ಉಪನಿಷದೃಷಗಳಿಂದಲೂ ಸಾಕ್ಷಾತ್ ದರ್ಶನದಲ್ಲಿ ನೋಡಿ ವ್ಯಕ್ತವಾಗಿರುವವು. ಆದರೂ ಇತರ ಸ್ಥಲಗಳಲ್ಲಿ ಯಾವುದು ಅಂಕಿತವಾಗಿ ನೋಡಲ್ಪಟ್ಟಿರುವದೋ ಸತ್ಯದ ಖಂಡವು ಮಾತ್ರ ಆಗುವದು ಹೊರತು ಸಂಪೂರ್ಣ ಸತ್ಯವೆಂದು ಯಾವದು ಪ್ರಚಾರ ಮಾಡಿರುವದೋ ಮತ್ತು ಯಾವುದು ಸತ್ಯದ ಮಿಥ್ಯದ ಆಧಾರದ ಮೇಲೆ ತಾರುಮಾರಾಗಿ ವರ್ಣಿಸಲ್ಪರುವದೋ, ಅದು ಉಪನಿಷತ್ತುಗಳಲ್ಲಿ ಸಾಕಲ್ಯಭಾವದಿಂದ, ತನ್ನ ಯಥಾರ್ಥ ಸಂಬಂಧವನ್ನು ನಿಲ್ಲಿಸಿಕೊಳ್ಳುವದೋ ವಿಶುದ್ಧವೂ, ಭ್ರಮರಹಿತವೂ ಆಗಿ ಪ್ರಕಾಶಿಸಲ್ಪಟ್ಟಿರುವುದು ಆದುದರಿಂದಲೇ ಶಂಕರನ ವ್ಯಾಖ್ಯೆಯಲ್ಲಿಯಾಗಲೀ ಇತರ ವ್ಯಾಖ್ಯಾನಗಳಲ್ಲಿಯಾಗಲೀ ಕಟ್ಟುಬಡೆಯದೇ ಉಪನಿಷತ್ತುಗಳ ಗಂಭೀರವು ಅಖಂಡವೂ ಆದ ಅಸಲು ಅರ್ಥವನ್ನು ಗ್ರಹಿಸುವದಕ್ಕಾಗಿ ಯತ್ನಿಸತಕ್ಕದ್ದು.

ಉಪನಿಷತ್ ಎಂಬ ಶಬ್ದದ ಒಂದು ಅರ್ಥವು ನಿಗೂಢ ಪದದಲ್ಲಿ ಪ್ರವೇಶಿಸುವಿಕೆ ಋಷಿಗಳು ತರ್ಕಬಲದಿಂದಲ್ಲದೆ ವಿದ್ಯಾವೈಪುಲ್ಯದಿಂದಾಗಲೀ ಪ್ರೇರಣದ ಆವೇಶದಿಂದಲ್ಲದೆ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಜ್ಞಾನವು ಪಡೆಯಲಿಲ್ಲ. ಯಾವ ನಿಗೂಢ ಪದದಲ್ಲಿ ಮನಸ್ಸಿನ ಯಾವ ಅಂತಃಪುರದಲ್ಲಿ

ಯಾವ ಸಪ್ತ್ಯಜ್ಞಾನದ ತಾಳವು ಕಿವಿಯಲ್ಲಿ ಕೇಳಿಸುತ್ತಿರುವದೋ ಯೋಗದಿಂದ ಅಧಿಕಾರಿಗಳಾಗಿ ಅಂತಃಪುರದಲ್ಲಿ ಪ್ರವೇಶಿಸಿ, ಆ ಕಿವಿಯಲ್ಲಿ ಕೇಳಿದ್ದನ್ನು ಸ್ವೀಕರಿಸಿ ಭ್ರಾಂತಿರಹಿತವಾದ ಜ್ಞಾನದ ವಿಶಾಲರಾಜ್ಯಕ್ಕೆ ಪ್ರಭುಗಳಾದರು. ಆ ತಾಳವು ಕಿವಿಯಿಂದ ಸಿಕ್ಕದ್ದೋ ಉಪನಿಷತ್ತುಗಳ ನಿಜವಾದ ಅರ್ಥವು ಬಹಿರ್ಗತವಾಗದು. ತರ್ಕಬಲದಿಂದ ಉಪನಿಷತ್ತುಗಳನ್ನು ಅನ್ವಯಿಸುವದು. ನಿಬಿಡಾರಣ್ಯದಲ್ಲಿ ಮಹೋನ್ನತ ವೃಕ್ಷಗಳ ಅಗ್ರಹವನ್ನು ತಲೆಎತ್ತಿ ನೋಡುವದು ಹೇಗೋ ಅದೇ ವಿಧವಾಗಿರುವುದು. ಸಾಕ್ಷಾತ್ ದರ್ಶನವು ಸೂರ್ಯನ ಪ್ರಕಾಶದಷ್ಟು ಆದುದರಿಂದಲೇ ಆರಣ್ಯವೆಲ್ಲವನ್ನು ಪ್ರಕಾಶದಿಂದ ತುಂಬಿರುವ ಅನ್ವೇಷಣೆಗೆ ನಯನಗೋಚರವಾಗುವುದು. ಸಾಕ್ಷಾತ್ ವರ್ಶನವು ಯೋಗದಿಂದಲೇ ಹೊಂದತಕ್ಕದ್ದು.

# ಅನುಭವಸಾರ.

ಬರೆದವರುಃ— ವೇ|| ಎಚ್. ವ್ಹಿ. ಅಯ್ಯನಗೌಡ ರಿ|| ಹೆ|| ಮಾಸ್ತರ
(ಪ್ರಿನ್ಸಿಪಲ್ ಹಾಯಸ್ಕೂಲ ಗದಗ.)



## ( ಭಕ್ತಿ )

ತರಣಿ ಶಶಿ ತಾರೆಗಳ ಬೆಳಗಿರುವ ಮಹಜೋತಿ |
ಪರತತ್ವವೆನಿಸಿ ತಾಂ ತಾನೆ ಬೆಳಗುವ ಜೋತಿ ||
ಧರೆಯನೆಲ್ಲವ ತುಂಬಿ ಸೂಸುತಿರುವಾ ಜೋತಿ |
ಪರಂಜೋತಿಗೆ ನಮಿಸೊ ಹುಚ್ಚು ಕೊಟ್ರೇಶಾ ||೧||

ವಿಶ್ವದಾ ಲೀಲೆಯದು ಜಗದಂಬೆಯಾ ಮಾಯೆ |
ವಿಶ್ವ ಜೀವಿಗಳೆಲ್ಲ ಮಾಟದಾ ಬೊಂಬೆಗಳು ||
ವಿಶ್ವದಾ ಬೊಂಬೆಗಳ ಕುಣಿ ಕುಣಿಸಿ ದಣಿಸುತಿಹೆ |
ವಿಶ್ವಮಾಯಿಗೆ ನಮಿಸೊ ಹುಚ್ಚು ಕೊಟ್ರೇಶಾ ||೨||

ವಧೆಯ ತೋರುತಲಿಹವು ಕರ್ಮಯಾಗಾದಿಗಳು |
ಎದೆಗುದಿಯ ತೋರುವವು. ವೇದಶಾಸ್ತ್ರಾದಿಗಳು ||
ಸದಮಲಾಂತಃಕರಣ ನಿಜ ಭಕ್ತಿಯೋಗದಿಂ |
ದಧಿಕ ಸುಧೆ ಬೇರುಂಟೆ ? ಹುಚ್ಚು ಕೊಟ್ರೇಶಾ ||೩||

ನಂಬುಗೆಯೆ ಕಾರಣವು ಭಕ್ತಿ ಭಾವಕೆ ಮೊದಲು |
ನಂಬುಗಿಂಬಾಗಿ ಪ್ರೇಮದಂಬುಧಿಯು ಸೂಸುವದು ||
ಶಂಭುಲಿಂಗದಿ ಮನವು ಸ್ಥಿರವಾಗಿ ಸಮವೆಂಸೆ |
ಶಂಭುಲಿಂಗದೊಳೈಕ್ಯ ಹುಚ್ಚು ಕೊಟ್ರೇಶಾ ||೪||

ಭಕ್ತಿ ಯೋಗಕೆ ಮಿಕ್ಕಿ ಮತ್ತೆ ಯೋಗಗಳುಂಟೆ |
ಭಕ್ತಿ ಲೋಲೇಶನಂ ಭಕ್ತಿಯು ನೆನಿಸಿದೊಡೆ ||

ಮುಕ್ತಿ ದೊರೆಯುವದದಕೆ ಸಂದೇಹವಿನಿತಿಲ್ಲ ।
ಭಕ್ತ ತಾಂ ಮುಕ್ತನೋ ಹುಚ್ಚು ಕೊಟ್ರೇಶಾ ॥೫॥

ಭಾವಗಳು ಭಕ್ತಿಯಲಿ ಹಲವು ತೆರನಾಗಿಹವು ।
ಆವ ಭಾವದಿ ನೆನೆಯೆ ಸಾವು ನೋವುಗಳೆಲ್ಲ ॥
ತಾನಾಗಿ ಹೋಗುವವು ಮಾಯೆಯಾ ಪರಿಹರಿಂದು ।
ಭಾವನೆಯೆ ಕಾರಣವು ಹುಚ್ಚು ಕೊಟ್ರೇಶಾ ॥೬॥

ದಾಸ ಭಾವದಿ ತಾನು ದಾಸನಂತಿರಬೇಕು ।
ದಾಸೋಹ ಮೆನಬೇಕು ಈಶ ನೊಲಿಯುದಕೇ ॥
ಈಶನಾದಾಸರಾದಾಸನಂತಿರಬೇಕು. ।
ಆಶೆ ಅಳಿಯಲಿಬೇಕು ಹುಚ್ಚು ಕೊಟ್ರೇಶಾ ॥೭॥

ಅರಿದು ತಾನಾರೆಂದು ಘೋರ ಮಾಯುವ ಹರಿದು ।
ಪರವಸ್ತು ಶಿವನೆಂದು ಅರಿದರಿದು ನೆರೆ ನಂಬಿ ॥
ಪರವಸ್ತು ವೈರಾಗ್ಯದಿಂ ಶಾಂತ ಭಾವದಿ ತಾನು ।
ಹರನ ಕೂಡಲಿಬೇಕು ಹುಚ್ಚು ಕೊಟ್ರೇಶಾ ॥೮॥

ನಲ್ಲ ನಲ್ಲೆಯರಂತೆ ಮಧುರ ಭಾವದಿ ತಾನು ।
ನಲ್ಲದಾ ವಿರಹದಿಂ ನಲ್ಲೆ ಬಳಲುವ ತೆರದಿ ॥
ಸೊಲ್ಲು ಸೊಲ್ಲಿಗೆ ದೇವ ದೇವನೆಂದ್ಹಂಬಲಿಸಿ ।
ತಲ್ಲಣಿಸುತಿರಬೇಕು ಹುಚ್ಚು ಕೊಟ್ರೇಶಾ ॥೯॥

ತನುವೆಂಬ ಆಲಯಕೆ ಮನವೆ ಗದ್ದುಗೆಯಾಗಿ ।
ಅನುಭವ ಜ್ಞಾನದಾ ಭಕ್ತಿಯಾ ಬೆಳಕಿನಲಿ ॥
ಮನೆಯ ಸ್ವಾಮಿಯು ತಾನು ಘನದಿ ಸಮರಸವಾಗಿ ।
ತಣಿಯುವದೆ ನಿಜಭಕ್ತಿ ಹುಚ್ಚು ಕೊಟ್ರೇಶಾ ॥೧೦॥

ಎಷ್ಟು ತೋರಿದೊಡೇನು ನಿಷ್ಠೆ ಇಲ್ಲದ ಭಕ್ತಿ ।
ಎಷ್ಟು ಕಟ್ಟಿದೊಡೇನು ಹೊಟ್ಟೆಯಾ ಮೇಲ್ಪುತ್ತಿ ॥
ಇಷ್ಟವಿಲ್ಲವು ಶಿವಗೆ ನಿಷ್ಠೆ ಇಲ್ಲದ ಭಕ್ತಿ ।
ನಿಷ್ಠೆಯೇ ನಿಜಭಕ್ತಿ ಹುಚ್ಚು ಕೊಟ್ರೇಶಾ ॥೧೧॥

— — — —

## ಹದಿನೇಳನೆಯ ಅಖಿಲಭಾರತ ವೀರಶೈವ ಮಹಾಸಭೆಯಲ್ಲಿ ಅಧ್ಯಕ್ಷರಾದ ಶ್ರೀ ಡಿ. ಸಿ. ಪಾವಟೆಯವರು ನಿರೂಪಿಸಿದ

# ಭಾಷಣದ ಸಂಕ್ಷಿಪ್ತ ವರದಿಯು.

(ಸಂಗ್ರಹ- ಶ್ರೀಯುತ ವೀರಬಸಪ್ಪನವರು ಕುಪ್ಪಸ್ತ, ಗುಡೂರ)

---

ಅಖಿಲಭಾರತ ವೀರಶೈವ ಮಹಾಸಭೆಯು ಈ ಹದಿನೇಳನೆಯ ಅಧಿವೇಶನವನ್ನು ಅಖಿಲಭಾರತ ವೀರಶೈವ ಮಹಾಸಭೆಯ ಜನಕರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಲಿಂಗೈಕ್ಯ ಶ್ರೀ ಹಾನಗಲ್ ಕುಮಾರಸ್ವಾಮಿಗಳವರ ತಪೋವನವೂ ಕರ್ಮಭೂಮಿಯೂ ಆಗಿರುವ ಈ ಶಿವಯೋಗಮಂದಿರದಲ್ಲಿ ಕೂಡಿಸಿರುವದು ವೈಶಿಷ್ಟ್ಯಪೂರ್ಣವಾಗಿದೆ.

ಶ್ರೀಮನ್ನಿರಂಜನ ಪ್ರಣವಸ್ವರೂಪಿ ಲಿಂಗೈಕ್ಯ ಶ್ರೀ ಹಾನಗಲ್ ಕುಮಾರ ಸ್ವಾಮಿಗಳವರ ಪ್ರೇರಣೆಯಿಂದ ಇಂದಿಗೆ ಸುಮಾರು ೫೦ ವರ್ಷಗಳ ಹಿಂದೆಯೇ ನಮ್ಮ ಸಮಾಜದ ಹಿರಿಯರು ಧಾರವಾಡ ನಗರದಲ್ಲಿ ಈ ಮಹಾಸಭೆಯ ಪ್ರಥಮ ಅಧಿವೇಶನವನ್ನು ನೆರವೇರಿಸಿದರು. ಅಂದಿನಿಂದ ಇಲ್ಲಿಯವರೆಗೆ ಮಹಾಸಭೆಯ ಹದಿನಾರು ಅಧಿವೇಶನಗಳು ಮಾತ್ರ ಜರುಗಿವೆ. ಈ ಎಲ್ಲ ಅಧಿವೇಶನಗಳಿಗೆ ಸಮಾಜಕಾರ್ಯ ದುಂಧರರೂ ಎಲ್ಲರ ಮನ್ನಣೆಗೆ ಪಾತ್ರರಾದವರೂ ಆದ ಮಹನೀಯರು ಅಧ್ಯಕ್ಷರಾಗಿದ್ದರು. ಅವರಲ್ಲಿ ಪ್ರತಿಯೊಬ್ಬರಿಂದಲೂ ವೀರಶೈವ ಸಮಾಜಕ್ಕೆ ಒಂದಿಲ್ಲೊಂದು ರೀತಿಯಿಂದ ಪ್ರೋತ್ಸಾಹ ದೊರಕಿದೆ.

ನಮ್ಮ ವೀರಶೈವ ಧರ್ಮವು ಅತಿ ಪುರಾತನವಾದುದು. ಇದು ಸರ್ವಾಂಗ ಸುಂದರವಾಗಿದ್ದು ಉದಾತ್ತತತ್ವಗಳಿಂದ ಕೂಡಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಜಗತ್ತಿನ ಎಲ್ಲ ಧರ್ಮಗಳ ತತ್ವಜ್ಞಾನವು ಈಶ್ವರ, ಜೀವ, ಜಗತ್ತು ಇವುಗಳ ಸ್ವರೂಪ ಮತ್ತು ಪರಸ್ಪರ ಸಂಬಂಧಗಳ ಮೇಲೆ ಕೇಂದ್ರೀಕೃತವಾಗಿವೆ. ವೀರಶೈವರಾದರೂ ಇವೇ ತತ್ವಗಳನ್ನು ಇಟ್ಟುಕೊಂಡು, ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿರುವರು. ಜಗತ್ತು (ಸಂಸಾರ) ಲಿಂಗಾಂಗಸಾಮರಸ್ಯವನ್ನು ಸಾಧಿಸುವ ರಂಗಭೂಮಿಯಾಗಿದೆ. ಈ ಜೀವಾತ್ಮ ಪರಮಾತ್ಮರ

ಐಶ್ವರ್ಯವನ್ನು ಕೆಲವೊಂದು ವಿಶಿಷ್ಟ ಸಾಧನೆಗಳಿಂದ ಸಾಧಿಸಲು ಸಾಧ್ಯವೆಂದೂ ಅದನ್ನು ಸಾಮಾನ್ಯರೂ ಕೂಡ ಸಾಧಿಸಬಹುದೆಂದೂ ವೀರಶೈವರ ಗ್ರಹಿಕೆ.

"ಮಾನವರೆಲ್ಲರೂ ಒಂದೇ, ಎಲ್ಲ ಜಾತಿ, ಲಿಂಗ, ಕುಲ-ಗೋತ್ರಗಳೆಂಬ ಭೇದವಿಲ್ಲ."

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನೂ ಒಂದೇ ಎಂಬೆ;"
"ಒಳಗೆ ಸುಳಿವ ಆತ್ಮ. ಹೆಣ್ಣೂ ಅಲ್ಲ; ಗಂಡೂ ಅಲ್ಲ!"
"ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಶರಣರೇ ಕುಲಜರು

ಎಂದು ಶರಣರು ಸಾರಿರುವಲ್ಲಿ ಈ ತತ್ವವು ಅಡಗಿದೆ. ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲು ಸಂಸಾರ ತ್ಯಾಗ ಮಾಡಬೇಕಾಗಿಲ್ಲ. ಬಸವಾದಿ ಪ್ರಮಥರನೇಕರು ಸಂಸಾರಿಗಳೇ ಆಗಿದ್ದರು.

ನಿರ್ಮಲ ಮನಸ್ಸು, ಪವಿತ್ರ ಜೀವನ-ಇವು ಸುಖ ಶಾಂತಿಯ ತಳಹದಿಯಾಗಿವೆ"

"ನುಡಿದಂತೆ ನಡೆ,
ನಡೆದಂತೆ ನುಡಿ,
ಇದೇ ಜನ್ಮ ಕಡೆ"

ಎಂಬುದು ವೀರಶೈವರ ನಂಬುಗೆ ಶರಣನಿಗೆ ಪರಲೋಕದ ಆಶೆ ಇಲ್ಲ; ಇಹಲೋಕದ ಭೀತಿ ಇಲ್ಲ ಇಹಲೋಕದಲ್ಲಿಯೇ ಪರಲೋಕವನ್ನು ಸಾಧಿಸುವದು ವೀರಶೈವರ ಗುರಿ.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ।
ಸತ್ಯವ ನುಡಿವುದೆ ದೇವಲೋಕ. ಮಿಥ್ಯವ ನುಡಿವುದೇ ಮರ್ತ್ಯಲೋಕ.
ಆಚಾರವೇ ಸ್ವರ್ಗ, ಅನಾಚಾರವೇ ನರಕ.
ಕೂಡಲಸಂಗಮದೇವಾ ನೀವೇ ಪ್ರಮಾಣ"

ಈ ಗುರಿಯನ್ನು ಸಾಧಿಸಲು ವೀರಶೈವರು ನೈತಿಕ ಆಚರಣೆಯ ಕಡೆಗೆ ಹೆಚ್ಚು ಗಮನಕೊಟ್ಟಿದ್ದಾರೆ. ಇಂದ್ರಿಯಗಳೆಲ್ಲವೂ ಲಿಂಗಮಯವಾಗಿವೆಯೆಂಬ ಕಲ್ಪನೆಯು ವೀರಶೈವನನ್ನು ಪುನೀತನನ್ನಾಗಿ ಮಾಡುತ್ತದೆ

ನಡೆ ನುಡಿಗಳಿಗೆ ಬಹು ಮಹತ್ವಕೊಟ್ಟ ಶಿವಶರಣರು ತಮ್ಮ ಆತ್ಮ ಕಲ್ಯಾಣದ ಜೊತೆಗೆ ಸಮಾಜದ ಕಲ್ಯಾಣವನ್ನೂ ಸಾಧಿಸಿದರು. ಸಮಾಜದ ಸರ್ವತೋಮುಖ ಏಳ್ಗೆಯಾಗಬೇಕಾದರೆ ಪ್ರತಿಯೊಬ್ಬನು ಒಂದಿಲ್ಲೊಂದು

ಕಾಯಕವನ್ನು ಮಾಡಲೇಬೇಕು. ಕಾಯಕದಿಂದ ಹಣಗಳಿಸಿ ಉಳಿಸಬೇಕೆಂಬ ಭಾವನೆ ಅವನಲ್ಲಿರಕೂಡದು.

"ಇಂದಿನದು ನಾಳಿಂಗೆ ತಂಗುಳ" ಆದ್ದರಿಂದ ಅವರು ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸುವದೇ ಸದಾಶಿವನ ಒಲುಮೆಗೆ ಕಾರಣವೆಂದರು. ಕಾಯಕದಲ್ಲಿ ಕೈಲಾಸಕಂಡರು; 'ಕಾಯಕವೇ ಕೈಲಾಸ' ವೆಂದರು. ಇಂತಹ ಉದಾತ್ತ ವಿಚಾರಗಳನ್ನು ಆಚರಣೆಯಲ್ಲಿ ತಂದು; ಶರಣರು ಸರ್ವಾಂಗಸುಂದರವಾದ ಸಮಾಜವನ್ನು ನಿರ್ಮಿಸಿದರು.

ಕಾಲಾನುಕ್ರಮದಲ್ಲಿ ಧರ್ಮದಲ್ಲಿಯೂ ಏಳಿತಗಳಾಗುವದುಂಟು. ಒಂದು ಕಾಲಕ್ಕೆ ಉನ್ನತ ಶಿಖರಕ್ಕೆ ಮುಟ್ಟಿದ ವೀರಶೈವ ಧರ್ಮವು, ಕಾಲ ಕಾಲಕ್ಕೆ ಕುಗ್ಗುತ್ತ ನಡೆದು ಬಂದಿದೆ. ಇತ್ತೀಚೆಗೆ ಸಮಾಜದಲ್ಲಿ ಕಟ್ಟು ನಿಟ್ಟುಗಳು ಸಡಿಲಾಗತೊಡಗಿವೆ. ಧರ್ಮವು ಶಿಥಿಲಗೊಂಡು ಮುಗ್ಗರಿಸಿಹತ್ತಿದೆ. ಈಗ ಅದನ್ನು, ಇಂದಿನ ಪರಿಸ್ಥಿತಿಗೆ ಅನುಸರಿಸಿ, ಪುನರ್ಘಟಿಸುವದು ಅತ್ಯವಶ್ಯವಾಗಿದೆ.

ವೀರಶೈವ ಸಮಾಜ ಸಂಘಟನೆಯಲ್ಲಿ ಮಠಗಳ ಪಾತ್ರ ಬಹು ಮಹತ್ವದ್ದಾಗಿದೆ. ಆದಿಯಿಂದ ಇಂದಿನವರೆಗೂ ಬಂದ ವಿಪತ್ತುಗಳನ್ನೆಲ್ಲ ಎದುರಿಸಿ, ಸಮಾಜವನ್ನು ಉಳಿಸಿ ಬೆಳಸಿಕೊಂಡು ಬಂದು, ಘನತರವಾದ ಕಾರ್ಯವನ್ನು ವೀರಶೈವ ಮಠಗಳು ಮಾಡಿವೆ. ಬರಬರುತ್ತ ಹಲಕೆಲವು ಮಠಾಧಿಪತಿಗಳು ತಮ್ಮ ಕರ್ತವ್ಯವನ್ನು ಮರೆತುದರಿಂದ ಮಠಗಳ ವರ್ಚಸ್ಸು ಕಡಿಮೆಯಾಗ ಹತ್ತಿತು. ಇದನ್ನು ಅರಿತು ಶ್ರೀಮನ್ನಿರಂಜನ ಪ್ರಣವಸ್ವರೂಪಿ ಲಿಂಗೈಕ್ಯ ಶ್ರೀ ಹಾನಗಲ್ ಕುಮಾರಸ್ವಾಮಿಗಳು ಈಗ ಅರ್ಧ ಶತಮಾನದ ಹಿಂದೆಯೇ ಈ ಶಿವಯೋಗ ಮಂದಿರ ಸಂಸ್ಥೆಯನ್ನು ಸ್ಥಾಪಿಸಿದರು.

ಅಲ್ಲಿ ಮಠಾಧಿಪತಿಗಳಾಗಲು ಬೇಕಾದ ತಕ್ಕ ಶಿಕ್ಷಣವನ್ನು ಯೋಗ್ಯರಾದ ವಟುಗಳಿಗೆ ಕೊಡುವ ಏರ್ಪಾಡು ಮಾಡಿದರು. ಈ ಸಂಸ್ಥೆಯಲ್ಲಿ ಶಿಕ್ಷಣವನ್ನು ಪಡೆದ ಹಲಕೆಲವು ಸ್ವಾಮಿಗಳು ಸಮಾಜದ ಏಳ್ಗೆಯ ಬಗೆಗೆ ಒಳ್ಳೆಯ ಕಳಕಳಿಯುಳ್ಳವರಾಗಿ ದುಡಿಯುತ್ತಿರುವರು. ಇಂಥ ಧಾರ್ಮಿಕ ಸಂಸ್ಥೆಗಳು ಇನ್ನೂ ಹೆಚ್ಚಾಗಿ ಬೆಳೆದು ಈಗಿನ ಕಾಲಮಾನ ಪರಿಸ್ಥಿತಿಗನುಸರಿಸಿ ತಮ್ಮ ಕಾರ್ಯ ಕ್ಷೇತ್ರವನ್ನು ವಿಸ್ತರಿಸಿಕೊಳ್ಳಬೇಕು.

ಜಾತ್ತ್ವಿಕವಾಗಿ ವೀರಶೈವ ಸಮಾಜದಲ್ಲಿ ಗುರುಸ್ಥಲದವರು, ವಿರಕ್ತರು ಮುಂತಾಗಿ ಯಾವ ಪಕ್ಷ ಪಂಗಡಗಳಿಗೂ ಅವಕಾಶವಿಲ್ಲ. ಪಂಚಾಚಾರ್ಯ

ಐಶ್ವರ್ಯವನ್ನು ಕೆಲವೊಂದು ವಿಶಿಷ್ಟ ಸಾಧನೆಗಳಿಂದ ಸಾಧಿಸಲು ಸಾಧ್ಯವೆಂದೂ ಅದನ್ನು ಸಾಮಾನ್ಯರೂ ಕೂಡ ಸಾಧಿಸಬಹುದೆಂದೂ ವೀರಶೈವರ ಗ್ರಹಿಕೆ.

"ಮಾನವರೆಲ್ಲರೂ ಒಂದೇ, ಎಲ್ಲ ಜಾತಿ, ಲಿಂಗ, ಕುಲ-ಗೋತ್ರಗಳೆಂಬ ಭೇದವಿಲ್ಲ."

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನೂ ಒಂದೇ ಎಂಬೆ;"
"ಒಳಗೆ ಸುಳಿವ ಆತ್ಮ. ಹೆಣ್ಣೂ ಅಲ್ಲ; ಗಂಡೂ ಅಲ್ಲ!"
"ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಶರಣರೇ ಕುಲಜರು

ಎಂದು ಶರಣರು ಸಾರಿರುವಲ್ಲಿ ಈ ತತ್ವವು ಅಡಗಿದೆ. ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲು ಸಂಸಾರ ತ್ಯಾಗ ಮಾಡಬೇಕಾಗಿಲ್ಲ. ಬಸವಾದಿ ಪ್ರಮಥರನೇಕರು ಸಂಸಾರಿಗಳೇ ಆಗಿದ್ದರು.

ನಿರ್ಮಲ ಮನಸ್ಸು, ಪವಿತ್ರ ಜೀವನ-ಇವು ಸುಖ ಶಾಂತಿಯ ತಳಹದಿಯಾಗಿವೆ"

"ನುಡಿದಂತೆ ನಡೆ,
ನಡೆದಂತೆ ನುಡಿ,
ಇದೇ ಜನ್ಮ ಕಡೆ"

ಎಂಬುದು ವೀರಶೈವರ ನಂಬುಗೆ ಶರಣನಿಗೆ ಪರಲೋಕದ ಆಶೆ ಇಲ್ಲ; ಇಹಲೋಕದ ಭೀತಿ ಇಲ್ಲ ಇಹಲೋಕದಲ್ಲಿಯೇ ಪರಲೋಕವನ್ನು ಸಾಧಿಸುವದು ವೀರಶೈವರ ಗುರಿ.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ।
ಸತ್ಯವ ನುಡಿವುದೆ ದೇವಲೋಕ. ಮಿಥ್ಯವ ನುಡಿವುದೇ ಮರ್ತ್ಯಲೋಕ.
ಆಚಾರವೇ ಸ್ವರ್ಗ, ಅನಾಚಾರವೇ ನರಕ.
ಕೂಡಲಸಂಗಮದೇವಾ ನೀವೇ ಪ್ರಮಾಣ"

ಈ ಗುರಿಯನ್ನು ಸಾಧಿಸಲು ವೀರಶೈವರು ನೈತಿಕ ಆಚರಣೆಯ ಕಡೆಗೆ ಹೆಚ್ಚು ಗಮನಕೊಟ್ಟಿದ್ದಾರೆ. ಇಂದ್ರಿಯಗಳೆಲ್ಲವೂ ಲಿಂಗಮಯವಾಗಿವೆಯೆಂಬ ಕಲ್ಪನೆಯು ವೀರಶೈವನನ್ನು ಪುನೀತನನ್ನಾಗಿ ಮಾಡುತ್ತದೆ

ನಡೆ ನುಡಿಗಳಿಗೆ ಬಹು ಮಹತ್ವಕೊಟ್ಟ ಶಿವಶರಣರು ತಮ್ಮ ಆತ್ಮಕಲ್ಯಾಣದ ಜೊತೆಗೆ ಸಮಾಜದ ಕಲ್ಯಾಣವನ್ನೂ ಸಾಧಿಸಿದರು. ಸಮಾಜದ ಸರ್ವತೋಮುಖ ಏಳ್ಗೆಯಾಗಬೇಕಾದರೆ ಪ್ರತಿಯೊಬ್ಬನು ಒಂದಿಲ್ಲೊಂದು

ಕಾಯಕವನ್ನು ಮಾಡಲೇಬೇಕು. ಕಾಯಕದಿಂದ ಹಣಗಳಿಸಿ ಉಳಿಸಬೇಕೆಂಬ ಭಾವನೆ ಅವನಲ್ಲಿರಕೂಡದು.

"ಇಂದಿನದು ನಾಳಿಂಗೆ ತಂಗುಳ" ಆದ್ದರಿಂದ ಅವರು ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸುವದೇ ಸದಾಶಿವನ ಒಲುಮೆಗೆ ಕಾರಣವೆಂದರು. ಕಾಯಕದಲ್ಲಿ ಕೈಲಾಸಕಂಡರು; 'ಕಾಯಕವೇ ಕೈಲಾಸ' ವೆಂದರು. ಇಂತಹ ಉದಾತ್ತವಿಚಾರಗಳನ್ನು ಆಚರಣೆಯಲ್ಲಿ ತಂದು; ಶರಣರು ಸರ್ವಾಂಗಸುಂದರವಾದ ಸಮಾಜವನ್ನು ನಿರ್ಮಿಸಿದರು.

ಕಾಲಾನುಕ್ರಮದಲ್ಲಿ ಧರ್ಮದಲ್ಲಿಯೂ ಏಳಿತಗಳಾಗುವದುಂಟು. ಒಂದು ಕಾಲಕ್ಕೆ ಉನ್ನತ ಶಿಖರಕ್ಕೆ ಮುಟ್ಟಿದ ವೀರಶೈವ ಧರ್ಮವು, ಕಾಲ ಕಾಲಕ್ಕೆ ಕುಗ್ಗುತ್ತ ನಡೆದು ಬಂದಿದೆ. ಇತ್ತೀಚೆಗೆ ಸಮಾಜದಲ್ಲಿ ಕಟ್ಟು ನಿಟ್ಟುಗಳು ಸಡಿಲಾಗತೊಡಗಿವೆ. ಧರ್ಮವು ಶಿಥಿಲಗೊಂಡು ಮುಗ್ಗರಿಸಿಹತ್ತಿದೆ. ಈಗ ಅದನ್ನು, ಇಂದಿನ ಪರಿಸ್ಥಿತಿಗೆ ಅನುಸರಿಸಿ, ಪುನರ್ಘಟಿಸುವದು ಅತ್ಯವಶ್ಯವಾಗಿದೆ.

ವೀರಶೈವ ಸಮಾಜ ಸಂಘಟನೆಯಲ್ಲಿ ಮಠಗಳ ಪಾತ್ರ ಬಹು ಮಹತ್ವದ್ದಾಗಿದೆ. ಆದಿಯಿಂದ ಇಂದಿನವರೆಗೂ ಬಂದ ವಿಪತ್ತುಗಳನ್ನೆಲ್ಲ ಎದುರಿಸಿ, ಸಮಾಜವನ್ನು ಉಳಿಸಿ ಬೆಳಿಸಿಕೊಂಡು ಬಂದು, ಘನತರವಾದ ಕಾರ್ಯವನ್ನು ವೀರಶೈವ ಮಠಗಳು ಮಾಡಿವೆ. ಬರಬರುತ್ತ ಹಲಕೆಲವು ಮಠಾಧಿಪತಿಗಳು ತಮ್ಮ ಕರ್ತವ್ಯವನ್ನು ಮರೆತುದರಿಂದ ಮಠಗಳ ವರ್ಚಸ್ಸು ಕಡಿಮೆಯಾಗಹತ್ತಿತು. ಇದನ್ನು ಅರಿತು ಶ್ರೀಮನ್ನಿರಂಜನ ಪ್ರಣವಸ್ವರೂಪಿ ಲಿಂಗೈಕ್ಯ ಶ್ರೀ ಹಾನಗಲ್ ಕುಮಾರಸ್ವಾಮಿಗಳು ಈಗ ಅರ್ಧ ಶತಮಾನದ ಹಿಂದೆಯೇ ಈ ಶಿವಯೋಗ ಮಂದಿರ ಸಂಸ್ಥೆಯನ್ನು ಸ್ಥಾಪಿಸಿದರು.

ಅಲ್ಲಿ ಮಠಾಧಿಪತಿಗಳಾಗಲು ಬೇಕಾದ ತಕ್ಕ ಶಿಕ್ಷಣವನ್ನು ಯೋಗ್ಯರಾದ ವಟುಗಳಿಗೆ ಕೊಡುವ ಏರ್ಪಾಡು ಮಾಡಿದರು. ಈ ಸಂಸ್ಥೆಯಲ್ಲಿ ಶಿಕ್ಷಣವನ್ನು ಪಡೆದ ಹಲಕೆಲವು ಸ್ವಾಮಿಗಳು ಸಮಾಜದ ಏಳ್ಗೆಯ ಬಗೆಗೆ ಒಳ್ಳೆಯ ಕಳಕಳಿಯುಳ್ಳವರಾಗಿ ದುಡಿಯುತ್ತಿರುವರು. ಇಂಥ ಧಾರ್ಮಿಕ ಸಂಸ್ಥೆಗಳು ಇನ್ನೂ ಹೆಚ್ಚಾಗಿ ಬೆಳೆದು ಈಗಿನ ಕಾಲಮಾನ ಪರಿಸ್ಥಿತಿಗನುಸರಿಸಿ ತಮ್ಮ ಕಾರ್ಯ ಕ್ಷೇತ್ರವನ್ನು ವಿಸ್ತರಿಸಿಕೊಳ್ಳಬೇಕು.

ಜಾತ್ತ್ವಿಕವಾಗಿ ವೀರಶೈವ ಸಮಾಜದಲ್ಲಿ ಗುರುಸ್ಥಲದವರು, ವಿರಕ್ತರು ಮುಂತಾಗಿ ಯಾವ ಪಕ್ಷ ಪಂಗಡಗಳಿಗೂ ಅವಕಾಶವಿಲ್ಲ. ಪಂಚಾಚಾರ್ಯ

ಸಂಪ್ರದಾಯದವರೂ ಪ್ರಭು ಸಂಪ್ರದಾಯದವರೂ ಕೂಡಿಯೇ ದುಡಿದು, ವೀರಶೈವ ಸಮಾಜದ ಏಳ್ಗೆಯನ್ನು ಸಾಧಿಸಿದ್ದನ್ನು ಇತಿಹಾಸ ಹೇಳುತ್ತದೆ. ನಮ್ಮ ಗುರು ವಿರಕ್ತರಲ್ಲಿ ಐಕ್ಯವುಂಟಾಗಿ, ಇಬ್ಬರೂ ಹೆಗಲಿಗೆ ಹೆಗಲು ಹಚ್ಚಿ ಸಮಾಜದ ಏಳ್ಗೆಗಾಗಿ ದುಡಿಯಲು ಮುಂದೆ ಬಂದ ದಿನವೇ ನಮ್ಮ ಸಮಾಜಕ್ಕೆ ಸುದಿನ ! ಅಂತಹ ಕಾಲವು ಬೇಗನೇ ಬರಲೆಂದು ಹಾರೈಸುತ್ತೇನೆ.

ಮಾನವರಲ್ಲಿ ನಿಜವಾಗಿಯೂ ಮೇಲು ಕೀಳೆಂಬ ಭೇದಭಾವವೇ ಇಲ್ಲ. ಕೇವಲ ಜನ್ಮಮಾತ್ರದಿಂದ ಯಾರೂ ಹಿರಿಯರಲ್ಲ; ಕಿರಿಯರಲ್ಲ. ಪರಿಶುದ್ಧ ನಡವಳಿಕೆ, ಸಮಾಜ ಸೇವೆ ಇವುಗಳಿಂದಲೇ ಪ್ರತಿಯೊಬ್ಬ ವ್ಯಕ್ತಿಯು ಘನತೆಯನ್ನು ಅಳೆಯಬೇಕಾಗುತ್ತದೆ. "ಗುಣಕರ್ಮ ವಿಭಾಗದಿಂದ ಚಾತುರ್ವರ್ಣಗಳು ಹುಟ್ಟಿವೆಯೆಂದೂ ಜನ್ಮದಿಂದ ಅಲ್ಲವೆಂದೂ ಭಗವದ್ಗೀತೆ ಸ್ಪಷ್ಟಪಡಿಸುತ್ತದೆ. ಆದುದರಿಂದ ಒಬ್ಬನಿಂದ ಇನ್ನೊಬ್ಬನು, ಒಂದು ಸಮಾಜಕ್ಕಿಂತ ಇನ್ನೊಂದು ಸಮಾಜವು ಜನ್ಮತಃ ಶ್ರೇಷ್ಠವಾದುದೆಂದು ಹೇಳುವ ವಾದದಲ್ಲಿ ಏನೂ ಹುರುಳಿಲ್ಲ. ನಮ್ಮ ಸಮಾಜವನ್ನು ಸುವ್ಯವಸ್ಥಿತ ರೀತಿಯಲ್ಲಿ ಸುಸಂಘಟಿಸುವದು ಅತ್ಯಾವಶ್ಯಕವೆಂಬುದನ್ನು ಮತ್ತೆ ಮತ್ತೆ ಹೇಳಿದ್ದೇವೆ.

ವೀರಶೈವ ಸಾಹಿತ್ಯವು ವಿಪುಲವಾಗಿದೆ. ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಮರಾಠಿ ಸಾಹಿತ್ಯಗಳಿಗೆ ವೀರಶೈವರು ಸೇವೆ ಸಲ್ಲಿಸಿದ್ದಾರೆ. ಅದರಲ್ಲಿಯೂ ವಿಶೇಷವಾಗಿ ಕನ್ನಡ, ಸಂಸ್ಕೃತ, ತೆಲಗು ಸಾಹಿತ್ಯಗಳಿಗೆ ಕೊಟ್ಟ ವೀರಶೈವರ ಕೊಡುಗೆ ಘನವಾದುದು. ಈ ವೀರಶೈವ ಸಿದ್ಧಾಂತದ ಬಗೆಗೆ ಪ್ರಮಾಣಬದ್ಧವಾದ ಗ್ರಂಥವೊಂದನ್ನು ಬರೆಯಿಸಿ ಪ್ರಕಟಿಸಬೇಕು. ಇದು ಸಮಾಜದ ಮುಖ್ಯ ಕಾರ್ಯವಾಗಿದೆ.

ವೀರಶೈವರ ವಿಶೇಷವಾಗಿ ಶೈವರ ಇತಿಹಾಸ ಬಹಳ ಉಜ್ವಲವಾಗಿದೆ. ದುರ್ದೈವದಿಂದ ಅದರ ಅಭ್ಯಾಸ ಭರತಖಂಡದಲ್ಲಿ ಎಲ್ಲಿಯೂ ಕ್ರಮಬದ್ಧವಾಗಿ ನಡೆದಿರುವದಿಲ್ಲ. ಐತಿಹಾಸಿಕ ಸಾಧನ ಸಾಮಗ್ರಿಗಳಾದ ಶಿಲಾಲೇಖ, ತಾಮ್ರಪಟ, ವೀರಗಲ್ಲು, ಮಹಾಸತಿಕಲ್ಲು, ದಂತಕಥೆ, ಜನಪದಸಾಹಿತ್ಯ ಮೊದಲಾದವುಗಳು ನಮ್ಮ ನಾಡಿನಲ್ಲಿ ವಿಪುಲವಾಗಿವೆ. ಅವುಗಳನ್ನು ಸಂಗ್ರಹಿಸಿ ಅಭ್ಯಾಸಮಾಡಿ ಸತ್ಯವನ್ನು ಹೊರಗೆಡುವುದು ಈಗ ಬಹಳ ಅಗತ್ಯವಾದುದು ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಪ್ರಮುಖ ಜನಾಂಗಗಳಲ್ಲಿ ಒಂದಾದ ವೀರಶೈವ ಸಮಾಜವು ಮತತತ್ವ, ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಮುಂತಾದ ಅಭ್ಯಾಸಕ್ಕಾಗಿ ಒಂದು ಉಚ್ಚ ಸಂಸ್ಥೆಯನ್ನು ಸ್ಥಾಪಿಸುವದು

ಅತ್ಯಂತ ಅವಶ್ಯವಿದೆ. ಈ ಸಂಸ್ಥೆಯಲ್ಲಿ ವೀರಶೈವ, ಶೈವ, ಮತ್ತು ಇತರ ಮತತತ್ವಗಳ ತುಲನಾತ್ಮಕ ಅಭ್ಯಾಸವೂ ನಡೆಯಬೇಕು. ಅಂತಹ ಸಂಶೋಧನಾ ಸಂಸ್ಥೆಯೊಂದನ್ನೂ ಧಾರ್ಮಿಕ ಶಿಕ್ಷಣ ಸಂಸ್ಥೆಯೊಂದನ್ನೂ ಕಟ್ಟುವ ಕಾಲ ಈಗ ಸನ್ನಿಹಿತವಾಗಿದೆ.

ಈ ವರೆಗೆ ಜರುಗಿದ ವೀರಶೈವ ಮಹಾಸಭೆಗೆ ಅಧ್ಯಕ್ಷರಾಗಿದ್ದ ಮಹನೀಯರು ತಮ್ಮ ಭಾಷಣಗಳಲ್ಲಿ ಶಿಕ್ಷಣ ಪ್ರಸಾರಕ್ಕೆ ವಿಶೇಷವಾದ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಕಳೆದ ಐವತ್ತು ವರುಷಗಳಲ್ಲಿ ವೀರಶೈವರಲ್ಲಿ ಶಿಕ್ಷಣ ಪ್ರಸಾರದ ಕಾರ್ಯವು ಬಹುಮಟ್ಟಿಗೆ ಸಮಾಧಾನಕರವಾಗಿ ಸಾಗಿದ್ದರೂ ಇನ್ನೂ ಮಾಡತಕ್ಕ ಕೆಲಸ ಸಾಕಷ್ಟು ಇದೆ. ನಮ್ಮ ಸಮಾಜದ ತರುಣ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಮೇಲ್ಮಟ್ಟವನ್ನು ಪಡೆಯುವ ಗುರಿಯನ್ನಿಟ್ಟುಕೊಳ್ಳಬೇಕು. ಪರಿಶ್ರಮಿಸಿ ಸಾಹಸಪಟ್ಟು ಆ ಗುರಿಯನ್ನು ಸಾಧಿಸಬೇಕು. ಅಷ್ಟಕ್ಕೇ ತೃಪ್ತರಾಗದೇ ತಮ್ಮ ಒಲವಿನ ವಿಷಯಗಳಲ್ಲಿ ದೇಶವಿದೇಶಗಳ ( Foreign ) ಅಂತಿಮ ಪ್ರಶಸ್ತಿಯನ್ನು ಪಡೆಯಲೂ ಸಾಹಸ ಮಾಡಬೇಕು. ಮತ್ತು ಕಾಲಮಾನದ ಪರಿಸ್ಥಿತಿಗೆ ಅವಶ್ಯವಾಗಿರುವ ತಾಂತ್ರಿಕ ಹಾಗೂ ಔದ್ಯೋಗಿಕ ಶಿಕ್ಷಣದತ್ತ ಲಕ್ಷ್ಯ ಹಾಕಬೇಕು.

ಒಂದು ಕಾಲದಲ್ಲಿ ಕೃಷಿ, ವ್ಯಾಪಾರ, ಕೈಕಸಬುಗಳು ನಮ್ಮ ಸಮಾಜದವರ ಉಪಜೀವನದ ಮುಖ್ಯ ಸಾಧನಗಳಾಗಿದ್ದವು. ಆಗ ಸರಕಾರೀ ನೌಕರಿಗಳ ಕಡೆಗೆ ನಮ್ಮವರ ದೃಷ್ಟಿ ವಿಶೇಷವಿರಲಿಲ್ಲ. ಆದುದರಿಂದ ಸಮಾಜವು ಆರ್ಥಿಕ ದೃಷ್ಟಿಯಿಂದ ಒಳ್ಳೆಯ ಸ್ಥಿತಿಯಲ್ಲಿತ್ತು. ಕಾಲಕ್ರಮದಿಂದ ಈ ಕೃಷಿ, ವ್ಯಾಪಾರ, ಕೈಗಾರಿಕೆಗಳು ಅಷ್ಟೊಂದು ಲಾಭದಾಯಕವಾಗಿ ಕಾಣಿಸದಾದವು. ಸರಕಾರೀ ನೌಕರಿಗಳು ತರುಣರನ್ನು ಆಕರ್ಷಿಸಿದವು. ಹೀಗಾಗಿ ನಮ್ಮ ಪೂರ್ವಜರ ಉಪಜೀವನ ಮಾರ್ಗಗಳಾದ ಕೈಗಾರಿಕೆ ವ್ಯಾಪಾರ ವ್ಯವಸಾಯ ಒಂದೊಂದೇ ನಮ್ಮ ಜನರ ಕೈ ಬಿಡಹತ್ತಿದವು. ನಿರುದ್ಯೋಗವು ಬೆಳೆದು ಸಮಾಜದಲ್ಲಿ ಈಗ ಸುಖಶಾಂತಿಗಳು ಕಡಿಮೆಯಾಗಿವೆ. ಕಾರಣ ನಮ್ಮ ತರುಣ ವಿದ್ಯಾರ್ಥಿಗಳು ಕೃಷಿ, ವಾಣಿಜ್ಯ, ಉದ್ಯೋಗ, ಕೈಗಾರಿಕೆ ಮುಂತಾದ ವಿಷಯಗಳಲ್ಲಿ ಉಚ್ಚ ಮಟ್ಟದ ಶಿಕ್ಷಣವನ್ನು ಸಂಪಾದಿಸಿ, ಆರ್ಥಿಕ ದೃಷ್ಟಿಯಿಂದ ಸಮಾಜಕ್ಕೂ ದೇಶಕ್ಕೂ ಹಿತಕರವಾಗುವಂತೆ ಪ್ರಯತ್ನಿಸಬೇಕು.

ನಮ್ಮ ರಾಜ್ಯದ ಎಲ್ಲ ಭಾಗಗಳ ಮುಖಂಡರು ತಮ್ಮೊಳಗಿನ ಸಣ್ಣ ಪುಟ್ಟ ಭೇದಭಾವಗಳನ್ನು ಮರೆತು ನಮ್ಮ 'ನವಕರ್ನಾಟಕದ' ಸರ್ವತೋಮುಖವಾದ ಪ್ರಗತಿಗಾಗಿ ಪ್ರಯತ್ನಿಸಬೇಕು. ವೀರಶೈವ ಸಮಾಜದವರು ನಮ್ಮ ರಾಜ್ಯಕ್ಕೂ ಭಾರತ ದೇಶಕ್ಕೂ ಶ್ಲಾಘನೀಯವಾದ ಸೇವೆಯನ್ನು ಸಲ್ಲಿಸಬೇಕು.

ನಮ್ಮವರು ರಾಜಕೀಯ ಕ್ಷೇತ್ರದಲ್ಲಿ ವಿಶಾಲದೃಷ್ಟಿಯನ್ನಿಟ್ಟುಕೊಂಡು ನಡೆದು, ರಾಜ್ಯದ ಇತರ ಸಮಾಜದವರ ವಿಶ್ವಾಸಕ್ಕೂ ಪ್ರೀತಿಗೂ ಪಾತ್ರರಾಗಬೇಕು.

ಬಸವಣ್ಣನವರು ಭರತಖಂಡದ ಮಹಾನುಭಾವಿಗಳಲ್ಲೊಬ್ಬರು. ಅವರು ಮಾಡಿರುವ ಘನವಾದ ಕಾರ್ಯವನ್ನು ನೋಡಿದರೆ, ಅಪರ ಸಮಾಜಸುಧಾರಣೆಯನ್ನು ಗಣನೆಗೆ ತಂದುಕೊಂಡರೆ, ಬಸವಣ್ಣನವರಿಗೆ ಬುದ್ಧ, ಮಹಾವೀರ, ಗಾಂಧಿಜೀಯವರೊಡನೆ ನಿಸ್ಸಂದೇಹವಾಗಿ ಸ್ಥಾನ ಸಿಗುತ್ತದೆ. ಇಂತಹ ಮಹಾನುಭಾವರನ್ನು ಸ್ಮರಿಸುವದು ಭಾರತಜನಾಂಗ ಹಾಗೂ ಭಾರತಸರಕಾರಗಳ ಕರ್ತವ್ಯವಾಗಿದೆ. ಆ ಸಂಸ್ಮರಣೆಯ ದ್ಯೋತಕವಾಗಿ ಬಸವಣ್ಣನವರ ಭಾವಚಿತ್ರವನ್ನೊಳಗೊಂಡ ಅಂಚೆಯ ತಿಕೀಟು ಬಳಕೆಯಲ್ಲಿ ಬರುವದೂ ಮತ್ತು ಬಸವಣ್ಣನವರ ಜನ್ಮದಿನ ( ವೈಶಾಖ ಶುದ್ಧ ತ್ರಿತೀಯೆ ) ವನ್ನು ಸಾರ್ವಜನಿಕ ಬಿಡುವಿನ ದಿನವೆಂದು ಸಾರುವದೂ ಅತ್ಯವಶ್ಯವಾಗಿದೆ. ಜನತೆಯೂ, ಸರಕಾರವೂ, ಈ ಕಡೆಗೆ ಗಮನಕೊಟ್ಟು ಈ ಸೂಚನೆಗಳು ಬೇಗನೆ ಕಾರ್ಯರೂಪಕ್ಕೆ ಬರುವಂತೆ ಮಾಡುವರೆಂದು ಆಶಿಸುತ್ತೇನೆ.

# ವೀರಶೈವ ಸಮಾಜದೇವನ ನೆನಹು.

(ಶಿವಯೋಗಮಂದಿರ ಸುವರ್ಣಮಹೋತ್ಸವ ಪತ್ರಿಕೆಯಿಂದ

ಜಗತ್ತಿನಲ್ಲಿ ಅನೇಕ ಸಮಾಜಗಳು ಮಹಾ ವ್ಯಕ್ತಿಗಳ ವ್ಯಕ್ತಿತ್ವ ನಿರ್ಮಾಣ ಮಾಡಲು ಕ್ರಿಯಾಶೀಲವಾಗಿರುವದನ್ನು ಮತ್ತು ಅನೇಕ ವ್ಯಕ್ತಿಗಳಿಂದ ಸಮಾಜಗಳ ಉನ್ನತಿಯಾಗಿರುವದನ್ನು ಇತಿಹಾಸದ ಪುಟಗಳಿಂದ ತಿಳಿದುಕೊಳ್ಳಲು ಬರುವಂತೆ ಸರ್ವತೋಮುಖ ಅಭಿವೃದ್ಧಿಯುಳ್ಳ ಸಮಾಜದಲ್ಲಿ ಕಾರ್ಯಮಾಡಿ ವ್ಯಕ್ತಿಗತ ಕೀರ್ತಿ ಪ್ರತಿಷ್ಠೆಗಳನ್ನು ಪಡೆಯುವದು ಆಧುನಿಕ ಪ್ರಚಾರ ಯುಗದಲ್ಲಿ ಅಷ್ಟೇ ಸುಲಭವೆಂಬುದನ್ನು ಯಾರೂ ಅರಿತುಕೊಳ್ಳಬಹುದು. ಆದರೆ ಸಮಾಜಮೂರ್ತಿಯ ಅಂಗಅಂಗಗಳು ಮಹಾವಿಪತ್ತಿನ ಗರ್ತದಲ್ಲಿ ಗ್ರಸಿತವಾದಾಗ ಮಾನವರಿಗೆ ಉನ್ನತಿಯ ಮಾರ್ಗಗಳು ಕಾಣದಿರುವಾಗ ನಿರ್ಜೀವ ಸಮಾಜ ಮೂರ್ತಿಗೆ ಪ್ರಾಣಪ್ರತಿಷ್ಠಾಪನೆ ಮಾಡಿ ಸರ್ವರೂ ಮೋಹಗೊಳುವಂತೆ ಅಂಗಾಂಗಗಳನ್ನು ಸಂಪೂರ್ಣ ಸುಂದರವನ್ನಾಗಿ ಮಾಡುವ ಮಹಾನ್ ಆತ್ಮಶಕ್ತಿಯುಳ್ಳ ಅವರನ್ನು ಇಹಲೋಕದಲ್ಲಿ ಪ್ರತಿಯೊಂದು ದೇಶದ ಸಮಾಜದ ಮಾನವರು ದೇವರೆಂದು ಭಾವಿಸುವರಲ್ಲದೇ ಪರಲೋಕದಲ್ಲಿ ಅವರು ಶಿವಸ್ವರೂಪರೇ. ಅಂತಹ ಮಹಾ ಅವತಾರಿಗಳ ಶ್ರೇಣಿಯಲ್ಲಿ ಶ್ರೀ ಕುಮಾರ ಮಹಾ ಶಿವಯೋಗಿಯು ಇಪ್ಪತ್ತನೆಯ ಶತಮಾನದ ವೀರಶೈವ ಸಮಾಜದೇವನಾಗಿ ಬಂದು ಸರ್ವಾಂಗ ಪೂರ್ಣ ಸುಂದರ ಇಂದಿನ ಸ್ವರೂಪಕ್ಕೆ ಕಾರಣಕರ್ತನಾಗಿರುವದನ್ನು ಯಾವ ಲಿಂಗವಂತನಿಗೆ ಮರೆಯಲು ಧೈರ್ಯವಾದೀತು ?

ಶಕ್ತಿಮಂತವಾದ ರಾಷ್ಟ್ರದ ಮತ್ತು ಸಮಾಜದ ಅಭ್ಯುದಯವನ್ನರಿಯಲು ಇಚ್ಛಿಸುವವರಿಗೆ ಅಲ್ಲಿರುವ ಸಾಹಿತ್ಯ ಸಂಸ್ಕೃತಿಗಳು, ಸಂಘ ಸಂಸ್ಥೆಗಳು, ಮಹಾವ್ಯಕ್ತಿಗಳು, ಕಾರಣವಾಗುವಂತೆ ವೀರಶೈವ ಸಮಾಜೋನ್ನತಿಗೆ ಕಾರಣೀಭೂತನಾದ ಒಬ್ಬ ದೈವೀ ಪುರುಷನ ಮಹಾಶಕ್ತಿಯ ಪ್ರಭಾವವನ್ನು ಆ ಸಮಾಜದ ಸಂಸ್ಕೃತಿ ಕೇಂದ್ರಗಳಾಗಿರುವ ಸಂಘ ಸಂಸ್ಥೆಗಳ, ಸಾಹಿತ್ಯ ಸಂಸ್ಕೃತಿಗಳ, ವ್ಯಕ್ತಿಗಳ ಪೂರ್ವದ ಸ್ಥಿತಿಯನ್ನು ವಿಚಾರಿಸಿ ನಿರ್ಣಯ ಮಾಡುವದಾದರೆ ಸದ್ಯದ ಸಮಾಜದಲ್ಲಿ ಸಾಂಸ್ಕೃತಿಕ ಕೇಂದ್ರಗಳಾಗಿ ಪರಿಣಮಿಸುತ್ತಿ

ರುವ ಓ ವೀರಶೈವ ಮಠಮಂದಿರಗಳೇ! ನಿಮ್ಮಲ್ಲಿ ಚೇತನವಿದ್ದರೆ ಮಾತ ನಾಡಲು ಶಕ್ತಿಯಿದ್ದರೆ ನೀವು ಹೇಳಿರಿ; ನಿಮಗೆ ಯೋಗ್ಯ ಯಜಮಾನರಿಲ್ಲದೇ ದೀಪಕ್ಕೆ ಎಣ್ಣೆ ಕಾಣದೇ ದೆವ್ವಗಳ ಬೀಡಾಗಿರುವ ದೈವದ ಮಠಗಳಲ್ಲಿ ಸ್ವಾಮಿ ಗಳನ್ನು ಕುಳ್ಳಿರಿಸಿ ಜ್ಞಾನದೀವಿಗೆ ಹಚ್ಚಿ ಅಂದೆಂದಿಗೂ ಪ್ರಕಾಶಮಾನರಾ ಗುವಂತೆ ಮಾಡಿದ ಮಹಾ ಕಾರಣಿಕ ಪುರುಷನಾರು?

## ವೀರಶೈವ ಸಂಸ್ಕೃತಿ ಸಂಪನ್ನರಾದ ಮಹಾನುಭಾವರೇ!

ನಿಮ್ಮಲ್ಲಿ ನಿಷ್ಕಲ್ಮಷ ನಿಷ್ಪಕ್ಷಪಾತ ಕೃತಜ್ಞ ಹೃದಯವಿದ್ದರೆ ಹೇಳಿರಿ. ಸುಮಾರು ಐವತ್ತು ವರ್ಷಗಳ ಪೂರ್ವದಲ್ಲಿ ಅಸಂಸ್ಕೃತರಾಗಿ ನಿಮ್ಮದಲ್ಲದ ಸಂಸ್ಕೃತಿಗೆ ಮಾರುಹೋಗಿ ಮಾರ್ಗದಪ್ಪಿ ಪರಿತಪಿಸುತ್ತಿರುವಾಗ ದಿವ ರಾತ್ರಿಯೂ ಹಸಿವೆತೃಷೆಗಳ ಪರಿಹೆಯಿಲ್ಲದೇ ಪೂಜೆ ಪುರಸ್ಕಾರಗಳಿಗೆ ಮನ ಸೋಲದೇ ಹಳ್ಳಿ ಪಟ್ಟಣಗಳನ್ನು ಸಂಚರಿಸಿ ಬಡವ ಬಲ್ಲಿದರೆನ್ನದೆ, ಶ್ರೀಮಂತ ಧೀಮಂತರೆನ್ನದೇ ಶ್ರೇಷ್ಠ ಕನಿಷ್ಠರೆನ್ನದೆ ಗುರುಭಕ್ತ ಜಂಗಮರೆನ್ನದೆ ಸರ್ವ ರನ್ನೂ ಸಮಾನವಾಗಿ ಕಂಡು ನಿಮ್ಮದಾದ ನಿಜವಾದ ಸಂಸ್ಕೃತಿಯನ್ನು ಅನಂತ ಕಲಾಮುಖಗಳಿಂದ ಪ್ರಚಾರ ಮಾಡಿ ನಿಮ್ಮ ಕಲುಷಿತವಾಗಿದ್ದ ಹೃದಯದ ಪರಿವರ್ತನೆಗಾಗಿ ಶ್ರೀಗಂಧದಂತೆ ಸವೆದು ನಿಮ್ಮಲ್ಲಿ ನೈತಿಕ ಸ್ಫೂರ್ತಿಯನ್ನು ತುಂಬಿ ಸಂಸ್ಕೃತಿ ಸುಗಂಧ ಬೀರಿದ ಪರಮ ವೈರಾಗ್ಯಮೂರ್ತಿ ಮಹಾ ವಿರ ಕ್ತನಾರು?

## ವೀರಶೈವ ಸಮಾಜದ ಸುಶಿಕ್ಷಿತರಾದ ಶಿವಾದ್ವೈತ ತತ್ವಜ್ಞಾನಿಗಳೇ!

ನಿಮ್ಮ ನಿಜಜ್ಞಾನದ ಸಾಕ್ಷಿಯಾಗಿ ಹೇಳಲು ಬಯಸುವಿರಾ? ಹಾಗಾ ದರೆ ಸುಖಾಪೇಕ್ಷಿಗಳಾದ ಮಾನವರು ಪರಭಾಷಾ ವೇಷಗಳನ್ನು ಮೋಹಿಸಿ ಧಾರ್ಮಿಕಾಚಾರ ಶಾಸ್ತ್ರಗಳ ವಾದಗಳಿಂದ ನೀರಸರಾಗಿ ನಾಸ್ತಿಕ ಮಾರ್ಗಕ್ಕೆ ತಲೆಬಾಗಿಸಿದಾಗ ಬಸವಾದಿ ಪ್ರಮಥರ ಅನುಭವ ಮಂಟಪದ ತರುವಾಯ ಇಂದಿನ ವೀರಶೈವ ಸಮಾಜದ ಪ್ರತಿ ಮನೆ ಮಠಗಳಲ್ಲಿ ದಿನಾಲು ಶಿವಾನುಭವ ಕಾರ್ಯಕ್ರಮಗಳನ್ನು ಪ್ರಥಮತಃ ಪ್ರಾರಂಭಿಸಿ ಓದು ಬರೆಯಲು ಬಾರದ ವರಿಂದ ಹಿಡಿದು ಕವಿಗಳು, ಲೇಖಕರು, ವಾಗ್ಮಿಗಳು, ಪುರಾಣ ಕೀರ್ತನಾದಿ ಕಲಾವಿದರು, ಸಂಸಾರಿಗಳು ಸನ್ಯಾಸಿಗಳು ಪಂಡಿತಪಾಮರರೆನ್ನದೆ ಸರ್ವರಿಗೂ ಶಿವಾನುಭವ ಶಾಸ್ತ್ರದ ಅಮೃತ ಸೇಚನೆಯಿಂದ ಶಿವಾನುಭವ ರಸಾಸ್ವಾದನನ್ನು

ಅನುಗ್ರಹಿಸಿದ ಪ್ರಸಿದ್ಧ ಶಿವಾನುಭವತಜ್ಞ ಸಿದ್ಧಪುರುಷನಾರು ? ಅದರ ಸಿಹಿ ಫಲವಾಗಿಯೇ ಇಂದು ನಮ್ಮ ಸಮಾಜವು ಜಗತ್ತಿನ ಧಾರ್ಮಿಕ ಜ್ಞಾನ ಭಾಂಡಾಗಾರವೆನಿಸಿದ ಉಪನಿಷದ್ಗ್ರಂಥಗಳಿಗೂ ಸಹ ಸ್ವಾನುಭವದಿಂದ ಶಿವಾದ್ವೈತ ಪರವಾಗಿ ಭಾಷ್ಯಗಳನ್ನು ಬರೆದ **ಶ್ರೀ ಸದಾಶಿವ ಶಿವಾಚಾರ್ಯರಂಥ** ಮಹಾ ಪುರುಷರನ್ನು ಪಡೆದ ಕೀರ್ತಿಗೆ ಪಾತ್ರವಾಗಲಿಲ್ಲವೇ, **ಮಾನ್ಯ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರಂಥ** ಸ್ವಾಮಿಗಳೂ ಸಹ ಕೇವಲ ಭಕ್ತಿಭಾವದಿಂದ ಶಿವದಾಸೋಹಂಭಾವಿಗಳಾಗಿ ಶಿವಾನುಭವ ಸಂಸ್ಥೆ ಸಮ್ಮೇಲನಗಳನ್ನು ನಡೆಯಿಸುವ ಹೊಣೆ ಹೊತ್ತುಕೊಂಡು ಮೆರೆಯುವದನ್ನು ಕಣ್ಣಾರೆ ಕಾಣುವ ಭಾಗ್ಯ ನಿಮ್ಮದಾಗಿಲ್ಲವೇ ? ಅದಕ್ಕೆಲ್ಲ ಕಾರಣ ಪುರುಷ **ಮಹಾತ್ಮಾ ಕುಮಾರಯೋಗಿಗೆ** ವೀರಶೈವ ಸಮಾಜವು ಅದಾವ ಪುರಸ್ಕಾರದಿಂದ ಸಹಾನುಭೂತಿ ವ್ಯಕ್ತಮಾಡುತ್ತಿದೆ? ವೀರಶೈವ ಸಮಾಜವು ಕೃತಘ್ನವಲ್ಲವೆಂಬುದನ್ನು ತೋರಿಸಿಕೊಡುವಿರಾ ?

**ಗುರುವಿರಕ್ತ ಪೀಠಗಳ ವಿದ್ಯಾವಿಭವ ಸಂಪನ್ನ ಜಗದ್ಗುರುಗಳೇ !**

ವೀರಶೈವ ಸಮಾಜ ದೇವಾಲಯದೆದುರು ಸತ್ಯವನ್ನೇ ಅಪ್ಪಣೆ ಕೊಡಿಸುವಿರಾ? ಹಾಗಿದ್ದರೆ ನನ್ನ ಪೀಠಗಳು ಒಂದಾನೊಂದು ಕಾಲದಲ್ಲಿ ತಮ್ಮ ನಿಜ ಸತ್ವವನ್ನು ಮಾರಿಕೊಂಡು ಅನ್ಯ ಸಮಾಜದವರಿಂದ ಅವಹೇಳನಕ್ಕೆ ಗುರಿಯಾದಾಗ ಯೋಗ್ಯ ವ್ಯಕ್ತಿಗಳನ್ನು ಕಂಡುಹಿಡಿದು ವಿದ್ಯಾವಿನಯ ವೈಭವಸಂಪನ್ನರನ್ನಾಗಿ ಮಾಡಿ ತನ್ನ ದಿವ್ಯ ತೇಜದಿಂದ ಜಗದ್ಗುರು ಸ್ಥಾನಕ್ಕೇರಿಸಿ ಸಮಾಜದಲ್ಲಿ ಅವರಿಂದ ಅನಂತ ಕಾರ್ಯಗಳು ನೆರವೇರುವಂತೆ ಮಾಡಿ ದಿಗ್ದಿಗಂತಗಳಲ್ಲಿ ಮೆರೆಯಿಸಿ ಅವರ ಕೀರ್ತಿ ಪತಾಕೆಯು ಅವಿಶ್ರಾಂತ ಹಾರಾಡುವಂತೆ ಸ್ಥಿರ ಶಕ್ತಿಯಾಗಿ ನಿಂತ ನಿಸ್ವಾರ್ಥಪರಮಪವಿತ್ರಕಾಯನಾದ ಆ ಮಹಾಕ್ರಿಯಾ ಶಿಲ್ಪಿಯಾರು? ಅವರಿಂದ ಉಪಕೃತರಾದ ಹುಬ್ಬಳ್ಳಿ, ಚಿತ್ರದುರ್ಗ, ಗದಗ, ಬಾಳೆಹಳ್ಳಿ, ಉಜ್ಜಯನಿ, ಶ್ರೀಶೈಲಾದಿ ಜಗದ್ಗುರುಗಳೆಲ್ಲರೂ ಒಂದೆಡೆ ಸೇರಿ ಒಮ್ಮನದಿಂದ ವಿಚಾರ ಮಾಡಿ ಸಂಘಟನೆಯಿಂದ ಸಮಾಜ ಕಾರ್ಯ ಮಾಡಲು ಪ್ರಾರಂಭಿಸಿದರೆ ಮಾತ್ರ ಆ ಮಹಾ ಕ್ರಿಯಾಶಿಲ್ಪಿ **ಕುಮಾರ ಯೋಗಿಯ** ಉಪಕಾರಸ್ಮರಣೆಯು ಸಾಧ್ಯವಾಗಬಹುದಲ್ಲವೇ ?

## ಆಧುನಿಕ ಅನಂತ ವಿದ್ಯಾವಿಭೂಷಿತರಾದ ವೀರಶೈವ ವಿದ್ಯಾರ್ಥಿಗಳೇ ಮತ್ತು ವಿದ್ವಾಂಸರೇ !

ಆತ್ಮಶ್ರೀಯುಳ್ಳ ನೀವು ಸುಮತಿ ದೀಪದ ಪ್ರಕಾಶದಲ್ಲಿ ಆಲೋಚನೆ ಮಾಡುವಿರಾ ? ಹಾಗಾದರೆ ಇಂದಿಗೆ ಹಲವಾರು ವರ್ಷಗಳ ಪೂರ್ವದ ನಮ್ಮ ಸಮಾಜದಲ್ಲಿ ಆಂಗ್ಲಭಾಷೆಯ ಸುಳಿವೂ ಇಲ್ಲದಿರುವಾಗ ಒಬ್ಬ ಪದವೀಧರನೂ ಸಿಕ್ಕುವದು ದುರ್ಲಭವಾಗಿದ್ದಾಗ ಎಲ್ಲ ಕಡೆಗೂ ಸಂಚರಿಸಿ ಸುಶಿಕ್ಷಿತರ ಅವಶ್ಯಕತೆಯನರಿತು ಸಮಾಜವು ಸಾಕಷ್ಟು ಸಂಪದ್ಭರಿತವಾಗಿದ್ದರೂ ಸಂಪತ್ಶಾಲಿಗಳಿಂದ ಕೂಡಿದ್ದರೂ ಬಡವಿದ್ಯಾರ್ಥಿಗಳು ಅನನ್ಯಗತಿಕರಾಗಿ ಮನೆ ಮನೆ ತಿರುಗುವದನ್ನು ಕಂಡು ಮರುಗಿ ಆಕ್ಷಣವೇ ಸಮಾಜದಿಂದ ಬೇಡುವ ನಿರ್ಣಯ ಮಾಡಿ ಅನೇಕ ಜಗದ್ಗುರು ಮಹಾಸ್ವಾಮಿಗಳನ್ನೂ ಶ್ರೀಮಂತರನ್ನೂ ಉಪದೇಶಾಮೃತದಿಂದ ಎಚ್ಚರಿಸಿ ಪ್ರಥ ಏಕರಾದ ಪುಣ್ಯಯೋಗಿ **ಶಿರಸಂಗಿ ಲಿಂಗರಾಜರನ್ನು** ಕಂಡು ತಮ್ಮ ಇಡೀ ಸಂಸ್ಥಾನವನ್ನೇ ವೀರಶೈವ ಸಮಾಜ ಮಕ್ಕಳ ಕಲ್ಯಾಣಕ್ಕಾಗಿ ಕೊಡಲು ಒಪ್ಪಿಸಿ ಅದರಂತೆ ಕಾರ್ಯೋನ್ಮುಖರಾಗಿ ಇಂದು ಅಸಂಖ್ಯ ಪದವೀಧರರೂ, ಅನೇಕ ಉಚ್ಚಾಧಿಕಾರಿಗಳು, ಸಂಶೋಧಕರು, ಪತ್ರಿಕಾಕರ್ತರು, ರಾಷ್ಟ್ರಸೇವಕರು ಸಮಾಜದಲ್ಲಿ ಕಾಣುವಂತೆ ಮಾಡಿದ ಮಹಾ ಕರ್ಮವೀರನಾರು? ಧಾರ್ಮಿಕ ವಿದ್ಯಾಭಿವೃದ್ಧಿಗಾಗಿ ಅನೇಕ ಗ್ರಾಮ ಪಟ್ಟಣಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ವೀರಶೈವ ಧರ್ಮಕ್ಕೆ ಸ್ಥಿರತ್ವವನ್ನು ತಂದುಕೊಟ್ಟು ಅನೇಕ ಧಾರ್ಮಿಕಾಚಾರ್ಯರನ್ನು ನಿರ್ಮಾಣ ಮಾಡಿದ ವೀರಶೈವ ಪರಮಾವತಾರನಾರು ? ಈ ಕಾರ್ಯವು ನಿರಂತರವಾಗಿ ನಡೆಯಲು ಸುಶಿಕ್ಷಿತ ನಿಸ್ವಾರ್ಥ ಸಮಾಜ ಸೇವಾ ಕಾರ್ಯಕರ್ತರನ್ನು ತಯಾರಮಾಡಲು ಭಾರತದಲ್ಲಿಯೇ ಅದ್ವಿತೀಯವಾದ **ಶಿವಯೋಗಮಂದಿರ ಮಹಾ ಸಂಸ್ಥೆಯನ್ನು** ಸ್ಥಾಪಿಸಿ ವಿಶ್ವದಲ್ಲಿ ವೀರಶೈವರ ಪ್ರಭಾವವನ್ನು ಬೀರುವ ವಿಚಾರ ಪರಿಪೂರ್ಣ ಮೂರ್ತಿಯಾದ ಮಹಾ ಪ್ರತಿಭಾವಂತನಾರು ? ಸಮಾಜದ ಸರ್ವಾಂಗಗಳಾದ ಧಾರ್ಮಿಕ, ಔದ್ಯೋಗಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಸಾಂಸ್ಕೃತಿಕ ಪರಂಪರೆಗಳು ಅನೂಚಾನವಾಗಿ ನಿರ್ವಿಘ್ನತೆಯಿಂದ ಉತ್ತರೋತ್ತರ ವೃದ್ಧಿ ಹೊಂದಿ ಮುಂದುವರಿಯುವದಕ್ಕಾಗಿ **ಅಖಿಲ ಭಾರತ ವೀರಶೈವ ಮಹಾ ಸಭೆಯನ್ನು** ಸ್ಥಾಪಿಸಿ ತದಂಗಭೂತವಾಗಿ ಅನಂತ ಸಭೆ ಸಮ್ಮೇಲನಗಳ ಪ್ರವಾಹವನ್ನೇ ಹರಿಸಿ ಅಜರಾಮರ

ಕೀರ್ತಿಕಾಯನಾದ ಮಹಾ ಮುತ್ಸದ್ದಿ ಯಾರು ? ಆ **ಮಹಾ ಮೇಧಾವಿ ಕುಮಾರ ಶಿವಯೋಗಿಯು** ಪ್ರತ್ಯಕ್ಷ, ಅಪ್ರತ್ಯಕ್ಷಪ್ರಭಾವಿತರಾಗಿ ಸಮಾಜಸೇವಾ ಪಾಠ ಕಲಿತು ಆಧುನಿಕ ಸಮಾಜದಲ್ಲಿ ಗುರುವಿರಕ್ತ ಜಗದ್ಗುರುಗಳು ಮಹಾಸ್ವಾಮಿಗಳು, ಶ್ರೀಮಂತರು ಧೀಮಂತರು ಅನೇಕ ಸಂಘ ಸಂಸ್ಥೆಗಳನ್ನು ಕಟ್ಟಲು, ಅನಂತ ವಿದ್ಯಾವರ್ಧಕ ಸಂಘ, ಶಾಲೆ ಕಾಲೇಜುಗಳನ್ನು ನಿರ್ಮಿಸಲು ಶಿವಾನುಭವಾದಿ ಸರ್ವಧರ್ಮ ಸಾಹಿತ್ಯ ಪರಿಷತ್ತುಗಳಿಗೆ ಅಧ್ಯಕ್ಷರಾಗಲು, ಅಸಂಖ್ಯ ಪ್ರಸಾದನಿಲಯ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಲು ಮತ್ತು ಬಂಥನಾಳ ಶಿವಯೋಗಿಗಳಂಥ ಶಿವಯೋಗಿಗಳು ಸಮಾಜದ ಅಸಾಧಾರಣ ಮಹಾಕಾರ್ಯ ನಿರ್ವಹಿಸಲು ಮುಂದೆ ಬಂದರೆಂಬುದನ್ನು ಆದಾವ ಉಪಕೃತನಾದ ವೀರಶೈವನು ಹೇಳಲು ಹಿಂಜರಿದಾನು ?

## ವೀರಶೈವ ಸಮಾಜದ ತಾಯಿಬೇರಿನಂತಿರುವ ಗುರುವಿರಕ್ತ ಮಹಾಸ್ವಾಮಿಗಳೇ !

ಇಂದು ಮಹಾಜನಗಳಿಂದ ಪೂಜೆಗೊಳ್ಳುತ್ತಿರುವ ಸಮಾಜ ಕಾರ್ಯ ಧುರೀಣರಾದ ನೀವು ಎದೆಮುಟ್ಟಿ ಹೇಳಲು ಮುಂದೆ ಬರುವಿರಾ? ಹಾಗಾದರೆ ಒಂದಾನೊಂದು ಸಮಯದಲ್ಲಿ ಕಪನಿ ಕಾಷಾಯಾಂಬರಗಳೆಂದರೇನು, ವೀರಶೈವ ಅಷ್ಟಾವರಣಗಳಾವು, ಶಾಸ್ತ್ರೋಕ್ತ ಭಸ್ಮಲಿಂಗಗಳು ಹೇಗಿರುತ್ತವೆ, ಗುರುವಿರಕ್ತಾಶ್ರಮಗಳ ಮರ್ಮವೇನು, ನಮ್ಮ ಪೂರ್ವಜರಾರು, ಶಾಸ್ತ್ರೋಕ್ತ ಚರಾಧಿಕಾರ ಪಟ್ಟಾಧಿಕಾರ ಕ್ರಿಯೆಗಳು ಹೇಗೆ ಮಾಡಲ್ಪಡುತ್ತವೆ, ಸಮಾಧಿ ಕ್ರಿಯೆಗಳ ವಿಚಾರವೇನು, ಪ್ರಸಾದಿಕರಾಗುವದೆಂತು, ಶಿವಾನುಭವ ಮಾಡುವ ಪರಿಹೇಗೆ, ಪಾದೋದಕ ಪ್ರಸಾದ ಕ್ರಿಯೆಗಳ ಮಹತ್ವವೇನು, ಅಷ್ಟಾಂಗ ಯೋಗಗಳ ಅವಶ್ಯಕತೆಯೆಷ್ಟು, ಶಿವಯೋಗವೆಂದರೇನು, ಷಟ್ಸ್ಥಲೋಪದೇಶದಿಂದ ಭಕ್ತರನ್ನು ಉದ್ಧಾರ ಮಾಡುವ ಮಾರ್ಗವೆಂತು, ಪಂಚಾಚಾರಗಳ ವಿಚಾರವೇನು, ಶಿವಪೂಜಾ ವಿಧಾನವೆಂತು, ಸಮಾಜದಲ್ಲಿ ಮಾಡುವ ಕರ್ತವ್ಯ ಕರ್ಮಗಳೇನು ಇತ್ಯಾದಿ ವೀರಶೈವಾಚಾರ ಶಾಸ್ತ್ರ ವಿಷಯಗಳಲ್ಲಿ ನಿಮಗಿದ್ದ ಅಜ್ಞಾನವನ್ನು ಪರಿಹರಿಸಿ ಶಿವಯೋಗ ಜ್ಞಾನವನ್ನು ಕರುಣಿಸಿ ವೀರಶೈವತತ್ವ ನಿರ್ಣಯ ಮಾಡಿದ ಮಹಾಪ್ರವಾದಿಯಾರು? ಬಾಲ್ಯದಿಂದಲೂ ಗುರುವಿರಕ್ತ ಮೂರ್ತಿಗಳು ತಮ್ಮ ಅಶ್ರಮಕ್ಕೆ ತಕ್ಕ ವಿದ್ಯೆಯನ್ನು ಸಂಪಾದಿಸಲು ಶಿವಯೋಗಾಶ್ರಮವನ್ನು ಸ್ಥಾಪಿಸಿ ವಟುಗಳು, ದೇವರು, ಆಚಾರ್ಯರು, ಸಾಧಕರು

ಶಿವಯೋಗಿಗಳು, ದೇಶಿಕರು, ಸಿದ್ಧರು, ಸ್ವಾಮಿಗಳು ಜಗದ್ಗುರುಗಳು ಇತ್ಯಾದಿ ಕ್ರಮವಿಶಿಷ್ಟವಾದ ಶಿಸ್ತಿನಿಂದ ಎಲ್ಲೆಡೆಯಲ್ಲಿಯೂ ಸಂಚರಿಸುತ್ತಿರುವ ನಿಮ್ಮಿಂದ ಅನೇಕ ಶಿವಯೋಗಾಶ್ರಮಗಳು ನಿರ್ಮಾಣಗೊಳ್ಳುವಂತೆ ಮಾಡಿ ವೀರಶೈವ ಧರ್ಮದಲ್ಲಿ ಶಿವದೃಷ್ಟಿಯನ್ನು ಕೊಟ್ಟು ಸೃಷ್ಟಿಯು ಸತ್ಯವೆಂದು ಬೋಧಿಸಿದ ಮಹಾಪ್ರಭು ಶ್ರೀಕುಮಾರಯೋಗಿಯ ಸನ್ನಿಧಿಯಲ್ಲಿಂದು ಸಮಾನತೆಯ. ಪ್ರತಿಜ್ಞೆ ಸ್ವೀಕರಿಸುವಿರಾ ?

**ವೀರಶೈವ ಸಮಾಜದ ಆಧುನಿಕ ಸಾಹಿತ್ಯ ಸಂಗೀತಾದಿ ಕಲಾವಿದರೇ !**

ನೀವು ಕಲಾತ್ಮಕ ಬುದ್ಧಿಯಿಂದ ನಿಮ್ಮ ಪೂರ್ವಜರು ಕಲಾವಿದ್ಯೆಗೆ ಆವ ಪುರಸ್ಕಾರವಿತ್ತರೆಂದು ತಿಳಿಯಬಸುವಿರಾ ? ಹಾಗಾದರೆ ಕರ್ನಾಟಕ ಸಾಹಿತ್ಯದಲ್ಲಿಯೇ ಹೊಸ ಮಾರ್ಗಗಳನ್ನು ಕಂಡುಹಿಡಿದು ನಿಮ್ಮ ಪಿತ್ರಾರ್ಜಿತ ಆಸ್ತಿಯಾದ ರಗಳೆ, ವಚನಾದಿ ಸಾಹಿತ್ಯವು ತಾಡಓಲೆಗಳಲ್ಲಿ ಅನೇಕ ರೀತಿ ಹಾಳಾಗಿ ಹೋಗುವ ಸಮಯದಲ್ಲಿ ವಚನವಾಙ್ಮಯವನ್ನು ಸಂಗ್ರಹಿಸಲು ವಚನಶಾಸ್ತ್ರ ಪಿತಾಮಹರೆಂದು ಪ್ರಸಿದ್ಧರಾದ ಶ್ರೀ ಹಳಕಟ್ಟಿ ಅವರಿಗೆ ಮೊಟ್ಟ ಮೊದಲು ಪ್ರೋತ್ಸಾಹಿಸಿ ಅದರಂತೆ ಕಾರ್ಯಕ್ರವೃತ್ತರನ್ನಾಗಿ ಮಾಡಿಸಿದ ಮಹಾನುಭಾವನನ್ನು ಗುರುತಿಸುವಿರಾ? ಸಂಗೀತವು ಕೇವಲ ಪುಂಡ ಪೋಕರ ಗೋಷ್ಠಿ ಎಂದು ಸಮಾಜವು ಹೀ ಗಳೆಯುವ ಸಮಯದಲಿ ಸಂಗೀತಕ್ಕೆ ಯೋಗ್ಯಶಕ್ತಿಯನ್ನು ಕೊಟ್ಟು ಕರ್ನಾಟಕದ ಸೂರದಾಸರೆಂದು ಪ್ರಸಿದ್ಧರಾದ 'ಉಭಯಗಾನವಿಶಾರದ' ಪಂಚಾಕ್ಷರ ಮಹಾಗಾನಯೋಗಿಗಳಿಂದ ಸಂಗೀತ ಸೌರಭವನ್ನು ಬೀರಿಸಿದ ರಸರುಷಿಯಾರು ? ನಾಟಕಕಲೆಯು ಕೇವಲ ಹಣ ಸಂಪಾದಿಸುವ ಕಾಯಕವಾದಾಗ ಅನೇಕ ಭಾಷೆಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಯುಕ್ತ ಸಾಮಾಜಿಕ ನಾಟಕಗಳನ್ನು ಬರೆದು ಜನಸಾಮಾನ್ಯರನ್ನು ಎಚ್ಚರಿಸಿ ಕರ್ನಾಟಕದಲ್ಲಿ ಅನೇಕ ಕಲಾಸಂಸ್ಥೆಗಳನ್ನು ತಮ್ಮ ಶಿಷ್ಯ ಮಂಡಳಿಯಿಂದ ಸಂಚಾಲನೆ ಮಾಡಿಸುತ್ತಿರುವವರೂ ತಮ್ಮದೇ ಆದ ಕುಮಾರೇಶ್ವರ ಮಹಾ ಸಂಸ್ಥೆಯಿಂದ ಚಿತ್ತರಗಿ ಗಂಗಾಧರ ಶಾಸ್ತ್ರಿಗಳಂಥ ನಾಟಕಕಾರರನ್ನು ಬಸವಲಿಂಗಶಾಸ್ತ್ರಿಗಳಂಥ ಕೀರ್ತನಕಾರರನ್ನು, ತೆಲಸಂಗ ಪಟ್ಟದ್ದೇವರಂಥ ಪುರಾಣಿಕರನ್ನು, ಭಾರತಪ್ರಸಿದ್ಧ ಗವಾಯಿಗಳಾದ ಬಸವರಾಜ ರಾಜಗುರುಗಳಂಥ ಗಾಯಕರನ್ನು, ನಾನಾವಿಧ ವಾದ್ಯಗಾರರನ್ನು ಗಮಕ ಕಲಾವಿದರನೇಕರನ್ನು ಕ್ರಿಯಾಸಿದ್ಧರನ್ನಾಗಿ ಮಾಡಿ ದೇಶದ ಮೂಲೆ ಮೂಲೆಗಳಲ್ಲಿ ಕಳುಹಿಸಿ

ಸಾಹಿತ್ಯ ಸಂಗೀತಾದಿ ಕಲಾಪ್ರಸಾರ ಮಾಡುತ್ತಿರುವ ಶಿವಜ್ಞಾನ ನೇತ್ರಧಾರಿ ಪುಟ್ಟರಾಜ ಕವಿಗಳಿಗೆ ಸರ್ವಾಧಾರ ಮೂರ್ತಿಯಾಗಿ ನಿಂತ ನಿರಾಕಾರ ಮೂರ್ತಿಯಾರು ? ಹರಿಹರ ರಾಘವಾಂಕರ ಶೈಲಿಯನ್ನು ಆತ್ಮಸಾತ್ ಮಾಡಿಕೊಂಡು ಅನಂತ ಪುರಾಣ ಕಾವ್ಯಗಳನ್ನು ರಚಿಸಿ ಆ ಮಹಾ ಶಿವಕವಿಗಳ ಶ್ರೇಣಿಯಲ್ಲಿ ಸ್ಥಾನವನ್ನು ಪಡೆದ ಚೆನ್ನಕವಿ ಮೊದಲಾದ ಕವಿ ಶ್ರೇಷ್ಠರಿಗೆ ಕವಿತಾಕಲೆಯನ್ನು ಅನುಗ್ರಹಿಸಿದ ಕವಿಕುಲಾವಂತನಾರು ? ಕನ್ನಡ ಸಾಹಿತ್ಯ | ಸಾಮ್ರಾಜ್ಞಿಯ ಮುಡಿಗೆ ರಸಾನುಭವ ಸೂಸುವ ಶಬ್ದ ಸೌರಭಪೂರಿತ ವಚನಪುಷ್ಪಗಳನ್ನಾಯ್ದು ಶೃಂಗರಿಸುತ್ತಿರುವ ನವರಸಭರಿತ ನವೀನ ಸಾಹಿತಿಯೆಂದು ಪ್ರಸಿದ್ಧರಾದ ಶ್ರೀಶೈಲ ನಿಡುಮಾಮಿಡಿ ಜಗದ್ಗುರು ಮಹಾಪಾದರೇ ಮೊದಲಾದ ಆಧುನಿಕ ಸಾಹಿತಿಗಳಿಗೆ ಜ್ಞಾನ ಗುರುವಾದ ಸಾಹಿತ್ಯ ಕಲಾಚಾರ್ಯನಾರು ? ಈ ಶತಮಾನದ ವೀರಶೈವ ಗುರುವಿರಕ್ತ ಜಗದ್ಗುರು ಮಹಾಸ್ವಾಮಿಗಳಿಗೆ, ಕಲಾಪುರುಷರಿಗೆ, ಶಿವಾನುಭವಿಗಳಿಗೆ ಅಭಯದಾತನಾಗಿ ಬಂದು ನಾಡಿನ ಸತ್ವವನ್ನು ಸಂರಕ್ಷಿಸಿದ ಸರ್ವಜ್ಞಮೂರ್ತಿ ಶ್ರೀಕುಮಾರೇಶ್ವರನಿಗೆ ಆಧುನಿಕ ಸಮಾಜದ ಮಹಂತರು ಆವ ಕಲೆಯಿಂದ ಪರಿತೃಪ್ತಿಗೊಳಿಸುವರು ಹೇಳುವಿರಾ ?

# ವೀರಶೈವರ ಆಚಾರವಿಧಿ, ಹೇಗಿರಬೇಕು.... ?

ಲೇಖಕರು:— ಈಶ್ವರ ಎ. ಕುಪ್ಪಸದ ಗುಡೂರ.

( ಹಿಂದಿನ ಸಂಚಿಕೆಯಿಂದ ಮುಂದುವರೆದುದು )

" ಪುಣ್ಯವೃಕ್ಷ ಮಹಾಭಾಗ ಮೂಲೂರ ಶ್ರೀ ಫಲಪ್ರಭೋ ।
ಮಹೇಶ್ವರಸ್ಯ ಪೂಜಾರ್ಥಂತ್ವತ್ಪತ್ರಾಣಿ ಚಿನೋಮ್ಯಹಂ ॥ "

ಈ ಪ್ರಕಾರವಾಗಿ ಪಠಿಸುತ್ತ ಬಿಲ್ವಪತ್ರ ಪುಷ್ಪಗಳನ್ನು (Flowers) ಸಂಗ್ರಹಿಸಬೇಕು. ಬಿಲ್ವಪತ್ರಿಯು ಮೂರು ದಳಗಳಿಂದ ಕೂಡಿದ್ದಿರಬೇಕು. ಅದು ಹರಿದಿರಬಾರದು ಹಾಗೂ ಮಧ್ಯಕ್ಕೆ ಛಿದ್ರಗಳಿರಕೂಡದು. ವಾಯುವಿನಿಂದ ತಾನಾಗಿ ಉದುರಿ ಬಿದ್ದಂಥ ಪುಷ್ಪದರ್ಭೆಗಳನ್ನು ತರಬಾರದು ಇವು ದೇವರಿಗೆ ಅರ್ಪಿಸಲಿಕ್ಕೆ ಯೋಗ್ಯವಲ್ಲ.

ಉತ್ತಮಂ ಸ್ವಾರ್ಜಿತಂ ಪುಷ್ಪಂ ಮಧ್ಯಮಂ ವನ್ಯಮುಚ್ಯತೇ ।
ಅಧಮಂತುಕ್ರಯಕ್ರೀತಂ ಪಾರಕ್ಯಂಚಾಧಮಾಧಮಂ ॥
ತ್ಯಾಜ್ಯಂಪರ್ಯುಷಿತಂ ಜಂತುದೂಷಿತಂ ಪಾದಲಂಘಿತಂ ।
ಮ್ಲಾನಂ ಸ್ಪೃಷ್ಟಂ ತಥಾಸ್ಪೃಶ್ಯೈರ್ನೀತಂಚ ಪ್ರತಿಲೋಮಜೈಃ ॥
ಕೀಟಕೇಶಾಪವಿದ್ಧಾನಿ ಶೀರ್ಣಪರ್ಯುಷಿತಾನಿಚ ।
ಸ್ವಯಂ ಪತಿತ ಪುಷ್ಪಾಣಿ ತ್ಯಜೇದುಪಹತಾನೀಚ ॥

ಈ ಪ್ರಕಾರವಾಗಿ ಬೋಧಿಸುವ ಧರ್ಮಶಾಸ್ತ್ರವಿಧಿಗನುಸಾರವಾಗಿ, ತಾನೇ ಸ್ವಥ ವೃಕ್ಷವನ್ನು ಹಚ್ಚಿ ಬೆಳೆಸಿದ ಪುಷ್ಪಗಳು ಸರ್ವಶ್ರೇಷ್ಠವಾದವುಗಳು !

ಅರಣ್ಯದಲ್ಲಿ ತಮ್ಮಿಂದ ತಾವೇ ಬೆಳೆದವುಗಳು ಮಧ್ಯಮ !! ಕ್ರಯಕ್ಕೆ ತೆಗೆದುಕೊಂಡವುಗಳು ಮಾತ್ರ ಅಧಮಗಳು !!! ಆದ್ದರಿಂದ ಸಾಧ್ಯವಾದಮಟ್ಟಿಗೆ ಪವಿತ್ರವಾದಂಥವುಗಳನ್ನು ಹಾಗೂ ಸ್ವಹಸ್ತದಿಂದಲೇ ಈ ಕಾರ್ಯವನ್ನು ಮಾಡಬೇಕು. ಬಾಡಿದ ಪುಷ್ಪಗಳನ್ನೂ, ಹುಳ ಕಡಿದಂಥವುಗಳನ್ನೂ, ಕೆಳಗೆ ಇಟ್ಟಾಗ್ಯೆ ಕಾಲಿನಿಂದ ದಾಟಿದಂಥವುಗಳನ್ನೂ ಹಾಗೂ ಸ್ವಯಂ ಉದುರಿಬಿದವುಗಳನ್ನು ಉಪಯೋಗಿಸಬಾರದು. ಪ್ರಫುಲ್ಲವಾಗಿ ಅರಳದೇ ಇದ್ದಂಥವುಗಳನ್ನು ಮೂಸಿನೋಡಿದವುಗಳನ್ನು, ದುರ್ಗಂಧ ಕುಸುಮಗಳನ್ನೂ ಉಪಯೋಗಿಸಬಾರದು. ಸ್ನಾನ ಮಾಡಿ ಪುಷ್ಪ ಪತ್ರಿಗಳನ್ನು ಸಂಗ್ರಹಿಸುವದು ಉತ್ತಮ

ವಾದದ್ದು. ಹಾಗಾಗದಿದ್ದಲ್ಲಿ ಕರಪಾದಗಳನ್ನು ತೊಳೆದುಕೊಂಡಾದರೂ ತರಬಹುದು ! ಬುಟ್ಟಿಯಲ್ಲಾಗಲಿ ಅಥವಾ ಶುದ್ಧ ವಸ್ತ್ರದಲ್ಲಾಗಲಿ 'ಶಿವಸ್ಮರಣ'ವನ್ನು ಮಾಡುತ್ತ ತೆಗೆದುಕೊಂಡು ಮನೆಗೆ ಬರಬೇಕು ಬರುವಾಗ್ಯೆ ಪತ್ರಿ ಪುಷ್ಪಗಳನ್ನು ಎಡಗೈಯಲ್ಲಿ ಹಿಡಿಯುಬಾರದು. ಮೊಣಕಾಲ ಕೆಳಗೆ ನೇತಾಡಿಸಬಾರದು. ಕಾಲುಗಳಲ್ಲಿ ರಕ್ಷೆಗಳನ್ನು (Foot wears) ಮೆಟ್ಟಿಕೊಂಡಿರಬಾರದು. ಉಚ್ಚಿಷ್ಟವನ್ನು ತುಳಿಯಬಾರದು. ಅಶುಚಿ ವಸ್ತುಗಳನ್ನು ದಾಟಬಾರದು. ಬೇರೊಬ್ಬರಿಗೆ ತಗುಲಿಸಬಾರದು. ಮೈಲಿಗೆ ಬಟ್ಟೆಗಳಿಗೆ ಮುಟ್ಟಿಸದಂತೆ ಬಲಹಸ್ತದಿಂದಲೇ ಎತ್ತರಿಸಿ ಹಿಡಿದುಕೊಂಡು ಶಿವಪೂಜಾಗೃಹದಲ್ಲಿ ಎತ್ತರವಾದ ಪ್ರದೇಶದಲ್ಲಿಡಬೇಕು. ಇನ್ನು ಮಡಿಯಾದ ಬಟ್ಟೆಗಳ ಬಗ್ಗೆ ಲಕ್ಷವಹಿಸಬೇಕು.

ಧೋಬಿಗಳು ತೊಳೆದ ಬಟ್ಟೆಗಳು ಮಡಿಗೆ ಬರುವದಿಲ್ಲ. ಹೆಣ್ಣುಮಕ್ಕಳು ಬಟ್ಟೆಗಳನ್ನು ತಾವೇ ಆಗಲಿ ಅಥವಾ ತಮ್ಮವರ ಕಡೆಯಿಂದಾಗಲಿ ತೊಳೆಯಿಸುವದು ಉತ್ತಮ ! ಆದರೆ ಅನಿವಾರ್ಯ ಪ್ರಸಂಗದಲ್ಲಿ ಅನ್ಯಮತೀಯರು ತೊಳೆದವುಗಳನ್ನು ಪುನಃ ತಮ್ಮ ನೀರಿನಿಂದ ಚನ್ನಾಗಿ ಹಿಂಡಿಕೊಂಡು ಉಪಯೋಗಿಸಬೇಕು. ಕೆಲವು ಆಚಾರವಂತರು ತಮ್ಮ ಆಚಾರದ ಕಡೆಗಷ್ಟೇ ಹೆಚ್ಚು ಲಕ್ಷವನ್ನಿಟ್ಟಿರುವರಲ್ಲದೇ ಹೆಣ್ಣುಮಕ್ಕಳ ಆಚಾರದ ಕಡೆಗೆ ಅಲಕ್ಷದಿಂದ ಇರುವರು. ಇದು ಸರ್ವಥಾ ತಪ್ಪಾದುದು. ಯಾಕಂದರೆ— ಚಿಕ್ಕ ಬಾಲಕ ಬಾಲಿಕೆಯರಿಗೆ ಅವರೇ ಬೋಧಿಕೆಯರಾಗುವದರಿಂದ, ನಮ್ಮ ವೀರಶೈವ ಧರ್ಮಸುಧಾರಣೆಯೂ ಹಾಗೂ 'ದೇವರು' ಬಗ್ಗೆ ಭಯಭಕ್ತಿ ಸೇವೆಯೂ ಮುಕ್ಕಾಲುಭಾಗ ಅವರಿಂದಲೇ ಲೇಸಾಗುವದದೆ. "ಮೂರು ವರ್ಷದ ಬುದ್ಧಿ ನೂರು ವರ್ಷದ ವರೆಗೆ" ಎಂಬಂತೆ ತಂದೆತಾಯಿಗಳು ತಮ್ಮ ಮಕ್ಕಳ ಆಚಾರ ನಡತೆಯ ಬಗ್ಗೆ ವಿಶೇಷವಾಗಿ ಚಿಕ್ಕಂದಿನಲ್ಲಿಯೇ ಲಕ್ಷತೆಗೆದುಕೊಳ್ಳಬೇಕು. ಈಗ ಆಧುನಿಕ ಯುಗದಲ್ಲಿ ಕೆಲವು ಜನರು ಈ ವಿಷಯದ ಬಗ್ಗೆ ಅನಾಸ್ಥೆಯಿಂದಿರುವದು ಕಂಡುಬರುತ್ತಿದೆ !

"ವಸ್ತ್ರಶೌಚಾನ್ವಿತಃ ಕುರ್ಯಾತ್ಸರ್ವಕಾರ್ಯಾಣಿವೈದ್ವಿಜಾಃ |
ನಮಸ್ಕಾರಾದಿಕಂ ಸರ್ವಂ ಗುರುಶುಶ್ರೂಷಣಾದಿಕಂ ||

ವಸ್ತ್ರಶೌಚವಿಹೀನಾತ್ಮಾಕ್ಯ ಶುಚಿರ್ನಾತ್ರ ಸಂಶಯಃ |
ದೇವಕಾರ್ಯೇಽಧಿಯುಕ್ತಾನಾಂ ಪ್ರತ್ಯಹರಿ ಶೌಚವಿಷ್ಯತೇ ||

ಇತರೇಷಾಂಹಿನಸ್ತ್ರಾಣಾಂ ಶೌಚಂ ಕಾರ್ಯಂ ಮಲಾಗನೇ |
ವರ್ಜಯೇತ್ಸರ್ವಯತ್ನೇ ನವಾಸೋsನ್ಯೈರ್ವಿಧೃತಂದ್ವಿಜಾಃ ||

ಅಂದರೆ. ಗುರುಶುಶ್ರೂಷಣಾ ಮೊದಲಾದ ಮಂಗಲಕಾರ್ಯಗಳನ್ನು ಶುದ್ಧವಸ್ತ್ರವನ್ನುಟ್ಟುಕೊಂಡು ಮಾಡಬೇಕೆಂತಲೂ, ಅಶುದ್ಧ (Impure) ಬಟ್ಟೆಗಳನ್ನು ಉಟ್ಟುಕೊಂಡದ್ದಾದರೆ ಅಶುಚಿಯಾಗುವದೆಂತಲೂ ಶಿವಪೂಜಕರು ಪ್ರತಿದಿವಸ 'ಮಡಿ' ಬಟ್ಟೆಗಳನ್ನೇ ಧರಿಸಬೇಕೆಂದೂ ಹಾಗೂ ಅನ್ಯರು ಉಪಯೋಗಿಸಿದ ಬಟ್ಟೆಗಳನ್ನು ಧರಿಸಬಾರದೆಂದು ಲಿಂಗ ಪುರಾಣದಲ್ಲಿ ಹೇಳಿದೆ. ಆದ್ದರಿಂದ ಶಿವಪೂಜಾ ಗುರುಪೂಜಾದಿ ಕಾರ್ಯಗಳಲ್ಲಿ ನಿತ್ಯ ತೊಳೆದ ಬಟ್ಟೆಗಳನ್ನೇ ಉಪಯೋಗಿಸಬೇಕು. ಕೆಲವರು ರೇಶಿಮೆಯ ಬಟ್ಟೆಗಳಿಗೂ ನಾರು ಬಟ್ಟೆಗಳಿಗೂ 'ಮೈಲಿಗೆ' ಇಲ್ಲವೆಂದು ಭಾವಿಸಿ ಉಟ್ಟು, ಹೊದ್ದು ತೊಳೆಯದೇ ಧರಿಸುತ್ತಾರೆ. ನೀರಿನಿಂದ ತೊಳೆಯದ ಯಾವ ವಸ್ತುವು ಮಡಿಯಾಗುವದಿಲ್ಲ. ಆದ್ದರಿಂದ ಈ ಪದ್ಧತಿಯನ್ನು ತ್ಯಜಿಸುವದು ಹೆಚ್ಚು ಶ್ರೇಯಸ್ಕರವಾಗಿರುತ್ತದೆ.

ಶೌಚಾಚಮನ ಮುಖಪ್ರಕ್ಷಾಲನಾದಿ ಕ್ರಿಯೆಗಳಾದ ಬಳಿಕ ಭಸ್ಮಧಾರಣವನು ಮಾಡಿ ನಿತ್ಯೋದ್ಯೋಗವನ್ನು ಕೈಕೊಳ್ಳಬೇಕು. ಹೆಣ್ಣುಮಕ್ಕಳಾದರೂ ಪತಿಯು ಏಳುವದಕ್ಕಿಂತ ಮೊದಲೇ ಎದ್ದು ದೇವರನ್ನು ಸ್ಮರಿಸುತ್ತ ಪತಿಯ ಪಾದಕ್ಕೆ ನಮಸ್ಕರಿಸಬೇಕು. ನಂತರ ನಿತ್ಯಕರ್ಮಗಳನ್ನು ತೀರಿಸಿ ಅಡಿಗೆಯ ಪಾತ್ರೆಗಳನ್ನು ಸ್ವಚ್ಛವಾಗಿ ಬೆಳಗಿಟ್ಟು ತಾತ್ಕಾಲಕ್ಕೆ ಬೇಕಾಗುವ ಪಾಕಸಾಮಗ್ರಿಗಳನ್ನು ಸಿದ್ಧಗೊಳಿಸಿಟ್ಟು ಸ್ನಾನಮಾಡಿ ಮಡಿ ನೀರನ್ನು ತಂದು ಗುರೂಪದೇಶದಂತೆ ಲಿಂಗಪೂಜೆಯನ್ನು ಮಾಡಿಕೊಂಡು ಶೋಧಿಸಿದ ಮಡಿ ನೀರಿನಿಂದಲೇ ಅಡಿಗೆ ಮಾಡಬೇಕು.

ಪಾತ್ರೆಗಳ ಶುದ್ಧೀಕರಣದ ವಿಷಯವು ಬಹು ಜನರಿಗೆ ಗೊತ್ತಿಲ್ಲದ ಕಾರಣ ಶಾಸ್ತ್ರೋಕ್ತವಾಗಿ ಶುದ್ಧ ಮಾಡಬೇಕು.

ಭಸ್ಮನಾಶುದ್ಧ್ಯತೇಕಾಂಸ್ಯಂ ಕ್ಷಾರೇಣಾಯ ಸಮುಚ್ಯತೇ |
ತಾಮ್ರಮಾಮ್ಲೇನ ವೈನಿಪ್ರಾಸ್ತ್ರಪುಸೀ ಸಕಯೋರಪಿ |
ಕ್ಷೈಮದ್ಭಿಃ ಶುಭಂ ಪಾತ್ರಂ ರೌಪ್ಯಪಾತ್ರಂದ್ವಿಜೋತ್ತಮಾಃ ||

ಅಂದರೆ ಕಂಚಿನಪಾತ್ರೆ ಭಸ್ಮದಿಂದಲೂ, ಕಬ್ಬಿಣದವು ಉಪ್ಪಿನಿಂದಲೂ, ತಾಮ್ರ ಸೀಸ ತವರದವುಗಳು ಹುಳಿಯಿಂದಲೂ ಬಂಗಾರ ಬೆಳ್ಳಿಯವುಗಳು ನೀರಿನಿಂದ ಶುದ್ಧವಾಗುತ್ತವೆಂದು ಲಿಂಗ ಪುರಾಣವು ಬೋಧಿಸುತ್ತದೆ ಅಲ್ಲದೇ ಹಿತ್ತಾಳೆಯು ಮಣ್ಣಿನಿಂದಲೂ ಶುದ್ಧವಾಗುತ್ತದೆ. ಆದ್ದರಿಂದ ಹೆಣ್ಣುಮಕ್ಕಳು ಈ ಶಾಸ್ತ್ರೀಯ ಪದ್ಧತಿಯಿಂದ ಶುದ್ಧಮಾಡಬೇಕು.

ಕೆಲವು ಜನರು ಕಂಚಿನ ಪಾತ್ರೆಗಳನ್ನು ಭೋಜನಕ್ಕಾಗಿ ಉಪಯೋಗಿಸುತ್ತಾರೆ. ಇದು ಬಹು ಅನ್ಯಾಯವಾದ ಆಚರಣೆಯಾಗಿರುತ್ತದೆ. ಯಾಕಂದರೆ

ಭೋಜನಂ ಪಾದಶೌಚಂಚ ಯಃಕುರ್ಯಾತ್ಕಾಂಸ್ಯಭಾಜನೇ ।
ಷಣ್ಮಾಸ ಶಂಭುವಿನಿಕ್ಷಿಪ್ಯ ಪುನರಂಗಾರ ಮಾದಿಶೇತ್ ॥

ಕಂಚಿನ ಪಾತ್ರೆಯಲ್ಲಿ ಭೋಜನ ಮಾಡಿದ್ದಾದರೆ ಹಾಗೂ ಪಾದಗಳನ್ನು ತೊಳೆದದ್ದಾದರೆ ಆ ಪಾತ್ರೆಯನ್ನು ಆರು ತಿಂಗಳು ವರೆಗೆ ಭೂಮಿಯಲ್ಲಿ ಹೊಳ ಪುನಃ ಸುಟ್ಟರೆ ಶುದ್ಧವಾಗುವದೆಂದು ಸ್ಮೃತಿಮುಕ್ತಾಫಲದಲ್ಲಿ ಹೇಳಿದೆ. ಆದ್ದರಿಂದ ಕಂಚಿನ ಗಂಗಾಳುಗಳನ್ನು ಊಟಕ್ಕೆ ಉಪಯೋಗಿಸುವದನ್ನು ಬಿಟ್ಟು ಶುದ್ಧಹಿತ್ತಾಳಿ ಗಂಗಾಳುಗಳನ್ನು ಹಾಗೂ 'ಸ್ಟೇನ್‌ಲೆಸ್ ಸ್ಟೀಲ್' (Stinles steel) ದವುಗಳನ್ನು ಸಾಧ್ಯವಾದರೆ 'ಬೆಳ್ಳೀ' ಗಂಗಾಳಗಳನ್ನು ಉಪಯೋಗಿಸುವದು ಬಹು ಶ್ರೇಷ್ಠವಾದದ್ದು.

ಇನ್ನೊಂದ್ವಿಷಯವೇನಂದರೆ—ಕೆಲವು ಜನರು ಅಡಿಗೆ ಮಾಡುವದಕ್ಕಾಗಲಿ ಅಥವಾ ನೀರು ತುಂಬಲಿಕ್ಕಾಗಲೀ ವಿಶೇಷವಾಗಿ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುತ್ತಾರೆ. ಈ ಪದ್ಧತಿಯು ಉತ್ತಮವಾದುದಲ್ಲ, ಮಣ್ಣಿನ ಪಾತ್ರೆಗಳು ಒಮ್ಮೆ ಉಪಯೋಗಿಸಿದ ಮೇಲೆ ಪುನಃ ಉಪಯೋಗಿಸಲಿಕ್ಕೆ ಬರುವದಿಲ್ಲ.
ನಿಷಿದ್ಧಗಳಾಗುತ್ತವೆ. ಹೀಗಿದ್ದ ಪಾತ್ರೆಗಳನ್ನು ಯಾವಾಗಲೂ ಉಪಯೋಗಿಸಿ ಊಟ ಮಾಡಿದ ಸ್ಥಾನದಲ್ಲಿಟ್ಟು, ಅಶುದ್ಧವಾದ ಕರಗಳಿಂದ ಮುಟ್ಟಿ ಪುನಃ ಅವೇ ಪಾತ್ರೆಗಳಲ್ಲಿ ಪಾಕವನ್ನು ಮಾಡಿ 'ಶಿವಲಿಂಗಕ್ಕೆ' ಆ ಅನ್ನವನ್ನು ನೈವೆದ್ಯ ಮಾಡುವದು ಮಹಾದೋಷವೆನಿಸುತ್ತದೆ. ಹಿತ್ತಾಳಿ, ಮೊದಲಾದ ಪಾತ್ರೆಗಳನ್ನು ಬೆಳಗಿದರೆ ಅವು ಶುದ್ಧಾಗುತ್ತವೆ. ಅದರಂತೆ ಮಣ್ಣಿನ ಪಾತ್ರೆಗಳನ್ನು ಬೆಳಗಿದರೆ, ಶುದ್ಧಾಗುವದಿಲ್ಲ. ಚಿಕ್ಕ ಹುಡುಗರು ಎಂಜಲ ಕೈಗಳಿಂದ ಹರವಿ (ಗಡಿಗಿ) ಗಳನ್ನು ಮುಟ್ಟುವದರಿಂದಲೂ ಒಂದೊಂದು ವೇಳೆ ಎಂಜಲ

ನೀರನ್ನೇ ಅದರಲ್ಲಿ ಚಲ್ಲುವದರಿಂದಲೂ ಇಂಥ ಕೃತಿಯನ್ನು ಅಶಿಕ್ಷಿತ ಸ್ತ್ರೀಯರು ವಿಶೇಷವಾಗಿ ಮಾಡುವದರಿಂದಲೂ ಈ ಪಾತ್ರೆಗಳನ್ನು ಆದಷ್ಟು ಮಟ್ಟಿಗೆ ಬಹಿಷ್ಕರಿಸಿ ಧಾತುಮಯ ಪಾತ್ರೆಗಳಲ್ಲಿಯೇ ಪಾಕವನ್ನು ರಚಿಸಿ 'ಶಿವಲಿಂಗಕ್ಕೆ' ಅರ್ಪಿಸುವದೇ ವೀರಶೈವರ ಪವಿತ್ರ ಆಚರಣೆಯಾಗಿರುತ್ತದೆ. ಸ್ಮಾರ್ತ-ವೈಷ್ಣವಾದಿ ಬ್ರಾಹ್ಮಣರು ಎಂಥ ಬಡವರಿದ್ದರೂ ಮಣ್ಣಿನ ಪಾತ್ರೆಗಳನ್ನು ಎಂದಿಗೂ ಉಪಯೋಗಿಸುವದಿಲ್ಲ. ಆದ್ದರಿಂದ ಹಿತ್ತಾಳಿ ಮೊದಲಾದ ಪಾತ್ರೆಗಳಲ್ಲಿಯೇ ಮಾಡುವ ಪದ್ಧತಿಯನ್ನಿಡಬೇಕು.

ವೀರಶೈವನು ಪ್ರಾತಃಕಾಲ ಮಧ್ಯಾಹ್ನಕಾಲ ಸಾಯಂಕಾಲಗಳಲ್ಲಿ ಸ್ನಾನವನ್ನು ಮಾಡಿ ಶಿವಪೂಜೆಯನ್ನು ಮಾಡಬೇಕು. ಇಲ್ಲವೇ ಎರಡುಕಾಲಗಳಲ್ಲಿಯಾದರೂ ತಪ್ಪದೇ ಮಾಡಬೇಕು. ಇನ್ನು ಕನಿಷ್ಟಪಕ್ಷಕ್ಕೆ ಒಮ್ಮೆಯಾದರೂ ಮಾಡದೇ ಇರತಕ್ಕದ್ದಲ್ಲ. ಸ್ನಾನ ಮಾಡದೇ ಶಿವಪೂಜೆಯನ್ನು ಮಾಡಬಾರದು.

(ಮುಂದುವರಿಯುವದು)

ಆವಳೀ ಸತ್-ಚಿತ್-ಆನಂದಮಯಿಯಾದ ಪರಾಪ್ರಕೃತಿ ನೆನಹಿಲ್ಲದ ಘನವನ್ನು ನೆನೆದ ನೆನಹೇ ಶಯುವಾಯು ಚಿತ್ತಿನಿಸಿಕೊಂಡಿತ್ತು ಅ ಚಿತ್ತೇ ಸತ್ತುಚಿತ್ತಾನಂದ ನಿತ್ಯಪರಿಪೂರ್ಣವೆಂದು ಐದಂಗವನಂಗೀಕರಿಸಿ ನಿಃಕಲ ಶಿವತತ್ವವೆನಿಸಿತ್ತು. ಇದೇ ಕಾರಣಜಗತ್ತು. ಈ ಕಾರಣಜಗದಿಂದ ಸೂಕ್ಷ್ಮಜಗ ಹೊರಗೆ ಬಂದಿತು. ಇದೇ ಮಾನಸಿಕ ಜಗತ್ತು ತರ್ಕ ವಿಚಾರಗಳ ಜಗತ್ತು ಇದೇ ಸೂಕ್ಷ್ಮಜಗತ್ತು. ಇದು ಸ್ವಪ್ನದಲ್ಲಿ ಎಲ್ಲರಿಗೂ ಗೋಚರವಾಗುವದು. "ಮುಗಿಲ ಮರೆಯಲ್ಲಿ ಕ್ಷಣಿತ್ ಸ್ಫುರಿಸಿದಂತೆ ಎನ್ನ ಮನದಲ್ಲಿ ಅಡಗಿರ್ದ ಮಹಾಘನಲಿಂಗವು ತನ್ನ ಲೀಲೆಯಿಂದ ತಾನೆ ಉದಯವಾಗಲು ನಿಮ್ಮ ಆದಿ ಅನಾದಿಯ ನಿಲವು ಕಂಡೆನಯ್ಯ" ಇದೇ ಸೂಕ್ಷ್ಮಜಗತ್ತು. ಇನ್ನು ಈ ಸೂಕ್ಷ್ಮಜಗದಿಂದ ಸ್ಥೂಲ ತ್ರಿಗುಣಾತ್ಮಕವಾದ ಮಾಯಾಜಗತ್ತು ಉದಿಸಿತ್ತು. "ಒಂದೇ ವಸ್ತುವಿನಲ್ಲಿ ಗುಣತ್ರಯವಾದವು ಗುಣತ್ರಯದಿಂದ ಮಲಮಯಗಳಾದವು ಮಲತ್ರಯಗಳಿಂದ ಲೋಕ ರಚನೆ ಹೆಚ್ಚಿತ್ತು. ಲೋಕ ರಚನೆ ಹೆಚ್ಚಿದಲ್ಲಿ ಪಾಪ ಪುಣ್ಯಗಳಾದವು. ಪಾಪ ಪುಣ್ಯಗಳಿಂದ ಸ್ವರ್ಗನರಕಗಳಾದವು. ಸ್ವರ್ಗ ನರಕದಿಂದ ಭೇದವಾಗಿ ಕೆಟ್ಟ ಕೇಡು ನೋಡಿ ತನ್ನ ಮಾಯೆ ಸೆಳೆದನು." ಇದೇ ಸ್ಥೂಲ ಜಗತ್ತು ಮಾಯಾಜಗತ್ತು. ಇನ್ನು ಪರಾತ್ಪರ ಪರಶಿವನು ನೆನಹುದೋರಿ ಇಳಿಯುತ್ತ ಬಂದು ಸ್ಥೂಲವಾದನು. ಅದರಂತೆ ತಿರುಗಿ ಏರುತ ಹೋಗಿ ಪರಾತ್ಪರ ಪರಶಿವನಾಗುವದೇ ಈ ಪರಿಪೂರ್ಣಯೋಗವು ತಿರುಗಿ ಏರುವದನ್ನು ವಚನಕಾರರು ಹೀಗೆ ಹೇಳಿದ್ದಾರೆ. "ತನ್ನ ಮಾಯೆ ಸೆಳೆದನು. ಸೆಳೆದಲ್ಲಿ ಸರ್ವವು ಲಯವಾಗಿ ನೀನೊಬ್ಬನೇ ಉಳಿದೆ. ಉಳಿದೆ ಎಂಬುದು ಶಾಸ್ತ್ರಪ್ರಸಿದ್ಧವು. ಸಮುದ್ರದ ನೀರು ಮೇಘವಾಗಿ, ಮೇಘದ ನೀರು ಹಳ್ಳ ಕೊಳ್ಳವಾಗಿ ಹಳ್ಳ ಕೊಳ್ಳ ಹೊಳೆಯಾಗಿ ಸಮುದ್ರಕ್ಕೆ ಕೂಡಿ ಸಮುದ್ರವಾಗುವಂತೆ ನೀನಾದರೂ ಅದರಂತೆ ಒಂದೇ ಸ್ಥಲದಲ್ಲಿ ನಿಂತು ನೋಡಲೊಲ್ಲದೆ ಅನೇಕ ಸ್ಥಾನಗಳ ಧರಿಸಿ ಮೊದಲಿನ ಸ್ಥಾನಕ್ಕೆ ಹೋಗುವದೇ ಉಚಿತವು ಎಲೆ ಜೀವನೆ. ಎಂದು ಬೋಧಿಸಿದ ಸದ್ಗುರು ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯಾ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನ'' ಈ ಪ್ರಕಾರ ಪುನಃ ಸ್ಥೂಲದಿಂದ ಸೂಕ್ಷ್ಮಕ್ಕೆ, ಸೂಕ್ಷ್ಮದಿಂದ ಕಾರಣಕ್ಕೆ, ಕಾರಣದಿಂದ ಮಹಾ ಕಾರಣಕ್ಕೆ ಮಾನವನು ಏರಿ ಏರಿ ಹೋಗಬೇಕಾಗಿದೆ. ಇದೇ ಮಾನವನು ಹೋಗಿ ಪೂರ್ಣ ಮಾನವ ಅಥವಾ ದೇವ ಮಾನವನಾಗಬೇಕಾಗಿದೆ ಇದೇ ಪರಿಪೂರ್ಣಯೋಗ. ಪರಿಪೂರ್ಣವಾಗಿ ಪರಮಾತ್ಮನಾಗುವದೇ

ಪರಿಪೂರ್ಣಯೋಗ. ಶರೀರದ ಯಾವ ಸ್ಥೂಲ ಸೂಕ್ಷ್ಮ ಬಹಿರಂಗ ಅಂತ ರಂಗ ಯಾವದನ್ನು ಕೆಡಿಸದೆ ಎಲ್ಲವನ್ನೂ ಪರಾತ್ಪರ ಪರಶಿವನ ಮಂದಿರ ಸ್ಥಾನವನ್ನಾಗಿ ಮಾಡುವದೇ ಪರಿಪೂರ್ಣಯೋಗವು.

ಸಕಲ ಶರೀರದ ವಿಕಾಸವೇ ಇದಾಗಿದೆ. ಮನ, ಬುದ್ಧಿ, ಚಿತ್ತ, ಅಹಂಕಾರ, ಮಮಕಾರ, ಶರೀರ, ಇಂದ್ರಿಯಗಳು ನಾಡಿಗಳು ಸಕಲವನ್ನೂ ತೀಡಿ ತಿದ್ದಿ ಶುದ್ಧಗೊಳಿಸಿ, ವಿಕಾಸ ಮಾಡಿ ಅವುಗಳಲ್ಲಿ ಶಿವಶಕ್ತಿಯರ ಪ್ರಭಾವ ಚೈತನ್ಯ ಕಳೆ ಬೆಳಕು ಪೂರಿಪೂರ್ಣತೆಗಳನ್ನು ತುಂಬುವದೇ ಪರಿಪೂರ್ಣಯೋಗ. ಸೃಷ್ಟಿ ರಚನೆಯ ಕ್ರಮವನ್ನನುರಿಸಿ ಈ ಇಷ್ಟಲಿಂಗವನ್ನು ರಚಿಸಿದ್ದಾರೆ. ಪೆಂಡಿ ಕೆಯೇ ಪರಾತ್ಪರ ಪರಶಿವ, ಮಹಾಕಾರಣ ಅದರ ಕೆಳಗೆ ಇರುವ ಸಮಭುಜ ತ್ರಿಕೋಣ ಶಿರಕೋನ ಕೆಳಗೆ ಮಾಡಿದ್ದೇ ಕಾರಣ. ಅದೇ ಸತ್ ಚಿತ್ ಆನಂದಮಯ ನಿತ್ಯ ಪರಿಪೂರ್ಣವಾದ ತ್ರಿಕೋಣ ಪರಾಪ್ರಕೃತಿ ಚಿತ್‌ಶಕ್ತಿ ಎನಿಸಿದೆ. ಎರಡನೇ ಸಮಭುಜ ತ್ರಿಕೋಣ ಶಿರಕೋಣ ಮೇಲೆ ಮಾಡಿ ಅದಕ್ಕೆ ಕೂಡಿದ್ದೇ ಸ್ಥೂಲಜಗತ್ತು. ಸತ್ವ ರಜ ತಮಗಳಿಂದ ಕೂಡಿದ ಅಪರಾಪ್ರಕೃತಿ ಮಾಯಾಜಗತ್ತು. ಆ ಎರಡೂ ತ್ರಿಕೋನಗಳು ಕೂಡಿದ ಬಿಂದುವೇ ಸೂಕ್ಷ್ಮಜಗತ್ತು. ಆ ಲಿಂಗವು ಇದರಂತೆ ಆಗುವದು. ಇದು ಮಹಾ ಅಖಂಡ ಲಿಂಗದ ಚಿಕ್ಕ ಸ್ವರೂಪ. ಈ ಲಿಂಗವು ವಿಶ್ವದ ಸ್ವರೂಪ ವನ್ನು ಬೋಧಿಸುವದು. ಅದೇ ಆ ಅಖಂಡ ಮಹಾಲಿಂಗವು ಚಿಕ್ಕ ರೂಪ ಧರಿಸಿ ಇಷ್ಟಲಿಂಗವಾಗಿದೆ ಎಂದು ವಚನಕಾರರು ಹೇಳಿದ್ದಾರೆ—"ಪಾತಾಳ ವಿತ್ತಿತ್ತ ಪಾದಂಗಳತ್ತತ್ತ. ದಶದಿಕ್ಕು ಇತ್ತಿತ್ತ ದಶಭುಜಗಳತ್ತತ್ತ, ಬ್ರಹ್ಮಾಂಡ ವಿತ್ತಿತ್ತ ಮಣಿ ಮಕುಟವತ್ತತ್ತ ಚನ್ನಮಲ್ಲಿಕಾರ್ಜುನಯ್ಯಾ ನೀನನ್ನ ಕರಸ್ಥ ಲಕ್ಕೆ ಬಂದು ಚುಳುಕಾದಿರಲ್ಲಾ. ಲಿಂಗವೇ ! ಎಂದು ಹಾಡಿದ್ದು ನೋಡಿದರೆ ಈ ಇಷ್ಟಲಿಂಗವನ್ನು ಬ್ರಹ್ಮಾಂಡದ ಸ್ವರೂಪವಾಗಿರುವ ಮಹಾಲಿಂಗದಂತೇ ಚಿಕ್ಕ ರೂಪದಲ್ಲಿರಚಿಸಿದ್ದಾರೆ. ಪರಾತ್ಪರ ಪರಶಿವನು ಹೇಗೆ ಹೇಗೆ ಇಳಿದ ನೆಂದು ಈ ಲಿಂಗವು ಬೋಧಿಸುವದು. ಮತ್ತೆ ಹಾಗೆ ಹಾಗೇ ಮಾನವನು ಏರುತ್ತ ಏರುತ್ತ ಪರಾತ್ಪರ ಪರಶಿವನಗೆಂದೂ ಸಹ ಅದು ಹೇಳುವದು. ತ್ರಿಗುಣಾತ್ಮಕವಾದ ಸ್ಥೂಲಮಾಯಿಕ ಜಗತ್ತನ್ನು ದಾಟಿ ಸೂಕ್ಷ್ಮವಾಗಬೇ ಕೆಂದೂ ಮತ್ತೆ ಆ ಸೂಕ್ಷ್ಮದಿಂದ ಏರಿ ಸತ್ ಚಿತ್ ಆನಂದ ನಿತ್ಯ ಪರಿ ಪೂರ್ಣಮಯವಾದ ಕಾರಣ ಜಗದಸ್ವರೂಪನಾಗಿ ಏರುತ್ತ ಮುಂದೆ ಹೋಗಿ ಪರಾತ್ಪರ ಪರಶಿವನ ಸ್ವರೂಪನೇತಾಗೆಂದೂ ಈ ಲಿಂಗವು ಬೋಧಿಸುವದು.

ಆದೇ ಈ ಪರಿಪೂರ್ಣಯೋಗವೆಂದು ಹೇಳಬಹುದು. ಸರ್ವಾಂಗಲಿಂಗಿ, ಶಿವಯೋಗಿ ಪರಿಪೂರ್ಣಯೋಗಿ, ಲಿಂಗಾಂಗ ಸಾಮರಸ್ಯ ಪಡೆದವ ಇವೆಲ್ಲ ಒಂದೇ ಅರ್ಥ ಕೊಡುವ ಶಬ್ದಗಳಾಗಿವೆ. ಹೀಗಾದರೆ ಇವನು ವ್ಯವಹಾರದಲ್ಲಿ ಸಹಜ ಇರಬಲ್ಲ ಬಾಳಬಲ್ಲ. ಪ್ರತಿಯೊಂದು ಶರೀರದ ಭಾಗಗಳಲ್ಲಿ ಲಿಂಗಗಳಿರುವವು. ಅವುಗಳಲ್ಲಿ ಲಿಂಗದ ಕಳೆ ಗುಣ ಚೈತನ್ಯ ಶಕ್ತಿಗಳು ಪ್ರಕಟವಾಗುವದೇ ಈ ಪರಿಪೂರ್ಣ ಯೋಗವೆಂದು ತಿಳಿಯಬೇಕು. ಒಂದು ಇಂದ್ರಿಯದಲ್ಲಿ ಅದು ಪ್ರಕಟವಾಗಿ, ಉಳಿದ ಇಂದ್ರಿಯಗಳಲ್ಲಿ ಪ್ರಕಟವಾಗದಿದ್ದರೆ ಅದು ಅಪೂರ್ಣಯೋಗವೆಂದು ಹೇಳಬೇಕು. ಒಂದು ಯೋಗದಿಂದ ಒಂದು ಇಂದ್ರಿಯವು ಶುದ್ಧವಾಗಿ ಲಿಂಗದ ಕಳೆ ಪ್ರಕಟವಾಗುವವು. ಭಕ್ತಿಯಿಂದ ಹೃದಯ ಶುದ್ಧವಾಗುವದು. ಜ್ಞಾನಯೋಗದಿಂದ ಬದ್ಧಿ ಶುದ್ಧವಾಗುವದು. ಕರ್ಮಯೋಗದಿಂದ ಕೈಗಳು ಶುದ್ಧವಾಗುವವು. ಹಠಯೋಗದಿಂದ ಶರೀರ ಆರೋಗ್ಯವಾಗಿ ಶುದ್ಧವಾಗುವದು. ರಾಜಯೋಗದಿಂದ ಮನಶುದ್ಧವಾಗುವದು. ಲಯಯೋಗದಿಂದ ಆಶೆವಾಸನೆಗಳು ಶುದ್ಧವಾಗುವವು ಧ್ಯಾನಯೋಗದಿಂದ ಪ್ರಾಣ ಶುದ್ಧವಾಗುವದು. ಶುದ್ಧಿ ಎಂದರೆ ಮೊದಲಿನ ಕೆಳಮಟ್ಟದ ಸ್ಥಿತಿಯಿಂದ ವಿಕಾಸವಾಗುತ್ತ ಶುದ್ಧ ಪವಿತ್ರವಾಗಿ ಪರಮಾತ್ಮನ ವಾಸಕ್ಕೆ ಯೋಗವಾಗುವದು. ಒಂದೊಂದು ಯೋಗದಿಂದ ಒಂದೊಂದು ವಿಕಾಸವಾಗಿ ಬಿಡುವದರಿಂದ ಆ ಯೋಗಗಳು ಪರಿಪೂರ್ಣಯೋಗವೆನಿಸಲಾರವು. ಆದರೆ ಈ ಪರಿಪೂರ್ಣಯೋಗದಲ್ಲಿ ಎಲ್ಲ ಶರೀರ. ಎಲ್ಲ ಇಂದ್ರಿಯಗಳು, ಮನ, ಬುದ್ಧಿ ಚಿತ್ತ, ಪ್ರಾಣ, ಜೀವ, ಮೊದಲಾದವುಗಳು ಶುದ್ಧಿಹೊಂದಿ ವಿಕಾಸ ಆಗಿ ಬಿಡುವವು ಶರಣರು ಇದನ್ನು ಸಾಧಿಸಿದ್ದರು. ಅದಕ್ಕೆ ಶರಣರದೇ ಪರಿಪೂರ್ಣಯೋಗವಾಗಿದೆ. ಎಲ್ಲವೂ ಅಂದರೆ ಶರೀರ ಇಂದ್ರಿಯ ಮನ ಮೊದಲಾದವುಗಳಲ್ಲಿ ಪೂರ್ಣ ಪರಮಾತ್ಮನ ಅಧಿಷ್ಠಾನ ಮಾಡುವದೇ ಪರಿಪೂರ್ಣಯೋಗವೆಂದು ಧಾರಾಳವಾಗಿ ಹೇಳಬಹುದು. ಪ್ರತಿ ರೋಮ ನರನಾಡಿ ರಕ್ತ ಮಾಂಸ ಎಲುಬು ಸಹ ಪರಮಾತ್ಮಸ್ವರೂಪ ಹೊಂದಿ ದಿವ್ಯ ಶಕ್ತಿ ಅವುಗಳಲ್ಲಿ ಪ್ರಕಟವಾದರೆ ಮಾತ್ರ ಪರಿಪೂರ್ಣಯೋಗವೆಂದು ಹೇಳಬಹುದು.

### ಶರಣರ ಪರಿಪೂರ್ಣಯೋಗದ ಸ್ವರೂಪ ದರ್ಶನ.

ಶರಣರ ಪರಿಪೂರ್ಣಯೋಗದ ನಿಜರೂಪ ಸ್ವಭಾವ ತನ್ನದೇ ಆದ ರೂಪವನ್ನು ಕುರಿತು ಸ್ವಲ್ಪ ವಿಚಾರಿಸುವಾ. ಚಿಕ್ಕಂದಿನಲ್ಲೆ ಈ ಯೋಗ ಪ್ರಾರಂಭವಾಗುವದು. ಕೂಸು ಜನಿಸಿದಾಗಲೇ ಕೊರಳಲ್ಲಿ ಲಿಂಗಧಾರಣ

ಮಾಡಿ ಯೋಗಯುಕ್ತನನ್ನಾಗಿ ಆಗಲೇ ಮಾಡುವರು. ಓಂ ನಮಃ ಶಿವಾಯ ಮಹಾಮಂತ್ರವನ್ನು ಆಗ ಆ ಕೂಸಿಗೆ ಕಿವಿಯಲ್ಲಿ ಹೇಳಿ ಜೀವಾತ್ಮನಿಗೆ ಎಚ್ಚರಿಕೆ ಕೊಡುವರು. ಅಲ್ಲದೆ ಗುರು ಜಂಗಮರ ಪಾದೋದಕದಿಂದ ಕೂಸನ್ನು ತೊಳೆದು ವಿಭೂತಿಪಟ್ಟಕಟ್ಟುವದರಿಂದ ಕೂಸು ಶುದ್ಧವೂ ಪವಿತ್ರವೂ ಆಗುವದು. ಹೀಗೆ ಯಾವ ಯೋಗವೂ ಜನನದಿಂದ ಪ್ರಾರಂಭವಾಗುವದೇ ಇಲ್ಲ. ಜನನದಿಂದಲೇ ಈ ಕೂಸಿಗೆ ಪರಿಪೂರ್ಣಯೋಗದ ಸಂಸ್ಕಾರಗಳು ಪ್ರಾರಂಭವಾಗುವವು. ಪರಿಪೂರ್ಣಯೋಗವು ಜನನದಿಂದ ಪ್ರಾರಂಭವಾಗಿ ಬಾಲ್ಯದಲ್ಲಿ ಅಂಕುರ ಒಡೆದು, ವಾರ್ಧಿಕ್ಯದಲ್ಲಿ ಬೆಳೆದು, ಯೌವ್ವನದಲ್ಲಿ ಅದರ ಫಲಗಳನುಂಡು, ಇಳಿವಯಸ್ಸಿನಲ್ಲಿ ಅನ್ಯರಿಗೆ ಫಲಗಳನ್ನುಣಿಸಿ, ಮುಪ್ಪಿನಲ್ಲಿ ಪರಿಪೂರ್ಣಯೋಗಿಯ ಸ್ವರೂಪವೇ ತಾನೇತಾನಾಗಿ ಮರಣದಲ್ಲಿ ಕಾಯ ಸಹಿತ ಬಯಲು ಮಾಡಿದರೆ ತೀರಿತು. ಇದೇ ಪರಿಪೂರ್ಣಯೋಗದ ಸ್ವರೂಪ "ಜನನದಲ್ಲಿ ಲಿಂಗಧರಿಸುವದು ಎಂಟು ವರ್ಷಕ್ಕೆ ದೀಕ್ಷೆ ಕೊಡಿಸುವದು. ಹದಿನಾರು ವರ್ಷಕ್ಕೆ ಲಿಂಗಪೂಜೆ ಹಿಡಿಸುವದು. ಇಪ್ಪತ್ತು ವರ್ಷಕ್ಕೆ ಉಪದೇಶಕೊಡಿಸುವದು. ಇಪ್ಪತ್ತುನಾಲ್ಕು ವರ್ಷಕ್ಕೆ ಶಿವಾನುಭವ ಹೇಳಿಸುವದು. ಮೂವತ್ತು ವರ್ಷಕ್ಕೆ ಸಮರಸ ಮಾಡುವದು. ಮೂವತ್ತೆರಡು ವರ್ಷಕ್ಕೆ ಸರ್ವಾಧಿಕಾರದ ಮೂರ್ತಿ ಎಂದು ಮುದ್ರೆಯ ಕೊಡುವದು. ಇದು ಜಂಗಮಸ್ಥಲ. ಇದು ವೀರಿದಸ್ಥಲ. ಇದು ಮಹಾಲಿಂಗ ಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನ ಕೂಡುವ ಬ್ರಹ್ಮಸ್ಥಲ ನೋಡಾ ಕೇದರಯ್ಯ"—ಎಂದು ಹೇಳಿದ್ದರ ಮೇಲಿಂದ ಜನಿಸಿದಾಗಿನಿಂದು ಈ ಪರಿಪೂರ್ಣಯೋಗಕ್ಕೆ ಪ್ರಾರಂಭವಾಗಿ ಬಾಲ್ಯದಲ್ಲಿ ಲಿಂಗಧಾರಣೆ ಮಾಡುವರು. ಎಂಟನೇ ವರ್ಷಕ್ಕೆ ಶಿವದೀಕ್ಷೆ ಮಾಡುವರು. ಹಾಗೇ ಲಿಂಗಪೂಜೆ ಜಪ ವಗೈರೆಗಳು ಸಾಗುವವು. ಹದಿನಾರು ವರ್ಷಕ್ಕೆ ಲಿಂಗಪೂಜೆಯಲ್ಲಿ ತಲ್ಲೀನನಾಗುವನು. ಆಗ ಲಿಂಗದ ಮೇಲೆ ಮುದ್ರಾ ಆಸನ ಪೂಜೆಯಲ್ಲಿ ತಾದಾತ್ಮ್ಯಭಾವ ಬೆಳೆದು ಪ್ರಾಣಲಿಂಗ ಭಾವಲಿಂಗಗಳ ಪೂಜೆ ನಡೆಯುವದು. ಇಪ್ಪತ್ತನೇ ವರ್ಷಕ್ಕೆ ಜ್ಞಾನಬೋಧೆ ಮಾಡುವದು. ಅನೇಕ ತತ್ವಗಳ ಉಪದೇಶ ನಡೆಯುವದು. ಆಬಳಿಕ ಇಪ್ಪತ್ತುನಾಲ್ಕಕ್ಕೆ ಶಿವಾನುಭವ ಹೇಳುವದು. ಶಿವಸಹಿತ ಪಾರ್ವತಿಯು ಜ್ಞಾನ ಮಾಡಿಕೊಡುವದು, ಹೀಗೆ ಮುಂದೆ ಈತರದ ಸಾಧನಬಲಿಸಿ ಮೂವತ್ತು ವರ್ಷಕ್ಕೆ ಲಿಂಗಾಂಗ ಸಾಮರಸ್ಯ ಸರ್ವಾಂಗಲಿಂಗಿಯಾಗುವನು. ಆಗ ಸರ್ವ ಅಂಗೋಪಾಂಗಗಳಲ್ಲಿ ಲಿಂಗಕಳೆ ಚೈತನ್ಯಗಳು ಪ್ರಕಟವಾಗುವವು ಮುಂದೆ

ಸಂಸಾರ ಮಾಡಿದರೂ ಬರುವದು. ಒಲ್ಲೆಂದರೆ ವಿರಕ್ತ ಪಟ್ಟಾಧಿಕಾರಿಯಾಗಿ ಧರ್ಮದಲ್ಲಿ ಜಾಗ್ರತೆ ಕ್ರಾಂತಿಗಳನ್ನು ಮಾಡಿದರೂ ಬರುವದು. ಇನ್ನು ಮುಂದೆ ಎರಡು ವರ್ಷಕ್ಕೆ ಅಂದರೆ ಮೂವತ್ತೆರಡು ವರ್ಷಕ್ಕೆ ಆ ಮುದ್ರೆಯನ್ನು ಒತ್ತುವರು. ಇದಕ್ಕೂ ಹೆಚ್ಚಿನ ಯೋಗ್ಯತೆಯುವನಿದ್ದರೆ ಅವನು ಚನ್ನಬಸವ, ಬಸವ, ಸಿದ್ಧರಾಮ, ಪ್ರಭುದೇವರಂತೆ ತೀವ್ರ ಈ ಎಲ್ಲ ಕ್ರಿಯೆಗಳನ್ನು ಮುಗಿಸ ಬಹುದು. ತೀವ್ರ ಅಲ್ಪಕಾಲದಲ್ಲಿ ಸರ್ವ ಅಂಗಗಳಲ್ಲಿ ಲಿಂಗಚೈತನ್ಯ ಲಿಂಗ ಕಳೆಯನ್ನು ಅಳವಡಿಸಿಕೊಳ್ಳಬಹುದು. ಇದು ಶಿವಶರಣರ ಪರಿಪೂರ್ಣ ಯೋಗವು. ಯಾವ ಪ್ರಕಾರ ಮಾನವನು ಜನಿಸಿದಾಗಿನಿಂದ ಅಳವಡುತ್ತ ಹೋಗುವನೆಂದು ಸೂಚಿಸುವದು. ಇದು ಸಾಮಾನ್ಯ ನಿಯಮ ವಿಶೇಷ ನಿಯಮ ಅವರವರ ಯೋಗ್ಯತೆಯ ಮೇಲೆ ನಿಂತಿದೆ. ಇದು ಪಿಪೀಲಿಕಾಗತಿ ವಿಹಂಗಮಗತಿಗೆ ಕಾಲಪರಿಮಿತಿ ಇಲ್ಲ. ಅದಕ್ಕೇ ಅವರವರ ಮನ ಬುದ್ಧಿ ಚಿತ್ತ ಶರೀರ ಹೃದಯ ಇಂದ್ರಿಯ ಮೊದಲಾದವುಗಳ ಬಲಾಬಲಗಳ ಮೇಲೆ ನಿಂತಿದೆ. ಅಂತು ಈ ಪರಿಪೂರ್ಣಯೋಗವು ಜನನಾರಂಭದಲ್ಲಿಯೇ ಪ್ರಾರಂಭ ವಾಗಿ ಮೂವತ್ತು ವರ್ಷಕ್ಕೆ ಸಾಮಾನ್ಯವಾಗಿ ಮುಗಿಯುವದೆಂದು ಹೇಳಿ ದಂತೆ ಆಗುವದು.

## ವರ್ಣ ಜಾತಿ ಮೊದಲಾದವುಗಳ ಗೊಂದಲವಿಲ್ಲ.

ಮೊದಲಿಗೆ ಈ ಪರಿಪೂರ್ಣಯೋಗವು ಜಾತಿ ಕುಲಗಳನ್ನು ನಿರ್ಮೂಲ ಗೊಳಿಸಲು ಉತ್ಪನ್ನವಾಗಿದೆ ಎಂದು ಎಲ್ಲರೂ ಲಕ್ಷದಲ್ಲಿ ಇಡಬೇಕು. ಕಾಲ ಕಾಲಕ್ಕೆ ಜಾತಿ ಕುಲಭೇದಗಳು ತಲೆಯತ್ತಿದಾಗ ಶರಣರು ಪ್ರಮಥರು ಪುರಾಯಿತರು ಹುಟ್ಟಿ ಅವುಗಳನ್ನು ಮುರಿಯಲಿಕ್ಕೆ ಹೆಣಗಿದ್ದಾರೆ. ಕಲ್ಯಾಣ ಶರಣರು ಇದಕ್ಕಾಗಿಯೇ ಅವತರಿಸಿ ಜಾತಿಗಳನ್ನು ಮುರಿದು ವಿಶ್ವಧರ್ಮ ವನ್ನು ಪ್ರಚಾರ ಮಾಡಿ ಈ ಪರಿಪೂರ್ಣಯೋಗವನ್ನು ಪುನಃ ಪ್ರಚಾರ ಮಾಡಿ ಅನುಭವಗೊಂಡು ಹೋದರು. ಅದಕ್ಕೆ ಈ ಪರಿಪೂರ್ಣಯೋಗವು ಯಾವತ್ತೂ ಮಾನವಕೋಟಿಗೆ ಉಪಯೋಗವಾಗಲೆಂದು ಆಚರಿಸಲಿಕ್ಕೆ ಸುಲಭ ಸರಳ ಆಗಲೆಂದು ವಿಚಾರಿಸಿ ಬೋಧಿಸಿದ್ದಾರೆ. ಇಂಥ ಪವಿತ್ರ ಶುದ್ಧ ಯೋಗವು ವಿಶ್ವಧರ್ಮದ ಜಾತ್ಯಾತೀತ ಪರಿಪೂರ್ಣಯೋಗವು ಆರೇಳುನೂರು ವರ್ಷಗಳಿಂದ ಕೆಟ್ಟು ಪುನಃ ಶೈವಾಚಾರ ಶೈವಪದ್ಧತಿಗಳು ರೂಢಿಯಲ್ಲಿ ಬಂದು ಜಾತಿಗಳು ಕುಲಗಳು ಮತಗಳು ಇದರಲ್ಲಿ ಎದ್ದು ಕುಣಿಯಹತ್ತಿ

ರುವವು. ಯಾಕಂದರೆ ಈ ಪರಿಪೂರ್ಣಯೋಗವನ್ನು ಸರಿಯಾಗಿ ಈಗ ಯಾರೂ ಅರಿತವರಿಲ್ಲ. ಅರಿತರೂ ಪ್ರಚಾರ ಮಾಡುವವರಿಲ್ಲ. ಹೀಗಾಗಿ ಈ ಪರಿಪೂರ್ಣ ಯೋಗದ ಹಣೆಯಬರಹವು ಬಹು ಕೀಳುಮಟ್ಟಕ್ಕಿಳಿದು ಕೊಳೆಯಹತ್ತಿದೆ. ಅದನ್ನು ಸುಧಾರಿಸಿ ಪ್ರಚಾರ ಮಾಡಿ ಜಗತ್ತಿನಲ್ಲಿ ಸಾರ್ವತ್ರಿಕವಾಗಿ ಬೆಳೆಸಿ ಇಡೀ ವಿಶ್ವಕ್ಕೆ ಉಪಯೋಗವಾಗುವಂತೆ ಮಾಡಿದರೆ ಶರಣರ ಈ ಪರಿಪೂರ್ಣ ಯೋಗವು ಬಹು ಜನರಿಗೆ ಕಲ್ಯಾಣ ಮಾಡುವದೆಂಬುವದರಲ್ಲಿ ಏನೂ ಸಂದೇಹ ವಿಲ್ಲ. ಈ ಯೋಗದಿಂದ ಜನರ ನೀತಿ ಉದ್ಯೋಗ ಹೆಚ್ಚಿ ನ್ಯಾಯ ಸತ್ಯ ಗಳು ನಲಿದಾಡಹತ್ತಿ ದೇಶಗಳು ಭೂಕೈಲಾಸವಾಗುವವು. ಹೀಗಾಗಿ ದೇಶದ ನೈತಿಕ ಶರೀರಕ ಬೌದ್ಧಿಕ ಮಾನಸಿಕ ಯೋಗಿಕ ಪರಿಸ್ಥಿತಿಯು ಒಳ್ಳೇ ಸುಧಾರಿಸುವದರಲ್ಲಿ ಸಂದೇಹವಿಲ್ಲ. ಆಗ ಜನ ಭಕ್ತಿ ಜ್ಞಾನ ಕರ್ಮ ದಯ ಮೊದಲಾದ ಸದ್ಗುಣಗಳಿಂದ ಪರಿಪೂರ್ಣರಾಗಿ ಯೋಗ್ಯರಾಗುವರು ಅದಕ್ಕೆ ಶಿವಶರಣರ ಪರಿಪೂರ್ಣ ಯೋಗವನ್ನು ಪ್ರಚಾರ ಮಾಡುವದು ಅತಿ ಅವಶ್ಯ ವಿದೆ. ಇದರಿಂದ ಎಲ್ಲ ಜಾತಿ ಭೇದ ಕುಲಭೇದ ಮತ ಭೇದಗಳಡಗಿ ಸಮತೆ ಯಲ್ಲಿ ಬಾಳುವರು. ಯಾರೂ ಯಾರನ್ನೂ ಹಿಂಸಿಸಿ ಮೋಸಗೊಳಿಸಿ ಸುಲಿಗೆ ಮಾಡುವದಿಲ್ಲ. ಎಲ್ಲ ಕಡೆಗೂ ಶಾಂತಿನೆಲಿಸಿ ಇಹ ಪರಗಳ ಭೇದವಿಲ್ಲದೆ ಪರದಲ್ಲಿಯ ಸುಖ ಶಾಂತಿಗಳನ್ನು ಜನ ಇಹದಲ್ಲೇ ಹೊಂದಬಹುದು ಶಕ್ಯವಾಗುವದು. ಅದಕ್ಕೆ ಈ ಪರಿಪೂರ್ಣಯೋಗದ ನೆಲೆಕಲೆಗಳನ್ನು ಅರಿತು ಸರಿಯಾಗಿ ಪ್ರಚಾರಮಾಡಬೇಕು. ಜನರು ಅದಕ್ಕೆ ಸಿದ್ಧರಾಗಬೇಕು. ವೀರಶೈವವು ಒಂದು ಕುಲವಲ್ಲ, ವಿಶಿಷ್ಟ ಜಾತಿಯೂ ಅಲ್ಲ. ಸಕಲ ಜೀವಾತ್ಮರಿಗೆ ಲೇಸನೆ ಬಯಸು ವಂಥ ಕುಲಜರು ಶಿವಕುಲದವರು. ಇದನ್ನೇ ಈ ಪರಿಪೂರ್ಣಯೋಗವು ಸ್ಥಾಪಿಸುವದೆಂದು ಧಾರಾಳವಾಗಿ ಹೇಳಬಹುದು.

ಈ ಪರಿಪೂರ್ಣಯೋಗದಲ್ಲಿ ವರ್ಣ ಅಂದರೆ ಬ್ರಾಹ್ಮಣ, ಕ್ಷತ್ರಿಯ ವೈಶ್ಯ, ಶೂದ್ರರೆಂಬ ಭೇದಗಳೂ ಇಲ್ಲ. ಆಶ್ರಮ ಅಂದರೆ ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ ಸನ್ಯಾಸಗಳ ಗೊಂದಲವಿಲ್ಲ. ವಯಸ್ಸಿಗೆ ಬರುವತನಕ ಎಲ್ಲರೂ ಬ್ರಹ್ಮಚಾರಿಗಳಾಗಿ ಇರಬೇಕು. ಆ ಬಳಿಕ ಗ್ರಹಸ್ಥನಾದರೂ ಸಂಸಾರದಲ್ಲಿ ವಾನಪ್ರಸ್ಥ ಸನ್ಯಾಸಿಗಳಂತೇ ಇರುವನು. ಅಂದರೆ ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಂತೆ ಬಾಳಬೇಕು. ಉಪವಾಸವಿದ್ದರೂ ಉಂಡವನಿಗಿಂತ ಸದಾ ಆನಂದ ಸಂತೃಪ್ತನಾಗಿ ಇರಬೇಕೆಂಬುದೇ ಉಂಡ ಉಪವಾಸಿ ವಿಷಯಗಳನ್ನು

ಭೋಗಿಸದಿದ್ದರೂ ಭೋಗಿಸಿದವನಿಗಿಂತ ಹೆಚ್ಚಾಗಿ ಆನಂದ ಸಂತೃಪ್ತನಾಗಿರುವದೇ ಇದಾಗಿದೆ. ಅದರಂತೆ ಮನೆ ಮಠಗಳಲ್ಲಿ ಸ್ತ್ರೀಯರು ಇದ್ದರೂ ಸಹ ಬ್ರಹ್ಮಚಾರಿಯಾಗಿ ಇರಬೇಕು. ಅವರನ್ನು ತಿರಸ್ಕರಿಸಿ ಬಿಟ್ಟು ಅರಣ್ಯಕ್ಕೆ ಓಡಿಹೋಗುವದಲ್ಲ. ಅವರ ಕಡೆಯಿಂದ ಊಟ ಸೇವೆಗಳನ್ನು ಸ್ವೀಕರಿಸುವದನ್ನು ಬಿಟ್ಟು ಅವರಿಂದ ದೂರ ಸರಿದು ಬಾಳುವದೂ ಅಲ್ಲ. ಸ್ತ್ರೀಯರು ಸದಾ ತನ್ನ ಬೆನ್ನು ಹತ್ತಿ ಇದ್ದರೂ ಕೂಡ ವಿಕಾರವಶನಾಗದೆ ಸಹಜ ತಾಯಿ ಆಯಿ ಭಾವನೆಯಲ್ಲಿ ಅವರ ಕೂಡ ಬಾಳುವದು. ಲಿಂಗ ಭೇಧವಿಲ್ಲದೆ ಇಬ್ಬರೂ ಸಹಜ ಬಾಳುವದು. ಒಬ್ಬರಿಗೊಬ್ಬರು ಈ ಕಾರ್ಯದಲ್ಲಿ ಸದಾ ನೆರವಾಗುವದು ಹೊರತು ಸ್ತ್ರೀಯರನ್ನು ತಿರಸ್ಕರಿಸಿ ನಿಂದಿಸಿ ಬಿಡುವದನ್ನು ಈ ಶರಣರ ಪರಿಪೂರ್ಣಯೋಗವು ಬೋಧಿಸುವದಿಲ್ಲ. ಈ ಜಗತ್ತು ಸತ್ಯ ಇದರಲ್ಲಿ ಎಲ್ಲವೂ ಶಿವಸ್ವರೂಪದಿಂದಲೇ ಕಾಣಲ್ಪಡಬೇಕು. ಯಾವದನ್ನೂ ತಿರಸ್ಕರಿಸಿ ಬಿಡುವದಿಲ್ಲ. ಜಗತ್ತು ಸತ್ಯ, ಬ್ರಹ್ಮನೂ ಸತ್ಯ. ಆದರೆ ವಿಷಯಾದಿಗಳಲ್ಲಿ ಸುಖವಿದೆ ಎಂದು ನಂಬಿದ್ದೇ ಮಾತ್ರ ಭ್ರಾಂತಿ ಮಿಥ್ಯ ಹೊರತು ಜಗವು ಸುಳ್ಳಲ್ಲ. ಇದು ಚರಿಸುವಂಥಾದ್ದು ಚರಶಕ್ತಿಯುಳ್ಳದ್ದು. ಸರೀರವೂ ಸತ್ಯ ಅದಕ್ಕೆ ಅದನ್ನು ಕೆಡಿಸುವಂಥ ಕಠಿಣ ಕಷ್ಟದಾಯಕ ತಾಪದಾಯಕ ವ್ರತಗಳನ್ನು ಉಪಾಸಗಳನ್ನು ಈ ಪರಿಪೂರ್ಣಯೋಗವು ಅಲ್ಲಗಳೆಯುವದು. ಉದ್ಯೋಗಮಾಡಲಿಕ್ಕೆ ಸಾಧನಮಾಡಲಿಕ್ಕೆ ಧ್ಯಾನ ಪೂಜೆ ಜಪಮಾಡಲಿಕ್ಕೆ ಅನುಕೂಲವಾಗುವಂತೆ ಮಾತ್ರ ಶರೀರದ ಆರೋಗ್ಯ ಕಾಯ್ದುಕೊಳ್ಳಬೇಕೆಂದು ಇದು ವಿಧಿಸುವದು. ಶರೀರ ಸುಳ್ಳಲ್ಲ ಶರೀರ ಪ್ರಸಾದಕಾಯ, ಪವಿತ್ರ ಕಾಯ ಇದನ್ನು ಕಠಿಣವಾದ ಉಪವಾಸ ವ್ರತ ನಿಯಮಗಳಿಂದ ಕೆಡುವಂತೆ ಉಪಯೋಗಲಿಸಲಿಕ್ಕೆ ಬಾರದಂತೆ ರೋಗಿಷ್ಠನಾಗುವಂತೆ ಮಾಡಿ ಎಲ್ಲ ಮುಂದಿನ ಸಿದ್ಧಿ ಸಾಕ್ಷಾತ್ಕಾರಕ್ಕೆ ಅಡ್ಡಿಯನ್ನು ತಂದೊಡ್ಡಿಕೊಳ್ಳುವದು ಮಹಾ ಪಾಪವೆಂದು ಈ ಪರಿಪೂರ್ಣಯೋಗವು ಸಾರುವದು. ಆರೋಗ್ಯಕ್ಕಾಗಿ ತಿನ್ನಬೇಕು. ಉಣ್ಣಬೇಕು ಕುಡಿಯಬೇಕು. ಅಲ್ಲದೆ ಅದು ಸಾಧನಕ್ಕೆ ಯೋಗ್ಯವಾದದ್ದಿರಬೇಕು. ಉದ್ಯೋಗಕ್ಕೆ ಅನುಕೂಲವಿರಬೇಕು. ಚಪುನಿಗಾಗಿ ಡೌಲಿಗಾಗಿ ರುಚಿಗಾಗಿ ಉಣ್ಣಬಾರದು. ಉಡಬಾರದು ಕುಡಿಯಬಾರದು. ಸರಳ ಜೀವನ ಉದಾತ್ತವಿಚಾರವಿರಬೇಕು. ಸಾದಾ ಜೀವನದಿಂದ ಸಾಧನನಡಿಸಬೇಕು. ಜೀವನಕ್ಕೆ ಅತಿ ತ್ರಾಸು ಆಗುವಂತೆ ಸಹ ಇರಬಾರದು. ಜೀವನವನ್ನು ವೇದಾಂತಿಗಳಂತೆ ಅತಿ ಕಷ್ಟಗೊಳಿಸಬಾರದು. ಇದೇ ಶಿವಶರಣರ ಪೂರ್ಣಯೋಗದ ಬೋಧೆಯಾಗಿದೆ.

## ಇದರಲ್ಲಿ ಏನುಂಟು.

ಈ ಪರಿಪೂರ್ಣಯೋಗದಲ್ಲಿ ಕ್ರಿಯಾಪ್ರಧಾನವಾದ ಅಷ್ಟಾವರಣ, ನೀತಿ ಪ್ರಧಾನವಾದ ಪಂಚಾಚಾರಗಳು, ತತ್ವಪ್ರಧಾನವಾದ ಷಟ್ಸ್ಥಲಗಳು ಯೋಗ ಪ್ರಧಾನವಾದ ಸಪ್ತಾಚಾರಗಳು ಇರುವವು. ಇವುಗಳಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ರುದ್ರಾಕ್ಷಿ, ಮಂತ್ರಗಳು ಮಾನವನ ಅಂತರಂಗ ಬಹಿರಂಗ ಶುದ್ಧಗೊಳಿಸುವವು ಇವುಗಳಿಂದ ಮಾನವನು ವಿಭೂತಿಯಾಗಿ ಶಿವನ ಕಣ್ಣನ್ನು ರುದ್ರಾಕ್ಷಿಯನ್ನು ತ್ರೀನೇತ್ರವನ್ನು ಪಡೆದು ಮಂತ್ರಮಯ ನಾಗಿ ಗುರುವಾಗಿ ಲಿಂಗವಾಗಿ ಜಂಗಮವಾಗಿ ಪಾದದಲ್ಲಿ ಶಿವ ಶಕ್ತಿಯು ಚಿತ್ಕಳೆಯನ್ನು ದ್ರವಿಸುವಂತೆ ಅಂದರೆ ಶಕ್ತಿ ಪಾತವನ್ನು ಪಡೆದು ಜಗತ್ತಿನ ವಿಷಯಗಳನ್ನು ಪ್ರಸಾದರೂಪದಿಂದ ಭೋಗಿಸುತ್ತ, ಪರಿಪೂರ್ಣಯೋಗಿ ಯಾಗಿ ಬಾಳುವದೇ ಆಗಿದೆ. ಇದಕ್ಕಾಗಿ ಬಹಿರಂಗದ ಅಷ್ಟಾವರಣಗಳು ಬೇಕು.

ಗುರು ಇಲ್ಲದೆ ಯಾರಿಗೂ ನಡೆಯುವದಿಲ್ಲ. ಒಬ್ಬ ಯೋಗ್ಯವ್ಯಕ್ತಿ ಗುರು ವಾಗಬಹುದು. ಒಂದು ಘಂಟೆಗೆ ಗುರುವಾಗಬಹುದು. ಇಲ್ಲವೆ ಸೃಷ್ಟಿವಸ್ತು ಗುರುವಾಗಬಹುದು. ಪುಸ್ತಕ—ಗುರುವಾಗಬಹುದು. ಮಾನವನು ಯಾವು ದರಿಂದ ಉಪದೇಶ ಪಡೆಯುವನೋ ಅದೆಲ್ಲ ಗುರುವಾಗುವದು. ಮಾನವನು ಬೇಕಾದುದರಿಂದ ಇದರ ಸ್ಫೂರ್ತಿಯನ್ನು ಪಡೆಯಬಹುದು. ಆದರಲ್ಲಿ ಸಾಮಾನ್ಯರಿಗೆ ಮಾನವ ಗುರುವೇ ಬೇಕು. ಒಳ್ಳೇ ಬಲಿಷ್ಠಯೋಗ ಶಿಷ್ಯರಿಗೆ ಮಾತ್ರ ಉಳಿದ ವಸ್ತುಗಳು ಗುರುವಾಗಬಹುದು. ಅಂತೂ ಎಲ್ಲರಿಗೂ ಗುರು ಬೇಕು ಆದರೆ ಈಗೀಗ ಕೆಲವರು ಗುರುಬೇಡ ಗುರುಪೂಜೆಯು ಗೊಂದಲ ಬೇಡ ಎಂದು ತಮ್ಮ ಪೂರ್ಣಯೋಗದಲ್ಲಿ ಹೇಳಿದ್ದಾರೆ. ಇದನ್ನು ವಿಚಾರ ವಂತರು ಒಪ್ಪುವಂತಿಲ್ಲ. ಗುರು ಯಾರಿಗಾದರೂ ಬೇಕೇಬೇಕು. ಏಕಲವ್ಯನಿಗೆ ದ್ರೋಣಾಚಾರಿಯ ಮಣ್ಣಿನ ಮೂರ್ತಿಯೇ ಗುರು ಆಯಿತು. ಹೀಗೆ ಯಾವ ದಾದರೂ ಒಂದು ಗುರು ಬೇಕೆಬೇಕೆಂದು ತಿಳಿಯುವದು. ಗುರು ಬೇಡೆಂದು ಹೇಳುವವರೇ ಕೂಡ ಗುರುವಿಲ್ಲದಿಲ್ಲ. ಅವರಿಗೂ ಎಲ್ಲರಿಗೂ ಗುರು ಇದ್ದಾನೆ. ಒಂದು ಇಲ್ಲ ಇನ್ನೊಂದನ್ನು ಗುರುವನ್ನು ಮಾಡಿಕೊಂಡೇ ಸಾಗುತ್ತಿರುವದು. ಅದುಬೇಕಾಗಿಲ್ಲೆಂದು ಹೇಳಿದರೆ ದೇವರೇ ಬೇಕಾಗಿಲ್ಲ. ದೇವರೇ ಇಲ್ಲೆಂದು ಹೇಳಿದಂತೆ ಆಗುವದು.

ಈ ಅಷ್ಟಾವರಣವು ಧಾರ್ಮಿಕ ಗುರುತು, ಮತದ ಚಿನ್ಹವಲ್ಲ. ಅವು ಎಲ್ಲ ರಿಗೂ ಒಂದಿಲ್ಲ ಇನ್ನೊಂದು ರೀತಿಯಿಂದ ಇರುವವು. ಲಿಂಗವೆಂದರೆ ಇಷ್ಟ

ಮೂರ್ತಿ ಶಿವಶಕ್ತಿಯರ ಗುರುತು. ಉಳಿದವರಿಗೆ ಒಂದು ದೇವರ ಮೂರ್ತಿ ಇಲ್ಲವೆ ಗುರುವಿನ ಮೂರ್ತಿಯನ್ನು ಇಟ್ಟುಕೊಂಡು ಪೂಜಿಸಿ ಅದಕ್ಕೆ ಕಾಣಿಕೆಯನ್ನು ಸಲ್ಲಿಸುವರು. ಸಾಷ್ಟಾಂಗ ಹಾಕುವರು. ಲಿಂಗವು ಈ ಬ್ರಹ್ಮಾಂಡದ ಚಕ್ರರೂಪ ನಿಮ್ಮಲ್ಲಿಯ ಆತ್ಮನ ಗುರುತು ಲಿಂಗಪೂಜೆಯು. ಹೊರಗಿನದನ್ನು ಪೂಜಿಸದಂತೆ ಅಲ್ಲ. ತನ್ನಲ್ಲಿರುವ ಪರಮಾತ್ಮನನ್ನೇ ಮುಂದಿಟ್ಟುಕೊಂಡು ಈ ಪರಿಪೂರ್ಣಯೋಗಿ ಪೂಜಿಸುವನು ಇದು ಮೂರ್ತಿ ಪೂಜೆಯಲ್ಲ ಮುಂದೆ ಲಿಂಗ ಪೂಜೆಯಲ್ಲಿ ಎಲ್ಲ ಯೋಗಗಳು ಹೇಗೆ ಸಮಾವೇಶವಾಗುವವೆಂಬುದನ್ನು ಮುಂದಿನ ಪ್ರಕರಣದಲ್ಲಿ ನೋಡಬೇಕು.

ಜಂಗಮ ಸಕಲ ಶಕ್ತಿಯನ್ನು ಗಳಿಸಿದ ವ್ಯಕ್ತಿ ಗುರು ಅಂದರೆ ಶಿವ ಲಿಂಗ ಅಂದರೆ ಶಿವ ಶಕ್ತಿ ಕೂಡಿದ್ದು; ಜಂಗಮವೆಂದರೆ ಶಕ್ತಿ; ಹೀಗೆ ಇದರ ಗೂಢವಿರುವದು. ಶಿವಶಕ್ತಿಯರೆಂಬ ಎರಡು ಮುಖ್ಯ ಈ ಬ್ರಹ್ಮಾಂಡದ ತತ್ವಗಳಿರುವವು. ಶಿವ ಅಂದರೆ ಲಿಂಗ, ಸ್ಥಿರ. ಶಕ್ತಿ ಅಂದರೆ ಜಂಗಮ, ಚರ ಎಂದು ಅರ್ಥವಿರುವದು. ಚರ ಶಕ್ತಿಯುಳ್ಳದ್ದೇ ಜಂಗಮ ಸ್ವರೂಪ. ಇದೇ ಸಕಲ ಕಾರ್ಯಗಳಿಗೆ ಮೂಲವಾಗಿದೆ. ಇದನ್ನೂ ಪೂಜಿಸಲೇ ಬೇಕು. ನಾವು ಇಂಥ ಚರ ಶಕ್ತಿಯನ್ನು ಸಹ ಗಳಿಸಬೇಕು. ಗುರು ಜಂಗಮರು ಶಿಷ್ಯನಿಗೆ ಮಾರ್ಗದರ್ಶಕರೇ ಸರಿ. ಅವರು ಎಲ್ಲರಿಗೂ ಬೇಕು. ಉಳಿದವರು ಜಂಗಮನ ಸ್ಥಾನದಲ್ಲಿ ಅತಿಥಿಗಳನ್ನು ಪೂಜಿಸುವರು. ಉಳಿದ ಅಷ್ಟಾವರಣಗಳ ಬಗ್ಗೆ ಬರೆಯುವ ಅವಶ್ಯಕತೆ ಇಲ್ಲ. ಅದೆಲ್ಲ ವಿಷಯ ಮೇಲೆ ಒಂದೇ ವಾಕ್ಯದಲ್ಲಿ ಬರದಿದೆ. ಪ್ರಸಾದವೆಂದರೆ:- ನಿತ್ಯ ಸತ್ಯಕಾಯಕಮಾಡಿ ಗಳಿಸಿ ಅದನ್ನು ದಾಸೋಹ ಭಾವದಿಂದ ಶಿವಸ್ವರೂಪಿಗಳಾದ ಜೀವಿಗಳಿಗೆ ಕೊಟ್ಟು ಉಳಿದ ಅಲ್ಪವನ್ನು ಭೋಗಿಸುವದೇ ಪ್ರಸಾದವಾಗಿದೆ. ಅಂದರೆ ಹೊರಗಿನ ವಿಷಯಗಳನ್ನು ತ್ಯಾಗ ಮಾಡಿದರೆ ಆಯಾಯ ಇಂದ್ರಿಯಗಳು ಶುದ್ಧವಾಗುವವು. ಆಗ ತ್ಯಾಗಾಂಗವಾಗುವದು. ಈ ತ್ಯಾಗಾಂಗದಿಂದ ಆಯಾಯ ಸ್ಥಾನಗಳಲ್ಲಿರುವ ಲಿಂಗಗಳನ್ನು ಪೂಜಿಸಿದಂತೆಯಾಗುವದು. ಆಗ ಆಯಾ ಲಿಂಗವಿರುವ ಇಂದ್ರಿಯಗಳಿಂದ ಸದ್ವಿಷಯಗಳು ಹೊರಟು ಪ್ರಸಾದ ರೂಪದಿಂದ ಪ್ರಕಟವಾಗುವವು. ಅವುಗಳನ್ನೇ ಭಕ್ತನು ಭೋಗಿಸುವನು. ಆದರಿಂದ ಅತಿ ಆನಂದವಾಗುವದು. ಅದೇ ಭೋಗಾಂಗವಾಯಿತು. ಆಗ ಈ ಆನಂದ ಭೋಗಗಳಿಂದ ಜೀವ-ಶಿವರು ಮತ್ತು ಶರೀರ ಲಿಂಗಗಳು ಕೂಡಿ ಸಮರಸವಾಗುವವು ಆಗ ಅದೇ ಯೋಗಾಂಗವಾಗುವದು. ಇದು ಪ್ರಸಾದದ ಗೂಢಅರ್ಥವಾಗದೆ ಶಿವಶರಣರ ಪರಿಪೂರ್ಣ

ಯೋಗದಲ್ಲಿ ಇದು ಬಹು ಮಹತ್ವದ ವಿಷಯವಾಗಿದೆ. ವಿಭೂತಿ ಮಾನವನು ವಿಭೂತಿಯಾಗುವದನ್ನು ಸೂಚಿಸುವದು. ರುದ್ರಾಕ್ಷಿ ತ್ರಿನೇತ್ರ ಪಡೆಯು ಬೇಕೆಂದು ಸೂಚಿಸುವದು ಮಂತ್ರ ಕಾಯವು ಸಂಪೂರ್ಣ ಮಂತ್ರಮಯ ವಾಗಬೇಕೆಂದು ಸೂಚಿಸುವದು. ಅದಕ್ಕಾಗಿಯೇ "ಓಂನಮಃ ಶಿವಾಯ" ಮಂತ್ರವನ್ನು ಶರಣರು ಹೇಳಿದ್ದಾರೆ. ಇದರಲ್ಲಿ ಶಿವ ಶಕ್ತಿಗೆ ನಮಸ್ಕಾರ ಎಂದು ಅರ್ಥವಿರುವದು. ಈ ಶರೀರವೂ ಕೂಡ ಶಿವಶಕ್ತಿಮಯವಾಗದೆ. ಜಗವೇ ಶಿವ ಶಕ್ತಿಮಯವೇ ಆಗಿದೆ. ಅದಕ್ಕಂತೆ ಉಳಿದವರಂತೆ ಒಂದನ್ನೇ ಮಂತ್ರವಾಗಿ ಇಟ್ಟುಕೊಂಡಿಲ್ಲ. ಜಗತ್ತಿನ ಮೂಲ ತತ್ವಗಳನ್ನೇ ಇವರು ಒಂದೇ ಮಂತ್ರ ವಾಗಿ ಮಾಡಿಕೊಂಡು ಜಪಿಸುವರು. ಉಳಿದವರು ಶಿವ, ಕಾಲಿ, ನಾರಾಯಣ ರಾಮ, ಕೃಷ್ಣ, ಹರಿ, ಗಣಪತಿ, ಸೂರ್ಯ, ಅಲ್ಲಾ, ಕ್ರಿಸ್ತ ಹೀಗೆ ಒಂದೇ ದೇವ ರನ್ನು ಪೂಜಿಸಿ ಒಂದೇ ಅರ್ಥದ ಮಂತ್ರನನ್ನು ಜಪಿಸುವರು. ಇದರ ಮೇಲಿಂದ ಶಿವಶರಣರ ಪಂಪೂರ್ಣಯೋಗವು ಎಂಥ ಮಹತ್ವದ್ದಿದೆ ಎಂದು ವಿಚಾರಿಸಿರಿ ಈ ಪ್ರಕಾರ ಅಂತರಂಗ ಬಹಿರಂಗ ಅಷ್ಟಾವರಣಗಳೂ ಉಂಟು. ಬಹಿರಂಗ ಬೇಡಾದವರು ಗೂಢಾರ್ಥದ ಅಂತರಂಗ ಅಷ್ಟಾವರಣಗಳಂತೆ ನಡೆವರೂ ಬರುವದು ಬಿ. ಎ; ಎಲ್. ಎಲ್ ಬಿ. ಎಮ್. ಎ. ಎಮ್. ಬಿ. ಬಿ. ಎಸ್. ಮೊದಲಾದ ಡಿಗ್ರಿಯವರು ದೊಡ್ಡ ದೊಡ್ಡ ನೌಕರದಾರರು ಮೊದಲಾದವರ್ರು ಈ ಬಹಿರಂಗ ಅಷ್ಟಾವರಣಗಳಂತೆ ನಡೆಯುಲಿಕ್ಕೆ ನಾಚಿದರೆ ಅವುಗಳನ್ನು ಬಿಟ್ಟು ವಿಶಾಲ ವಿಚಾರ ಚುರುಕು ಬುದ್ಧಿ ಇದ್ದ ಮೂಲಕ ಅವರು ಸೂಕ್ಷ್ಮ ವಾದ ಅಂತರಂಗ ಅಷ್ಟಾವರಣದ ಪ್ರಕಾರ ನಡೆಯುಲಿಕ್ಕೆ ಸಹ ಬರುವದು. ಈ ಅಷ್ಟಾವರಣಗಳು ಸೂಕ್ಷ್ಮ ಗುಣಕ್ಕೆ ಸಂಬಂಧವಿರುವದರಿಂದ ಬಹಿರಂಗ ದಲ್ಲಿ ರಬ್ಬಾಗಿ ಕಾಣುವದಿಲ್ಲ. ಅದಕ್ಕೆ ನಾಚಿಕೆಯು ಬರುವದೂ ಇಲ್ಲ. ಕಾರಣ ಮುಂದುವರಿದವರು ಈ ಅಂತರಂಗ ಅಷ್ಟಾವರಣದಂತೆ ಸಹ ನಡೆದರೆ ಬರು ವದು. ಈ ಪ್ರಕಾರ ಪರಿಪೂರ್ಣ ಯೋಗವು ಎಲ್ಲ ತರಗತಿಯವರಿಗೂ ಸ್ಥಾನ ವನ್ನು ತನ್ನಲ್ಲಿ ಕಲ್ಪಿಸಿಕೊಡುವದು. ಅದಕ್ಕಾಗಿ ಇದಕ್ಕೆ ಪರಿಪೂರ್ಣ ಯೋಗ ವೆಂದು ನಾವು ಹೇಳುವೆವು.

**ಇನ್ನು ಪಂಚಾಚಾರಗಳೂ ಇದರಲ್ಲಿ ಬರುವವು.**

೧ ಲಿಂಗಾಚಾರದಿಂದೆ ತನ್ನಂಗ ಶುದ್ಧವಾಗುವದಯ್ಯ (ಅಂಗ ಅಂದರೆ ಜೀವ.)
೨ ಸದಾಚಾರದಿಂದ ತನ್ನಮನ ಶುದ್ಧವಾಗುವದಯ್ಯ(ಮನ ಅಂದರೆ ಮನದೇವ)

೨ ಶಿವಾಚಾರದಿಂದ ತನ್ನ ಧನ ಶುದ್ಧವಾಗುವದಯ್ಯ (ಧನ ಅಂದರೆ ತನುವು)
೪ ಗಣಾಚಾರದಿಂದ ತನ್ನನಡೆ ಪರುಷವಾಗುವದಯ್ಯ (ಆಚಾರ = ನಡೆ)
೫ ಭೃತ್ಯಾಚಾರದಿಂದ ತನ್ನ ನುಡಿ ಪರುಷವಾಗುವದಯ್ಯ (ವಾಣಿ= ನುಡಿ)

ಆಚಾರ ರಹಿತ ಭಕ್ತ, ಅನಾಚಾರರಹಿತ ನರ
ಆಚಾರವೇ ಸ್ವರ್ಗ, ಅನಾಚಾರವೇ ನರಕ,

"ಆಚಾರವೇ ಧರ್ಮ, ಆಚಾರವೇ ದೇವ, ಆಚಾರವೇ ಅಲಂಕಾರ, ಆಚಾರವೇ ಓಂಕಾರ, ಆಚಾರವೇ ಪ್ರಾಣ, ಆಚಾರವೇ ತ್ರಾಣ, ಆಚಾರವೇ ಪ್ರಕಾಶ, ಆಚಾರವೇ ವಿಕಾಸ, ಆಚಾರವಿಲ್ಲದವ ಮಾನವ ಅವನೊಬ್ಬ ದಾನವ" ಪಂಚಾಚಾರಗಳು ನೀತಿ ಪ್ರಧಾನವಾಗಿ ಮಾನವನ ಪ್ರಾಣದಂತೆ ಇರುವವು.

ಈ ಆಚಾರಗಳಿಂದಲೇ ಆಧಾರ ಶುದ್ಧಿ. ಕಾಯ ವಾಚ ಮನ ಪ್ರಾಣ ಜೀವ ಬುದ್ಧಿ ಚಿತ್ತ ಅಹಂಕಾರ ಮಮಕಾರಗಳು ಶುದ್ಧಿಯಾಗಿ ಬಿಡುವವು. ಅದಕ್ಕೆ ಪಂಚಾರರಗಳು ಒಳ್ಳೇ ಮಹತ್ವ ಧರ್ಮದ ಮಹಾಮಂದಿರವು ಸ್ಥಿರವಾಗಿ ಶಾಶ್ವತವಾಗಿ ನಿಂತು ಬಾಳಬೇಕಾದರೆ ಈ ಪಂಚಾಚಾರಗಳು ಅತಿ ಅವಶ್ಯವಾಗಿರುವವು. ದೇಶದ ಉನ್ನತಿಗೆ ಸುಸ್ಥಿರದ ಬಾಳಿಕೆಗೆ ಪಂಚಶೀಲಗಳನ್ನು ಜವಾಹರಲಾಲರು ಹೇಳಿ ಪ್ರಚಾರ ಮಾಡುತ್ತಿರುವರು. ರಾಷ್ಟ್ರಕ್ಕೆ ಪಂಚಶೀಲಗಳು ಆವಶ್ಯವಿದ್ದಂತೆ ಧರ್ಮಕ್ಕೆ ಪಂಚಾಚಾರಗಳು ಅತಿಅವಶ್ಯವಿರುವವು. ಅದಕ್ಕಾಗಿ ಈ ಪರಿಪೂರ್ಣಯೋಗದ ಕಕ್ಷದಲ್ಲಿ ಈ ಪಂಚಾರಗಳನ್ನು ಮೊಟ್ಟಮೊದಲಿಗೆ ಹಾಕಲಾಗಿದೆ. ಈ ಪಂಚಾಚಾರಗಳೇ ಸಕಲ ವೇದಾಂತಿಗಳ ಪ್ರತ್ಯ ನಿಗುನು ಉಪವಾಸ, ದೇಹದಂಡನೆಗಳಾಗಿವೆ. ಉಪವಾಸದಿಂದ ದೇಹದಂಡಿಸುವದಕ್ಕಿಂತ ಜನಸೇವೆಯಲ್ಲಿ ದೇಹದಂಡಿಸುವದೇ ಒಳ್ಳೇದೆಂದು ಈ ಪರಿಪೂರ್ಣಯೋಗದ ಶಿವಶರಣರು ಕಂಡುಕೊಂಡು ಈ ಪಂಚಾಚಾರಗಳನ್ನು ಧಾರ್ಮಿಕವಾಗಿ ಹೇಳಿದ್ದಾರೆ. ಸ್ಥೂಲಶರೀರ ಸೂಕ್ಷ್ಮಶರೀರ ಕಾರಣಶರೀರಗಳು ಈ ಮಾನವನಲ್ಲಿ ಇರುವವು, ಸ್ಥೂಲಶರೀರವು ಅಷ್ಟಾವರಣಗಳಿಂದ ಶುದ್ಧಿಯಾಗುವದು. ಸೂಕ್ಷ್ಮಶರೀರವು ಪಂಚಾಚಾರಗಳಿಂದ ಶುದ್ಧಿಯಾಗುವದು. ಅದರಂತೆ ಕಾರಣಶರೀರವು ಷಟ್‌ಸ್ಥಲಗಳಿಂದ ಶುದ್ಧಿಯಾಗಿ ಮುಂದೆ ಮಹಾಕಾರಣದಲ್ಲಿ ಇವೆಲ್ಲ ಒಂದಾಗಿ ಹೊಂದಿಕೊಂಡುಬಿಡುವವು ಅದಕ್ಕಂತೇ ಸ್ಥೂಲಕ್ಕೆ ಇಷ್ಟಲಿಂಗ, ಸೂಕ್ಷ್ಮಕ್ಕೆ ಪ್ರಾಣಲಿಂಗ, ಕಾರಣಕ್ಕೆ ಭಾವಲಿಂಗ

ಗಳನ್ನು ಸಹ ಈ ಪರಿಪೂರ್ಣಯೋಗದಲ್ಲಿ ಕಲ್ಪಿಸಿದ್ದಾರೆ ಈ ಪಂಚಾಚಾರಗಳಿಂದ ಶರೀರದಲ್ಲಿಯ ಪಂಚಭೂತಗಳು ಪಂಚವಿಂಶತಿ ತತ್ವಗಳು ಶುದ್ಧಿಯಾಗುತ್ತವೆ.

(೧) ಲಿಂಗಾಚಾರ – ಇದು ಅಷ್ಟಾವರಣದಲ್ಲಿಯೂ ಬಂದಿದೆ. ಗುರು, ಲಿಂಗಕೊಟ್ಟು ಮಂತ್ರ ಹೇಳಿ ಉಪದೇಶಿಸುವನು. ಅದನ್ನು ಸಾಧಕನು ನಿತ್ಯ ಈ ಸಾಧನದಿಂದ ಅದೆಲ್ಲವನ್ನೂ ತನ್ನಲ್ಲಿ ಅಳವಡಿಸಿಕೊಳ್ಳುವದೇ ಲಿಂಗಾಚಾರ. ಲಿಂಗ ತತ್ವವನ್ನು ಅರಿತು ಅನುಭವಗೊಂಡು ಅದನ್ನು ಚನ್ನಾಗಿ ಪೂಜಿಸಿ ಅದರಲ್ಲಿ ಸಮರಸವಾಗುವದೇ ಲಿಂಗಾಚಾರ ಲಿಂಗವಲ್ಲದೆ ಅನ್ಯವನರಿಯದಿ ಹುದೇ ಲಿಂಗಾಚಾರ. ಲಿಂಗಚಾರ ಲಿಂಗಭೋಗೋಪಭೋಗಿಯಾಗುವದೇ ಲಿಂಗಾಚಾರದ ತುಟ್ಟ ತುದಿಯ ಗುರಿಯಾಗಿದೆ. ಇದನ್ನು ಮೇಲೆ ಪ್ರಸಾದದಲ್ಲಿ ಹೇಳಲಾಗಿದೆ. ಹಾಗೆ ಆದರೆ ಮಾತ್ರ ಲಿಂಗ ಭೋಗೋಪಭೋಗ ತಾನು ಭೋಗಿಸುವ ಎಲ್ಲ ವಿಷಯಗಳನ್ನು ಮೊದಲು ಲಿಂಗಕ್ಕೆ ಎಡೆ ಮಾಡಿ ನಿವೇದಿಸಿ ಕೈಮಾಡಿ ಸಮರ್ಪಣ ಎಂದು ಬಾಯಿಯಿಂದ ಹೇಳಿ ತಾನು ಭೋಗಿಸಿದರೆ ಲಿಂಗಭೋಗೋಪಭೋಗಿಯಲ್ಲಿ ಇದು ಮೊದಲಿನ ಮೆಟ್ಟಲಿನಲ್ಲಿ ಬಾಲಕರು ಮಾಡುವ ರೀತಿ ಯಾಗುವದು. ಅದನ್ನು ಮೇಲೆ ನೋಡಿರಿ. ಇದರಿಂದ ಜೀವ ಶುದ್ಧವಾಗುವದು. ಇಲ್ಲಿ ಅಂಗವೆಂದರೆ ಜೀವವೆಂದು ತಿಳಿಯಬೇಕು. ಅಂಗವೆಂದರೆ ಶರೀರವೆಂದೂ ಸಹ ಅರ್ಥವಿರುವದು.

(೨) ಸದಾಚಾರ— ಸತ್+ಆಚಾರ ಸದಾಚಾರ, ಸತ್ ಪರಮಾತ್ಮನಂತೆ ಆಚಾರವಾದರೆ ಅದೇ ಸದಾಚಾರ. ಒಳ್ಳೇ ನಡೆ ಒಳ್ಳೇ ನುಡಿಗಳಿದ್ದರೆ ಸದಾಚಾರ. ಸಜ್ಜನ ಸದ್ಭಕ್ತರು ಶರಣರು ಮಹಾತ್ಮರು ಒಪ್ಪುವಂತೆ ಆಚಾರ ವಿಚಾರ ನಡೆ ನುಡಿಗಳಿರಬೇಕು. ಅದರಂತೆ ಕಾಯಕವೂ ಸದಾಚಾರದಿಂದ ಕೂಡಿ ಸತ್ಯವಾದದ್ದೇ ಇರಬೇಕು. ಸಜ್ಜನ ಕಾಯಕದಲ್ಲಿ ನಿರತನಾಗಿ ತಂದು ಗುರುಲಿಂಗ ಜಂಗಮಕ್ಕೆ ಮಾಡಿ ನೀಡಿ ನಿತ್ಯನಾಗಿರುವದೇ ಸದಾಚಾರ. ಇಲ್ಲಿ ಶೀಲಸಂಪನ್ನನಾಗಿ ಆಚರಿಸುವದೇ ಇದಾಗಿದೆ. "ಸಭ್ಯಾಚಾರಕ್ಕೆ ಸಕಳೇಶ್ವರ ದೇವರಿಂದ ಬಿಟ್ಟು ದೈವವಿಲ್ಲ.'' "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರು ಒಂದೇ ಎಂದು ಕೊಟ್ಟುಕೊಂಬುದು ಸದಾಚಾರ ಉಳಿದುದೆಲ್ಲ ಅನಾಚಾರ ಹೀಗೆ ಸದಾಚಾರಸಂಪನ್ನರಾಗಬೇಕು. ಸದಾಚಾರಗಳು ಸರ್ವವಿಚಾರಗಳಿಂದ ಮನಶುದ್ಧಿಯಾಗುವದು ತನುಶುದ್ಧಿಯಾಗುವದು.

(೩) ಶಿವಾಚಾರ— ಇದರಿಂದ ಇಡೀ ಭಕ್ತ ಸಮೂಹ ಅಥವಾ ಪರಿಪೂರ್ಣಯೋಗಿಗಳ ತಂಡದಲ್ಲಿ ಅಪೂರ್ವವಾದ ಸಂಘಟನೆ ಸಹಕಾರ ಪ್ರೀತಿ ನೆಲೆಗೊಳ್ಳುವದು. ಜಾತಿ ವರ್ಣ ಕುಲ ಲಿಂಗ, ವಯ್ಯ, ಆಶ್ರಮಗಳ ಭೇದ ಮಾಡದೆ ಎಲ್ಲರೂ ಒಂದೇ ಎಲ್ಲರೂ ನನ್ನವರೇ ಎಲ್ಲರೂ ತನ್ನ ಬಂಧುಗಳೇ ಎಂಬ ಉಚ್ಚಭಾವನೆ ಬಂದು ಅದರಂತೆ ವರ್ತಿಸಹತ್ತುವನು. ಈ ಶಿವಾಚಾರಿಗಳ ನಡೆನುಡಿ ಆಗುಹೋಗು ಸಂಸ್ಕೃತಿ ಎಲ್ಲವೂ ಒಂದೇ ಇರುವದು. ಶಿವಾಚಾರದಿಂದ ವೈಯಕ್ತಿಕ ಸುಧಾರಣೆಯಾಗುವದು. ಶಿವಾಚಾರದಿಂದ ಸಮಾಜ ಸುಧಾರಣೆಯಾಗುವದು. ಸಮಾಜದಲ್ಲಿ ಸದಾಚಾರ ಬೆಳೆದು ಶಾಂತಿ ನೆಲೆಗೊಳ್ಳುವದು. ಇದೇ ಶಿವಾಚಾರ. ಇದು ಪರಿಪೂರ್ಣಯೋಗದ ಉಸುರು ಆಗಿದೆ ಎಂದು ಹೇಳಬಹುದು. ಶಿವಾಚಾರದಲ್ಲಿರುವವರು ಸದಾ ಸಮಧರ್ಮಿಗಳು, ಸಮಸುಖಿಗಳು. ಸಮಜೀವಿಗಳು ಹೀಗಾಗಿ ಇದರಿಂದ ಸಮತ್ವದಲ್ಲಿ ಯಾವ ಭೇದಗಳಿಲ್ಲದೆ ಸಮಾಜದ ಯಾವತ್ತೂ ಘಟಕಗಳೂ ನಲಿದಾಡಿ ಶಾಂತಿಯನ್ನು ಅನುಭೋಗಿಸುವರು, ಇದಕ್ಕೆ ಪರಿಪೂರ್ಣಯೋಗವೆನ್ನದೆ ಮತ್ತೇನೆನ್ನಬೇಕು. ಈ ಯೋಗವು ಬರೀ ಒಂದು ವ್ಯಕ್ತಿಯನ್ನು ಉದ್ಧರಿಸುವದಿಲ್ಲ. ಇಡೀ ಸಮಾಜ ಇಡೀ ದೇಶ ಇಡೀ ಜಗತ್ತನ್ನೇ ಸಮತೆಯಲ್ಲಿ ಶಾಂತಿಯಲ್ಲಿ ತರಬಹುದು. ಅದಕ್ಕಂತೇ ಇದು ಪರಿಪೂರ್ಣಯೋಗ. ಇದರಂತೆ ಶರಣರ ತಂಡಗಳು ಪರಿಪೂರ್ಣಯೋಗಿಗಳಾಗಿ ಬಾಳಿ ಬೆಳಗಿದರು. ಸತ್ಯ ಶುದ್ಧವಾಗಿ ಸಮದರ್ಶಿಯಾಗಿ ಸಮಸುಖಿಯಾಗಿ ಇಡೀ ಸಮಾಜವೇ ಬಾಳುವದು. ಶಿವಾಚಾರ ಇದರಿಂದ ಧನ ಎಂದರೆ ಸಕಲರ ಶರೀರಗಳೂ ತನ್ನ ಶರೀರವೂ ಶುದ್ಧವಾಗುವವು. ಶರಣರ ಪರಿಪೂರ್ಣಯೋಗದಲ್ಲಿ ಎಂಥ ಸಾಮರ್ಥ್ಯವಿದೆ ವಿಚಾರಿಸಿರಿ.

(೪) ಗಣಾಚಾರ— ಶಿವಾಚಾರಗಳ ಮೇಲೆ ಅನ್ಯಾಯ ಅತ್ಯಾಚಾರಗಳು ಅನ್ಯರಿಂದ ಆಗುವಂತಿದ್ದರೆ ಅದನ್ನು ನೋಡಿ ಈ ಪರಿಪೂರ್ಣಯೋಗಿ ಎಂದು ಸಹಿಸಿಕೊಂಡು ಸುಮ್ಮನೆ ಕೂಡ್ರುವದಿಲ್ಲ. ಹಾಗೆ ಕೂತರೆ ಅವನೂ ಅಪರಾಧಿ ಎಂದೇ ಬಗೆಯುವರು. ತನ್ನ ಶರೀರ, ಧನಗಳ ಮೇಲೆ ಮಮತೆ ಇದ್ದುದರಿಂದ ಅವುಗಳನ್ನು ನೋಡಿದರೂ ಸಹಿಸುವನೆಂದೇ ತಿಳಿಯಬೇಕು. ಈ ಪರಿಪೂರ್ಣಯೋಗಕ್ಕೆ ಕಂಟಕರಾದವರನ್ನು ಸಹ ಎದಿರಿಸದಿದ್ದರೆ ಇದರ ಕೊಲೆ ಮಾಡಿದಂತೇ ಆಗುವದು. ಕೊಲೆ, ಕಳವು ಹುಸಿ, ಹೆಮ್ಮೆ, ಶಿಸು

ಹತ್ಯ, ಹಸುಹತ್ಯ ಇವೆಲ್ಲವೂ ಪಾಪಕೃತ್ಯಗಳೇ ಸರಿ. ಇವುಗಳನ್ನು ಈ ಪರಿಪೂರ್ಣಯೋಗಿಯು ಎಂದೂ ಮಾಡನು. ಅವುಗಳನ್ನು ಮಾಡುವಂಥ ಧರ್ಮಭ್ರಷ್ಟರನ್ನೂ ಸಹ ತನ್ನ ಬಲದಿಂದ ಯೋಗ್ಯ ಶಸ್ತ್ರಾಸ್ತ್ರಗಳಿಂದ ಸಹ ಅವರನ್ನು ಎದುರಿಸುವನು. ಇದೇ ಗಣಾಚಾರತತ್ವ ವೇದಾಂತ ಸಿದ್ಧಾಂತ ಪೂರ್ಣಯೋಗದವರಂತೆ ಈ ಪರಿಪೂರ್ಣಯೋಗದವರು ಶಾಂತಂ ಪಾಪಂ ಎಂದು ಶಾಸ್ತ್ರ ಹೇಳುತ್ತ ಕೂಡ್ರುವದಿಲ್ಲ. ಅವರಿಗೆ ಹೋರಾಟಬೇಕಾಗಿಲ್ಲ. ಈ ಪರಿಪೂರ್ಣಯೋಗಿಗೆ ಹೋರಾಟಬೇಕು. ಯಾಕಂದರೆ ಜಗತ್ತು ಸತ್ಯ ಈ ಜಗದಲ್ಲಿ ಅವನು ಸ್ವರ್ಗಲೋಕವನ್ನು ಸ್ಥಾಪಿಸಲು ಹೆಣಗುವನು. ಅನ್ಯಾಯ ಮಾಡುವವನು ವ್ಯಕ್ತಿ ಇರಲಿ ಸಮಾಜವೇ ಇರಲಿ ಯಾವದಿದ್ದರೂ ಕೂಡ ಅವರನ್ನು ತನ್ನ ಬಲದಿಂದ ಎದುರಿಸಿ ನಿಲ್ಲುವನು ಇಲ್ಲವೆ ಬಲಬರುವತನಕ ಆ ಸ್ಥಾನಬಿಟ್ಟು ಕದಲುವನು. ಅಂದರೆ ಅವನು ಗಣಾಚಾರಿತತ್ವವನ್ನು ಪಾಲಿಸಿದಂತೆ ಆಗುವದು. ಇದೇ ನಿಜವಾದ ತ್ಯಾಗ, ಇದೇ ಪರಿಪೂರ್ಣಯೋಗದ ಸಾರ. ಈ ಗಣಾಚಾರಿ ಸಂಪೂರ್ಣ ನಿರ್ಭಯನು. ನಿರ್ಭಯನಾಗುವದೇ ಈ ಯೋಗದ ಗೊತ್ತುಗುರಿ. ನುಡಿದಂತೆ ವಿಚಾರಿಸಿದಂತೆ ಇದು ಮಾಡಲಿಕ್ಕೆ ಹೆಚ್ಚುವದು. ತನ್ನಂತೆ ಪರರೆಂದು ಈ ತತ್ವ ತಿಳಿಸುವದು. ಇದೇ ಈಗ ಗಣಾಚಾರ ತತ್ವದ ಪ್ರಕಾರ ಅನ್ಯಾಯ ಅಹಿಂಸೆ ಅಸತ್ಯ ಅಧರ್ಮ ಆಕ್ರಮಣ ಅತಿಕ್ರಮಣ ಪುಂಡಾಟಿಕೆ–ಬಲುವೆಗಳನ್ನು ಎದುರಿಸಿ ಅಲ್ಲಿ ನ್ಯಾಯ ಸತ್ಯ ಧರ್ಮ ಶಾಂತಿಗಳನ್ನು ನೆಲಿಸಲಿಕ್ಕೆ ಬರುವದು. ಅನ್ಯರಿಗೆ ಇವರು ಯಾವ ರೀತಿಯಿಂದ ಅನ್ಯಾಯ ಹಿಂಸೆಗಳನ್ನು ಎಂದೂ ಮಾಡರು. ಇದೇ ಈಗ ಗಣಾಚಾರ ತತ್ವದ ಸಾರ

(೫) ಭೃತ್ಯಾಚಾರ— ದುರಾಚಾರಿಗಳಾದ ಶಿವನಿಂದಕರನ್ನು ಕಂಡರೆ ಯೋಗ್ಯ ಅಸ್ತ್ರಗಳಿಂದ ಯೋಗ್ಯ ಉಪಾಯುಗಳಿಂದ ದಂಡಿಸುವ ವೀರಶರಣನು ಭಕ್ತರನ್ನು ಕಂಡರೆ ಅವರಿಗೆ ಭೃತ್ಯನಂತೆ ಭಯಭಕ್ತಿಯಿಂದ ನೆರವಾಗುವದು ಜೀವಿಗಳ ಸೇವೆ ಮಾಡುವದೇ ಇದಾಗಿದೆ ದುಷ್ಟರ ಮರ್ಧನ ಶಿಷ್ಟರ ಪರಿಪಾಲನೆಯೇ ಈ ಪರಿಪೂರ್ಣಯೋಗಿಯ ಕಾರ್ಯ. ಕಾಯಕವಾಗಿದೆ. ವೇದಾಂತಿಯಂತೆ ತಾನೇ ಹೆಚ್ಚಿನವನೆಂಬ ಹಮ್ಮಿನಿಂದ ಅನ್ಯಜೀವಿಗಳ ಕೂಡ ವರ್ತಿಸುವದಿಲ್ಲ. ಜೀವವಿದ್ದಲ್ಲೆಲ್ಲ ಶಿವನೇ ಇದ್ದಾನೆಂಬ ಉದಾತ್ತ ಭಾವದಿಂದ ಅವರ ಸೇವೆ ಮಾಡುವನು. ಅವರಿಗೆ ಆ ಕಷ್ಟ ದುಃಖ ಸಂಕಟ ತ್ರಾಸುಗಳನ್ನು ನಿವಾರಿಸಲಿಕ್ಕೆ ತನು, ಮನ, ಧನಗಳಿಂದ ಸೇವೆ ಗೈಯುವದು ಇದೇ ಈ

ಭೃತ್ಯಾಚಾರ ತತ್ವದ ಸಾರವು. ಇದರಿಂದ ಸಮಾಜ ದೇಶಕ್ಕೆ ಎಂಥ ಕಲ್ಯಾಣವಾಗುವದು ವಿಚಾರಿಸಿರಿ. ಇದರಿಂದ ನಡೆನುಡಿ ಶುದ್ಧ ಪರುಷವಾಗುವದು.

## ಸಪ್ತಾಚಾರಗಳು ಇದರಲ್ಲಿ ಬರುವವು

ಇವುಗಳಲ್ಲದೆ ಇದರಲ್ಲಿಕ್ರಿ ಯಾಚಾರ, ಜ್ಞಾನಾಚಾಯರ, ಭಾವಾಚಾರ, ಸಿತ್ಯಾಚಾರ, ಧರ್ಮಾಚಾರ, ಸರ್ವಾಚಾರ ಎಂದು ಸಪ್ತಾಚಾರಗಳು ಸಹ ಇರುವವು. ಇದಕ್ಕೆ ಬೇರೆ ಬೇರೆಯುವರು ತಮಗೆ ಬೇಕಾದ ೧ಳ ಅರ್ಥವನ್ನು ಮಾಡುವರು. ನಾವು ಅವುಗಳ ಶಬ್ದಗಳಿದ್ದಂತೆ ಅರ್ಥಮಾಡುವೆವು.

(೧) ಕ್ರಿಯಾಚಾರ:— ಕ್ರಿಯಾಶುದ್ಧಿ. ಶುದ್ದ ಸತ್ಯ ಕಾಯಕ, ಪರ ಸೇವೆ, ಸತ್ಕರ್ಮಾಚರಣೆ, ನಿಷ್ಕಾಮ ಕರ್ಮಯೋಗವೆಂದು ಇದಕ್ಕೆ ಹೇಳ ಬಹುದು ಆದರೆ ಕ್ರಿಯಾಸ್ಥರು ಎಂದರೆ ಮಡಿಯಿಂದ ಮಾಡಿದ ಅನ್ನವನ್ನು ಎಲ್ಲಿಯೂ ಚಲ್ಲದಂತೆ ಅನ್ಯರು ನೋಡದಂತೆ ಉಂಡು ತಾಟು ತೊಳೆದು ಆ ನೀರನ್ನೂ ಸಹ ಕುಡಿಯುವದೆಂದು ಕೆಲವರು ಹೇಳುವರು. ಇವರೇ ಪ್ರಸಾದಿಗಳು ಅಥವಾ ಕ್ರಿಯಾಚಾರ ಸಂಪನ್ನರೆಂದು ಅನ್ನುವರು. ಇದರ ಅರ್ಥ ಇದಲ್ಲ. ಶುದ್ಧ ಸತ್ಯ ಕಾಯಕವೇ ಇದಾಗಿದೆ. ಈ ಕಾಯಕದಿಂದ ಪರರಿಗೆ ಕಲ್ಯಾಣವಾಗಬೇಕು ತನಗೂ ಐಹಿಕ ಕಲ್ಯಾಣ ಆಗಲಿ ಬಿಡಲಿ ಅದನ್ನು ಲೆಕ್ಕಿಸದೆ ಪರರ ಕಲ್ಯಾಣವೇ ತನ್ನ ಗುರಿಯಾಗಬೇಕು ಅಲ್ಲದೆ ತನ್ನ ಉದರ ಪೋಷಣಕ್ಕೂ ಸತ್ಯ ಶುದ್ಧ ಕಾಯಕ ಮಾಡಬೇಕು. ಇದೇ ಕ್ರಿಯಾಚಾರವಾಗಿದೆ.

(೨) ಜ್ಞಾನಾಚಾರಃ— ಶಿವಾನುಭವ ಪಡೆಯುವದೇ ಇದಾಗಿದೆ. ಸಮ್ಯಕ್‌ಜ್ಞಾನ ಸಂಪನ್ನನಾಗಿ ಆಚರಿಸುವದು ನುಡಿದಂತೆ ನಡೆಯುವದೇ ಜ್ಞಾನಾಚಾರ ವಿಚಾರದಂತೆ ಬಾಳುವದೇ ಜ್ಞಾನಾಚಾರ ಕ್ರಿಯಾ ಜ್ಞಾನಗಳಲ್ಲಿ ತಾಳ ಮೇಳ ಇರಬೇಕೆಂದು ಇವು ಹೇಳುವವು. ಜ್ಞಾನ+ಆಚಾರ ಎಂದು ಇರುವವು.

(೩) ಭಾವಾಚಾರ:— ಮೇಲಿನ ಉಭಯಾಚಾರಗಳಿಂದ ಜೀವಭಾವ ನಷ್ಟವಾಗಿ ಲಿಂಗಭಾವ ವ್ಯೈದೋರುವದು.

(೪) ಸತ್ಯಾಚಾರಃ— ವ್ಯವಹಾರದಲ್ಲಿ ರಾಜಕಾರಣದಲ್ಲಿ ಧರ್ಮದಲ್ಲಿ ಪರಮಾರ್ಥದಲ್ಲಿ, ಇಹದಲ್ಲಿಯು ತನ್ನ ಆಚಾರಗಳೆಲ್ಲ ಸತ್ಯವಾಗಿ ಮಾಡಿಕೊಳ್ಳು

ಹತ್ಯೆ, ಹಸುಹತ್ಯೆ ಇವೆಲ್ಲವೂ ಪಾಪಕೃತ್ಯಗಳೇ ಸರಿ. ಇವುಗಳನ್ನು ಈ ಪರಿಪೂರ್ಣಯೋಗಿಯು ಎಂದೂ ಮಾಡನು. ಅವುಗಳನ್ನು ಮಾಡುವಂಥ ಧರ್ಮಭ್ರಷ್ಟರನ್ನೂ ಸಹ ತನ್ನ ಬಲದಿಂದ ಯೋಗ್ಯ ಶಸ್ತ್ರಾಸ್ತ್ರಗಳಿಂದ ಸಹ ಅವರನ್ನು ಎದುರಿಸುವನು. ಇದೇ ಗಣಾಚಾರತತ್ವ ವೇದಾಂತ ಸಿದ್ಧಾಂತ ಪೂರ್ಣಯೋಗದವರಂತೆ ಈ ಪರಿಪೂರ್ಣಯೋಗದವರು ಶಾಂತಂ ಪಾಪಂ ಎಂದು ಶಾಸ್ತ್ರ ಹೇಳುತ್ತ ಕೂಡ್ರುವದಿಲ್ಲ. ಅವರಿಗೆ ಹೋರಾಟಬೇಕಾಗಿಲ್ಲ. ಈ ಪರಿಪೂರ್ಣಯೋಗಿಗೆ ಹೋರಾಟಬೇಕು. ಯಾಕಂದರೆ ಜಗತ್ತು ಸತ್ಯ ಈ ಜಗದಲ್ಲಿ ಅವನು ಸ್ವರ್ಗಲೋಕವನ್ನು ಸ್ಥಾಪಿಸಲು ಹೆಣಗುವನು. ಅನ್ಯಾಯ ಮಾಡುವವನು ವ್ಯಕ್ತಿ ಇರಲಿ ಸಮಾಜವೇ ಇರಲಿ ಯಾವದಿದ್ದರೂ ಕೂಡ ಅವರನ್ನು ತನ್ನ ಬಲದಿಂದ ಎದುರಿಸಿ ನಿಲ್ಲುವನು ಇಲ್ಲವೆ ಬಲಬರುವತನಕ ಆ ಸ್ಥಾನಬಿಟ್ಟು ಕದಲುವನು. ಅಂದರೆ ಅವನು ಗಣಾಚಾರಿತತ್ವವನ್ನು ಪಾಲಿಸಿದಂತೆ ಆಗುವದು. ಇದೇ ನಿಜವಾದ ತ್ಯಾಗ, ಇದೇ ಪರಿಪೂರ್ಣಯೋಗದ ಸಾರ. ಈ ಗಣಾಚಾರಿ ಸಂಪೂರ್ಣ ನಿರ್ಭಯನು. ನಿರ್ಭಯನಾಗುವದೇ ಈ ಯೋಗದ ಗೊತ್ತುಗುರಿ. ನುಡಿದಂತೆ ವಿಚಾರಿಸಿದಂತೆ ಇದು ಮಾಡಲಿಕ್ಕೆ ಹಚ್ಚುವದು. ತನ್ನಂತೆ ಪರರೆಂದು ಈ ತತ್ವ ತಿಳಿಸುವದು. ಇದೇ ಈಗ ಗಣಾಚಾರ ತತ್ವದ ಪ್ರಕಾರ ಅನ್ಯಾಯ ಆಹಿಂಸೆ ಅಸತ್ಯ ಅಧರ್ಮ ಆಕ್ರಮಣ ಅತಿಕ್ರಮಣ ಪುಂಡಾಟಿಕೆ–ಬಲುಮೆಗಳನ್ನು ಎದುರಿಸಿ ಅಲ್ಲಿ ನ್ಯಾಯ ಸತ್ಯ ಧರ್ಮ ಶಾಂತಿಗಳನ್ನು ನೆಲಿಸಲಿಕ್ಕೆ ಬರುವದು. ಅನ್ಯರಿಗೆ ಇವರು ಯಾವ ರೀತಿಯಿಂದ ಅನ್ಯಾಯ ಹಿಂಸೆಗಳನ್ನು ಎಂದೂ ಮಾಡರು. ಇದೇ ಈಗ ಗಣಾಚಾರ ತತ್ವದ ಸಾರ

(೫) ಭೃತ್ಯಾಚಾರ— ದುರಾಚಾರಿಗಳಾದ ಶಿವನಿಂದಕರನ್ನು ಕಂಡರೆ ಯೋಗ್ಯ ಅಸ್ತ್ರಗಳಿಂದ ಯೋಗ್ಯ ಉಪಾಯಗಳಿಂದ ದಂಡಿಸುವ ವೀರಶರಣನು ಭಕ್ತರನ್ನು ಕಂಡರೆ ಅವರಿಗೆ ಭೃತ್ಯನಂತೆ ಭಯಭಕ್ತಿಯಿಂದ ನೆರವಾಗುವದು ಜೀವಿಗಳ ಸೇವೆ ಮಾಡುವದೇ ಇದಾಗಿದೆ ದುಷ್ಟರ ಮರ್ಧನ ಶಿಷ್ಟರ ಪರಿಪಾಲನೆಯೇ ಈ ಪರಿಪೂರ್ಣಯೋಗಿಯ ಕಾರ್ಯ. ಕಾಯಕವಾಗಿದೆ. ವೇದಾಂತಿಯಂತೆ ತಾನೇ ಹೆಚ್ಚಿನವನೆಂಬ ಹೆಮ್ಮೆಯಿಂದ ಅನ್ಯಜೀವಿಗಳ ಕೂಡ ವರ್ತಿಸುವದಿಲ್ಲ. ಜೀವವಿದ್ದಲ್ಲೆಲ್ಲ ಶಿವನೇ ಇದ್ದಾನೆಂಬ ಉದಾತ್ತ ಭಾವದಿಂದ ಅವರ ಸೇವೆ ಮಾಡುವನು. ಅವರಿಗೆ ಆ ಕಷ್ಟ ದುಃಖ ಸಂಕಟ ತ್ರಾಸುಗಳನ್ನು ನಿವಾರಿಸಲಿಕ್ಕೆ ತನು, ಮನ, ಧನಗಳಿಂದ ಸೇವೆ ಗೈಯುವದು ಇದೇ ಈ

ಭೃತ್ಯಾಚಾರ ತತ್ವದ ಸಾರವು. ಇದರಿಂದ ಸಮಾಜ ದೇಶಕ್ಕೆ ಎಂಥ ಕಲ್ಯಾಣವಾಗುವದು ವಿಚಾರಿಸಿರಿ. ಇದರಿಂದ ನಡೆನುಡಿ ಶುದ್ಧ ಪರುಷವಾಗುವದು.

## ಸಪ್ತಾಚಾರಗಳು ಇದರಲ್ಲಿ ಬರುವವು

ಇವುಗಳಲ್ಲದೆ ಇದರಲ್ಲಿಕ್ರಿ ಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ಧರ್ಮಾಚಾರ, ಸರ್ವಾಚಾರ ಎಂದು ಸಪ್ತಾಚಾರಗಳು ಸಹ ಇರುವವು. ಇದಕ್ಕೆ ಬೇರೆ ಬೇರೆಯವರು ತಮಗೆ ಬೇಕಾದ ೧ಳ ಅರ್ಥವನ್ನು ಮಾಡುವರು. ನಾವು ಅವುಗಳ ಶಬ್ದಗಳಿದ್ದಂತೆ ಅರ್ಥಮಾಡುವೆವು.

(೧) ಕ್ರಿಯಾಚಾರ:— ಕ್ರಿಯಾಶುದ್ಧಿ. ಶುದ್ದ ಸತ್ಯ ಕಾಯಕ, ಪರ ಸೇವೆ, ಸತ್ಕರ್ಮಾಚರಣೆ, ನಿಷ್ಕಾಮ ಕರ್ಮಯೋಗವೆಂದು ಇದಕ್ಕೆ ಹೇಳ ಬಹುದು ಆದರೆ ಕ್ರಿಯಾಸ್ಥರು ಎಂದರೆ ಮಡಿಯಿಂದ ಮಾಡಿದ ಅನ್ನವನ್ನು ಎಲ್ಲಿಯೂ ಚಲ್ಲದಂತೆ ಅನ್ಯರು ನೋಡದಂತೆ ಉಂಡು ತಾಟು ತೊಳೆದು ಆ ನೀರನ್ನೂ ಸಹ ಕುಡಿಯುವದೆಂದು ಕೆಲವರು ಹೇಳುವರು. ಇವರೇ ಪ್ರಸಾದಿಗಳು ಅಥವಾ ಕ್ರಿಯಾಚಾರ ಸಂಪನ್ನರೆಂದು ಅನ್ನುವರು. ಇದರ ಅರ್ಥ ಇದಲ್ಲ. ಶುದ್ಧ ಸತ್ಯ ಕಾಯಕವೇ ಇದಾಗಿದೆ. ಈ ಕಾಯಕದಿಂದ ಪರರಿಗೆ ಕಲ್ಯಾಣವಾಗಬೇಕು ತನಗೂ ಐಹಿಕ ಕಲ್ಯಾಣ ಆಗಲಿ ಬಿಡಲಿ ಅದನ್ನು ಲೆಕ್ಕಿಸದೆ ಪರರ ಕಲ್ಯಾಣವೇ ತನ್ನ ಗುರಿಯಾಗಬೇಕು ಅಲ್ಲದೆ ತನ್ನ ಉದರ ಪೋಷಣಕ್ಕೂ ಸತ್ಯ ಶುದ್ಧ ಕಾಯಕ ಮಾಡಬೇಕು. ಇದೇ ಕ್ರಿಯಾಚಾರವಾಗಿದೆ.

(೨) ಜ್ಞಾನಾಚಾರಃ— ಶಿವಾನುಭವ ಪಡೆಯುವದೇ ಇದಾಗಿದೆ. ಸಮ್ಯಕ್‌ಜ್ಞಾನ ಸಂಪನ್ನನಾಗಿ ಆಚರಿಸುವದು ನುಡಿದಂತೆ ನಡೆಯುವದೇ ಜ್ಞಾನಾಚಾರ ವಿಚಾರದಂತೆ ಬಾಳುವದೇ ಜ್ಞಾನಾಚಾರ ಕ್ರಿಯಾ ಜ್ಞಾನಗಳಲ್ಲಿ ತಾಳ ಮೇಳ ಇರಬೇಕೆಂದು ಇವು ಹೇಳುವವು. ಜ್ಞಾನ+ಆಚಾರ ಎಂದು ಇರುವವು.

(೩) ಭಾವಾಚಾರ:— ಮೇಲಿನ ಉಭಯಾಚಾರಗಳಿಂದ ಜೀವಭಾವ ನಷ್ಟವಾಗಿ ಲಿಂಗಭಾವ ವ್ಯೆದೋರುವದು.

(೪) ಸತ್ಯಾಚಾರಃ— ವ್ಯವಹಾರದಲ್ಲಿ ರಾಜಕಾರಣದಲ್ಲಿ ಧರ್ಮದಲ್ಲಿ ಪರಮಾರ್ಥದಲ್ಲಿ, ಇಹದಲ್ಲಿಯು ತನ್ನ ಆಚಾರಗಳೆಲ್ಲ ಸತ್ಯವಾಗಿ ಮಾಡಿಕೊಳ್ಳು

ವದೇ ಇದಾಗಿದೆ. ಸತ್ ಸ್ವರೂಪನಾದ ಪರಮಾತ್ಮನ ಸಂಬಂಧದ ಆಚಾರ ಉಳ್ಳವನಾಗಿರುವದು.

(೫) ನಿತ್ಯಾಚಾರ:— ಕಾಲ ಕಾಮಗಳ ಬಾಧೆಗೊಳಗಾಗದೆ ಯಾವಾಗಲೂ ತ್ರಿಕಾಲದಲ್ಲಿ ಸಹ ನಿತ್ಯವಾದ ಸತ್ಯವಾದ ಆಚಾರಗಳಿಂದ ನಡೆಯುವದು.

(೬) ಧರ್ಮಾಚಾರ;— ಧರ್ಮವನ್ನು ಆಚಾರದಂತೆ ಆಚರಿಸುವದು. ಅವೇ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳ ಪ್ರಕಾರ ತಪ್ಪದೆ ಆಚರಿಸುವದೇ ಧರ್ಮಾಚಾರ.

(೭) ಇಹ ಪರಂಗಳ ಮೀರಿ ಪಿಂಡದಿಂದ ಜ್ಞಾನ ಶೂನ್ಯದ ವರೆಗಿನ ಏಕೋತ್ತರ ಶತಸ್ಥಲ ಮಾರ್ಗದಲ್ಲಿ ನಿಂದು ಬಯಲೊಳಗೆ ಬಚ್ಚ ಬರಿಯ ನಿರವಯವ ಸಾಧಿಸುವದೇ ಸರ್ವಾಚಾರ ಸಂಪತ್ತಿನಾಚಾರ ಇದು ಮುಂದೆ ಬರುವದು.

ಈ ಪ್ರಕಾರ ಇವುಗಳೂ ಕೂಡ ಕ್ರಿಯಾ ಪ್ರಧಾನವಾಗಿವೆ. ಜ್ಞಾನ ಕ್ರಿಯೆ ಭಕ್ತಿಯನ್ನು ಒಟ್ಟು ಗೂಡಿಸಿದಂತೆ ಈ ಆಚಾರಗಳಿರುವವು.

ಕ್ರಿಯಾಚಾರದಿಂದ ಕರ್ಮೇಂದ್ರಿಯಗಳು ಪವಿತ್ರವಾದವಯ್ಯಾ
ಜ್ಞಾನಾಚಾರದಿಂದ ಜ್ಞಾನೇಂದ್ರಿಯಗಳು ಪಾವನವಾದವಯ್ಯಾ
ಭಾವಾಚಾರದಿಂದ ಕರಣಂಗಳು ನಿಜಸ್ವರೂಪವಾಗುವದಯ್ಯಾ
ಸತ್ಯಾಚಾರದಿಂದ ವಿಷಯಂಗಳು ಲಿಂಗ ಮುಖವಾದವಯ್ಯಾ
ನಿತ್ಯಾಚಾರದಿಂದ ವಾಯುಗಳು ಮಹಾ ಪ್ರಸಾದವಾಗುವದಯ್ಯಾ
ಧರ್ಮಾಚಾರದಿಂದ ಲಿಂಗಾಂಗಗಳು ಏಕವಾಗುವದಯ್ಯಾ
ಸರ್ವಾಚಾರದಿಂದ ಸರ್ವಾಂಗ ಜ್ಞಾನ ಜ್ಯೋತಿಯಪ್ಪುದನೋಡಾ

ಈ ಸಪ್ತಾಚಾರ ಪಂಚಾಚಾರಗಳಿಂದ ಆಧಾರಶುದ್ಧಿ ಬಹು ಚನ್ನಾಗಿ ಆಗುತ್ತದೆ. ಎಲ್ಲಿಯೂ ಒಂದು ಎಳ್ಳುಕಾಳಿನಷ್ಟು ಸಹ ಅಶುದ್ಧ ಉಳಿಯುವದಿಲ್ಲ. ಇದರಿಂದ ಈ ದೇಹವು ದೇವಮಂದಿರವಾಗುವದರಲ್ಲಿ ಯಾವ ಸಂದೇಹವೇ ಇಲ್ಲ. ಆಗ ತನ್ನಲ್ಲಿಯು ದೇವನು ಹೆಚ್ಚಾಗಿ ಪ್ರಕಟವಾಗುವನು. ಉಳಿದವರ ಪೂರ್ಣಯೋಗದವರಂತೆ ಮೇಲಿನಿಂದ ಭಾಗವತ ಶಕ್ತಿಯು ಇಳಿದು ಬರುವದಿಲ್ಲ. ಶಕ್ತಿ ಹೀನರು ನಮ್ಮೊಳಗೆ ಇದ್ದಾರೆ. ಅವರು ಈ ಅಶುದ್ಧ ಆಸಿದ್ಧ ಶರೀರ ಮನ ಬುದ್ಧಿ ಜೀವ, ಪ್ರಾಣಗಳಲ್ಲಿ ಎಂದೂ ಮೇಲಿನಿಂದ ಇಳಿದು ಬಂದು ಪ್ರಕಟವಾಗುವದಿಲ್ಲ. ಈ ಸಂಪೂರ್ಣ ಸ್ಥೂಲ ಸೂಕ್ಷ್ಮ ಕಾರಣ

# ಶಿವಾನುಭವ ಚಂದಾದಾರರಲ್ಲಿ ವಿನಂತಿ.

ಮಹನೀಯರೇ,

ತಾವು ಎಂದಿನಿಂದಲೂ ಶಿವಾನುಭವ ಪತ್ರಿಕೆಯ ಪೋಷಕರಾಗಿ ಇಂದಿಗೂ ಅದನ್ನು ಮುಂದುವರಿಯುವಂತೆ ಮಾಡಿರುವಿರಿ. ಇದರ ಶ್ರೇಯಸ್ಸು ತಮ್ಮನ್ನೇ ಕೂಡಿದೆ. ಮಹಾನುಭಾವಿಗಳಾದ ತಮಗೆ ಇನ್ನೊಂದು ಸೂಚನೆ ಕೊಡುವ ದೇನೆಂದರೆ, ಶಿವಾನುಭವದಿಂದ ಹೊರಟ ವಚನವಾಙ್ಮಯ ಜ್ಯೋತಿಯ ಸದು ಪಯೋಗ ಮಾಡಿಕೊಂಡ ತಾವು ಇನ್ನಿತರರಿಗೂ ಆ ಪ್ರಕಾಶವನ್ನು ತೋರಿಸಿ, ಆ ಪ್ರಕಾಶದಲ್ಲಿ ಜೀವನ ಮಾರ್ಗವನ್ನು ತೋರಿ, ಜ್ಯೋತಿಯನ್ನು ನಂದಗೊಡದೆ ನಂದಾದೀಪವನ್ನಾಗಿ ಮಾಡುವಿರೆಂದು ನನ್ನ ಬಲವಾದ ನಂಬಿಕೆ ಇದೆ. ಆದರೂ ಪ್ರೋತ್ಸಾಹನೆ ಕೊಡುವದು ಅಗತ್ಯ ಕಾರಣ ನನ್ನ ಚಂದಾ ದಾರರಾಗಲಿ ಇಲ್ಲವೆ ಇನ್ನಿತರರಾಗಲಿ ಐದು ಜನ ಚಂದಾದಾರರನ್ನಾಗಿ ಮಾಡಿ ದಲ್ಲಿ ಅವರಿಗೆ ಒಂದು ವರ್ಷದ ವರೆಗೆ ಶಿವಾನುಭವ ಸಂಚಿಕೆ ಚಂದಾ ಹಣ ವಿಲ್ಲದೆ ಕಳಿಸುವದರಲ್ಲಿ ಬರುವದು. ಹಾಗೂ ಮೂವರನ್ನು ಚಂದಾದಾರರ ನ್ನಾಗಿ ಮಾಡಿದಲ್ಲಿ ಆರು ತಿಂಗಳವರೆಗೆ ಅವರಿಗೆ ಸಂಚಿಕೆ ಕಳಿಸಲಾಗುವದು. ಈತರದ ತೈಲದಿಂದಾದರೂ ಜ್ಯೋತಿ ಬೆಳಗಲಿ! ಕನ್ನಡನಾಡಿನ ಮನೆ ಮನೆ ಯಲ್ಲೂ ಬೆಳಗಿ ಕನ್ನಡಿಗರ ಕಣ್ಮಣಿಯಾಗಲಿ !! ಕನ್ನಡಮ್ಮನ ಮಣಿಮುಕು ಟವನ್ನು ಬೆಳಗಿಸಲಿ !!!

ಮ್ಯಾನೇಜರ
ಶಿವಾನುಭವ ಆಫೀಸ,
ವಿಜಾಪುರ.

ವಿಜಾಪುರ
ತಾ|| ೧೫-೪-೬೦

From
*Shivanubhava*
*Office*
**BIJAPUR**

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
ಮು— ಬನ್ನಟ್ಟಿ
ತಾ— ಜಮಖಂಡಿ

**R. B. N. 2554**



ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. [illegible]
[illegible] ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. [illegible]
[illegible] ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ [illegible]
ಅಚ್ಚಿಸಿ ಪ್ರಸಿದ್ಧಿಸಿದರು.



ಸಂಚಿಕೆ ೫. ೬ ಸಂಪುಟ ೩೪

# ಶಿವಾನುಭವ



ಸಂಪಾದಕರು
ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಮೇ, ಜೂನ ೧೯೬೦.

# — ವಿಷಯಾನುಕ್ರಮಣಿಕೆ —


೧. ಪುಣ್ಯಸ್ಮರಣೆ ೧೭೭

— ಶ್ರೀಯುತ ಮ. ಮಲ್ಲಪ್ಪ ಜ್ಞಾನಮಂದಿರ- ಹಲಗೂರು.

೨. ನವರತ್ನ ಮಾಲೆ [ಪದ್ಯ].... ೧೮೩

— ಕವಿವರ್ಯ ಶ್ರೀ ಸಿಂದಗಿ ರಾಮಕೃಷ್ಣರು, ವಿಜಾಪುರ.

೩. ಶ್ರೀಯುತ ಹಳಕಟ್ಟಿಯವರು [ಪದ್ಯ] ೧೮೬

— ವೇ. ವಿರುಪಾಕ್ಷಯ್ಯಾ ನಾಗಯ್ಯಾ ಹಿರೇಮಠ, ರಾಮಪೂರ

೪. ಜೀವನ ಜೋಕಾಲಿ [ಪದ್ಯ] .... ೧೮೮

— ವೇ. ವಿರುಪಾಕ್ಷಯ್ಯಾ ನಾಗಯ್ಯಾ ಹಿರೇಮಠ, ರಾಮಪೂರ

೫. ವೀರಶೈವರಲ್ಲಿ ಮತಭೇದಗಳಿಲ್ಲ ೧೯೦

— ವೇ. ವಿರುಪಾಕ್ಷಯ್ಯಾ ನಾಗಯ್ಯಾ ಹಿರೇಮಠ, ರಾಮಪೂರ

೬. ಯಜ್ಞದ ಆರೋಹಣ ... .... ೧೯೩

— ಶ್ರೀ ಶಿವಕುಮಾರ ತುಂಗಳ.

೭. ಶ್ರೀ ಜಗಜ್ಯೋತಿ ಬಸವೇಶ್ವರನ ನೆನಹು .... ೨೦೦

— ಶ್ರೀ ನಾ. ಮ. ಬಸವರಾಜ ನಾಗರಹಾಳ.

೮. ಆಸ್ತಿಕ್ಯ ಭಾವ ೨೦೧

— ಶ್ರೀ ನಾ. ಮ. ಪಂ. ದೊಡ್ಡಯ್ಯ ಶಾಸ್ತ್ರಿಗಳು, ನಾಗರಹಾಳು.

೯. ಲಿಂಗಮಹಾತ್ಮ್ಯೆ ೨೦೫

— ಶ್ರೀ ರೇವಣಶಿದ್ಧಪ್ಪ ಶೀಲವಂತ, ಹುನಗುಂದ.

೧೦. ದೇವರ ದಾಸಿಮಾರ್ಯರ ಕಥೆ ೨೧೨

— ಸಂಪಾದಕರಿಂದ.

೧೧. ಶಿವಾನುಭವ .... ೨೧೫

— ಶ್ರೀ ನಾ. ಮ. ಬಸವರಾಜ ನಾಗರಹಾಳು.

೧೨. ಶಿವಶರಣರದೇ ಪರಿಪೂರ್ಣ ಯೋಗ. .... ೩೩-೫೬

— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.


—:೦:—



# ಪುಣ್ಯಸ್ಮರಣೆ.

( ಲೇಖಕರು:— ಮ. ಮಲ್ಲಪ್ಪ ಜ್ಞಾನಮಂದಿರ- ಹಲಗೂರು. )

---

ಜಗತ್ತಿನಲ್ಲಿ ಜನ್ಮವೆತ್ತಿದ ಸಕಲ ಮನುಷ್ಯರೂ, ಪಶುಪಕ್ಷಿ ಮೃಗಾದಿ ಸರ್ವ ಜೀವ ಕೋಟಿಯೂ ತನಗೆ ಸುಖವುಂಟಾಗಬೇಕು, ದುಃಖನಿವೃತ್ತಿಯಾಗಬೇಕು ಎಂದಲ್ಲವೇ ಹಗಲಿರುವು ಬಯಸುತ್ತಿರುವುದು? ಇಂತಿದ್ದರೂ ಸುಖಸಾಧನೆಯ ಹಾದಿಯಲ್ಲಿ ಯಾವುದು ಎಂದು ಅರಿತು ಅದನ್ನು ಅನುಸರಿಸಿದ ಜ್ಞಾನಿಗಳು ಏನಾದರೂ ಇದ್ದಾರೆಯೇ?

ಪುಣ್ಯಸ್ಯ ಫಲ ಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ |
ನಪಾಪಫಲ ಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ||

ಸಕಲರೂ ತಮಗೆ ಸುಖವಾಗಬೇಕೆಂಬ ಬಯಕೆಯನ್ನು ಅಪೇಕ್ಷಿಸುವರಲ್ಲದೆ ಅದಕ್ಕೆ ತಮ್ಮ ತಯಾರಿಕೆ ಸಿದ್ಧತೆ, ಸಾಧನೆಯು ಎಷ್ಟರಮಟ್ಟಿಗೆ ನಡೆದಿದೆ ಎಂಬುದನ್ನು ಯಾರೂ ಕೂಡ ಆಲೋಚಿಸುದೇ ಇಲ್ಲ. ಕಾ

ನಿಲ್ಲದೆ ಹೊಳೆಯ ನೀರಿನಂತೆ ಸತತವೂ ಹರಿಯುತ್ತಿದೆ. ಆಯುಸ್ಯದ ಕಳೆದು ಹೋದ ಭಾಗವನ್ನು ನಿಲ್ಲಿಸುವುದಕ್ಕೆ ಕಾಲನ ಕೈಯಿಂದಲೂ ಸಾಧ್ಯವಾಗದು. ಈ ರೀತಿ ವೃಥಾ ಕಾಲವು ಕಳೆದುಹೋಗುತ್ತಿರುವುದನ್ನು ಸದುಪಯೋಗ ಪಡಿಸಿ ಕೊಳ್ಳುವುದರಲ್ಲಿ ಮನುಷ್ಯನ ಬುದ್ಧಿವಂತಿಕೆಯು ವ್ಯಕ್ತವಾಗುತ್ತದೆ. ಹರಿದು ಕಡಲಿಗೆ ಬೀಳುತ್ತಿರುವ ನದಿಯ ನೀರನ್ನು ಬೇಸಾಯಕ್ಕೆ ಬಳಸಿಕೊಳ್ಳುವುದು ನೀರಿನ ಬಳಕೆಯ ಬಗೆಯು. ಉಪಯೋಗಿಸಿಕೊಳ್ಳಲಿ, ಬಿಡಲಿ. ನೀರಿನ ಪ್ರವಾಹ ಮಾತ್ರ ತನ್ನ ಕೆಲಸವನ್ನು ತಪ್ಪದೆ ಮುಗಿಸಿಬಿಡುತ್ತದೆ. ಆಯುಷ್ಯವು ಕೂಡ ತನ್ನ ಕೆಲಸವನ್ನು ಯಾರನ್ನೂ ಲೆಕ್ಕಿಸದೆ ಮಾಡಿ ಮುಗಿಸುತ್ತದೆ. ಸರ್ವಸಾಮಾನ್ಯರ ಸಂಪತ್ತಾದ ಕಾಲದ ವಿನಿಯೋಗದಿಂದ ನಮ್ಮ ಬಾಳು ಪುಣ್ಯಪುನೀತವಾಗುವಂತೆ ಮಾಡುವುದು ನಮ್ಮ ಆದ್ಯ ಕರ್ತವ್ಯ. ಹಾಗಾದರೆ ನಾವು ಲೌಕಿಕ ಜೀವನದಲ್ಲಿ ತೊಡಗಿರುವುದು ಅಪರಾಧವೇ ಎನ್ನಬಹುದು. ಆದರೆ ಅವುಗಳೆಲ್ಲದರಲ್ಲಿಯೂ ಅಡಗಿರುವ ಪ್ರೇರಕಶಕ್ತಿ, ಕರ್ತೃತ್ವ ಚೈತನ್ಯ ಫಲಪ್ರದಾಯಕ ಪಟುತ್ವ ಇವುಗಳಿಗೆಲ್ಲ ಮೂಲಕಾರಣವು ಯಾವುದು ಎಂಬುದನ್ನು ಕುರಿತು ಆಲೋಚಿಸುವ ಅಂತರ್ನೇತ್ರವೊಂದು ಅಗತ್ಯವು. ಆ ಅಂತರ್ನೇತ್ರದ ಸಹಾಯದಿಂದ ನಮ್ಮ ಕರ್ತವ್ಯಸಾಧನೆಯತ್ತ ಮುನ್ನುಗ್ಗುವುದು ಉಚಿತವಾಗಿದೆ. ಪಾಪಪುಣ್ಯಗಳ ಭಾರವನ್ನಿಳುಹಿ ನಿರ್ಲಿಪ್ತರಾಗಿರಲು ಭಗವಂತನ ಸಮೀಪಕ್ಕೆ ಸೇರುವಂತಾಗುವುದೇ ಪುಣ್ಯಜೀವನದ ಸರ್ವಸಾರವಾಗಿರುತ್ತದೆ.

ಪುಣ್ಯಭೂಮಿಯಲ್ಲಿ ಜನಿಸಿರುವ ನಾವು ಯಥಾರ್ಥ ಕಾರ್ಯವನ್ನು ಮಾಡುವುದು ಹಿತಕರವೇ ಸರಿಯು. ನಮ್ಮ ಉನ್ನತಿಗೆ ಮುಖ್ಯಾಧಾರಭೂತಗಳಾದ ವೇದಶಾಸ್ತ್ರ ಪುರಾಣಾದಿಗಳು, ಗಂಗಾ ಗೋದಾವರಿ ಮುಂತಾದ ಪುಣ್ಯ ನದಿಗಳೂ, ಕಾಶಿ ರಾಮೇಶ್ವರ ಗೋಕರ್ಣ ತಿರುಪತಿ ಮುಂತಾದ ಪುಣ್ಯಕ್ಷೇತ್ರಗಳೂ, ತುಲಸಿ ಬಿಲ್ವ ಮೊದಲಾದ ಪವಿತ್ರ ಸಾಮಗ್ರಿಗಳೂ ನಮ್ಮ ಭೂಮಿಯಲ್ಲಿ ಮಾತ್ರ ಪೂರ್ವದಿಂದಲೂ ಇರುವುದು ಯಾರಿಗೆ ತಾನೇ ತಿಳಿಯದು? ರಾಮಾಯಣ, ಭಾರತ, ಬಸವಪುರಾಣಾದಿ ಪಠನ ಪಾರಾಯಣಗಳಿಂದ ಧರ್ಮಜಾಗೃತಿಯನ್ನು ಪಡೆದು ಜೀವಿತ ಸ್ಫೂರ್ತಿಯನ್ನು ಗಳಿಸಿ, ಮಹತ್ಕಾರ್ಯಗಳನ್ನು ಸಾಧಿಸಿದ ಮಹಾವಿಭೂತಿಗಳು ನಮ್ಮಲ್ಲಿ ಬೆಳಗಿಲ್ಲವೇ? ಪೂಜ್ಯ ಆಚಾರ್ಯರು ಗ್ರಾಮದಿಂದ ಗ್ರಾಮಕ್ಕೆ ಸುತ್ತಿ ಪ್ರಚಾರ ಮಾಡಿದ ಧರ್ಮ, ಧರ್ಮಪೀಠವು ಯಾರಿಗಾದರೂ ತಿಳಿಯದೇ ಇರುವುದೇ?

ಇದನ್ನೆಲ್ಲ ಆಲೋಚಿಸಿ, ನಮ್ಮ ಸಾಹಿತ್ಯ ಸಂಸ್ಕೃತಿ, ನಾಗರೀಕತೆ, ಗತವೈಭವ, ಪ್ರಾಚೀನರ ಹಿರಿಮೆ ಗರಿಮೆಯಾದಿಯನ್ನು ನೆನಪಿನಲ್ಲಿಟ್ಟುಕೊಂಡು ಅವುಗಳ ಪಾವಿತ್ರತೆಯನ್ನು ಪರಿಪಾಲಿಸಿಕೊಂಡು ಬರಲು ವರ್ಷಕ್ಕೊಮ್ಮೆ ಪ್ರಮಾಣ ಸ್ವೀಕಾರ ಮಾಡಿ, ಕ್ರಿಯಾ ದೀಕ್ಷಾಬದ್ಧರಾಗಿ ನಿಲ್ಲಲು ಆಚರಿಸುವ ಪುಣ್ಯ ಪರ್ವವೇ ಪುಣ್ಯಸ್ಮರಣೆ. ಈ ಪುಣ್ಯಸ್ಮರಣೆಯ ಮೂಲ ಕಾರಣಿಕರು ಅಮರ ಜೀವಿಗಳೇ ಸರಿಯು. ಕವಿಯೊಬ್ಬರು ಈ ಬಗೆಯ ಅಮರ ಜೀವಿಯನ್ನು ಇಂತು ವರ್ಣಿಸಿದ್ದಾರೆ.

ಹೂವಿನಲಿ ಮಧುವಾಗಿ ಹಕ್ಕಿಯಲಿ ಹಾಡಾಗಿ
ಮುಗುದೆಯರ ಮನಸಿನಲಿ ಮುಗುಳು ಆಗಿ
ಮಗುವಿನೆಳನಗುವಾಗಿ ಬೆಳಕು ಕಿರಣಗಳಾಗಿ
ಪವನನಲಿ ತಂಪಾಗಿ ಉಳಿದಿರುವನವನು.

ಜಗತ್ತಿನಲ್ಲಿ ಕ್ರಿಸ್ತ, ಬುದ್ಧ, ಮಹಮ್ಮದ, ಮಹಾವೀರ, ಶಂಕರ, ರಾಮಾನುಜ, ಬಸವಣ್ಣಾದಿ ಮಹಾವಿಭೂತಿಗಳು ಮನನೀಯವಾದ ಕ್ರಿಯೆ ಯನ್ನು ಮಾಡಿ ಪರೋಪಕಾರಿಗಳಾಗಿ ಕೀರ್ತಿ ಕಾಯರಾಗಿದ್ದಾರೆ. ನದಿಗಳು ತಮ್ಮಲ್ಲಿನ ಜಲವನ್ನು ತಾವೇ ಕುಡಿಯುವುದಿಲ್ಲ. ಸಸ್ಯಗಳು ತಮ್ಮಲ್ಲಿನ ಫಲಬೀಜವನ್ನು ತಾವೇ ತಿನ್ನುವುದಿಲ್ಲ. ಸಜ್ಜನರು ತಮ್ಮ ಸಿರಿಸಂಪತ್ತೆಲ್ಲ ವನ್ನೂ ಪರರ ಉಪಕಾರಕ್ಕಾಗಿಯೇ ವೀಸಲು ಮಾಡಿದರು. ಅಂತೆಯೇ ಈ ಪರೋಪಕಾರಿಗಳ ಗುಂಪಿಗೆ ಸೇರಿದವರಲ್ಲಿ ಒಬ್ಬರು ಬಸವಣ್ಣನವರು. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಕಡುಗಲಿ ಬಸವಣ್ಣನವರು ತಮ್ಮ ತನುಮನಧನವನ್ನು ಜಂಗಮರೂಪಿಯಾದ ಪರಮೇಶ್ವರನಿಗೆ ಸಮ ರ್ಪಿಸಿದರು. ಪರಿಶುದ್ಧ ಮನಸ್ಸಿನಿಂದ ದೇವಸಾನ್ನಿಧ್ಯದ ಹಾದಿಯಲ್ಲಿ ಹೆಜ್ಜೆ ಹಾಕಿದ ಅರಿತ ನುರಿತ ಹಿರಿಯರು ಈತನಿಗೆ ಬೇಕಿತ್ತು. ಚಿಂತನೆಗೆ ಅನು ಗುಣವಾದ ಫಲವನ್ನು ದೋಚಿಕೊಂಡ ಇವರು ಶರಣಸಂತತಿಯನ್ನು ಕಂಡು ಸೇವೆಗೈದರು. ಅವರ ದಿವ್ಯ ಭವ್ಯ ಸ್ಫೂರ್ತಿಯುತ ವಚನ ಪರುಷರಾಶಿ ಯನ್ನು ನೋಡಿ ಹಿರಿಹಿಗ್ಗಿ ತನ್ನ ಹೃದಯವನ್ನೇ ಮಾರುಗೊಟ್ಟರು. ಅದ್ಯರ ವಚನ ಪರುಷ ಎಂದು ಅದರ ಸವಿಯನ್ನು ಮನಗಂಡು ಆಶ್ಚರ್ಯೋನ್ಮಾದ ದಲ್ಲಿ ತೇಲಿಹೋದರು. ಆ ಶಿವನುಡಿಗಳಿಗೆ ಬೆಚ್ಚಿಬೆರಗಾದರು. ಪರಚಿಂತೆ ಗಾಗಿ ವ್ಯಥೆಪಟ್ಟು ವ್ಯಾಕುಲರಾದರು.

ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು,
ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು
ಬೇರೆ ಬಾವಿಯ ತೋಡಿ ಉಪ್ಪು ನೀರನುಂಬುವನ ವಿಧಿಯಂತೆ
ಆಯಿತ್ತೆನ್ನಮತಿ ಕೂಡಲ ಸಂಗಮದೇವಾ.

ಮಾನವನ ನಾಗರೀಕತೆಯ ಸೋಪಾನಗಳನ್ನು ನಾವು ಸೂಕ್ಷ್ಮವಾಗಿ ಪರೀಕ್ಷಿಸುತ್ತ ಬಂದರೆ ಇತಿಹಾಸದ ಪುನರಾವರ್ತನೆಯಾಗುತ್ತ ಬಂದಿದೆ ಯೆಂಬುದು ಕಂಡುಬರುತ್ತದೆ. ಇದು ಬಸವಣ್ಣನವರ ವಿಷಯದಲ್ಲಿ ಸತ್ಯ ಪರಿಪೂರ್ಣವಾಗಿದೆ. ನಾಡಿನ ನರನಳಿಕೆಯು ನುಗ್ಗಿ ನುರುಕಿ ಹೋಗುವ ಪ್ರಾಗಲ್ಭ್ಯ ಸಮಯವು ಸಮೀಪಿಸುವ ಕಾಲದಲ್ಲಿ ಮಹಾಪುರುಷರ ಅವತಾರ ಆಗುವುದು ರೂಢಿಯೇ ಸರಿಯು. ಬೆಂದು ಬಸವಳಿದ, ಕಂಗೆಟ್ಟು ಕುಗ್ಗಿ ಹೋದ, ಬಳಲಿಬಾಯಾರಿದ, ಅದುರಿ ಅಳಲುಗೊಂಡ ಜನತೆಯ ಸಾವು ನೋವು ಪರಮಾತ್ಮನಿಗೆ ತಟ್ಟದೆ ಇರದು! ಧರ್ಮವು ಅಧರ್ಮವನ್ನು ಒಂದಲ್ಲ ಒಂದು ದಿನ ಒದೆಯಲೇಬೇಕು. ಇದು ಯುಗ ಯುಗದ ಕಟ್ಟಳೆಯು. ಅಂತೆಯೇ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿನ ಬಾಗೇವಾಡಿಯಲ್ಲಿ ಬಸವೇಶ್ವರರು ಜನ್ಮತಾಳಿ ಇದನ್ನು ನಿದರ್ಶಿಸಿದರು. ಈ ಗುಂಪಿನ ಪುಣ್ಯ ಪುರುಷರ ಪ್ರಭಾವ ಹಿರಿದಾಗಿರುತ್ತದೆ.

ಶಿವ ಸಂವಿಚ್ಚರಣಾಬ್ಜರೇಣುಪತನಂ ಕ್ಷೇತ್ರಂ ತದೀಯಾಂಘ್ರಿಕುಂ | ಭವ ಸಂಕ್ಷಾಲಿತತೋಯಮೇ ವಿಮಲತೀರ್ಥಂ ತತ್ವದಾಂ ಭೋಜಯು | ಗ್ಗ್ರ ದೈವಂ ಜಡ ಭೌತಿಕ ಪ್ರಕೃತಿ ತೀರ್ಥಕ್ಷೇತ್ರ ದೈವಂಗಳೆಂ | ಬಿವು ಮಿಕ್ಕಜ್ಞರ ಗೈಸೆ ನಿಮ್ಮವರಿವಂ ಪೊರ್ದರ್ ಶಿವಾಧವಾ ||

ಈ ಬಗೆಯ ಮಹಾತ್ಮರ ಆಗಮನದ ಆತುರದಿಂದಿದ್ದ ಜೀವಿಗಳ ಹಂಬಲಿಸಿಹವಣಿಕೆಯು ಕವಿಯೊಬ್ಬರಿಂದ ಹೊರಹೊಮ್ಮಿರುವುದು ತಿಳಿಯುತ್ತದೆ.

ಮಣ್ಣ ಬಣ್ಣದಲಿ ಕುಣಿಸುಬಾ
ಹೊನ್ನ ಹೊಸರಿನಲಿ ಹಣಿಸುಬಾ
ಜೀವ ಜೀವನದಿ ತಣಿಸಿಬಾ
ಮೂಡಿಬಾ ಪೃಥ್ವಿ ಮೂಡಿಬಾ
ಹೆಚ್ಚು ಕಡಿಮೆಗಳು ಇಲ್ಲಬಾ

ಹುಚ್ಚು ನೆಚ್ಚು ಅದು ಇಲ್ಲಬಾ
ಕೆಚ್ಚು ಕೋರುತಿದೆ ನೊಲ್ಲಬಾ
ಮೂಡಿಬಾ ಪೃಥ್ವಿ ಮೂಡಿಬಾ.

ಬಸವನು ಬಾಳಿನಲ್ಲಿನ ಬೈರಾಗಿಯಾಗಿ, ಇಡೀ ಜನತೆಯನ್ನು ತಿದ್ದಿ ತೇಜ ಜಾತ್ರೆಯನ್ನು ಸಾಗಿಸಲು ತಾನೂ ನಡೆದು ನುಡಿದು ತನುವನ್ನು ತೇದು, ಮನಸ್ಸಿನ ಹೆರಿದಾಟದ ಅನಂತತೆಯಲ್ಲಿ ಹೃದಯವು ಕಲಿವಿಲಿಗೊಳ್ಳುತ್ತಿರುವುದನ್ನು ಕಡೆಗಟ್ಟಿ ಸ್ಥಾಯೀ ಭಾವಕ್ಕೆ ತಂದು ತಾನು ಅರಿತು ಆಚರಿಸಿದ ಶರಣನಾದಂತೆಯೇ ಜನರೂ ಆಗಲು ದುಡಿದು ಜಡತ್ವವನ್ನು ನೀಗಿದನು. ಮಾನವನಾಗಿ ಹುಟ್ಟಿದ ಮೇಲೆ ಬಂದ ಎಡರು ತೊಡರುಗಳನ್ನು ನೀಗಿ, ಮರೆತು ಮಾನವನಾಗದೆ ಅರಿತು ಅಮರನಾಗಿ, ಬಂದ ಬಟ್ಟೆಯಲ್ಲಿ ಬಯಲಾಗುವುದರೊಳಗೆ ತನ್ನ ಕರ್ತವ್ಯವನ್ನು ತಪ್ಪದೆ ಮುಗಿಸಿದನು. ಈ ಬಗೆಯ ಜೀವಿಗಳ ಆದರ್ಶವನ್ನು ಆದಷ್ಟು ಮಟ್ಟಿಗೆ ಅನುಷ್ಠಾನದಲ್ಲಿ ತಂದು ಬಾಳಬೆಳೆಯನ್ನು ಬೆಳೆಯಿಸಿದರೆ ನಾವು ಮಾಡಿದ ಪುಣ್ಯ ಸ್ಮರಣೆಯಿಂದ ಅಷ್ಟಿಷ್ಟಾದರೂ ಸಫಲತೆಯು ಸಿಗುತ್ತದೆ.

ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ
ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ
ಏಕಾದಶೀ ವ್ಯತೀಪಾತದಿಂದ ವೆಗ್ಗಳ
ಸೂಕ್ಷ್ಮ ಶಿವಪಥವನರಿದವಂಗೆ ಹೋಮ ನೇಮಜಪತಪಗಳಿಂದ ವೆಗ್ಗಳ
ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ ।

ಪರಿಶುಭ್ರಜೀವಿಯಾದ ಬಸವಣ್ಣನು ವೀರಶೈವ ಧರ್ಮದ ಭಕ್ತಿ ಜ್ಞಾನ ವೈರಾಗ್ಯದ ಸಂಗಮವನ್ನು ಅಳವಡಿಸಿ, ಕರ್ನಾಟಕದಲ್ಲಿ ವರ್ಗಸಮಾಜವನ್ನು ಹೊಡೆದಟ್ಟಿ ಕಾಯಕದ ಪ್ರಭಾವವನ್ನು ತಿಳಿಸಿ, ಸಮಾಜವಾದದ ಭಾರತೀಯ ಬಿತ್ತನೆಗಾರರಾಗಿ, ಧಾರ್ಮಿಕ ನೈತಿಕ ಸಾಮಾಜಿಕ ಜೀವನದಲ್ಲಿ ವಿಶೇಷವಾದ ಬದಲಾವಣೆಯನ್ನು ಬಸವಣ್ಣನು ಮಾಡಿ ಮರೆದನು.

"ಬಸವಣ್ಣನವರಲ್ಲದೆ ನಮ್ಮ ಈ ಭರತಭೂಮಿಯಲ್ಲಿ ಎಷ್ಟೋ ಜನಮತೋದ್ಧಾರಕರೂ, ನೂತನ ಮತಸ್ಥಾಪಕರೂ ಅವತಾರ ಮಾಡಿರುತ್ತಾರೆ; ಆದರೆ ಬಸವಣ್ಣನವರು ಕೈಕೊಂಡ ಕಾರ್ಯವನ್ನು ಬುದ್ಧದೇವನ ಹೊರತು ಮತ್ತಾನ ಅವತಾರ ಪುರುಷರೂ ಮಾಡಿರಲಿಲ್ಲ."— ಎಂ. ಆರ್. ಶ್ರೀನಿವಾಸ ಮೂರ್ತಿ.

ನಮ್ಮೆಲ್ಲರ ಜೀವನಕ್ಕೆ ಪ್ರೋತ್ಸಾಹ ಸಾಹಸವನ್ನು ನೀಡಿದ ಧುರ ಧೀರರನ್ನು ನೆನೆಯಿಸಿಕೊಂಡು ಆ ಪುಣ್ಯನವನೀತವನ್ನು ಸವಿದು ಸೌಭಾಗ್ಯಶಾಲಿಗಳಾಗೋಣ. ಬಸವಣ್ಣನವರ ವಚನಗಳು ಅಧರಕ್ಕೆ ಕಹಿಯಾಗಿದ್ದರೂ ಉದರಕ್ಕೆ ಸಿಹಿಯಾಗಿವೆ. ಇಂದಿನ ಜಗತ್ತಿನ ಕುಂದುಕೊರತೆಗಳಿಗೆ ಪರಿಹಾರವನ್ನು ಆಲೋಚಿಸಿ ಅವುಗಳನ್ನು ಆಲೋಚಿಸಿದರೆ ಗುರಿ ಸಾಧನೆಯು ಸಾರ್ಥಕವಾಗುತ್ತದೆ. ಬಸವಣ್ಣನವರ ಅಸಾಧಾರಣವಾದ ಬುದ್ಧಿ, ಅಮೋಘವಾದ ನೈತಿಕ ಜೀವನ, ಅದ್ವಿತೀಯವಾದ ಪರಿಶ್ರಮ, ಲೋಕೋತ್ತರವಾದ ಕ್ರಿಯಾಶಕ್ತಿಯಾದಿ ಸದ್ಗುಣಗಳು ಆ ವಚನಗಳಿಂದ ಅರಿವಾಗುತ್ತವೆ. ಪ್ರಪಂಚವೇ ಪಾರಮಾರ್ಥವಾಗಬೇಕು. ಇಹವೇ ಪರವಾಗಬೇಕು, ಮರ್ತ್ಯವೇ ಮಹಾಮನೆಯಾಗಬೇಕು. ಎಂಬ ಉಚ್ಚತಮಬಾಳಿನ ಗುಟ್ಟನ್ನು ಹೊರಪಡಿಸಿದ ಅಣ್ಣಬಸವಣ್ಣನ ಜಯಂತಿಯ ಮೂಲಕ ಈ ಪುಣ್ಯಸ್ಮರಣೆಯು ಲಭ್ಯವಾದದ್ದು ಸೌಭಾಗ್ಯವೇ ಸರಿಯು. ಜನ ಬದುಕಬೇಕೆಂದು ಬಾಳಿದ ಈ ಅಣ್ಣನ ಆದರ್ಶವು ನಮಗೆಲ್ಲರಿಗೂ ನಾಣ್ಯವಾಗಲಿ.

—ঃ ಓಂ-ತತ್ಸತ್ ঃ—

# ಶ್ರೀ ಸದ್ಗುರು ತ್ರಿವಿಕ್ರಮಾನಂದ ಭಕ್ತಮಂಡಲ,

## ಶಾಖಾ—ವಿಜಾಪುರ.

ಜ್ಞಾನ ಸತ್ರದ ದ್ವಿತೀಯ ವಾರ್ಷಿಕ ಮಹೋತ್ಸವದ ಸಮಯದಲ್ಲಿ
ಶ್ರೀಸದ್ಗುರು ತ್ರಿವಿಕ್ರಮಾನಂದ ಗುರುಗಳ ಚರಣಕಮಲಗಳಿಗೆ ಅರ್ಪಿಸಿದ

# ನವರತ್ನಮಾಲೆ.

ರಚಿಸಿದವರು:—ಸಿಂದಗಿ ರಾಮಕೃಷ್ಣ ಕವಿ. ವಿದ್ಯಾರಣ್ಯ ಬೀದಿ ವಿಜಾಪುರ.

---

ಶ್ರೀ ಗುರುವೆ ಶ್ರೀ ಪತ್ರನಾಥರು ।
ಶ್ರೀ ಗುರುವೆ ಶ್ರೀ ಶಂಕರಾಚಾರ್ಯರು ।
ಆಗಮದ ತತ್ವಾರ್ಥಬೋಧೆಯ ಬೀಜ ಬಿತ್ತಿದರು ॥
ಆಗು ಹೋಗುವ ಜನನ-ಮರಣದ ।
ಬೀಗ ಬಿಚ್ಚಲು ಶಾಂತಿ ವೃಕ್ಷಕೆ ।
ರಾಗದಿಂ ಪನ್ನೀರನುಣಿಸುವರ್ಗೆ ಮುಮುಕ್ಷುಗಳು ॥೧॥

ಧರೆಯೊಳಗೆ ಸುಜ್ಞಾನ ಜ್ಯೋತಿಯು ।
ಕರುಣ ಭಕುತಿಯು ಸತ್ಸ್ವರೂಪದ।
ತಿರುಳು ತಿಳಿಸಿದರ್ಾದಿನಾಥರ ಗುರುಪರಂಪರೆಯು ॥
ಪರಮ ಮಂಗಲ ಯತಿಯು ಸಿಂಧಾ ।
ಪುರದ ಭೀಮಾಶಂಕರಾರ್ಯರ ।
ವರಕಟಾಕ್ಷದಿ ಮೆರೆವರ್ಗೆ ಗಂಪ್ಪಾರಪುರ ವೃಡರು ॥೨॥

ಮೂರು ಶಕ್ತಿಯ ಮೀರಿದಾತನು ।
ಮೂರು ಗುಣಗಳ ಜಯಿಸಿ ಜಗದೊಳು ।
ಮೂರು ನಾನೆಂಬುವ ತ್ರಿವಿಕ್ರಮನಂದ ಸರಸ್ವತಿಯು ॥
ಚಾರುನಾಮದಿ ವಿಜಯಪುರದೊಳು ।
ಬೀರುತಿಹ ಸುಜ್ಞಾನ ಕೂಟವು ।
ಪಾರಮಾರ್ಥಿಕ ಸತ್ಯಲೌಕಿಕ ಪ್ರೇಮ ಬೆಳೆಸುವದು ॥೩॥

ಜ್ಞಾನಸತ್ರಾಧ್ಯಕ್ಷ ಚಿನ್ಮಯ |
ಜ್ಞಾನವೈದ್ಯರು ಹುಗ್ಗಿ ಶರಣರು |
ಜ್ಞಾನಸುಧೆಯನು ನೀಡುತಿರ್ಪರು ಜ್ಞಾನಿಜನ ಕಲೆತು ||
ಜ್ಞಾನನಿಧಿ ಸಾಸ್ನೂರ, ಲಗಳೀ |
ಜ್ಞಾನಿ ನರಸಾಪುರರು ಜೇರ್‍ಯರು |
ಜ್ಞಾನಭಕ್ತರ್‍ಜ್ಞಯ್ಸರಟ್ಟಿಟ್ಕಂರು ಹಿಪ್ಪರಗಿ ||೪||

ಕೀಳು ಮೇಲೆಂಬುಗಳ ಭೇದವ |
ತಾಳಿ, ನಿಮ್ಮಯ ಜ್ಞಾನ ಜ್ಯೋತಿಯ |
ಹಾಳು ಮಾಡಲು ಬೇಡಿರೈ, ಸದ್ಗುರು ತ್ರಿವಿಕ್ರಮಗೆ ||
ಮೌಳಿ ತಗ್ಗಿಸಿ ಪಾದ ನಂಬಿರಿ |
ಬಾಳುವೆಯ ಸಾರ್ಥಕ್ಯಗೊಳಿಸಲು |
ಏಳಿ ನಿಚ್ಚಳ ಮನದಿ ಭಜಿಸಲು ಮೋಕ್ಷ ಪೊಂದುವಿರಿ ||೫||

ವಿಶ್ವಧರ್ಮದ ಮರ್ಮವನರಿಯಲು |
ವಿಶ್ವವ್ಯಾಪಕ ದೃಷ್ಟಿಕೋನದಿ |
ವಿಶ್ವ ಕೋಶದಿ ಹೆಣೆದ ಧೃಡತರ ಮೂಲ ತತ್ವಗಳು ||
ಈಶ್ವರನ ಸಮಭಾವವೆನಿಪುವು |
ಶಾಶ್ವತದ ನಿಜಧಾಮ ಮಿಲನದ |
ವಿಶ್ವಶಾಂತಿಯ ಗುರಿಯು ತಿಳಿವುದು ಜ್ಞಾನಸತ್ರದಲಿ ||೬||

ನಾನು ಯಾರೆಂಬುದರ ತಿರುಳಿನ |
ಜ್ಞಾನ ಪಡೆವ ಮುಮುಕ್ಷುಜೀವಿಯು |
ಜ್ಞಾನಸೂರ್ಯನ ಬೆರೆತು ಸ್ವಾತ್ಮಜ್ಞಾನಿಯಾಗುವನು ||
ಮಾನವರೆ ಚಿರಸುಖಿಗಳಾಗಲು |
ಜ್ಞಾನಕೂಟಸ್ಥಲಕೆ ಬನ್ನಿರಿ |
ಜ್ಞಾನ ರೂಪನ್ನೆ ತಾನು ಕಾಣಿರೋ! ಬ್ರಹ್ಮಪದ ಹೊಂದಿ ||೭||

ಹಿಂದು, ಮಹಮ್ಮದಿ, ಕ್ರೈಸ್ತ, ಬೌದ್ಧರು ।
ನಂದದಿಂ ಸದ್ಧರ್ಮ ಸಂಸ್ಕೃತಿ ।
ಒಂದುಗೂಡಿಂದರಿತುಕೊಳ್ಳುವ ಕಾಲಗತಿವಿಹುದು ॥
ಮುಂದ ಬುದ್ಧಿಯ ಧರ್ಮಭಾವಕೆ ।
ಹೊಂದಿ ಕೊಳ್ಳದೆ ಸತ್ಯಶೀಲರೆ ।
ಬಂದು ಸುದ್ಧರ್ಮೈಕ್ಯ ತಿಳಿಯಿರಿ ಜ್ಞಾನಸತ್ರದಲಿ ॥೮॥

ಜ್ಞಾನಮಾರ್ಗದಿ ನಡೆದು ಗುರುವಿನ ।
ಧ್ಯಾನದಾಶೀರ್ವಾದ ಬಲದಿಂ ।
ಜ್ಞಾನಸತ್ರವಲೋಕಿಸೀ ನವರತ್ನಮಾಲೆಯನು ॥
ಜ್ಞಾನವಿಕಸಿತ ರಾಮಕೃಷ್ಣನು ।
ಜ್ಞಾನಕೂಟದ ಸೇವ್ಯಭಾವದಿ ।
ಜ್ಞಾನದಿನಕರ ಶ್ರೀ ತ್ರಿವಿಕ್ರಮ ಗುರುವಿಗರ್ಪಿಸುವೆ ॥೯॥



**ವಿಶೇಷ ಸೂಚನೆಃ—** ಶ್ರೀ ಸಿಂದಗಿ ರಾಮಕೃಷ್ಣರು ಪ್ರಸಿದ್ಧ ಕವಿಗಳೂ ಬರಹಗಾರರೂ ಇದ್ದು, ಅವರ ಕವನ-ಪದ್ಯಗಳು ಸಾಮಾಜಿಕ ರಾಜಕೀಯ ಆಧ್ಯಾತ್ಮಿಕ ವಿಷಯಗಳಲ್ಲಿ ಸಾಹಿತ್ಯರಂಗದೊಳಗೆ ಒಡಮೂಡಿ ಜನಸಾಮಾನ್ಯರಲ್ಲಿ ಮೆಚ್ಚುಗೆ ಪಡೆದವುಗಳುಂಟು. ಈಗ ಅವರ **“ನವರತ್ನಮಾಲೆ”** ಎಂಬ ಪದ್ಯಸರವನ್ನು ಶಿವಾನುಭವ ವಾಚಕರಿಗಾಗಿ ಪ್ರಸಿದ್ಧಿಸಿದ್ದೇವೆ. ಅವು ಭಾಮಿನಿಷಟ್ಪದಿಗಳಲ್ಲಿ ಹೆಣೆದಿವೆ. ಮತ್ತು ಈ ಪದ್ಯಮಾಲೆಯ ೧ನೇ ಶ್ಲೋಕದ ೨ ನೇ ಒಳಿಯಲ್ಲಿ ಇದ್ದ ಶಂಕರಾಚಾರ್ಯರು ಎಂಬ ಶಬ್ದವನ್ನು ಶಂಕರಾರ್ಯರು ಅಂತಾ ಓದಬೇಕೆಂದು ವಿನಂತಿ.

ಸಂಪಾದಕ,
ಶಿವಾನುಭವ – ವಿಜಾಪುರ.

# ಶ್ರೀಯುತ ಹಳಕಟ್ಟಿಯವರು

( ಬ.— ವೇ. ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ. ರಾಮಪೂರ. )

( ಬೀಸುವ ಕಲ್ಲಿನ ಪದದಂತೆ )

ಊರ ನೋಡಾಕ ಬಂದ್ಯಾ ದಾರಿ ತಿಳಿಯದೆ ನಿಂತ್ಯಾ ।
ಊರ ಹೆಸರ ಏನ ವಿಜಾಪೂರ ತಂಗಿ ಊರ ನೋಡಾಕ ಬಂದ್ಯಾ ॥ಪ॥

ಊರಿಗೆ ಗುಣವಂತ್ರ್ಯಾ ಶರಣ ಫಕೀರಣ್ಣಾ। ಗುರು ಚರಣs ಸೇವಾ
ದಲ್ಲಿ ಇರವೂರ ತಂಗಿ ಊರನೊಡಾಕ ಬಂದ್ಯಾ ॥೧॥

ಅಣ್ಣನ ಮನಿವಳಗs ದೊಡ್ಡ ದೊಡ್ಡ ಗ್ರಂಥವ್ವಾ । ತಗದ ಓದಿದರ
ಆನಂದ ತಂಗೀ ಊರ ನೋಡಾಕ ಬಂದ್ಯಾ ॥೨॥

ಅನುಭವ ಮಂಟಪಕs ತ್ವರಿತದಿ ಹೋಗವರ। ಶ್ರೀ ಬಸವನ ವಚನವನು
ಕೇಳುವರ ತಂಗಿ ಊರ ನೊಡಾಕ ಬಂದ್ಯಾ ॥೩॥

ವಕೀಲರಾಗಿದ್ರs ವಲ್ಲೆಂತ ನೂಕಿದರ । ಅಂದೇ ಜನಸೇವಾದಲ್ಲಿ ।
ಶಿಲುಕಿದರs ತಂಗೀ ಊರ ನೋಡಾಕ ಬಂದ್ಯಾ ॥೪॥

ಎಲ್ಲೆಲ್ಲಿ ತಿರುಗಿದರs। ಜನರ ಹಿತಕ್ಕಾಗಿ। ಯಾರೂ ದೊರತಿದ್ದಿಲ್ಲ
ಇಲ್ಲಿ ದೊರಕಿದರs ತಂಗಿ ಊರ ನೋಡಾಕ ಬಂದ್ಯಾ ॥೫॥

ಸ್ವಂತ ಆಸ್ತಿಯಿಂದ । ಶೈವಮತಕ್ಕಾಗಿ । ನಿಷ್ಠೇಯಿಂದ
ಇವುರು ದುಡಿಯುವರs ತಂಗಿ ಊರನೋಡಾಕ ಬಂದ್ಯಾ ॥೬॥

ಶಿವಮತ್ಕ ಉದ್ಧಾರಕs। ಸಿದ್ಧಾಗಿನಿಂತವರ। ಬಿದ್ದಮತವನ್ನೂ ।
ಎಬ್ಬಿಸಿದರs ತಂಗಿ ಊರನೋಡಾಕ ಬಂದ್ಯಾ ॥೭॥

ಅಜ್ಞಾನಿ ಜನಗಳೂ। ಸುಜ್ಞಾನಿಯಾಗುದಕೇ। ಶಿವಾನುಭವ ಹಂಚುವರs
ತಂಗಿ ಊರನೋಡಾಕ ಬಂದ್ಯಾ ॥೮॥

ಶರಣರ ಚರಿತ್ರವನೂ । ಅಂದದಿ ಶೋಧಿಸೀ ಚಂದದಿಂದ ಇವುರು
ಕೊಡವುವರs ತಂಗಿ ಊರ ನೋಡಾಕ ಬಂದ್ಯಾ ॥೯॥

ಅಕ್ಕಮಹಾದೇವಿಯs। ಚೊಕ್ಕವಚನವನ್ನೂ । ಚಕ್ಕಂದದಿಂದ
ಬೀರಿದರ ತಂಗಿ ಊರನೋಡಾಕ ಬಂದ್ಯಾ ॥೧೦॥

ಆಚಾರ ಬಿಟ್ಟವರಿಗೇs ವಿಚಾರ ಮಾತ್ನಿಂದಾ । ಸುವಿಚಾರಿ
ಮಾಡಿ ಬಿಟ್ಟಾರs . ತಂಗಿ ಊರನೋಡಾಕ ಬಂದ್ಯಾ ॥೧೧॥

ಬೇನೆ ಬೇಸರಿಕೆ ಬಂದ್ರೂs ಬಿಡದ ಫಕೀರಣ್ಣಾ। ಎಂಥಾ ತಾಯಿ ನಿನ್ನ
ಪಡೆದಾಳs ತಂಗಿ ಊರ ನೋಡಾಕ ಬಂದ್ಯಾ ॥೧೨॥

ಬಸವ ಅಲ್ಲಮ ಪ್ರಭೂs। ನುಡಿದ ವಚನವನಂಬೀ। ಸತತs ನುಡಿದು
ನಡೆದ ಧೀರs ತಂಗಿ ಊರ ನೋಡಾಕ ಬಂದ್ಯಾ ॥೧೩॥

ಶರಣ ಫಕೀರಣ್ಣಾಗ ಪಾರ್ವತಿ ಪತಿಯಿಂದು । ಧೀರ್ಘಾ
ಯುಷ್ಯವನು ಕರುಣಿಸಲೀ ತಂಗಿ ಊರ ನೋಡಾಕ ಬಂದ್ಯಾ ॥೧೪॥

ಅಂದಿನ ದಿನದಿಂದಾs ಇಂದಿನ ದಿನವರೆಗೇ ನಡಿಸೀತಂದ ಸೇವಾ।
ಪೂರ್ಣಪಡೀಸೆಂದೂ ಹರಿಸುವೆನs ತಂಗಿಊರ ನೋಡಾಕಬಂದ್ಯಾ॥೧೫॥

ಊರನೋಡಾಕ ಬಂದ್ಯಾs । ದಾರಿತೋರದೆ ನಿಂತ್ಯಾ ।
ಊರ ಹೆಸರ ಏನ ವಿಜಾಪೂರ ತಂಗಿ ಊರ ನೋಡಾಕ ಬಂದ್ಯಾ ॥೧೬॥

# ಜೀವನ ಜೋಕಾಲಿ.

( ಬ. – ವೇ|| ವಿರುಪಾಕ್ಷಯ್ಯಾ ನಾಗಯ್ಯಾ ಹಿರೇಮಠ ರಾಮಪೂರ. )



ಜೋಕಾಲ್ಯಾಡೂನ ಬರ್ರಿ | ಬೇಕಾದ ನಾರೀಯರೆಲ್ಲಾ |
ಸಾಕಾಗುತನಕ ಆಡೂನ | ನಾವು ನೀವು ಸಾಕಾದ ಮೇಲೆ
ಬಿಡುವುನ ||ಪಲ್ಲ||

ನೆಟ್ಟನ ತುದಿಮೆಲೆ ಕಟ್ಟೈತಿ ಜೋಕಾಲಿ | ಘಟ್ಟೇಹಿಡಿದ ಜೀಕೂನ |
ಬಿಟ್ಟು ಬಿಡದೆ ಸೃಷ್ಟೀಗೀಶನ ಪಾಡೂನ | ನಾವು ನೀವು ನಿಷ್ಟೀಯಿಂದಲಿ
ಆಡೂನ ||೧||

ಕಂದುಗೊರಳನೆಂಬ ಕೊಬ್ರಿತಂಬಿಟ್ಟ ನಮ್ಮ | ಒಡಲಘುಡಿಯುಲಿ
ತುಂಬಿ ಸುಭ್ರಾಗದಿಂದ ಆಡೂನ | ಒಬ್ಬಕೊಬ್ರು ಉಗ್ರನೇತ್ರನ
ಪಾಡುನ | ಸಂಭ್ರಮುದಿಂದ ವ್ಯಾಘ್ರುಚರ್ಮನ ನೆನೆಯೋಣ ||೨||

ವಂಚನಿಲ್ಲದೆ ಈ ಪ್ರಪಂಚಜೋಕಾಲಿ | ಹಂಚಿಕೀಲಿಂದ ಆಡೂನ |
ಕೆಂಚೆರೆಲ್ಲಾ ಮಿಂಚೀದ ಭಪಾ ದೂಡೂನ | ನಾವೂ ನೀವು ಪಂಚ |
ಮುಖನ ಕೂಡೂನ | ತಂಗೀ ನಾವು ಶರಣರ ಪಾದವ ಪಿಡಿಯೋಣ||೩||

ಹೇಯ ಪ್ರಪಂಚದಲ್ಲಿ ಕಲ್ಲಮನಸೀನಿಂದ | ಕಲ್ಲೀನಾಥನ ಕೂಡನ|
ಪ್ರೇಮದಿಂದ ಪಾರ್ವತಿ ಪಡಿಯನ ಪಾಡುನ |
ನಾವು ನೀವು ಇಷ್ಟಲಿಂಗದಿ ಬೆರಿಯೋಣ | ತಂಗೀ ನಾವು
ಅಂಗದ ಅವಗುಣ ದೂಡುನ ||೪||

ಗುರು ಕೊಟ್ಟ ಲಿಂಗವ ಕೊರಳಲ್ಲಿ ಧರಿಸಿ ನಾವು | ಕರದಲ್ಲಿ ಇರಿಸಿ
ಇಂದು ಚಂದದಿಂದಲಿ ಭಜಿಸೋಣ | ನಂಬಿಗೀಲಿಂದ ಇಂದೂ
ಸಾಂಬನ ಕೂಡೋಣ | ನಾವೂ ನೀವು ಅಂತರೀಕ್ಷಣನೆನೆಯೋಣ ||೫||

ಬಸವ ಅಲ್ಲಮ ಪ್ರಭು ನುಡಿದ ವಾಕ್ಯವನಂಬಿ |
ನುಡಿದೂ ನಡಿಯುತ ಪಾಡುನ | ಬಲ್ಲೀದ ಭವಾ ನೀಗೂನ |
ನಾವು ನೀವು ಅಂಗದ ಆಶಾ ಅಳಿಯೋಣ | ತಂಗೀ
ಅವರ ಅನುಭವ ಅರಿತು ಆಡೋಣ ||೧||

ಅಕ್ಕಮಹಾದೇವಿಯ ಚೊಕ್ಕ ವಚನವ ನಂಬಿ | ಚಕ್ಕಂದದಿಂದ |
ಆಡೂನ | ನಾವೂ ನೀವು ಚಂದ್ರಧರನ ಪಾಡುನ | ಹಂಚಿಕಿಲಿಂದ
ಹರನ ಚರಣವ ಪಾಡುನ ||೨||

ಅಷ್ಟಮದಗಳ ಕಡಿದು ಶ್ರೇಷ್ಟಪದವಿಯ ಪಡೆದು |
ಸೃಷ್ಟೀಗೀಶನ ಕೂಡೂನ | ಪಂಚಾಕ್ಷರಿ ಮಂತ್ರವ
ಮನಸೀಲಿ ಪಠಿಸೋಣ|ಪಠಿಸಿ ನಾವು ಚಂದದಿಂದಲಿ ಆಡೂನ||೪||

ರೂಢಿಯೊಳಗೆ ಶ್ರೀ ಗುರುಲಿಂಗೇಶನ ಚರಣ | ಹಾಡಿ ಹರಸುತ
ಆಡೋಣ | ಜೋಡಿಲಿಂದ ಖೋಡಿ ಸಂಸಾರ ದೂಡೂನ | ಚಾಡಿಗಿ
ಮನಿ ಬಾಳೀವ ಸಾಕ ಮಾಡೂನ ||೫||

# ವೀರಶೈವರಲ್ಲಿ ಮತಭೇದಗಳಿಲ್ಲ.

( ಬ.—ವೇ|| ವಿರುಪಾಕ್ಷಯ್ಯಾ ನಾಗಯ್ಯಾ ಹಿರೇಮಠ, ರಾಮಪೂರ. )

## — ಸಂಗ್ರಹ —

ಶ್ರೀ ಸದ್ಗುರುವು ಜೀವನಿನಿಗೆ ಲಿಂಗಧಾರಣ ದೀಕ್ಷೆಯನ್ನು ಮಾಡಿ ಆತನ ಮೊದಲಿನ ಆಶ್ರಯವನ್ನು ಕಿತ್ತುಹಾಕಿ ಆತನಲ್ಲಿ ಸುವಿಚಾರದಿಂದ ಸದಾಚಾರಕ್ಕೆ ಶ್ರೇಷ್ಠಕರವಾದ ಗುರುಸೇವೆ ಜಂಗಮಸೇವೆ ಇಷ್ಟಲಿಂಗಪೂಜೆ ಹಲವು ಅಷ್ಟಾವರ್ಣಗಳಲ್ಲಿ ಸ್ಥಿರ ಚಿತ್ತವನ್ನು ನೆಲೆಗೊಳಿಸಿ ಪಂಚಾಕ್ಷರ ಮಹಾಮಂತ್ರ ಉಪದೇಶದಿಂದ ಹೃದಯದಲ್ಲಿ ನಿರ್ಮಲತೆಯನ್ನು ಹರಡಿ ಈ ಪ್ರಕಾರವಾಗಿ ತನು-ಮನಗಳಲ್ಲಿಂದಾ ಮಾಯಾ ವಿಕಾರವನ್ನು ಹೊಡೆದೋಡಿಸಿ ಪ್ರಕೃತಿಜನ್ಯವಾದ ರೋಗಗಳನ್ನು ಕಳೆದು ಕೇವಲ ಸುಗಣನನ್ನಾಗಿ ಮಾಡುತ್ತಾನೆ.

ಈ ರೀತಿ ಗುರುವು ಶಿವಭಕ್ತನಾಗಲಿಚ್ಛಿಸುವನು. ಮಾಂಸಪಿಂಡವನ್ನು ಅಳಿದು ಮಂತ್ರಪಿಂಡವಾಗಿ ಮಾಡುವದರಿಂದ ಅವನು ಅಪ್ರಾಕೃತ ಶರೀರಿ ಎನಿಸುವನು, ಆದ್ದರಿಂದಲೇ ವೀರಶೈವ ಶಾಸ್ತ್ರದಲ್ಲಿ ಭಕ್ತನಿಗೂ ಜಂಗಮನಿಗೂ "ನಿರ್ದೇಹಿ" ಎಂಬ ವಿಶೇಷಣವು ಉಪಯೋಗಿಸಲ್ಪಟ್ಟಿದೆ.

ನಿರ್ದೇಹಿ ಎಂದರೆ ದೇಹವಿಲ್ಲದವರು ಎಂಬ ಅರ್ಥವಲ್ಲ. ಯಾಕಂದರೆ-ವೀರಶೈವರಾದ ಭಕ್ತ ಮತ್ತೂ ಜಂಗಮರಲ್ಲಿ ನಾವು ಸಪ್ತಧಾತುಗಳಿಂದ ಆದ ಶರೀರವನ್ನು ಪ್ರತಿನಿತ್ಯ ಕಾಣುತ್ತೇವೆ. ಆದರೆ ಪ್ರಕೃತಿ ಸಂಬಂಧವಾದ ಸರ್ವ ಗುಣಗಳನ್ನು ಅಳಿದು ಆ ಪ್ರಾಕೃತಗುಣಯುಕ್ತರಾಗಿ ನಡೆಯುವದರಿಂದ "ನಿರ್ದೇಹಿ" ಅಥವಾ ಅಪ್ರಾಕೃತ ಶರೀರಿ ಎಂದು ಹೇಳಿದೆ

ಶ್ರೀ ಗುರುವು ಲಿಂಗಧಾರಣ ದೀಕ್ಷೆಯನ್ನು ಮಾಡಿದ ನಂತರ ಆತನು ಗುರುವಿನ ಮಗನಾದನು. ಸದ್ವಂಶದಲ್ಲಿ ಹುಟ್ಟಿದ ತಂದೆ ಮಕ್ಕಳಿಗೆ ಬೇರೆ ಬೇರೆ ಜಾತಿ ಕುಲವನ್ನು ಹ್ಯಾಗೆ ಹೇಳಲಿಕ್ಕೆ ಬರುವದಿಲ್ಲವೋ ಇದರಂತೆಯೇ ಲಿಂಗಧಾರಿಗಳಾದವರಿಗೆ ಜಾತಿಯಿಂದ ಭೇದವನ್ನು ಹೇಳಲಿಕ್ಕೆ ಬರುವದಿಲ್ಲ.

ಲಿಂಗಧಾರಣವಿಲ್ಲದೇ ಜಂಗಮನಿಗೆ ಜಂಗಮತ್ವವು ಬರುವದಾದರೆ ಮಾತ್ರ ಅವರಿಗೆ ಜಾತಿಯನ್ನು ಹೇಳಲಿಕ್ಕೆ ಬಂದೀತು. ಆದರೆ ಲಿಂಗಧಾರಣವಿಲ್ಲದ ಜಂಗಮ ಪ್ರಾಣಿಗಳ ಭವಿತ್ವವು ಪ್ರಾಪ್ತವಾಗುವದರಿಂದ ಜಂಗಮತ್ವವು ಬರುವದಂತೂ ದೂರೇ ಉಳಿಯಿತು. ಗುರುಕೃಪೆಯಿಂದ ಶಿವದೀಕ್ಷಾಸಂಪನ್ನನಾದವನ ಪೂರ್ವ ಕುಲಜಾತಿ ಮುಂತಾದವುಗಳನ್ನು ಸ್ಮರಿಸಕೂಡದು. ಯಾಕಂದರೆ—ಅವು ಪ್ರಕೃತಿ ಸಂಬಂಧವಾಗಿವೆ. ಗುರುವಿನ ಹಸ್ತಕಮಲದಿಂದ ಹೊಸದಾಗಿ ಜನಿಸಿದ್ದರಿಂದ ಅಪ್ರಾಕೃತನಾದ ಶಿವಭಕ್ತನ ಸ್ವಜನ್ಮ ಜಾತಿ ಮೊದಲಾದವುಗಳು ಕನಸಿನಲ್ಲಿಯೂ ಕೂಡಾ ಬರಲಾರದು. ಶಾಸ್ತ್ರ ರೀತ್ಯಾ ಪ್ರಾಣಪ್ರತಿಷ್ಠೆ ಮಾಡಲ್ಪಟ್ಟ ಶಿಲಾಮಯವಾದ ಶಿವಲಿಂಗವು ಎಷ್ಟು ಪೂಜ್ಯವೋ ಅಷ್ಟೇ ನೀಚವಂಶದಲ್ಲಿ ಜನಿಸಿದವನಾದರೂ ಶಿವಭಕ್ತನಾದರೆ ಸರ್ವರಿಂದಲೂ ಅವನು ಪೂಜ್ಯನಾಗುತ್ತಾನೆ.

ಯಾವನಾದರೂ ಭಕ್ತನ ಪೂರ್ವದ ಜನ್ಮಜಾತಿ ಮುಂತಾದವುಗಳನ್ನು ಕೇಳಿದರೆ ಅಥವಾ ಅವನ್ನು ಪರರ ಮುಂದೆ ನುಡಿದರೆ ಅವನು ಮಹಾಪಾಪಿಗಳಲ್ಲಿ ಶ್ರೇಷ್ಠನೆನಿಸುವನು. ಅದಕ್ಕಾಗಿ ಯಾವನು ಲಿಂಗಧಾರಿಯನ್ನು ಪ್ರಯತ್ನಪೂರ್ವಕವಾಗಿ ಶಿವನೆಂದು ತಿಳಿಯುವನೋ ಅವನು ಮಾತ್ರ ಈ ಸಂಸಾರ ಮಹಾಬಂಧನದಿಂದ ಬಿಡುಗಡೆಯನ್ನು ಹೊಂದುವನು. ಇದು ಸಿದ್ಧಾಂತವಾಗಿದೆ.

ಶಿವನು ಹೇಳುವ ಧರ್ಮಗಳಲ್ಲಿ ಶ್ರದ್ಧೆಯು ಶಿವಾಶ್ರಮ ತತ್ಪರರಾದ ವೀರಶೈವರಿಗೆ ಶ್ರೇಷ್ಠವಾಗಿರುವದು. ಬೆಂಕಿಯಿಂದ ಸುಟ್ಟ ಕಟ್ಟಿಗೆಗಳಲ್ಲಿ ಪೂರ್ವದ ರೂಪವು ಹ್ಯಾಗೆ ಕಂಡುಬರುವದಿಲ್ಲವೋ ಹಾಗೆ ಶಿವದೀಕ್ಷಾಸಂಪನ್ನರಾದ ವೀರಶೈವರಲ್ಲಿ ಪೂರ್ವದ ಜಾತಿ ಭೇದಗಳು ಉಳಿಯುವದಿಲ್ಲ. ಆದ್ದರಿಂದ ಶಿವಸಂಸ್ಕಾರಿಯಾದವನು ಶಿವಭಕ್ತನಲ್ಲಿ ಯಾವಾಗಲೂ ಜಾತಿಭೇದವನ್ನು ಮಾಡಬಾರದು. ಸಿದ್ಧಾಂತ ಶಿಖಾಮಣಿಯಲ್ಲಿ ಇದನ್ನು ಚನ್ನಾಗಿ ವಿವರಿಸಿದ್ದಾರೆ—

ಲಿಂಗಧಾರಣದ ಆನಂದದಿಂದ ವೀರಶೈವರೆಲ್ಲರೂ ರುದ್ರನಂತೆ ವಂದ್ಯರೆನಿಸುತ್ತಾರೆ ಅವರೆಲ್ಲರೂ ಒಬ್ಬ ತಾಯಿಯ ಮಕ್ಕಳೋಪಾದಿಯಲ್ಲಿ ಪರಸ್ಪರರಾಗಿ ಅಣ್ಣತಮ್ಮಂದಿರಂತೆ ವರ್ತಿಸಬೇಕು. ಇದನ್ನೊಳಗೊಂಡ ಅಣ್ಣನ

ವಚನಗಳು ಬಹು ಗಂಭೀರವಾಗಿ ಅವೆ. ಮತ್ತೂಕ್ಷಿ ಶಿವರಹಸ್ಯ ವಚನದಲ್ಲಿ ಹೀಗೆ ಹೇಳಿದ್ದಾರೆ—

" ಶಿವಸಂಸ್ಕಾರ ಸಂಯುಕ್ತೇ ಜಾತಿ ಭೇದಂ ನಕಾರಯೇತ್ ।
ಶಿವಲಿಂಗೆ ಶಿಲಾ ಬುದ್ಧಿಂ ಕುರ್ವಾಣ ಇವಪಾತಕಃ ॥"

ಅಂದರೆ— ಶಿವಸಂಸ್ಕಾರ ಸಂಪನ್ನರಲ್ಲಿ ಜಾತಿಭೇದವನ್ನೆನಿಸಕೂಡದು ಒಂದು ವೇಳೆ ಎಣಿಸಿದರೆ ಶಿವಲಿಂಗಕ್ಕೆ ಕಲ್ಲು ಎಂಬ ಭಾವನೆ ( ಬುದ್ಧಿ ) ಮಾಡಿದರೆ ಎಷ್ಟು ಪಾಪ ಬರುವದೋ ಅಷ್ಟು ಪಾಪಿಯಾಗುವನು ಎಂದು ಹೇಳಿದೆ. ಕಾರಣ ವೀರಶೈವರಲ್ಲಿ ಮತಭೇದವಿಲ್ಲ.

( ಮುಂದುವರಿದಿದೆ. )

# ಯಜ್ಞದ ಆರೋಹಣ.

ಲೇ. ಶಿವಕುಮಾರ ತುಂಗಳ

—o●o—

## ( ಜ್ಞಾನ-ಕರ್ಮ-ಮನೋಪ್ರಜ್ಞೆ )

ಯಜ್ಞವೆಂದರೆ ಬಾಹ್ಯಕರ್ಮಗಳ ಅರ್ಪಣವಷ್ಟೇ ಅಲ್ಲ, ಒಳಗಿನ ವಿಚಾರ, ಭಾವನೆ ಎಲ್ಲವುಗಳ ಸಮರ್ಪಣವಾಗಬೇಕಾಗುತ್ತದೆ. ಈ ಸಮರ್ಪಣದಿಂದ ಜೀವನು ಆತ್ಮನೊಡನೆ ತನ್ನ ಸಾಮ್ಯವನ್ನನುಭವಿಸುತ್ತಾನೆ. ಇಂಥ ಆತ್ಮಾರ್ಪಣವಾಗದಿದ್ದ ಸ್ಥಿತಿಯಲ್ಲಿ ಅಪೂರ್ಣ ಮಾನವ ಸ್ವಭಾವದಿಂದ ನಡೆಯುವ ಕರ್ಮಗಳು ಹಾಗು ವಿಚಾರ ಭಾವನೆಗಳ ಬಗ್ಗೆ ಏನು ಮಾಡಬೇಕು? ಅನಾಸಕ್ತ ಕರ್ಮ ಆತ್ಮನ ಆದರ್ಶ ಅಂದರೆ ಸಂಧಿಕಾಲದಲ್ಲಿ ಇದ್ದ ಸ್ಥಿತಿಯಲ್ಲಿಯೇ ಜೀವನು ಸಮೀಪದ ಕರ್ತವ್ಯ ಕರ್ಮಗಳನ್ನು ಮಾಡುತ್ತ ಅಂತರಂಗವನ್ನು ಆತ್ಮ ಜ್ಯೋತಿಯ ಪ್ರವೇಶಕ್ಕೆ ತಕ್ಕದ್ದನ್ನಾಗಿ ಮಾಡುತ್ತ ಹೋಗಬೇಕು. ಈ ಸ್ಥಿತಿಯಲ್ಲಿ चित्तस्य शुद्धये कर्म ಎಂಬುದು ಕರ್ಮದ ನಿಯಮ ಆತ್ಮಾರ್ಪಣೆ ಕರ್ಮಸಾಧನೆ ಸಾಧನವೂ ಅಹುದು, ಸಾಧ್ಯವೂ ಅಹುದು.

ಮಾನವನ ಮನಸ್ಸಿನ ಸಮಸ್ಯೆಗಳನ್ನು ಬಿಡಿಸಲು ನೀತಿಶಾಸ್ತ್ರವು ಮಾನಸೀಕ ನಿರ್ಬಂಧಗಳನ್ನು ಮಾತ್ರ ಹಾಕುತ್ತದೆ. ಈ ನಿರ್ಬಂಧಗಳು ತಾತ್ಪೂರ್ತಿಕವಾಗಿ ಮಾತ್ರ ಪರಿಣಾಮಕಾರಿಯಾಗಬಲ್ಲವು. ಅರ್ಧ ಆಧ್ಯಾತ್ಮಿಕ, ಅರ್ಧ ನೈತಿಕ ಉಪಾಯಗಳಾಗಲಿ ಮನಸ್ಸಿನ ಸಮಸ್ಯೆಗಳನ್ನು ಬಿಡಿಸಲು ಪರ್ಯಾಪ್ತವಾದವುಗಳಲ್ಲ. ಸಂಪೂರ್ಣ ಆತ್ಮ ಪ್ರಜ್ಞೆಯಿಂದಲೇ ಪುನಃ ಪ್ರಜ್ಞೆಯ ಸಮಸ್ಯೆಯನ್ನು ಬಿಡಿಸಲು ಸಾಧ್ಯ. ಆ ಆತ್ಮ ಪ್ರಜ್ಞೆಯನ್ನು ಹೊಂದಲು ಆಧ್ಯಾತ್ಮಿಕ ಅನುಭವದಮಾರ್ಗ ಹಿಡಿಯುವದರ ಹೊರತಾಗಿ ಗತ್ಯಂತರವಿಲ್ಲ. ದೈವಿಪ್ರಜ್ಞೆಯ ಪ್ರವೇಶಕ್ಕೆ ಮಾನವ ಚೇತನೆಯನ್ನು ಹೆಚ್ಚೆಚ್ಚು ತೆರೆಯುತ್ತ ಸಾಗುವದೇ ಈ ಮಾರ್ಗ. ಈ ಸಾಧನೆಯಲ್ಲಿ ಅಜ್ಞಾನದಿಂದ ತುಂಬಿದ, ಅರ್ಧಜ್ಞಾನದಿಂದ ವಿಕೃತವಾದ ಮನೋರಚನೆಗಳು ಸಹಾಯಕವಾಗದೆ ಬಾಧಕವೇ ಆಗಬಹುದು. ಈ ಬಾಹ್ಯ ಮನೋರಚನೆಗಳ ಮಬ್ಬಿ

ನಲ್ಲಿ ಬೀಳದೆ ಅಂತಃಸ್ತರ ಮನಃಪ್ರಾಜ್ಞೆಯನ್ನು ಆತ್ಮನ ಆದ್ರಶ್ಯ ಸಂಚಾಲನಕ್ಕೆ ತೆರೆಯುವ ಸಾಧನೆ ಎಡಬಿಡದೆ ನಡೆಯಬೇಕು. ಆಧುನಿಕ ಮನುಷ್ಯರು ಎಷ್ಟೇ ತನ್ನ ಬೆಳೆದ ತರ್ಕಬುದ್ಧಿಯನ್ನವಲಂಬಿಸಿದರೂ ಅಂತಿಮ ಸತ್ಯದ ಜ್ಞಾನವು ಹೃದಯದಿಂದಲೇ ಆಗುತ್ತಿದೆ. ಸಾಮಾನ್ಯತಃ ಹೃದಯವು ಕಾಮ, ಕ್ರೋಧ, ಲೋಭಾದಿಗಳಲ್ಲಿ ಸಿಲುಕಿರುತ್ತದೆ. ಆದರೆ ಅದರ ಅಂತಃಸ್ತರದಲ್ಲಿ ಆತ್ಮನಿದ್ದಾನೆ. ಅವನ ಪ್ರಕಾಶವು ಹೆಚ್ಚಿದಂತೆ ತುಚ್ಛ ವಾಸನೆಗಳೆಲ್ಲ ಆ ಹೃದಯಮಂದಿರದಿಂದ ಹೊರಬಿದ್ದು, ಅದರಲ್ಲಿ ಆತ್ಮನ ಉಪಾಸನೆ ಮಾತ್ರ ನಡೆಯಹತ್ತುತ್ತದೆ.

ಹೃದಯದ ವಿಕಾಸ ಹಾಗೂ ವಿಸ್ತಾರ ಮಾಡಲು ಭಕ್ತನು ಅದನ್ನು ಜಗತ್ತು ತುಚ್ಛ, ಮಾಯೆ ಎಂದು ಜಗತ್ತಿನಿಂದ ಪೂರ್ಣ ವಿಮುಖಮಾಡಿ ಪರಮಾತ್ಮನಿಗೆ (ಇಷ್ಟದೇವತೆಗೆ) ಹೃದಯದ ಸರ್ವಾರ್ಪಣ ಮಾಡುತ್ತಾನೆ. ಅವನು ಜಗತ್ತಿನ ಆಗು ಹೋಗುಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಗೋಜಿಗೆ ಹೋಗುವದಿಲ್ಲ ಮಾನವತಾವಾದಿಯು ಪರೋಪಕಾರ, ಲೋಕಸೇವೆಯಿಂದ ಹೃದಯವಿಕಾಸ ಹಾಗೂ ವಿಸ್ತಾರ ಮಾಡಬಯಸುತ್ತಾನೆ. ಇದರಿಂದಲೇ ಮಾನವನೂ, ಅವನ ಸಮಾಜವೂ ಪರಿಪೂರ್ಣ ಹಾಗು ಸುಖಿ ಆಗುತ್ತಿವೆ ಎಂಬುವದು ಅವನ ನಂಬಿಗೆ. ಭಕ್ತನ ಹೃದಯವಿಕಾಸವು ಸರ್ವಾಂಗೀಣವಾಗುವದಿಲ್ಲ. ಒಮ್ಮೊಮ್ಮೆ ಬಹಳ ಸಂಕುಚಿತವಾಗಿ ತನ್ನ ಇಷ್ಟದೇವರೊಂದೆ ಪೂಜ್ಯ, ಉಳಿದದ್ದೆಲ್ಲ ತುಚ್ಛವೆಂದು ಮೂಢನಂಬಿಗೆಯಿಂದ ಬೇರೆಯವರೊಡನೆ ಅವನು ಜಗಳಾಡಲು ಹತ್ತುತ್ತಾನೆ. ನಾಸ್ತಿಕ ಬಂಧುಗಳಂತೂ ಅವನ ದೃಷ್ಟಿಯಲ್ಲಿ ಪಾಪಿಷ್ಠರು; ಬೇರೆ ಆಸ್ತಿಕ ಬಂಧುಗಳೂ ಮೂಢರು. ಅವರ ಅವರ ಹಿತ, ಉನ್ನತಿಗಳ ಚಿಂತೆ ಅವನಿಗೇಕೆ ?

ಇದೇ ಪ್ರಕಾರ ಮಾನವತಾವಾದಿಗಳ ಹೃದಯವಿಕಾಸವಾದರೂ ಎಷ್ಟೇ ಬೌದ್ಧಿಕ ಹಾಗು ಭಾಷೆಯ ಅಲಂಕಾರಗಳಿಂದ ಶೃಂಗರಿಸಲ್ಪಟ್ಟರೂ, ಸಂಕುಚಿತ 'ಅಹಂ'ದ ಮೇರೆಯಲ್ಲಿಯೇ ಸುತ್ತಾಡುತ್ತಿರುತ್ತದೆ. ಅಂತೇ ಪೂರ್ಣ ಯೋಗದ ಬೆಂಬತ್ತಬೇಕು. ಪೂರ್ಣಯೋಗದಲ್ಲಿ ದ್ವಂದ್ವಯುಕ್ತ ಮಾನಸೀಕ ಮೇರೆಗಳನ್ನು ದಾಟಿ ಸಮಗ್ರ ಮನಃಪ್ರಾಜ್ಞೆಯ ದೈವೀಕರಣವನ್ನು ಮಾಡಲಾಗುತ್ತಿದೆ. ಅಂಥ ಮನೋಪ್ರಾಜ್ಞೆಗೆ ಯಾವ ಮಾನಸೀಕ ನೈತಿಕ ಅಥವಾ ಭಕ್ತಿಯ ನಿರ್ಬಂಧಗಳು ಉಳಿಯುವದಿಲ್ಲ.

ಮಾನವ-ಆತ್ಮವು ಪರಮಾತ್ಮನಿಂದ ಕೂಡಿಕೊಂಡಿರುವ ಅವನದೇ ಒಂದು ಕಿಡಿ, ಅಥವಾ ಕಣ. ಮಾಯಾವೀ ಸೂಕ್ಷ್ಮ ಹಾಗು ಸ್ಥೂಲಶರೀರಗಳ ಬಲವಾದ ಹೆಂಬಲಗಳು ಜೀವಾತ್ಮವನ್ನೂ ತನ್ನ ಆಧಾರವಾದ ಪರಮಾತ್ಮನಿಂದ ದೂರೆಳೆಯುತ್ತಿರುತ್ತವೆ. ಅವುಗಳ ಜಂಜಾಲದಲ್ಲಿಯೇ ಅದು ಯಾವಾಗಲೂ ತೊಡಗಿದ್ದರೂ, ತನ್ನ ಆದಿಯ ಸ್ವಭಾವದಿಂದ ಅದು ತನ್ನ ಆಧಾರ ರೂಪಿ ಪರಮಾತ್ಮನತ್ತ ಹೊರಳಲೇಬೇಕಾಗುತ್ತದೆ.

ಒಮ್ಮೊಮ್ಮೆ ಪರಮಾತ್ಮನಿಂದ ಅದಕ್ಕೆ ಕರೆ ಕೇಳಬರುತ್ತಿದೆ. ಇಂಥ ಕರೆಯಿಂದಲೇ ಅದು ಬಹು ಹೊತ್ತಿನ ಮೇಲೆ ತಾಯಿಯ ಧ್ವನಿ ಕೇಳಿ ಅವಳತ್ತ ಧಾವಿಸುವ ಮಗುವಿನಂತೆ ಆತುರತೆಯಿಂದ ಪರಮಾತ್ಮನತ್ತ ಧಾವಿಸುತ್ತಿದೆ. ಸದಸದ್ವಿವೇಚನೆಗೆ ಇಂಥ ಕರೆಯೆಂದು ತಿಳಿಯುವದು ತಪ್ಪು, ಅದು ಒಳತು ಕೆಟ್ಟದ್ದರ ತೂಕಹಾಕುವ ಅಪೂರ್ಣ ಮಾನಸಿಕ ತಕ್ಕಡಿ ಮಾತ್ರ. ಈ ತಕ್ಕಡಿಯು ಕೃಷ್ಣನ ಕೊಳಲಿನ ಮಂಜುಲಸ್ವರದತ್ತ ಮುನ್ನಡಿಸಬಲ್ಲದು, ನಡುವೆ ಎಡವುತ್ತ ಹಾದಿದಪ್ಪಿ ಅತ್ತಿತ್ತ ಅಲೆದಾಡಿಸಲೂ ಬಹುದು. ಆದರೆ ದೈವೀ ಕೊಳಲಿನ ಮಂಜುಲ ಧ್ವನಿಯು ನಿಜವಾಗಿ ಕೇಳಿದರೆ ಈ ತರದ ಹೊಯ್ದಾಟವಾಗಲಾರದು. ಆ ಧ್ವನಿಯು ನಿಚ್ಚಳವಾಗಿ ಕೇಳಿದಂತೆ, ಮಾರ್ಗವು ನಿಚ್ಚಳವಾಗಿ ಕಾಣಹತ್ತುವದು.

❀ ❀ ❀ ❀

ಜ್ಞಾನ, ಕರ್ಮ, ಪ್ರೇಮಗಳ ಹೋಮದಿಂದ ಮನುಷ್ಯನು ಆತ್ಮಸಾಕ್ಷಾತ್ಕಾರ ಮಾಡಬಲ್ಲನು. ಜ್ಞಾನದ ಹೋಮವು ಶ್ರೇಷ್ಠವು. ಆದರೆ ಪ್ರೇಮದ ಹೋಮವು ಹೆಚ್ಚು ವ್ಯಾಪಕವಾದುದ್ದು. ಆದರೆ ದೈವಿ ಪ್ರೇಮದಲ್ಲಿ ಸಂಕುಚಿತ ಮಾನವ ಪ್ರೇಮದ ವ್ಯಾಕುಲತೆ, ಸಂಚಲತೆಗಳಿರದೆ, ಆಳವಾದ ಅಪೂರ್ವ ಅನಂತ ಸ್ಥಿರತೆಗಳು ತುಂಬಿರುತ್ತವೆ ಆದ್ದರಿಂದ ಯೋಗಿಯು ಮಾನವನನ್ನೂ ದೈವಿಕರಿಸಿ ಬಿಡುತ್ತಾನೆ. ಅಂದರೆ ತನ್ನ ಪ್ರೀತಿಯ ವಸ್ತುವಿನಲ್ಲಿಯ ದೇವಾಂಶವನ್ನು ಕಂಡು ಅದನ್ನು ಪ್ರೀತಿಸಹತ್ತುತ್ತಾನೆ. ಸಂಕುಚಿತ ಪ್ರೇಮದಲ್ಲಿಸಹ ದೈವಿ ಅಂಶವಿದ್ದೇಇರುತ್ತದೆ. ಅದು ಹೆಚ್ಚು ನಿಚ್ಚಳವಾದಂತೆ ಸಂಕುಚಿತ ಪ್ರೇಮ ಹೊಳೆಯುತ್ತಿರುವ ದೇವಾಂಶದ ವಿಕೃತಿಗಳು ಕರಿಯುತ್ತಿವೆ. ಆದ್ದರಿಂದ ಇಂಥ ಪ್ರೇಮದ ಭಾವನೆಯನ್ನು ಆರ್ಪಿಸುವ ವ್ಯಕ್ತಿ ಮಾತ್ರ ತ್ಯಾಜ್ಯವಲ್ಲ. ಅದು ಪ್ರೇಮವನ್ನು ಉಚ್ಚತಮ ಮಟ್ಟಿಗೆ ಮುಟ್ಟಿಸುತ್ತದೆ. ಉಚ್ಚತಮ

ಪ್ರೇಮವು ಪರಮಾತ್ಮನ ಪ್ರತಿಯೊಂದು ರೂಪವನ್ನು ಅಂದರೆ ಸಕಲ ಜೀವಿಗಳನ್ನು ಪ್ರೀತಿಸುತ್ತದೆ. ವಿಶ್ವಬಂಧುತ್ವವು ಇಂಥ ಪ್ರೇಮದ ಸಾಧನೆಯ ಹೊರತಾಗಿ ಮತ್ತೇನಿಲ್ಲ.

ದೈವ ಪ್ರೇಮವು ಇಷ್ಟ ದೇವತೆಯ ಉಪಾಸನೆಯಲ್ಲಿ ಮಾತ್ರ ಅಥವಾ ಮಾನವ ಬಂಧುಗಳ ಆತ್ಮಹಿತ ಮಾಡಬೇಕೆಂಬ ಪರೋಪಕಾರ ಭಾವನೆಯಿಂದ ನಡೆಯುತ್ತದೆ. ಆದರೆ ಪೂರ್ಣಯೋಗದಲ್ಲಿ ಈ ಉಪಾಸನೆ ಅಥವಾ ಲೋಕಸೇವೆ ಮಾನಿಕ ನಿಯಮದಂತೆ ನಡೆಯುವ ಆತ್ಮನ ಅತ್ಯಂತ ಸಹಜವಾದ ಯಜ್ಞ ಜೀವನದಂತೆ ನಡೆಯುತ್ತವೆ. ಹೊರಗಿನ ಅಪೂರ್ಣ ಕ್ರಿಯೆ, ಅರ್ಪಿತವಸ್ತುಗಳಿಂದ ಒಳಗಿನ ಜೀವಾತ್ಮಗಳ ಐಕ್ಯಭಾವಕ್ಕೆ ಹೆಚ್ಚು ಮಹತ್ವವಿದೆ. ಇದರಿಂದ ಪ್ರತಿಯೊಂದು ಕರ್ಮವೂ ಉಪಾಸನೆ ಹಾಗು ಸಮಸ್ತ ಜೀವನವು ಆತ್ಮ ಯಜ್ಞವಾಗಿಬಿಡುತ್ತದೆ. ಈ ಯಜ್ಞದಲ್ಲಿ ಯಜ್ಞ, ಯಜಮಾನ, ಹಾಗು ಅರ್ಪಿತವಸ್ತು ಅಥವಾ ಕರ್ಮಗಳ ಐಕ್ಯದ ಆನಂದವು ಪ್ರತಿ ಕ್ಷಣವೂ ಅನುಭವಿಸಲ್ಪಡುತ್ತದೆ.

ಪ್ರತಿಮೆ ಪೂಜೆ, ಕಲಾಮಯ ಉಪಾಸನೆ ಆತ್ಮೈಕ್ಯ, ಆತ್ಮಾನಂದಗಳನ್ನು ಅನುಭವಿಸುವಲ್ಲಿ ಸಹಾಯಕವಾಗುವಂತಹವಿದ್ದರೇ ಉಪಯುಕ್ತವಾದವುಗಳು. ದೈವಿ ಪ್ರೇಮದಿಂದಲೇ ಜಗತ್ತಿನ ಉತ್ಪತ್ತಿಯಾಗಿದ್ದರೂ, 'ಏಕ'ನಿಂದ 'ಅನೇಕ'ರ ಜನನವಾದಕ್ಷಣವೆ ಅವುಗಳಲ್ಲಿ ಪ್ರತ್ಯೇಕತೆಯ ಬೆಳವಣಿಗೆಯಿಂದ ಘರ್ಷಣ ಬೆಳೆದು ಬಿಡುತ್ತದೆ. ಸರ್ವಾರ್ಪಣ ಉಪಾಸನೆಯಿಂದ ಈ ಘರ್ಷಣೆಯು ಅಳಿದು ಆತ್ಮಾನಂದ ನೆಲೆಸುತ್ತದೆ. ಅಂತರೀಕ ಹೃದಯದ, ಆತ್ಮೈಕ್ಯಭಾವದ ಉಪಾಸನೆಯಿಂದಲೇ ಪ್ರತ್ಯಕತೆಯಿಂದ ಜನಿಸಿದ ಎಲ್ಲ ಮತ್ಸರ ತಿಕ್ಕಾಟಗಳು ಲೋಪವಾಗಿ ವಿಶ್ವದಲ್ಲಿ ದಿವ್ಯ ಸಾಮಂಜ್ಯಸವು ನೆಲಿಸಿ ಎಲ್ಲರಿಗೂ ಆನಂದ ಕೊಡಬಲ್ಲದು. ಅಲ್ಲಿಯವರಿಗೆ ಪ್ರತ್ಯೇಕತೆಯ ಆಧಾರದ ಮೇಲೆ ಸ್ಥಾಪಿಸಲ್ಪಡುವ ಮಾನಸಿಕ ಸಮಾನತೆ ಅಥವಾ ವಿಶ್ವಬಂಧುತ್ವದ ಎಲ್ಲ ಮನೋರಚನೆಗಳು ಗಾಳಿಗೋಪುರಗಳು.

ಕರ್ಮಯೋಗಿಯು ಕರ್ಮಗಳನ್ನಾವನ್ನೂ ತುಚ್ಛೀಕರಿಸದೆ ತನ್ನ ಸ್ಥಿತಿಗೆ ತಕ್ಕಂತೆ ಎಲ್ಲವನ್ನೂ ಆತ್ಮಾರ್ಪಣ ಭಾವದಿಂದ ಮಾಡುತ್ತಾನೆ. ಅವು ಏನೋ ಒಂದು ಅಗತ್ಯದಿಂದ ಅನಿಷ್ಟವೆಂದು ತಿಳಿಯುವದಿಲ್ಲ. ಆದರೆ ಕರ್ಮಮಾರ್ಗದಲ್ಲಿಯ ಅಸಂಖ್ಯೆ ದುರ್ಭೇದ್ಯ ಕೊಡಕು ತೊಂದರೆಗಳ, ಬೀಳು ಏಳುಗಳ

ಅರಿವು ಅವನಿಗೆ ಚನ್ನಾಗಿರಬೇಕು. ದೈಹಿಕ, ಮಾನಸಿಕ, ಅಥವಾ ನೈತಿಕ ಹಂಬಲ ಮುಚ್ಚಲು, ವಿಕೃತ ಮಾಡಲು ಸತತವಾಗಿ ಹವಣಿಸುತ್ತವೆ. ರಾಕ್ಷಸಿ ತೃಷ್ಣೆ, ದೈವಿ ಆಕಾಂಕ್ಷೆಗಳ ವಿರುದ್ಧ ಬಂಡೆಬ್ಬಿಸಿ ಜೀವನದ ಹಂಗ.ದೊರೆಮ ಹೋರಾಡುತ್ತದೆ. ನಿಕೃಷ್ಟ ಅಭಿಲಾಷೆಗಳತ್ತ ಪುನಃ ಪುನಃ ಧಾವಿಸುತ್ತದೆ. ಇಂಥ ತೃಷ್ಣೆಯಿಂದ ತುಂಬಿದ ಜೀವಕ್ಕೆ ಆತ್ಮನತ್ತ ಎಳೆಯುವ ಮಿತ್ರರು ಶತೃಗಳಂತೆಯೂ, ಅಭಿಲಾಷೆಗಳತ್ತ ಜಗ್ಗುವವರು ಮಿತ್ರರಂತೆಯೂ ತೋರುತ್ತಾರೆ. ಧರ್ಮ, ಅಧ್ಯಾತ್ಮಗಳ ವೇಷದಲ್ಲಿಯೂ ಒಮ್ಮೊಮ್ಮೆ ಅಹಂಕಾರದ ಆಕಾಂಕ್ಷೆಗಳು ಸುಂದರವಾಗಿ ಜೀವನವನ್ನು ಮೋಹಿಸುತ್ತಿದೆ. ಈ ವಿಕೃತಿಗಳಿಂದ ಪಾರಾಗುವದು ಬಹಳ ದುಸ್ತರ. ಅಧ್ಯಾತ್ಮಿಕ ಆವರಣದಲ್ಲಿ ವಿಸ್ತೃತ, ಸೂಕ್ಷ್ಮ ಅಲಂಕಾರದ ಸೇವೆ, ಹಾಗು ತೃಷ್ಣಾ ತೃಪ್ತಿ ನಡೆಯುಹತ್ತುತ್ತವೆ. ಈ ಸ್ಥಿತಿಯಲ್ಲಿ ಸಾಧಕನು. ನಾನು ದೈವಿ ಸ್ಥಿತಿಗೆ ತಲುಪಿರುವೆನೆಂಬ ಆತ್ಮವಂಚನೆಗೂ ಒಳಗಾಗುತ್ತಾನೆ. ಹಾಗು ಭ್ರಮೆಯಿಂದ ಅಚೇತವಾಗಿ ಅನುಯಾಯಿಗಳನ್ನು ಉಚ್ಚ ಆದರ್ಶದ ಹೆಸರಿನಲ್ಲಿ ತನ್ನ ಅಹಂಕಾರದ ಸೇವೆ ಮಾಡಹಚ್ಚುತ್ತಾನೆ. ಸರಳ ಧಾರ್ಮಿಕ ಅನುಯಾಯಿಗಳು ಯೋಗದ ಗೂಢ ಪಥವನ್ನರಿಯದೆ ಏನಾದರೂ ಸ್ವಲ್ಪ ಅಸಾಧಾರಣ, ಶಾರೀರಿಕ, ಮಾನಸಿಕ, ಅಥವಾ ನೈತಿಕ ಶಕ್ತಿಗೆ ಮರುಳಾಗಿ ಶೀಘ್ರದಲ್ಲಿಯೆ ಇಂಥ ಪಥಭ್ರಷ್ಟ ಗುರುಗಳ ಕೈಯಲ್ಲಿ ಸಿಲುಕಿ ಬಿಡುತ್ತಾರೆ ಇಂಥ ಗುರುವಿನ ದಾಸ್ಯದಲ್ಲಿ ಅವರ ಸ್ವತಂತ್ರ ಅಧ್ಯಾತ್ಮಿತ ಪ್ರಗತಿಯು ನಿಂತುಹೋಗುವದಲ್ಲದೆ, ಸ್ವಾವಲಂಬನ, ಆತ್ಮವಿಶ್ವಾಸ, ಎಲ್ಲವು ಅಳಿದು ಕಣ್ಣು ಮುಚ್ಚಿ ಗುರುಹೇಳಿದ್ದನ್ನೆಲ್ಲ ಪರೀಕ್ಷಿಸುವ ಪ್ರಯಾಸಕ್ಕೆ ಹೋಗದೆ, ನಂಬಿಕೊಳ್ಳುವ ಮೂಢವಿಶ್ವಾಸ ಮಾತ್ರ ಅವರಲ್ಲಿ ನೆಲೆಗೊಳ್ಳುತ್ತಿದೆ. ಇಂಥ ಗುರುವಿನಬೆಂಬತ್ತುವವೆಂದರೆ ಹಳ್ಳಿ ಗುರುಡದೊಡನೆ ಹಳ್ಳ ಹಾಯ್ದಂತೆ.

   

ತೃಷೆ ಅಳಿದು ಅಧ್ಯಾತ್ಮಿಕ ಸಾಮ್ಯವು ನೆಲೆಗೊಂಡಾಗ ಮಾತ್ರ ನಿಜವಾದ ಶಾಂತಿ ದೊರಕುತ್ತಿದೆ. ಆದರೆ ಇಷ್ಟರಿಂದಲೆ ದೈವಿರಾಜ್ಯದ ಸ್ಥಾಪನೆಯಾಗದೆ ಅದರಲ್ಲಿ ಪ್ರವೇಶ ಮಾತ್ರ ಆದಂತಾಗುತ್ತಿದೆ. ಈ ಪ್ರವೇಶದಿಂದ ಮುಂದಿನ ಮಾರ್ಗ ನಿಚ್ಚಳವಾಗಿ ಕಾಣಹತ್ತುತ್ತದೆ. ದೈವಿ ಕರೆ ಕೇಳುವ ಮೊದಲೆ

ಕೆಲವು ದೇವತ್ವದ ಗುಣಗಳು ಪ್ರಕಟವಾಗಬಹುದು ಈ ಸಂಧಿ ಕಾಲದಲ್ಲಿ ದೇವತ್ವ, ದಾನವತ್ವದ ನಡುವೆ ಹೊಯ್ದಾಟವಿರುತ್ತದೆ. ದೈವಿಮಾರ್ಗದರ್ಶನದಿಂದ ಇಲ್ಲಿಯ ಮಾರ್ಗಕ್ರಮಣ ಸರಳವಾಗುತ್ತದೆ.

ಬಾಹ್ಯ ಜೀವನವು ಆಂತರೀಕ ಜೀವನದ ಪ್ರತಿಬಿಂಬ ಮಾತ್ರ. ಆಂತರಿಕ ಆತ್ಮನ ವಿಕಾಸ ಹಾಗು ಪ್ರಾಕಟ್ಯಗಳಿಗೇನೇ ಅದರ ಅಸ್ತಿತ್ವ. ಮನೋವಿಶ್ಲೇಷಣ ಶಾಸ್ತ್ರವು ಇದೀಗ ಕುಂಟುತ್ತ ಆ ಆಂತರಿಕ ಜೀವನದ ಆಳನ್ನು ಅಳೆಯುಹತ್ತಿದೆ. ಸಾಮಾನ್ಯವಾಗಿ ಆಂತರೀಕ ಜೀವನದ ಅರಿವು ನಮಗಾಗಿರದಿದ್ದರೂ ನಮ್ಮ ಜೀವನದ ಆಗು ಹೋಗುಗಳ ಮೇಲೆ ಅದರ ಪ್ರಭಾವವು ಅತ್ಯಧಿಕವಾಗಿರುತ್ತದ. ಆಂತರಿಕ ಜೀವನವನ್ನು ಅರಿತು ಅದರ ವಿಕಾಸವಾಡದೆ, ಮಾನವ ಜಾತಿಯು ಜೀವನದ ನಿಯಂತ್ರಣ ಹಾಗು ಪರಿಪೂರ್ಣತೆ ಎಷ್ಟೇ ಅಂದಾದ ಬಾಹ್ಯ ಉಪಾಯಗಳಿಂದಾಗಲೀ ಅಸಾಧ್ಯ. ಯಾವದೇ ಬಾಹ್ಯ ಘಟನೆಗೆ ನಾವು ಬಾಹ್ಯಕಾರಣಗಳನ್ನು ಮಾತ್ರ ನೋಡುತ್ತೇವೆ. ಆದರೆ ಸ್ವಲ್ಪ ಶಾಂತವಾಗಿ ವಿಚಾರಿಸಿದರೆ ನಮಗೆ ಅದರ ಮಹತ್ತರ ಕಾರಣಗಳಾದ ನಮ್ಮ ಬಲವಾದ ಒಳಗಿನ ಮನೋಭಾವನೆಗಳು ಕಂಡುಬರುತ್ತವೆ. ನಮಗೆ ಅಗ್ಯೂ ತಿಳಿಯದ ಹತ್ತಿಕ್ಕಲ್ಪಟ್ಟ ಭಾವನೆಗಳನ್ನು ಮನೋವಿಶ್ಲೇಷಣ ವಿಶಾರದರು ಎತ್ತಿ ತೋರಿಸುತ್ತಾರೆ. ನಿಜವಾಗಿ ನೋಡಿದರೆ ಆತ್ಮನ ಅಂತಸ್ತಮ ಪಾಷಾಣಸ್ತರಕ್ಕೆ ತಲುಪಿದವನಿಗೆ ಮನೋವಿಶ್ಲೇಷಕನ ಈ ಅವಿಷ್ಕಾರಗಳು ಹೊರಗಿನ ಮನೋಭೂಸ್ತರದ ಕೆಳಗಿನ ಸರ್ವಸಾಧಾರಣ ಗಟ್ಟಿಮುಟ್ಟಿನ ಮೊದಲನೆಯ ಸ್ತರಮಾತ್ರವೆಂದು ತೋರುತ್ತದೆ.

ನಮ್ಮೊಳಗಿನ ಆತ್ಮಚೈತನ್ಯವು ಜಾಗ್ರತವಾದಂತೆ ನಮ್ಮ ಜೀವನದ ಗತಿಯೇ ಬೇರೆಯಾಗಿ ಬಿಡುತ್ತದೆ. ನಮ್ಮೊಳಗಿನ ಶಾರೀರಿಕ ಮಾನಸಿಕ ಶಕ್ತಿಗಳೊಡನೆ ದೈವೀಯೋಜನೆಗೆ ತಕ್ಕಂತೆ ನಾವು ಅವುಗಳ ಉತ್ಕೃಷ್ಟ ಉಪಯೋಗ ಮಾಡಹತ್ತುತ್ತೇವೆ. ಭೂತ, ಜೀವನ, ಮನಗಳ-ರಹಸ್ಯೋದ್ಘಾಟನವು ನಮಗಾಗುತ್ತಿದೆ. ಜಗತ್ತಿನಲ್ಲಿ ದೈವೀಯೋಜನೆಯಲ್ಲಿ ಆಗ ನಾವು ಕುರುಡರಂತೆ ಕತ್ತಲೆಯಲ್ಲಿ ಕೈಯಾಡಿಸುತ್ತ ಅತ್ತಿತ್ತ ದಕ್ಕೆ ತಿನ್ನುತ್ತ ತಿರುಗಬೇಕಾಗುವದಿಲ್ಲ. ವಿಶ್ವವನ್ನೇ ದೈವೀಕರಿಸುವ ನಮ್ಮ ಸಾಧ್ಯವನ್ನು ನಾವು ಆತ್ಮನತ್ತ ಏರುವ ಹಾಗು ಆತ್ಮಶಕ್ತಿಯನ್ನು ಪೃಥ್ವಿತಲಕ್ಕೆ ಇಳಿಸುವ ಎರಡೂ ಸಾಧನೆಗಳನ್ನು ಬೆರಿಸಿ ಯಶಸ್ವಿಯಾಗಿ ಸಾಗಿಸುವದರಿಂದಲೇ ಮುಟ್ಟಬಲ್ಲೆವು.

ಪೂರ್ಣಯೋಗದ ಸಾಧಕನು ದೈವೀವಿಕಾಸಕ್ಕೆ ಸಹಾಯವಾಗುವ ಎಲ್ಲ ಕರ್ಮಗಳನ್ನೂ, ಜೀವನದ ಎಲ್ಲ ಅಂಗಗಳನ್ನೂ ಸ್ವೀಕರಿಸುತ್ತಾನೆ. ಅಂದರೆ ಪ್ರಕೃತಿಯು ದಬ್ಬಿದತ್ತ ಅವನು ಸಾಗಬೇಕಂತಲ್ಲ. ಯಾವ ಪ್ರಕೃತಿಯ ಪ್ರವೃತ್ತಿಗಳು ಕೇವಲ ತೃಷ್ಣಾಪೂರ್ವಕವಾಗಿದ್ದು ದೈವೀ ಉದ್ದೇಶವನ್ನು ನಿರರ್ಥಕಗೊಳಿಸಲು ಹವಣಿಸುತ್ತವೆಯೋ ಅವನ್ನೆಲ್ಲ ಪರೀಕ್ಷಿಸಿ ಅವನು ಬಿಸುಟಿ ಬಿಡಬೇಕು. ಕೇವಲ ಅಂತರಾತ್ಮನ ವಾಣಿಯನ್ನು ಕೇಳಿ ಅವನ ಪ್ರೇರಣೆಯಂತೆ ಕಾರ್ಯಮಾಡುತ್ತಾ ಹೋಗಬೇಕು.

ಈ ರೀತಿ ಪರಿಪೂರ್ಣ ಸತ್ಯದಲಿ ಸಮರಸ ಹೊಂದಲು ಪ್ರತಿಯೊಬ್ಬನು ಯಜ್ಞಾರೋಹಿಯಾಗಬೇಕು, ಅಂದೇ ವಿಶ್ವಶಾಂತಿ ಮಾತು.

# ಶ್ರೀ ಜಗಜ್ಜ್ಯೋತಿ ಬಸವೇಶ್ವರನ ನೆನಹು.

(ಲೇಃ—ನಾ. ಮ. ಬಸವರಾಜ ನಾಗರಹಾಳ, (ಶಿರುಗುಪ್ಪ ತಾ. ಬಳ್ಳಾರಿ ಜಿ.)

"ಬಸವನ ಪುಣ್ಯ ಕೀರ್ತಿಲತೆ ಬೇರ್ವರಿಯಿತ್ತುರಗೇಂದ್ರ ಲೋಕದೋಳ್
ಶಿಸೆಗಳ ನಗ್ಗಳಂ ಮುಸುಕಿಪರ್ವಿದುದಾಗಳೆ ಮರ್ತ್ಯಲೋಕದೊಳ್
ಕುಸುಮಿತವಾಗಿ ಸೌರಭದಿ ಹೊಂಪುಳಿಯೋಯ್ತುಮರೇಂದ್ರ ಲೋಕದೋಳ್
ಪಸರಿಸಿ ಪೂರಿತಾಮಳಸುದಾಫಳ ಮಾಡುದು ರುದ್ರ ಲೋಕದೋಳ್"

—ಹರಿಹರ.

ಒಂದು ಭವ್ಯವಾದ ಅರಮನೆಯು ಮಳೆಗಾಳಿ ಹೊಡೆತಕ್ಕೆ ಸಿಕ್ಕು ಅದರಲ್ಲಿರುವ ಸ್ತಂಭಗಳು ಸಡಿಲಾಗಿ ಬೀಳುವ ಪ್ರಸಂಗ ಒದಗಿದಾಗ ನಿಪುಣನಾದ ಶಿಲ್ಪಿಗನೊಬ್ಬನು ಬಂದು ಅದನ್ನು ತನ್ನ ಹಿರಿದಾದ ಜಾಣ್ಮೆಯಿಂದ ಮತ್ತೆ ಭದ್ರಪಡಿಸಿ ರಮ್ಯಮಾಡುವಂತೆ, ೧೨ನೇ ಶತಮಾನದಲ್ಲಿ ವೀರಶೈವ ಸಮಾಜವೆಂಬ ಅರಮನೆಯು ಜೀರ್ಣವಾಗಿ ಹೋಗುವ ಸಮಯದಲ್ಲಿ "ಯದಾಯದಾಹಿ ಧರ್ಮಸ್ಯಗ್ಲಾನಿರ್ಭವತಿ ಭೂತಲೇ, ತದಾತದಾವರೋಯಂ ಗಣೇಶಸ್ಯವರಾನನೆ" ಎಂಬಾಗಮೋಕ್ತಿಯಂತೆ ಬಸವಭಾಸ್ಕರನುದಯವಾದ ದಿನ ಅಕ್ಷಯತೃತೀಯವನ್ನು ಪ್ರತಿಯೊಬ್ಬ ವೀರಶೈವನು ಆಚರಿಸಿ, ಶ್ರೀ ಭಗವಾನ್ ಬಸವಣ್ಣನವರ ದಿವ್ಯ ಸಂದೇಶವನ್ನು ಅಲ್ಲಲ್ಲಿ ಪಂಡಿತರಿಂದ ಕೇಳಿರಬಹುದಲ್ಲದೆ ! ಕೇಳಿ ಆನಂದಿಸುವದಲ್ಲದೆ ಮಾಡಿ ಆನಂದಿಸಬೇಕು.

ದೇವಾದಿ ದೇವಾ, ಜಗಜ್ಜ್ಯೋತಿ ಬಸವೇಶ್ವನೇ ನಿನ್ನನ್ನು ಹೇಗೆ ನೆನೆಯಲಿ, ಎಂತು ವರ್ಣಿಸಲಿ, ಕವಿಗಳ ವರ್ಣನೆಗೆ ವರ್ಣನಾತೀತನಾಗಿರುವಿ.

ವೀರಶೈವ ಮತ ಜೀರ್ಣೋದ್ಧಾರಕನೇ ಧನ್ಯ ಧನ್ಯ. ಮಂದಿರವನ್ನು ಸ್ಥಾಪಿಸಬಹುದು ಜೀರ್ಣೋದ್ಧಾರ ಮಾಡುವುದು ಕಷ್ಟವಂತೆ, ಹಾಗೆ ವೀರಶೈವಮತವನ್ನು ಜೀರ್ಣೋದ್ಧಾರ ಮಾಡಿದ ಮಹಿಮಾಪುರುಷ ಬಸವನು ನಿಜವಾಗಿಯೂ ಜಗಜ್ಜ್ಯೋತಿ.

ಭಕ್ತಿಭಾಂಡಾರಿಯೇ ಕರ್ನಾಟಕ ಪ್ರಾಂತದಲ್ಲಿ ಜನಿಸಿ, ಕನ್ನಡಿಗರಿಗೂ ಕನ್ನಡೇತರರಿಗೂ ಇಹದ ದುಃಖಗಳನ್ನು ಪರಿಹರಿಸಿ ವಚನ ಶಾಸ್ತ್ರವನ್ನು ತಿಳಿಯುವಂತೆ ಬೋಧಿಸಿ 'ಕಾಯಕವೇ ಕೈಲಾಸ'ವೆಂದು ಬೋಧಿಸಿ, ನುಡಿದಂತೆ ನಡೆದ ಜಗಜ್ಜ್ಯೋತಿಯೆ ನಿನಗೆ ಎಷ್ಟು ಶರಣಾರ್ಥಿಗಳನ್ನರ್ಪಿಸಿದರೂ ಅಷ್ಟೇ.

ಶರಣು, ಶರಣು, ಶರಣು, ಬಸವೇಶಾ, ಬಸವರಾಜಾ, ಬಸವಾ, ರಕ್ಷಿಸು, ರಕ್ಷಿಸು, ನಿನ್ನ ಶಿಶುಗಳನ್ನು.

ಕಾಯದೊಳು ಗುರುಲಿಂಗಜಂಗಮು । ದಾಯತವನಳಿಯಲ್ಕೆ ಸುಲಭೋ। ಪಾಯದಿಂದಿರಿಟ್ಟು ಬಾಹ್ಯಸ್ಥಲಕೆ ಕುರುವಾಗಿ ॥ ದಾಯದೋಳ್ ಸಮಸ್ತ ಭಕ್ತನ ಕಾಯವನು ಪಾವನವ ಮಾಡಿದ । ರಾಯ ಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ ॥ ಚಾಮರಸ.

# ಆಸ್ತಿಕ್ಯಭಾವ.

(ಲೇಖಕರು: — ನಾ. ಮ. ಪಂ. ದೊಡ್ಡಯ್ಯ ಶಾಸ್ತ್ರಿಗಳು ನಾಗರಹಾಳು.)

ಪ್ರಗತಿಪರ ಈ ವಿಜ್ಞಾನ ಯುಗದಲ್ಲಿ ಹಳೆಯ ದೇವರ ಇರುವಿಕೆಯನ್ನು ಒಪ್ಪುವ ನಾಗರಿಕರು ಇಲ್ಲವೆಂದೇ ಹೇಳಿದರೆ ತಪ್ಪಾಗಲಾರದು.

'ಯಾಕೆಂದರೆ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗುವ ಅನೇಕ ಭೌತಿಕ ವಿಷಯಗಳನ್ನು ನೋಡಿ ಕೇಳಿ ಅನುಭವಿಸುವ ಪ್ರಸಂಗದಲ್ಲಿ ದೇವರು ಇದ್ದಾನೆ. ಆತನನ್ನು ಪೂಜಿಸಿರಿ, ಸ್ತುತಿಸಿರಿ, ಧ್ಯಾನಿಸಿರಿ ಎಂದು ಬೋಧಕರು ಮತ್ತು ಶಾಸ್ತ್ರಗಳು ಹೇಳಿದರೆ ಅಸಮಂಜಸವೆನಿಸುವದು ಯಾರಿಗೆ? ಸಾಮಾನ್ಯ ಜನರಿಗೆ, ಭೌತಿಕ ತತ್ವ ನಿರೂಪಣೆಯು. ನಿರೀಕ್ಷಣ, ಪರೀಕ್ಷೆ, ಪ್ರಯೋಗ ಮುಖಾಂತರ ನಡೆದು ಇಹಲೋಕದ ಜೀವನ ಸೌಕರ್ಯ ಸೌಲಭ್ಯಗಳಿಗೆ ಸಾಧನವಾಗಿದೆ. ಆದರೆ ಬುದ್ಧಿಯಿಂದ ಮೊದಲ್ಗೊಂಡು ದೇಹಾದಿ ಪ್ರಪಂಚದ ಕಡೆಗೆ ಹೊರಟು ಅನೇಕ ವಿಷಯ ಸಾಮುಗ್ರಿಗಳನ್ನು ಒದಗಿಸುವದರಿಂದ ಸುಖವೆನಿಸುತಿದೆ. ನಿಜವಾದ ಆನಂದ, ಮತ್ತು ಶಾಂತಿ ಹಿಂದು ಇಂದು ಮುಂದು ಎಂದೂ ಸಾಧ್ಯವಾಗುವದಿಲ್ಲ. ಇಂತಹ ಸುಧಾರಿಸಿದ ಪರಿಸ್ಥಿತಿ ನೋಡಿದರೆ ಎಲ್ಲಿ ನೋಡಿದರೂ ಅರೆಹೊಟ್ಟೆ, ಅರೆಬಟ್ಟೆಗಳಿಂದ ತೊಳಲಿ, ಬಳಲುವ ಜನಸಾಮಾನ್ಯರೆಷ್ಟು ಮಂದಿ ಕಾಣುತ್ತಾರೆ? ಬಹು ಜನಾಂಗದ ಗತಿಯು ಹೀಗೇ ಇದೆ ಎಂಬರ್ಥ.

ಆದ್ದರಿಂದ ಪ್ರಗತಿ ಎಂದರೆ ಮುಂದಡಿ ಇಡುವದು ಎಲ್ಲಿಗೆ? ಪ್ರಗತಿಯು ಶಿಖರವೆಲ್ಲಿದೆ. ತನ್ನ ನೆರಳು ತಾನು ದಾಟುತ್ತೇನೆಂಬ ಪ್ರಯತ್ನವು ಹಾಸ್ಯಾಸ್ಪದವಾದದ್ದು. ಭೋಗಸಾಮುಗ್ರಿಗಳಿಂದ ಎಂದೂ ತೃಪ್ತಿ ಇಲ್ಲವೆಂದೂ ಅನುಭವಿಗಳ ಆಳವಾದ ವಿಚಾರ "ನಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ" ಬೆಂಕಿಯನ್ನು ಶಾಂತಗೊಳಿಸಬೇಕೆಂದು ಸಾವಿರ ತುಪ್ಪದ ಕೊಡಗಳು ಸುರುವಿದರೂ ಪುನಃ ಪುನಃ ವೃದ್ಧಿಯಾಗುವಂತೆ ಮನಸ್ಸಿಗೆ ಶಾಂತಿಯಾಗುವದಿಲ್ಲ. ಯಾಕಂದರೆ ಬುದ್ಧಿಯಿಂದ ಇಂದ್ರಿಯಗಳ ಮುಖಾಂತರ ಹೊರಗೆಬಂದ ಈ ಕಾಮನೆಯು ಎಂದಿಗೂ ತೃಪ್ತಿಹೊಂದುವದಿಲ್ಲವೆಂದು ಸತ್ಯಾನುಭವಿಗಳ ಸತ್ಯವಾಕ್ಯ ಸುಪ್ರಸಿದ್ಧವಾಗಿರುವಾಗ ಇದಕ್ಕೆ

ಸಂಶಯುವಿಲ್ಲ. ಪ್ರಗತಿಯೆಂದರೆ ಹೊರಗೆಹೋದ ಬುದ್ಧಿಯನ್ನು ಅಂತರಂಗದ ಆತ್ಮನ ಕಡೆಗೆ ಹೊರಟರೆ ಮನಶಾಂತಿ. ಆತನ ಜೀವನವೇ ಸುಖಮಯ ವಾದದ್ದೆಂದು ಸಕಲ ಗುರುಶಾಸ್ತ್ರಗಳ ಅನುಭವದ ರಹಸ್ಯ. ಹಾಗಾದರೆ ಭೌತಿಕ ಜೀವನವು ಬೇಡವೆಂಬುದಲ್ಲ. ಭೌತಿಕ ಜೀವನವು ಆಧ್ಯಾತ್ಮಿಕದ ತಳಹದಿಯಾಗಬೇಕಲ್ಲದೆ ಕೇವಲ ಶೂನ್ಯ (ಸೊನ್ನೆ) ದ ಬೆಲೆ ಇಲ್ಲ. ಅದಕ್ಕೆ ಸಹಾಯವು ಅಂಕೆಗಳಿರಬೇಕು. ದಶ ಶತ ಎಷ್ಟೋ ಅಭಿವೃದ್ಧಿಯಾಗುತ್ತ ದಷ್ಟೆ, ಹಾಗಿಲ್ಲದೆ ಖಾತೆ, ಕಿರ್ದಿಗಳಲ್ಲಿ ಬರೀ ಸೊನ್ನೆಗಳ ಲೆಕ್ಕವು ಇದ್ದರೆ ತಲೆತಿರುಕ ಕಿರಿವಂತನೆನ್ನುವರು. ಆದ್ದರಿಂದ ಮೊದಲು ದೃಶ್ಯವಾದ ದೇಹಾದಿ ಜಗತ್ತುಗಳು ಎಲ್ಲಿಂದ ಉತ್ಪತ್ತಿ ಎಲ್ಲಿ ಕೂಡಿಕೊಳ್ಳುತ್ತಿವೆ ಇದರ ಮೂಲ ಸ್ವರೂಪವೇನು ? ಇತ್ಯಾದಿ ವಿಚಾರ ವಿವೇಚನಾದೃಷ್ಟಿಗಳ ಕರ್ತವ್ಯವು. ಹೊರಗೆ ಕಾಣುವ ವಿಶ್ವವು ಯಾವುದೋ ಅಚಿಂತ್ಯವಾದ ರಚನಾಶಕ್ತಿ ಯುಕ್ತವಾದ ಒಂದಾನೊಂದು ಕಾರಣವಸ್ತು ಇರಲೇಬೇಕೆಂದು ವಿಜ್ಞಾನ ದಲ್ಲಿ ಪ್ರಗತಿಹೊಂದಿದ ಪಾಶ್ಚಾತ್ಯ ಪಂಡಿತರು ಕೂಡಾ ಒಪ್ಪಿರುವಾಗ, ನಮ್ಮ ಭಾರತೀಯರಾದ ಆಧುನಿಕ ಪುಸ್ತಕ ವಿಜ್ಞಾನಿಗಳು ವಿಚಾರಿಸದೆ ಪ್ರಯೋಗ ರೀತಿಯಿಂದ ಅನುಭವಿಸದೆ ಪುಸ್ತಕದ ಮತ್ತು ಸಾಮಾನ್ಯ ವಿಜ್ಞಾನಿಗಳ ಮಾತು ಕೇಳಿ ಮಹಾತ್ಮರಾಗಿದ್ದಾರೆ ಇದು ಆಶ್ಚರ್ಯದ ಸಂಗತಿ.

ದೇವರು (ಈಶ್ವರನು) ಇದ್ದಾನೆಂದು ತಿಳಿಯುವವರೆಲ್ಲರೂ ಆಸ್ತಿಕರು. ಅವನಿಲ್ಲವೆಂದು ಹೇಳುವವರು ನಾಸ್ತಿಕರು. ಇಲ್ಲನೆಂದು ಹೇಳುತ್ತಿರುವವನು ತಾನು ಇದ್ದೇ ಹೇಳುತ್ತಾನಲ್ಲವೇ ? ಹಾಗಾದರೆ ತನ್ನ ಅಸ್ತಿತ್ವವನ್ನು ನಾಸ್ತಿ ಎನಲಾಗದು. ತರ್ಕ ಪ್ರಮಾಣಗಳಿಂದ ದೇವರ ಅಸ್ತಿತ್ವವು ಸಿದ್ಧಗೊಳಿಸ ಲಾಗುವದಿಲ್ಲ. ತರ್ಕವು ಯುಕ್ತಿ ಮತ್ತು ಪ್ರಯುಕ್ತಿಗಳಿಂದ ವಿಚಾರಿಸಲಾ ಗುತ್ತದೆ. ಆದ್ದರಿಂದ ಮತ ಮತಾಂತರದವರು ಅನೇಕ ಯುಕ್ತಿಗಳಿಂದ ದೇವರ ಅಸ್ತಿತ್ವವನ್ನು ಮತ್ತು ನಾಸ್ತಿತ್ವವನ್ನು ಸಿದ್ಧಾಂತಗೊಳಿಸಲು ಇದುವರೆಗೆ ಹೋರಾಟ ನಡೆದ ವಿಷಯಗಳು ತಿಳಿಯುತ್ತವೆ. ಚಾರವಾಕರು ಹಾಗೆಯೇ ಸಿದ್ಧಗೊಳಿಸಿ ದೇವರ ವಿಷಯ ಇರುವನೆಂಬುದನ್ನು ಅಲ್ಲಗಳೆಯುತ್ತಾರೆ. ಅಷ್ಟೇಕೆ ಆಧುನಿಕರೂ ಆಸ್ತಿಕ ಮತಾನುಯಾಯಿಗಳೂ ಈ ವಿಷಯದಲ್ಲಿ ವಾದ ವಿವಾದಗಳು ಮಾಡುತ್ತಿರುವರು. ದ್ವೈತ, ವಿಶಿಷ್ಟ ಅದ್ವೈತ ಮುಂತಾದ ಆಚಾರ್ಯರು ಈ ಸಿದ್ಧಾಂತಗಳಲ್ಲಿ ಬಲವಾದ ಯುಕ್ತಿಪ್ರಮಾಣಗಳಿಂದ

ದೇವರ ಅಸ್ತಿತ್ವವನ್ನು ಸ್ಥಾಪಿಸಿರುವರೆಂಬುದು ಭಾರತೀಯ ಮತದವರಾದ ಎಲ್ಲರಿಗೂ ಗೊತ್ತಿದೆ. ಆದರೆ ಅವರವರ ವಿಚಾರಪ್ರಭೇದಗಳು ಮಾತ್ರ ಗೋಚರಿಸುತ್ತಿವೆ. ಧ್ಯೇಯ ಮಾತ್ರ ಒಂದೇ. ಇದು ಸಾಮಾನ್ಯ ಜನರಿಗೆ ದುರವಗಾಹನವೆಂದೇ ಹೇಳಬಹುದು. ಈ ವಿಷಯ ಚರ್ಚಿಸಲು ಅನವಸರ ಪ್ರಕೃತದಲ್ಲಿ ಮಾತ್ರ, ತ್ರಿಕಾಲದಲ್ಲಿ ಅಬಾಧಿತವಾದ ಸತ್ಯಸ್ವರೂಪ ಈಶ್ವರನು ಇದ್ದಾನೆಂದು ತಿಳಿಯಬಯಸಿದರೆ ತರ್ಕಪ್ರಮಾಣಗಳಿಂದ ಸಾಧ್ಯವಲ್ಲ. ಯಾಕಂದರೆ ಬುದ್ಧಿಯಿಂದ ಈಚೆಗೆ ಯುಕ್ತಿಗಳು ಪ್ರಮಾಣಗಳು ವ್ಯವಹಾರದಲ್ಲಿ ಬಳಸಲು ಅನುಕೂಲಗಳು ಆದರೆ ಬುದ್ಧಿಯಿಂದಾಚೆಗೆ ಪರಮಾತ್ಮನನ್ನು ತಿಳಿಯಬೇಕಾಗಿದ್ದರೆ ಕೇವಲ ಪವಿತ್ರವಾದ ಭಾವನೆಯಿಂದಲ್ಲದೆ ಬೇರೆ ಉಪಾಯಗಳಿಲ್ಲ ಈ ವಿಷಯ ಅಂತಃಕರಣೈಕಗಮ್ಯವೇ ಹೊರತು ಮಾತು ಮನಗಳಿಂದತ್ತತ್ತ ಮೀರಿದೆ.

ಹೀಗಿರುವಾಗ ಕೇವಲ ಬಾಹ್ಯೇಂದ್ರಿಯಗಳಿಂದ ಈಶ್ವರನ ಅಸ್ತಿತ್ವವು ಸಿದ್ಧಿಸುವದಿಲ್ಲ. ಶುದ್ಧ ವಿಚಾರ ಆಚಾರವಂತರ ಅನುಭವಗೋಚರವಾದದ್ದು ಆದ್ದರಿಂದ ಪವಿತ್ರ ಭಾವನೆಯಿಂದ ಸಾಧ್ಯವೆಂದು ದೊಡ್ಡವರ ಸಿದ್ಧಾಂತ. ಕೇವಲವಾದ ವಿವಾದಗಳಿಂದ ಸಿದ್ಧಿಸುವ ವಿಷಯವಲ್ಲ.

ಒಬ್ಬ ಮಹಾನುಭಾವಿಗಳು ಹೇಳಿದ್ದೇನೆಂದರೆ ನಾನು ಮಾಯಾವಾದಿಯಲ್ಲಿ ವಿವರ್ತವಾದಿಯಲ್ಲಿ ಭೇದವಾದಿಯಲ್ಲ ಮಿಥ್ಯಾವಾದಿಯಲ್ಲ. ನನ್ನ ಅಭಿಪ್ರಾಯ ಮಾತ್ರ ಸುಜ್ಞಾನ ಮೂಲಕ ಭಕ್ತಿ ಪ್ರಧಾನವಾದ ಸರ್ವಾರ್ಪಣ ಯೋಗವಾಗಿದೆ ಎಂದು ಹೇಳುತ್ತೇನೆಂದು ಅನುಭವಿಕರಿಂದ ಸಮಗ್ರವಾಗಿ ಬೋಧಿಸಿರುವನು. ದೇವರು ಇದ್ದಾನೆಂದು ತಿಳಿಯಬೇಕಾದರೆ ಮೊದಲು ನೀತಿಯಿಂದ ನಡೆಯಲು ಕಲಿಯಬೇಕು. ಇದಿಲ್ಲದೆ ತಳಹದಿ ಇಲ್ಲದ ಮಹಡಿಯನ್ನು ಕಟ್ಟಬೇಕೆಂದು ಯತ್ನಿಸಿದ ವಿಚಾರವು ಶುಷ್ಕವಾದ ವಿಚಾರವೆಂದು ಹೇಳಬಹುದು. ದೇವರು ಸತ್ಯಸ್ವರೂಪನು. ಎಲ್ಲಾ ಕಡೆಯಲ್ಲಿ ಆತನು ಇರುವನು ಎಂದು ಹೇಳಲಿಕ್ಕೆ ಸುಲಭ. ಆದರೆ ಇರುವಿಕೆ ನಿಜವಾಗಿದ್ದರೆ ಯಾವನು ಪಾಪ ಭೀತನಾಗಿಯೂ ತನ್ನಂತೆ ಇತರರನ್ನು ಬಗೆಯುವವನಾಗಿಯೂ ಇರುತ್ತಾನೆ. ಇತ್ಯಾದಿ ಸದ್ಗುಣಗಳು ಇಲ್ಲವಾದರೆ ನಾಸ್ತಿಕನೆಂದೇ ಹೇಳಲು ಸಂಶಯವಿಲ್ಲ.

ಮನೆಯಲ್ಲಿ ಮನೆಯ ಯಜಮಾನನಿರುವಾಗ ಆತನ ದ್ರವ್ಯವಾಗಲಿ ಇತರ ಪದಾರ್ಥಗಳಾಗಲಿ, ಕಳ್ಳನು ಕದಿಯಲು ಸಾಧ್ಯವಿಲ್ಲ. ಹಾಗೆಯೇ ಒಬ್ಬನು ಕದಿಯಲು ಹೋದಾಗ ಸಮಾಜ ಭಯ, ಸರಕಾರಭಯ ಮೀರಿ ಕದ್ದರೂ ಸದಸದ್ವಿವೇಕಭಯವುಳ್ಳವನಾಗಿರುವನು. ಇದಕ್ಕಿಂತಲೂ ಸಮಾಜ ಸರಕಾರಭಯಗಳನ್ನು ನಿರ್ಲಕ್ಷಿಸಿದರೂ ಸದಸದ್ವಿವೇತದ ಭಯಆಸ್ತಿಕ್ಯಭಾವನೆ ಇದ್ದ ಭಾವುಕನಿಗೆ ಮಾತ್ರ ಈಶ್ವರನನ್ನು ಒಡಂಬಟ್ಟು ಆತನ ವಿಲಾಸವೇ ಇದೆಲ್ಲಾ ಎಂದು ತಿಳಿದು. "ಸ್ವೇಚ್ಛಯಾ ಸ್ವಚಿತ್ತಾತ್ವ ವಿಶ್ವ ಮುನ್ಮೀಲಯತಿ" ಎಂಬ ಶಿವಸೂತ್ರದಂತೆ "ಯಶ್ಶಿವಃ ಸ್ಸೋಹಮೇ ವಹಿ" ಎಂಬ ಅಂತಿಮ ವಿಚಾರ ಆಚಾರ. ಅನುಭಾವಿಯಾಗಿ ಸರ್ವತ್ರ ಶಿವಭಾವನೆಯಿಂದ ಸಕಲವ್ಯವಹಾರಗಳಲ್ಲಿ ಈಶ್ವರನನ್ನು ಮುಂದಿಟ್ಟುಕೊಂಡು ನಡಸುವ ಮಹಾತ್ಮನೇ ಆಸ್ತಿಕ್ಯ ಭಾವವುಳ್ಳವ ಮಹಾತ್ಮನೆನಿಸುವನು. ಇಲ್ಲವಾದರೆ ಶುಷ್ಕ ವಿಚಾರ, ಅನಾಚಾರಗಳಿಂದ ದೂಷಿತನಾಗುವನು. ಈತನೇ ನಾಸ್ತಿಕನು.

# ಲಿಂಗಮಹಾತ್ಮೆ.

(ಲೇಖಕ।— ರೇವಣಶಿದ್ದಪ್ಪ ಶೀಲವಂತ ಹುನಗುಂದ.)

ಜಗತ್ತಿನೊಳಗಿನ ಮೂರ್ತಿಪೂಜಕ ಯಾವದೇ ಮತವನ್ನು ಎತ್ತಿಕೊಳ್ಳಲಿ, ವೀರಶೈವರಂಥ ಮೂರ್ತಿಪೂಜಾ ವೈಶಿಷ್ಠವು ಎಲ್ಲಿಯೂ ಕಂಡು ಬರುವದಿಲ್ಲ. ಮತ್ತು ಇದು ಮೂರ್ತಿ ಪೂಜೆಯೂ ಅಲ್ಲ ಆತ್ಮನ ಪೂಜೆ. ಇದನ್ನು ಮುಂದೆ ವಿವರಿಸುವಾ. ವೀರಶೈವರ ಆಳವಾದ ಅನುಭವವನ್ನು ಸೂಚಿಸುವದೇ ಈ ಲಿಂಗತತ್ವ. ಲಿಂಗವು ಗೋಲವಾಗಿದ್ದು ವಿಶ್ವದ ಮೂಲ ಕುರುಹಾಗಿದೆ. ಜಗತ್ತಿನೊಳಗಿನ ಎಲ್ಲ ಸ್ಪಷ್ಟ ವಸ್ತುಗಳಾದ ಸೂರ್ಯ ಚಂದ್ರ ಗ್ರಹಾದಿಗಳು ಗೋಲವಾಗಿರುತ್ತವೆ. ಇದರಿಂದ ವಿಜ್ಞಾನಿಗಳು ಅಣು-ಪರಮಾಣುಗಳು ಸೂಕ್ಷ್ಮ ಕೇಂದ್ರಗಳು ಸಹ ಗೋಲವಿರುವವೆಂದು ಕಂಡು ಹಿಡಿದಿದ್ದಾರೆ. ಈ ಆಧಾರದಿಂದ ಶರಣರು ಅನುಭಾವದಿಂದ ತಿಳಿದು ತೋರಿಸಿದ ಲಿಂಗದ ಆಕಾರ ಮೂಲವಸ್ತುವಿನ ಆಕಾರಗಳೇ ನಿಜವೆಂದು ನಂಬಲು ಸಕಲರಿಗೂ ತಿಳಿಯುಬಹುದಾಗಿದೆ.

"ಲಿಂಗಮಧ್ಯೆ ಜಗತ್ ಸರ್ವಂ." ಎಂಬುದನ್ನು ವಿಚಾರಿಸಿದರೆ ತೋರುವದೆಲ್ಲಾ ಲಿಂಗರೂಪವಾಗಿರುವದು. ಸ್ಥೂಲ-ಸೂಕ್ಷ್ಮ-ಕಾರಣ-ಮಹಾಕಾರಣಗಳೆಲ್ಲವೂ ಲಿಂಗವಾಗಿವೆ. ಲಿಂಗ ಎಲ್ಲಿ ಇರುವದೋ ಅಲ್ಲಲ್ಲಿ ಶಿವ-ಶಕ್ತಿಯರ ಮಿಲನವನ್ನೇ ಸೂಚಿಸುವದು. ಸತ್-ಚಿತ್-ಆನಂದಮಯ ಮಹಾಕಾರಣ ಸ್ವಾನಂದ ಸಾಮ್ರಾಜ್ಯದಲ್ಲಿ ನಿಗೂಢ, ಆನಂದ, ನಿರಾಕಾರ, ಪರಮಾತ್ಮನೆನಿಸುವನೋ, ಆತನ ಶಕ್ತಿಯಾದವಳಿಗೆ ಪರಮೇಶ್ವರಿ ಎನ್ನುವರು. ಇದೇ ಮಹಾಕಾರಣ ಲಿಂಗವೆನಿಸುವದು. ವಿಜ್ಞಾನಮಯ ಜಗತ್ತಿನಲ್ಲಿ ಅವನೇ ಸಕಲೈಶ್ವರ್ಯಸಂಪನ್ ಈಶ್ವರನೆನಸುತ್ತಾನೆ. ಆತನ ದಿವ್ಯಶಕ್ತಿಯೇ ಈಶ್ವರಿ ಎನಿಸುವಳು. ಆ ಸತ್-ಚಿತ್-ಆನಂದಗಳು ಇಲ್ಲಿ ಪ್ರಕಾಶ ಶಕ್ತಿ ಜಡತ್ವಗಳಾಗಿ ಮಾರ್ಪಟ್ಟವೆ. ಇದೇ ಭಾವಲಿಂಗವೆನಿಸುವದು. ಮನ-ಬುದ್ಧಿಯು ಸ್ಥಾನವಾದ ಸೂಕ್ಷ್ಮ ಜಗದಲ್ಲಿ ಅಂತರಾತ್ಮನೆನಿಸುವನು ಅವನ ಶಕ್ತಿಯು ಅಪ್ರಾಣ ಎನಿಸುವಳು. ಆಗ ಪ್ರಕಾಶ ಶಕ್ತಿ ಜಡತ್ವಗಳು, ಸತ್ವ ರಜ ತಮ

ಗಳಾಗಿ ಮಾರ್ಪಡಿಸುವವು. ಇದೇ ಸೂಕ್ಷ್ಮಲಿಂಗ (ಪ್ರಾಣಲಿಂಗ) ಎನಿಸು ವದು. ಅನ್ನಮಯ ಸ್ಥೂಲ ಜಗತ್ತಿನಲ್ಲಿ ಅವನು (ಜೀವಾತ್ಮ) ಪುರುಷನೆ ನಿಸಿ, ಅವನ ಶಕ್ತಿಯು ಪ್ರಕೃತಿ ಎನಿಸುವಳು. ಸತ್ತ್ವ ರಜ ತಮಗಳೇ ಇಲ್ಲಿ ಬ್ರಹ್ಮ ವಿಷ್ಣು ರುದ್ರರು ಆಗುವರು, ಇದೇ ಸ್ಥೂಲಲಿಂಗ. ಸತ್ವ ರಜ ತಮ ಇವು ಮಾಯಾ ಅಪರಾ) ಪ್ರಕೃತಿ. ಸತ್-ಚಿತ್-ಆನಂದ ಇವು ಚಿಚ್ಛಕ್ತಿ (ಪರಾ-ಪಾರ್ವತಿ) ಪ್ರಕೃತಿ ಪರಶಿವ ಹೀಗೆ ಇದ್ದುದರಿಂದ ಈ ಇಷ್ಟಲಿಂಗದ ಕಲ್ಪನೆಯಾಗಿರುವದು. ಇದರಿಂದ ಲಿಂಗವೆಂದರೆ ಅಖಂಡ ಪರಶಿವನೆಂದು ಅರ್ಥವಾಗುವದು. ಈ ಇಷ್ಟಲಿಂಗಕ್ಕೂ ವೇದಾಂತಿಗಳ ತತ್ತ್ವಮಸಿ ಪದಕ್ಕೂ ಎಂಥ ನಿಕಟಸಂಬಂಧವನ್ನು ನಮ್ಮ ಶರಣರು ಮಾಡಿದ್ದಾರೆ ನೋಡಿರಿ.

ಇನ್ನು ಲಿಂಗದ ಅಳತೆ ಬಗ್ಗೆ ವಿಚಾರಿಸುವಾ ಯಾವ ಹರಿಬ್ರಹ್ಮಾದಿ ಗಳಿಗೂ ಲಿಂಗದ ಅಳತೆ ಸಾಧ್ಯವಾಗದು ಹೀಗೆಂದಿದ್ದಾರೆ. ಲಿಂಗವೇ "ಜಗ ದಗಲ, ಮುಗಿಲಗಲಿ, ಮಿಗೆಯಗಲ, ನಿಮ್ಮಗಲ, ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ." ಎಂದು ಲಿಂಗ ದೇವನನ್ನು ವರ್ಣಿಸುವಾಗ, ಭಕ್ತನ ಮನಸ್ಸು ವಿಶ್ವದಗಲ, ವಿಶ್ವದೆತ್ತರ ವಿಶಾಲವಾಗುತ್ತದೆ. ಇಂಥ ದಿವ್ಯ, ಭವ್ಯ ಲಿಂಗವನ್ನು ಧ್ಯಾನಿಸಿ ಧ್ಯಾನಿಸಿ ಶ್ರೀ ಪ್ರಭುದೇವರು ಹೇಳುವಂತೆ ''ಧ್ಯಾನ ವಿಶ್ರಾಂತಿಯಲಿ ಧಿಟ-ಪ ಟನೆಂಬು ದೊಂದು ದರುಶನವ" ಕಂಡು ಧ್ಯಾನವನ್ನೇ ಮರೆದು ಧ್ಯೇಯವೇ (ಲಿಂಗವೇ) ತಾನಾಗುವದು.

ಜಗತ್ತಿನ ಸಕಲ ಚರಾಚರ ಪ್ರಾಣಿಗಳೆಲ್ಲವೂ ಒಂದೇ ಮೂಲವಸ್ತು (ಲಿಂಗ-ಪರ-ಬ್ರಹ್ಮ) ವಿನಿಂದ ಜನಿಸಿ ಬಂದವುಗಳಾಗಿರುತ್ತವೆ. ಇವಕ್ಕೆ ವಿಶ್ರಾಂತಿ ಎಂದರೆ, ಅವು ಬಂದ ಮೂಲ ಚೈತನ್ಯಸಾಗರದಲ್ಲಿ ಸಮರಸ ವಾದಾಗ ಮಾತ್ರ ಚಿರಕೋಟಿಯಲ್ಲಿ ಚಿರಶಾಂತಿಯನ್ನು ಪಡೆಯಬೇಕೆಂಬ ಜ್ಞಾನವಿರುವದು ಮನುಷ್ಯ ಜೀವನಿಗಷ್ಟೇ ಮಾತ್ರ. ಆದುದರಿಂದ ಶರ ಣರು ಹೇಳಿದಂತೆ ಮನುಷ್ಯ ಜನ್ಮ ಬಹು ದುರ್ಲಭವೆಂದು ಹೇಳಿದ್ದಾರೆ. ಇಂಥ ಪವಿತ್ರ ಜನ್ಮ ದೊರೆತಾಗ್ಗೆ "ಗಾಳಿ ಬಿಟ್ಟ ಕೈಲೆ ತೂರಿಕೋ" ಎಂಬಂತೆ ಭವದ ಬಂಧನವನ್ನು ಕಳೆಯುವದಕ್ಕೋಸುಗ "ಅಯ್ಯೋ!" ಎಂಥ ಭೀಕರ ಭವದಬಂಧನ? ಇದೇನು ವಿಷಮಯ ಸಂಸಾರ? ಸಂಸಾರ ದಂದುಗಹಿಂಗಿ ಮನವಲ್ಲಿ ಸಂತೋಷದ ಪರಿಣಾಮವಾಗುವದೆಂದು? ಈ ಹೇಯಯೋನಿಯಲ್ಲಿ

ಹುಟ್ಟಿ ಬಂದುದೆಂಥ ಲಜ್ಜೆ! ಎನ್ನನಿಲ್ಲಿಗೆ ತಂದವರಾರು? ಎನ್ನ ರಕ್ಷಿಸುವರಾರು? " ಎಂದು ಬಳಲುತ್ತಿರುವಾಗ ಕೂಸಿನ ಆಳುಕೇಳಿ ತಾಯಿ ಓಡಿ ಬರುವಂತೆ ಮಾಯಾಭಾವವಿದ್ದು, ಅನುಭಾವವವಿದ್ದು, ಭಕ್ತಕೋಟಿಯನ್ನುದ್ಧರಿಸಲು ಸಿದ್ಧನಾದ ಶ್ರೀಗುರು "ಮಗು! ನೀನಿರುವದು ನಿನ ಮನೆಯಲ್ಲ; ಈ ಕಾಯವೂ ನೀನಲ್ಲ, ಅಖಂಡಪರಿಪೂರ್ಣಾನಂದ ಪರಶಿವಲಿಂಗವೇ ನಿನ್ನ ಸ್ಥಾನ; ಆನಂದಮಯಸ್ಥಾನವನ್ನು ಸೇರಿ ನಿಲ್ಲುವವರೆಗೆ ನಿನಗೀಕಷ್ಟ ಪರಂಪರೆ ಬಿಡದು. ನೀಮೆಚ್ಚಿದ ಮಣ್ಣಿನಕಾಯವು ಕೊಳೆತುನಾರುವದು. ನಿನ್ನ ಇರವು ಜ್ಞಾನಚೈತನ್ಯಮಯ ನಿರಾಕಾರ. ನಿರಾಕಾರನಾದ ನೀನು ಪರಶಿವಲಿಂಗದಿಂದ ಹೊರಟು ಹೊರಮುಖನಾಗಿರುವಿ, ಈ ಹೊರದೃಷ್ಟಿಯನ್ನು ಹೊರಳಿಸಿ ನಿನ್ನ ಮೂಲ ಗುರಿಯ ಕಡೆಗೆ ನೋಡು'' ಎಂದು ತ್ರಿವಿಧ ದೀಕ್ಷೆಯ ಮೂಲಕ ಶಿಷ್ಯನಿಗೆ ಅವನ "ಪಶ್ಚಿಮಶಿಖೆಯೊಳಗೆ ಸ್ವಚ್ಛವಾಗಿರುತಿರ್ಪ! ಅಚ್ಚಪರಬ್ರಹ್ಮವನು ನಿಶ್ಚೈಸಿ" ಇಷ್ಟಲಿಂಗರೂಪದಿಂದ ಕರಕ್ಕೆ ದಯಪಾಲಿಸುವನು. ಹೀಗೆ ದಯಪಾಲಿಸಿ ಇದೋ! ಇನೇ ನಿನ್ನ ಮೂಲ ಸ್ವರೂಪವಾದ ಪರಬ್ರಹ್ಮಲಿಂಗ ಇದರ ಹೆಸರು 'ಓಂ ನಮಃ ಶಿವಾಯ' ಇದನ್ನೇ ನೋಡುತ್ತಿರು. ಇದನ್ನೇ ಸದಾ ಜಪಿಸುತ್ತಿರು." ಎಂದು ಬೋಧಿಸುವನು. ಈ ಲಿಂಗವನ್ನು ಲಿಂಗವಂತರು ಪ್ರೇಮದಿಂದ ಪೂಜಿಸಿ ಭಜಿಸಿ ಹೃದಯವರಳಿ ನಿಟ್ಟಿಸಿ ನಿರುಕಿಸಿ, ನಿರುಕಿಸಿ ಅಂಗವಮರೆದು ಲಿಂಗವ ಬೆರೆಯುವರು ಇದೇ ಲಿಂಗಾಂಗ ಸಮರಸವೆನ್ನುವರು.

ಇಂಥ ಮಹತ್ತರವಾದ ಇಷ್ಟಲಿಂಗದ ಶಬ್ದ ಎಷ್ಟು ವ್ಯಾಪಕ, ಪರಿಪೂರ್ಣ, ವಿಶಾಲ, ಉದಾತ್ ತತ್ವಗಳ ಮೇಲೆ ರಚಿಸಿದ ಬಗ್ಗೆ ಈ ಷಣ್ಮುಖ ಸ್ವಾಮಿಗಳು ಹೀಗೆ ಹೇಳಿದ್ದಾರೆ.

" ಎನ್ನ ಕರಸ್ಥಲದ ಮಧ್ಯದಲ್ಲಿ ಪರಮನಿರಂಜನ ಕುರುಹು ತೋರಿದ ।
ಆ ಕುರುಹಿನಮಧ್ಯದಲ್ಲಿ ಅರುಹಿನ ಕಳೆಯ ತೋರಿದ ।
ಆ ಕಳೆಯಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ ।
ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ ।
ಎನ್ನೊಳಗೆ ತನ್ನ ತೋರಿದ । ತನ್ನೊಳಗೆ ಎನ್ನನಿಂಬಿಟ್ಟುಗೊಂಡ
ಮಹಾಗುರುವಿಗೆ ನಮೋ, ನಮೋ, ಎನುತಿರ್ದೆನಯ್ಯಾ ಅಖಂಡೇಶ್ವರಾ॥

ಈ ವಚನದೊಳಗೆ ಸಹಜವಾಗಿ ಷಟ್‌ಸ್ಥಲದ ವರ್ಣನೆಯೂ ಅಖಂಡ ಲಿಂಗದ ವರ್ಣನೆಯೂ ಕೂಡಾ ಬಂದಿದೆ. ಗುರುವಿನಿಂದ ಬಂದ ಇಷ್ಟಲಿಂಗ

ದಿಂದಲೇ ಜ್ಞಾನ ಹುಟ್ಟುವದು. ಇದರಲ್ಲಿ ಭಕ್ತನ ಆಚಾರಲಿಂಗ, ಮಹೇಶ್ವರನ ಗುರುಲಿಂಗ, ಪ್ರಸಾದಿಯ ಶಿವಲಿಂಗ, ಪ್ರಾಣಲಿಂಗಿಯ ಜಂಗಮ ಲಿಂಗ, ಶರಣನ ಪ್ರಸಾದಲಿಂಗ, ಐಕ್ಯನ ಮಹಾಲಿಂಗ ಹೀಗೆ ಆರು ಲಿಂಗಗಳನ್ನು ಷಟ್‌ಸ್ಥಲಗಳಿಗೂ ಸಂಬಂಧಿಸಿರುವವು. ಇದರಿಂದ ಲಿಂಗವು ಎಷ್ಟು ವ್ಯಾಪಕ, ವಿಶಾಲ, ಉದಾರ, ಪರಿಪೂರ್ಣವಿರುವದೆಂದು ತೋರುವದು.

ವೀರಶೈವ ದರ್ಶನದಲ್ಲಿ, ವೀರಶೈವ ತತ್ವದಲ್ಲಿ, ವೀರಶೈವ ಸಂಸ್ಕೃತಿಯಲ್ಲಿ, ವೀರಶೈವ ಶಿವಯೋಗದಲ್ಲಿ, ವೀರಶೈವರ ಪ್ರತಿಯೊಂದರಲ್ಲಿ ಲಿಂಗವು ಹಾಸು ಹೊಕ್ಕಾಗಿರುವದು ವೀರಶೈವನ ಪ್ರತಿ ಹೆಜ್ಜೆ-ಹೆಜ್ಜೆಗೂ ಲಿಂಗದ ಪ್ರತಿಜ್ಞೆ ಬರುವದು. ವೀರಶೈವನಿಗೆ ಲಿಂಗವೇ ಉಸುರಾಗಿರುವದು. ಅದಕ್ಕಾಗಿಯೇ ಮಾತೆಂಬುದು ಜ್ಯೋತಿರ್ಲಿಂಗ, ಶರಣಸತಿ ಲಿಂಗಪತಿ, ಲಿಂಗ ಸಂಧಾನ, ಲಿಂಗಸಾಮರಸ್ಯ, ಅಂಗವೇ ಲಿಂಗ, ಲಿಂಗವೇ ಪ್ರಾಣ, ಸರ್ವಾಂಗ ಲಿಂಗ ಭಕ್ತನ ಮುಖದರ್ಪಣದಲ್ಲಿ ಲಿಂಗ ಕಾಣುವದು. ನುಡಿದರೆ ಲಿಂಗ ಮೆಚ್ಚಿ ಅಹುದೆನ್ನಬೇಕು. ಹೀಗೆ ಪ್ರತಿಯೊಂದರಲ್ಲಿ ಲಿಂಗವನ್ನು ಕಾಣಬೇಕು. ಲಿಂಗವನ್ನು ಹೊಂದಬೇಕು.

ಹೀಗೆ ಭಕ್ತನು ಲಿಂಗಮಯನಿರುವಾಗ ಅಜ್ಞಾನದಿಂದ, ಅನೇಕ ಸ್ಥಾವರಲಿಂಗಕ್ಕೆಳೆದೊಡೆ, ಹಾದರಗಿತ್ತಿಯಂತೆ ದೇವನಿಗೆ ಅಪಹಾಸ್ಯಕ್ಕೀಡಾಗುವನು. ಇಂಥವರಿಗೆ ಮುಕ್ತಿ ಎಂಬುದು ಸ್ವಪ್ನದಲ್ಲಿಯೂ ಸಾಧ್ಯವಿಲ್ಲ. 'ಮಣ್ಣು ಬಿಟ್ಟು ಮಡಿಕೆಯಿಲ್ಲ'ವೆಂಬಂತೆ ತನ್ನ ಬಿಟ್ಟು ಬೇರೆ ದೇವನಿಲ್ಲ. ಇದನ್ನು ಸಕಲವೀರಶೈವರೆಲ್ಲರೂ ಅರಿಯತಕ್ಕದ್ದು ಎಷ್ಟೋ ಜನ್ಮ-ಜನ್ಮದಿಂದ ಭವದಬಂಧನ ಬಿಗಿಯಲ್ಪಟ್ಟದ್ದರೂ, ಶ್ರೀಗುರುಶುದ್ಧ ಬ್ರಹ್ಮವನ್ನು ಇಷ್ಟಲಿಂಗ ರೂಪದಿಂದ ಭಕ್ತನಿಗೆ ದಯಪಾಲಿಸಿದೊಡನೇ, ಎಲ್ಲ ಮಾಯಾಬಂಧನ ಹರಿದು ಹೋಗಿ, ಮುಕ್ತಿಮಂದಿರದ ಸರ್ವದಾರಿ ನಿಚ್ಚಳವಾಗಿ ಕಾಣಿಸಲ್ಪಡುತ್ತಿದ್ದರೂ, ಎಷ್ಟೋ ಜನ ಗುರು-ವಿರಕ್ತರು ಅಜ್ಞಾನದಿಂದ ಹಣದಾಸೆಗೆ ಇಷ್ಟಲಿಂಗದ ಮಹತ್ವವನ್ನು ಗಾಳಿಗೆ ತೂರಿ ಯಂತ್ರ-ತಂತ್ರದ ಭೂತಬಿಡಿಸಿ ಭಕ್ತರನ್ನು ಅಧೋಗತಿಗೆಳೆಯಲಿಕ್ಕೆ ಹತ್ತಿದ್ದಾರೆ. ಹೀಗಾಗಿ ವೀರಶೈವ ಸಮಾಜದ ಎಷ್ಟೋ ಜನರು ಅಜ್ಞಾನಮುಖ ಕುರಿಯಂತಾಗಿದ್ದಾರೆ. ಹೀಗಾಗದೇ ಸಕಲರೂ ಬೇಗನೇ ಎಚ್ಚತ್ತು, ಇಷ್ಟಲಿಂಗದ ಮಹತ್ವದ ಹೊರತಾಗಿ, ಯಂತ್ರ ತಂತ್ರದ

ಹುಚ್ಚು ಹಿಡಿಸುವ ಸ್ವಾಮಿಗಳಿಗೆ ಯೋಗ್ಯ ಎಚ್ಚರಿಕೆ ಕೊಡಬೇಕು. ವೀರಶೈವರಾದ ನಾವುಗಳು ಜಾಗ್ರತವಾಗಿ ಹೀಗೆ ಎಚ್ಚರಿಕೆ ಕೊಡದೇ ಹೋದರೆ ನಮ್ಮ ವಿನಾಶವನ್ನು ನಾವೇ ತಂದುಕೊಂಡಂತಾಗುವದಲ್ಲದೆ, ಚಿರಶಾಂತಿ ಎಂಬುದು ಸ್ವಪ್ನದಲ್ಲಿಯೂ ಕೂಡಾ ಸಿಗಲುಸಾಧ್ಯವಿಲ್ಲಾ.

ವೀರಶೈವ ಮತದವರೇ ಇರಲಿ, ಮತ್ತೆ ಬೇರೆ ಯಾವ ಮತದವರೇ ಇರಲಿ, ಲಿಂಗ ಗುಣಗಳಾದ ಸತ್ಯ, ಅಹಿಂಸೆ, ಸಹಕಾರ ಪ್ರೀತಿ, ವಿಶ್ವಾಸ, ಶಾಂತಿ, ಸಮತೆ, ಮುಂತಾದ ಅನೇಕ ಸದ್ಗುಣಗಳು ಯಾರಲ್ಲಿ ನೆಲೆಸಿರುವವೋ ಅವರೇ ಲಿಂಗವಂತರು. ಇದರ ಬಗ್ಗೆ ಶ್ರೀ ಸಿದ್ಧರಾಮ ದೇವರು ಹೀಗಂದಿದ್ದಾರೆ:— "ಕುಲದಲ್ಲಿ ಶೂದ್ರನಾದರೇನು ? ಮನದಲ್ಲಿ ಮಹದೇವನೆನಿಲಗೊಂಡವನೇ ವೀರಶೈವ ನೋಡಾ." ಹೀಗೆ ಸದಾಚಾರ ಸದ್ಗುಣ ಸಂಪನ್ನನೇ ಕುಲಜನೆಂದು ಹೇಳುತ್ತಿರುವಾಗ (ವೀರಶೈವನೆಂದು ಹೇಳುತ್ತಿರುವಾಗ) ಲಿಂಗವಂತ (ವೀರಶೈವ) ಧರ್ಮವೆಂದರೆ ವಿಶ್ವಧರ್ಮವೆಂದು ಘಂಟಾಘೋಷವಾಗಿ ಹೇಳಬಹುದು. ಯಾವನಲ್ಲಿ ತಾಮಸ (ಅಸಿ-ಹುಸಿ-ಕೋಪ-ಮೋಸ) ಗುಣಗಳಿರುವವೋ ಅವನೇ ಭವಿ. ಅಂಥವನು ವೀರಶೈವ, ಕ್ಷತ್ರಿಯ, ಬ್ರಾಹ್ಮಣ, ಶೂದ್ರ, ಮತ್ತು ಜಂಗಮಜಾತಿಯವನೇ ಇರಲಿ. ಅವನು ಶುದ್ಧ ವೀರಶೈವನಾಗಲಾರ, ಭಕ್ತನಾಗಲಾರ, ಲಿಂಗವಾಗಲಾರ, ಜಂಗಮವಾಗಲಾರ, ಹೀಗೆ ಸಕಲಶಾಸ್ತ್ರಾಧಾರವಾಗಿಯೂ, ಮತ್ತು ಷಟ್‌ಸ್ಥಲಸಿದ್ಧಾಂತದ ಆಧಾರದ ಮೇರೆಗೆ ಸ್ಪಷ್ಟವಾಗಿ ಹೇಳಬಹುದು.

" ಸಕಲಜನರಿಗೆ ಲೇಸನೇಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು. " ಎಂದು ಶ್ರೀ ಬಸವಣ್ಣನವರು ಹೇಳುತ್ತಿರುವಾಗ ಜಗತ್ತಿನೊಳಗಿನ ಸಕಲಜೀವರಾಶಿಗಳಿಗೆ ಕಲ್ಯಾಣಬಯಸುವವನೇ ನಿಜವಾದ ಶರಣನೆಂದು ಹೇಳುತ್ತಿರುವಾಗ ಇದರಲ್ಲಿ ದಯೆ, ಶಾಂತಿ, ಪ್ರೇಮದ, ಸಹಕಾರ, ಐಕ್ಯ, ಇವು ಎಲ್ಲಾ ಎಷ್ಟು ಆಳವಾಗಿ ನೆಲೆಯೂರಿರುವವು ನೋಡಿರಿ. ಹೀಗೆ ಸ್ಫುರಣಗೊಂಡ ಜ್ಞಾನವೇ ಜ್ಯೋತಿರ್ಲಿಂಗ, ಅವ್ಯಕ್ತಲಿಂಗ, ಇದೇ ದೇವೋನ್ಮಾದ· ಅಖಂಡಲಿಂಗದ ಬೆಳಗಿನಲ್ಲಿ ಸೂರ್ಯ, ಚಂದ್ರ, ನಕ್ಷತ್ರಗಳು ಬೆಳಕು ಕಾಣುವವು. ಇದೇ ಜ್ಞಾನಜ್ಯೋತಿ ಎಂದು ಕರೆಯುವರು, ಪರಂಜ್ಯೋತಿ ಎಂದು ಅನ್ನುವರು. ಈ ಲಿಂಗದ ಬೆಳಗು ಮಾತು ಮನಗಳಿಗೆ ನಿಲುಕದು. ಇದು ನಿರುಪಾಧಿಕ ನಿರ್ಮಲ ಪರಂಜ್ಯೋತಿ, ಎಂದು ವರ್ಣಿಸಿರುವರು. ಲಿಂಗವನ್ನು ಬೇಕಾದವರು ಹೇಗೆ ಹೊಗಳಿದರೂ ಅದು ಕಡಿಮೆಯೆಳ್ಳಿ ಇದನ್ನೇ ಶರಣರು ಬಚ್ಚಬರಿಯ ಬೆಳಕು ಎಂದು ಕರೆದಿರುವರು. ಇಂಥ ಬೆಳಕು ಎಂದರೆ ಜ್ಞಾನವೇ

ರೂಪುಗೊಂಡು ಬಂದವರೆಲ್ಲರೂ ಲಿಂಗೋದ್ಭವರೇ, ಅದು ಹೇಗೆಂದರೆ:— ಮಹಾಕಾರಣಲಿಂಗದಿಂದ-ಕಾರಣಲಿಂಗಕ್ಕೆ ಕಾರಣದಿಂದ-ಸೂಕ್ಷ್ಮಲಿಂಗಕ್ಕೆ, ಸೂಕ್ಷ್ಮಲಿಂಗನಿಂದ-ಸ್ಥೂಲಲಿಂಗಕ್ಕೆ, ಬಂದು ಕಾರ್ಯ ಪ್ರವೃತ್ತರಾದ ಮಹಾ ಶರಣರೆಂದು ಅರ್ಥವಾಗುವದಿಲ್ಲವೇ ? ಜಗತ್ತಿನ ಉದ್ಧಾರಕ್ಕೆ ಬಂದವರೆಲ್ಲ ಲಿಂಗೋದ್ಭವರೇ ಸರಿ. ಅಲ್ಲಯ್ಯ, ಬಸವಣ್ಣ, ಚನ್ನಬಸವಣ್ಣ, ಮರುಳ ಶಂಕರದೇವ, ಸಿದ್ಧರಾಮ, ಅಕ್ಕ ಮಹಾದೇವಿ, ಮುಂತಾದ ಶರಣರೆಲ್ಲಾ ಲಿಂಗೋದ್ಭವರೇ-ಯಾಕಂದರೆ ಎಲ್ಲವೂ ಲಿಂಗವೆಂದ ಕಾಲಕ್ಕೆ, ಲಿಂಗದಿಂದ ಬರದೆ ಎಲ್ಲಿಂದ ಬರಬೇಕು? ಪುಲ್ಲಿಂಗದಿಂದ ಸ್ತ್ರೀಲಿಂಗಕ್ಕೆ ಹೋಗಿ, ಸ್ತ್ರೀಲಿಂಗ ದಿಂದ ಹೊರಗೆಬರುವವರೆಲ್ಲರೂ ಮಾನವರು. ಜ್ಞಾನವುಳ್ಳವರಷ್ಟೇ ಮಾತ್ರ ಲಿಂಗೋದ್ಭವರು.

ಇಂಥ ಮಹತ್ತರವಾದ ಲಿಂಗಮಹಾತ್ಮೆಯನ್ನು ಎಷ್ಟು ಬರೆದರೂ ಕಡಿಮೆಯೇ. ಹರಿಬ್ರಹ್ಮಾದಿಗಳಿಗೂ ಕೂಡ ಸಾಧ್ಯವಿಲ್ಲ. ಇದರ ವರ್ಣನೆಯನ್ನು ಎಷ್ಟುಕಾಲ ಬರೆದರೂ ತೀರದು ಆದಾಗ್ಯೂ ಗುರುಕೃಪೆಯಿಂದ ಅದರ ಮಹತ್ವವನ್ನು ಅರಿತುಕೊಂಡು ನಡೆ-ನುಡಿ ಶುದ್ಧವಾಗಿಟ್ಟುಕೊಂಡು ನಡೆಯುವದೇ ಸತ್ಯ. ಬಾಯಿಬ್ರಹ್ಮನನೋದಿ ನಡತೆಯಲ್ಲಿ ತಪ್ಪಿದರೆ ಹೇಗಾಗುವದೆಂದು ಶರಣರು ಹೇಳಿದ್ದಾರೆ. "ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ ಹಿಡಿದಿದ್ದಲಿಂಗ ಘಟಸರ್ಪ ನೋಡಾ, ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವ ಮೆಚ್ಚಾ. ಎಂದು ಶರಣರು ಹೇಳಿದಂತೆ ಸಕಲರೂ ಮನದಂದು ತಿಳಕೊಂಡು ನಡೆದದ್ದಾದರೆ ಅದೇ ಲಿಂಗಸ್ವರೂಪ, ಲಿಂಗನಾಗುವ ಆಧಾರ. ಇದೇ ಲಿಂಗತತ್ವ, ಇಂಥ ಲಿಂಗತತ್ವವನ್ನು ಸಕಲ ಜನತೆಗೂ ತಿಳುವಳಿಕೆ ಮಾಡಿಕೊಟ್ಟು, ಅವರೆಲ್ಲರ ಉದ್ಧಾರದ ಬಗ್ಗೆ ಎಲ್ಲ ಗುರು-ವಿರಕ್ತರೂ, ತಮ್ಮ ತಮ್ಮ ಮಠವನ್ನು ಆಧ್ಯಾತ್ಮಿಕ (ಪಾರ್ಲಿಮೆಂಟ ಅನುಭವ-ಮಂಟಪ) ಕಾಲೇಜಿನ ರೂಪದಲ್ಲಿ ನಡೆಸಲಿಕ್ಕೆ ಸದಾಪ್ರಯತ್ನ ಪಟ್ಟಿದ್ದಾದರೆ, ಎಲ್ಲ ಗುರು-ವಿರಕ್ತರೂ ತಮ್ಮ ತಮ್ಮ ನಿಜವಾದ ಕರ್ತವ್ಯ ಮಾಡಿದಂತಾಗುತ್ತದೆ. ಈ ದೃಷ್ಟಿಯಿಂದಲೇ ಹಿಂದಿನಕಾಲದಿಂದ ಮಠ-ಮಾನ್ಯಗಳು ಭಕ್ತರಿಂದ ನಿರ್ಮಿಸಲ್ಪಟ್ಟವು. ಭಕ್ತರಿಂದ ನಿರ್ಮಿಸಲ್ಪಟ್ಟ ಮಠ-ಮಾನ್ಯಗಳಲ್ಲಿ ಭಕ್ತೋದ್ಧಾರದ ಹಾದಿ ಇಲ್ಲೆಂಬುದು ಎಲ್ಲಿಯ ನ್ಯಾಯ? ಕಾರಣ ಸಕಲರೂ ತಮ್ಮ-ತಮ್ಮ ಕರ್ತವ್ಯವನ್ನು ಸದಾ ನಡೆಸಿ ಲಿಂಗತತ್ವವು ಜಗತ್ತಿನಲ್ಲಿ ಹೆಚ್ಚೆಚ್ಚಾಗಿ ನಡೆಯುವಂತಾಗಲೆಂದು ಶ್ರೀಗುರುವಿನಲ್ಲಿ ಪ್ರಾರ್ಥಿಸಿ ಸಮಾಪ್ತಿಗೊಳಿಸಿದೆ.

# ವಚನಗಳು.

(೧) ...ಎನ್ನ ಕಾಯಕರ್ಮದ ಕೋಟಲೆ ಕಳೆಯಿತಯ್ಯಾ ನಿಮ್ಮ ಕೃಪೆಯಿಂದ। ಎನ್ನ ಕಂಗಳಕತ್ತಲೆಕತ್ತರಿಸಿದವಯ್ಯಾ ನಿಮ್ಮ ದಯದಿಂದ। ಎನ್ನ ಮನದ ಮಾಯೆಯು ಪ್ರಾಣಸಂಚಲವ ನೀಗಿತಯ್ಯಾ ನಿಮ್ಮ ಮಮತೆಯಿಂದ। ದೇವಾ ನಿಮ್ಮಾಶೀರ್ವಾದ ಬಲದಿಂದ ಜಗದ್ಗುರು ಸಿದ್ಧರಾಮ ಸ್ವಾಮಿಡಿ ಶ್ರೀಚೆನ್ನಬಸವರಾಜೇಂದ್ರರ ಮಹಾಜ್ಞಾನದ ಬೆಳಗು ಕಂಡು ಬದುಕಿದೆನಯ್ಯಾ ಕೋಟೀಕಲ್ಲ ಶ್ರೀಹೊಳೆಹುಚ್ಚೇಶ್ವರಾ

(೨) ....ಉದಯವಾಯಿತಯ್ಯಾ ದೇವಾ ನಿಮ್ಮ ಕೃಪೆಯಿಂದ। ನಟ್ಟನಡುರಾತ್ರಿಯಲಿ ಕ್ರೂರಮೃಗಗಳೆಲ್ಲ ನಾಮುಂದು–ತಾಮುಂದು ಎಂದು ಮನದಿಚ್ಛೆಯಲಿ ಎನ್ನನು ಈಡಾಡಿದವು ನೋಡಯ್ಯಾ। ಜಗವನೆಲ್ಲ ಉಫ್ ಎಂದು ಊದುವ ಪ್ರಳಯಾಗ್ನಿಯಕಾಡ್ಗಿಚ್ಚಿನಲ್ಲಿ ಬೆಂದು–ಬೆಂದು ಬಡವಾದೆ, ನೊಂದು-ನೊಂದು ಸಂಣವನಾದೆ ನೋಡಯ್ಯಾ। ಮುಂದೆ ನೀ ರಕ್ಷಿಸಾ ಕೋಟಿಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ. ॥

(೩) ಎನ್ನ ಕಾಯದ ಕತ್ತಲೆ ಕತ್ತರಿಸಿದವಯ್ಯಾ। ಎನ್ನ ಕರ್ಮದ ಕೋಟಲೆ ಕಳಚಿದವಯ್ಯಾ। ದೇವಾ ನಿಮ್ಮಂಥಃಕರುಣದಿಂದ ಧಾರವಾಡ ನವಕಲ್ಯಾಣಮಠ ಶ್ರೀ ಕುಮಾರ ಮಹಾಸ್ವಾಮಿಗಳ ಜ್ಯೋತಿರ್ಲಿಂಗದ ಬೆಳಗಿನಲ್ಲಿ ಗುರುವಿನ-ಗುರುತು, ಲಿಂಗದ ನೆಲೆ, ಜಂಗಮದ ಬೆಳಗನ್ನು ಕಂಡು ಬದುಕಿದೆನಯ್ಯಾ ಕೋಟಿಕಲ್ಲ ಶ್ರೀ ಹೊಳೆಹುಚ್ಚೇಶ್ವರಾ. ॥

(೪) ಕೂಲಿಕಾರರ ಜೀವನವೇ ಸೂರ್ಯ ನಾಡಿಯಯ್ಯಾ। ಕೃಷಿಕರ ಜೀವನವೇ ಚಂದ್ರನಾಡಿಯಯ್ಯಾ। ಇವೆರಡರ ಸಾಮ್ಯವೇ ರಾಷ್ಟ್ರದ ಮುಖ್ಯ ಜೀವಾಳವಯ್ಯಾ। ಕೋಟೀಕಲ್ಲ ಶ್ರೀ ಹೊಳೆಹುಚ್ಚೇಶ್ವರಾ ರಾಷ್ಟ್ರದ ಸಮಸ್ತ ಜನತೆಗೆ ಸಮತಾತತ್ವವೇ ರಾಷ್ಟ್ರದ ಹೊನ್ನಕಳಸವೆಂದರುಹಯ್ಯಾ. ॥

(೫) ...ಕರವ ಹೇರುವ ಮಂತ್ರಿಗಳೆ ಉತ್ಪಾದನೆಯ ಕಡೆ ಚಿತ್ತಕೊಡಿರಯ್ಯಾ। ಭೂ ಸುಧಾರಣೆಯಿಲ್ಲದೆ ಬಡವಾಯ್ತು ಭಾರತದೇಶ ನೋಡಿರಯ್ಯಾ। ಔದ್ಯೋಗಿಕ ಅವನತಿಯಿಂದ ಕೊರಗುತಿಹುದು ನೋಡಿರಯ್ಯಾ। ದೇವಾ ಇವನ್ನು ಸಾಹಿತ್ಯರೂಪದಲ್ಲಿ ಪುನರ್ಘಟಿಸಿ ಯಶವ ತೋರಿರಯ್ಯಾ ಕೋಟೀಕಲ್ಲ ಶ್ರೀ ಹೊಳೆಹುಚ್ಚೇಶ್ವರಾ. ॥

———

# ದೇವರ ದಾಸಿಮಾರ್ಯರ ಕಥೆ.

( ಸಂಪಾದಕರಿಂದ )

---

॥ಕಂದ॥ ಶ್ರೀ ಶಾಂಭವೀಶ ಮದ್ಗುರು। ದೇಶಿಕವರ್ಯ ತ್ರಿಣೇತ್ರ ಜಗದೆ। ಶಿವಭೊ । ಕೇಶನ ಶ್ರೀವು ಕೃಪಾಮೃತ । ರಾಶಿ ಪ್ರಮಥ ಪತಿ ಪಾಹಿರಗಳ ಪುರೀಶ ॥ವಚನ॥ ಈ ಪ್ರಕಾರವಾಗಿ ಇಷ್ಟದೈವ ಸ್ತೋತ್ರವಂ ಗೈದು ಮುಂದಿನ ಪುಕಥಾ ಸಂಗತಿಯಂ ಕೇಳುತಿರ್ಧನದೆಂತೆನೆ.

॥ತ್ರಿಪದಿ॥ ಶ್ರೀ ಪರಮ ಶಿವಶರಣ ಕುಲರಾಜಹಂಸ । ಗೋಪವಾಹನ ಚಿದ್ಘನ ಕಲಾವ ತಂಸ ॥೧॥

ಕ್ರೂರಾ ಪರವಾದಿ ಮದ ವಿಜಯಪ್ರಚಂಡ। ಸಾರತರ ಪಟ್ಟಣವ ಮಂತ್ರ ಕೋದಂಡ ॥೨॥

ವೀರಶೈವಾಚಾರ ಶೀಲಪ್ರಭಾವ । ಮಾರಾಹರ ಭಕ್ತಾಂತರಂಗ ಸಂಜೀವ ॥೩॥

ಜನ ಬುದ್ಧ ಚಾರ್ವಾಕ ಭವಿಸಮಯ ಮಥನ। ಜನನಾಮ ರಣಜ ರಾದಿ ರಹಿತ ಶಿವ ಕಥನ ॥೪॥

ಪತಿತ ಪಾವನ ಮೂರ್ತಿತ ಮೋದ ಮಾಯಾ। ನತರಕ್ಷಕ ಪ್ರಮಥ ಪುಂಗವ ವಿಧೇಯ ॥೫॥

ಪರಮಾಶಿವ ತತ್ವಾನು ಭಾವಾಗಮಜ್ಞ । ವರ ಮಹಾಲಿಂಗಾನು ಸಂಧಾನುವಿಜ್ಞ ॥೬॥

ದೋಷಾ ಮಾಯಾರಣ್ಯದಹನಾಗ್ನಿಸೆರ್ಯ । ಪಾಷಂಡರಸದಳನ ಗುರು ದಾಸಿಮಾರ್ಯ ॥೭॥

ಮನುವ ಮಹಿಮನು। ಹೊಟಲಕೆರೆಯುಂಬೂರೊಳು । ದಿನವಹಿಯು ಶಿವಜಂಗಮಾರಾಧನೆಯೊಳು ॥೮॥

ಪರಿಣಮಿಸುತಾನಂದ ಲೀಲಾತಿಶಯದಿ । ಯಿರಲಾಗ ದೇಸಿಂಗರಾಯನ ಮಡದಿ ॥೯॥

ಯುವತಿ ಸುಗ್ಗಲದೇವಿ ಪುಣ್ಯಫಲ ತೊಡಗಿ ಶಿವಭಕ್ತಿಯನು ಪಿಡಿವ ಮಮತೆ ಮನ ಕೊಡು ॥೧೦॥

ಚಿರಕಾಲ ತದ್ದಾಶಿ ವ್ಯೈನನುಚರಿಸಿ । ಗುರು ಕಟಾಕ್ಷವ ಪಡೆದು ಘನ ಶೈವೆಯೆನಿಸಿ ॥೧೧॥

ಲಿಂಗಾರ್ಚನಾ ಶಕ್ತಳಾಗಿ ಬಲುದೃಢದಿ। ಜಂಗಮೋಚ್ಛಿಯನರಿದು ಕೊಡುತ ಸಂತಸದಿ ॥೧೨॥

ಶ್ರಾವಕರ ಗೋಷ್ಟಿಯನು ದೂರ ಮಾಡುತಲಿ । ಭಾವೆಯಿರ್ದಳು ಗರ ಪುರೀಶ ಜ್ಞಾನದ ॥೧೩॥

॥ವಚನ॥ ಈ ಪ್ರಕಾರ ಮುಗಿತಜ್ಞನ ಮತ್ರಸ್ಥಳಾದ ಸುಗ್ಗಲಾದೇವಿಯು ತಪ್ಗುರುವಿನ ದಯಾಮೃತ ಕರತಳೋದರ ಜನಿತೆಯಾಗಿ ಜಂಗಮಸಂಗ ಶಿವಾಚಾರ ಶೀಲಸಂಪನ್ನೆಯೆನಿಸಿ ಪ್ರತಿನಿತ್ಯವು ವಿಶ್ವಾಸ ಪೂರ್ವಕವಾಗಿ ತದೇವರ ದಾಶಿಯ್ಯನಂ ಕರತಂದು ಸರ್ವೋಪಚಾರದಿಂ ತುಷ್ಟಿಪಡಿಸಿ ದರ್ಶನಾಶೀರ್ವಾದವಂ ಕೈಕೊಂಡು ಮರ್ಯಾದೆಯೊಡನೆ ಕಳುಹುತ್ತಿರಲಾ ಗ್ರಾಮದೊಳಗಿನಯೇಳ್ನೂರು ಬಸಿದಿಗಳಲ್ಲಿ ಇಪ್ಪತ್ತುಸಾವಿರ ಜಿನ ಮುನಿಗಳೋಲೈಸಿಯವರಿಗೆಲ್ಲ ಗುರುವಾದೊಬ್ಬಿಸು ತನ್ಮಹಿ ಸಂಗಾಚಾರ್ಯರಾಗಿ ಜಿನ ಪ್ರಬುದ್ಧಿಯಿಂದ ಮನುಜರಿಗೆ ಬೋಧಿಸುತಿರ್ದು ತತ್ಸಂದರ್ಭವೆಲ್ಲವನ್ನರಿದು ಈತನಿಲ್ಲಗೈತಂದೊಡೆ ನಮ್ಮ ಖ್ಯಾತಿಯು ಕೆಡುವದಾದ ಕಾರಣಯಿವನ್ನೈ ತಪ್ಪುದುತಪ್ಪಿಸಬೇಕೆಂದಾಲೋಚಿಸಿ ತದ್ರಾಜಂಗೆ ಕೊಂಡಿಯಂ ಪೇಳಲವನು ತದ್ದುರುಪದೇಶಕ್ಕೊಳನಾಗಿ ಖತಿಗೊಂಡು ನಿಜವಲ್ಲಭೆಯ ಸೊಕ್ಕಡಿಗಂಬರ ಮಾಡಿ ಗರ್ಜನೋಕ್ತಿಯಿಂದವಳೊಡನೆ ಇಂತೆಂದನವೆಂತೆನೆ ॥

॥ತ್ರಿಪುಡೆ॥ ಏನಿದಂಬೋ ಜಾತನಯನಿಯೆ । ಸಾನುರಾಗದೊಳನ್ಯ ಗುರುವಿಗೆ । ನೀನು ನಡೆವದಿದಾವ ಬುದ್ಧಿ ವಿಚಾರ ಗೇಡಿಯಲಾ ॥೧॥

ಜಾತಿ ದೈವಾಚಾರ್ಯಗಳನು । ನೆತಿಗಳೆದಿವುದೀಗದೇತರ । ಮಾತು ಈ ನಡವಳಿಕೆಯೊಪ್ಪಾಚಾರ ಮಾಗುವದೇ ॥೨॥

ಪತಿಗೆ ಸತಿಗೆಯು ಬೇರೆ ಬೇರೆ । ಗತಿಗಳ ಹೆಮೆಯಾವ ನಾಡೊಳು । ಸತಿಗೆ ಪತಿಯೇ ಮುಖ್ಯ ಗುರುವಲ್ಲದಲೆ ಪರತುಂಟೆ ॥೩॥

ಪರಿಕಿಸಲು ನಿನಗನ್ಯನೆಲ್ಲಿಯು । ಗುರುವು ಇದು ತಿಳಿದಿನ್ನು ಮುಂದೀ । ಪರಿಚಯಬಿಡು ಜೈನನಿದೊಡೆ ಹೊರತು ಮಾಳ್ಪರಲ ॥೪॥

ತರವಿದೇ ಸಾಸ್ತ್ರ ಮತ ಧರ್ಮಾ । ಚರಣೆಯನು ಧಿಕ್ಕರಿಸಿ ಶೈವಕೆ । ಯರಗಲು ಚಿತವೆಯಾವ ಕಾರಣವಿದಸು ತೆಜಿಸೆನಲು ॥೫॥

ವಚನ॥ ಈ ಪ್ರಕಾರವಾಗಿ ಪೇಳಿದ ನಿಜವಲ್ಲಭನ ವಾಕ್ಯವನ್ನಾಲಿಸಿ ಆ ಪುಗ್ಗಲದೇವಿಯು ಸ್ವಾಂತದೊಳು ಸಂತಾಪಂ ಹೊಂದಿ ಕ್ಷಣಕಾಲ ಸುಮ್ಮನಿದ್ದು ಬಳಿಕ ತದ್ದೇಶಿಂಗ ರಾಯನೊಡನೆ ಕಾಡಿಣ್ಮೋಕ್ತಿಯಿಂದ ಇಂತೆಂದಳ ದೆಂತೆಂದೆನೆ॥

॥ಅಟತಾಳ॥ ಕೇಳು ರಮಣನೆ ಬಂದೆ ಕೋಪವ । ತಾಳಿ ಈ ಬಗೆಯಾಡುದೇತಕೆ । ಖೂಳ ಜನರಿವರೇನು ಬಲ್ಲರು ಯನ್ನ ಸದ್ಗುರುವು ॥೧॥
ಶಂಕರ ಪ್ರತಿಮಾನರಹಿತ ಭ । ಯಂಕರನು ಪಾಷಂಡ ಕುಹಕರ । ಬಿಂಕವನು ಮುರಿಯುವ ಸಮರ್ಥನು ಸಕಲವಂದಿತನು ॥೨॥
ಪರಮ ತತ್ವಾರ್ಥ ಜ್ಞಾನಾತ್ಮನ । ಚರಣ ಸೇವೆಯ ಬಿಡೆನು ಮುಪ್ಪೊಳ । ಎಂಕನಲ್ಲದತಃ ಪರವಸ್ತುವೆಯೆ ನಲ್ಲದಲೆ ॥೩॥
ಪತಿಗೆ ಸತಿಗೆಯು ಮುಂದೆ ಪೊಂದೇ । ಗತಿಯುಹುದು ಗಡ ಮತ್ತೆ ಬೇರೆಯೆ । ಗತಿಗಳುಂಟಾಗುವವೆ ಗುರು ಶಿಷ್ಯರುಗಳಿಗೆಯಿಂದನ್ನು ॥೪॥
ತಿಳಿದು ಕೊಳದಲೆ ಮೊದಲು ಪರಿಣಯ । ದೊಳಗೆ ನಗೆ ಮತಿಯೊಲಿದು ಸೇರಿದ । ಒಳಗದೊಳು ನೀನಿತ್ತ ಸೂನೃತಯುತ ಹಿತೋಕ್ತಿಯನು ॥೫॥
ಮರೆಯ ಬಹುದೇ ಬಲ್ಲತನಕಿದು । ಸರಿ ಸರಿಯುಗಾಂಬುದೇ ಯೋಚಿಸಿಗಾ । ಪರಿಯ ನಿನ್ನೊಳು ನೆನೆದುಕೊಳ್ಳೌ ಪಲವು ಸುರಲೇನು ॥೬॥
ನೋಡಿದು ಸಮಾಧಾನ ಪಡದಿರೆ । ಮಾಡಿಕೊ ಮತ್ತೊಬ್ಬ ಸತಿಯನು । ಕೂಡವೆನ್ನನು ಬಿಟ್ಟ ಕಳೆ ಹಾನಿಗಲ್ಲದಿರಲಿನ್ನು ॥೭॥
ನಾಡ ಮಾತುಗಳೇಕೆ ಈಗನು । ಗೂಡಿಸೆನ್ನೊಡಿಯನಿಗು ಜೈನಂ । ಗಾಡಿಸಾಗಮತರ್ಕ ಶಾಸ್ತ್ರ ಪುರಾಣವಾದರೊಳು ॥೮॥
ಪರಿಕಿಸುತಲಾ ಬಳಿಕ ತದ್ಗುರು । ವರನ ಮಹಿಮಾದಿಕ್ಯ ವೆಲ್ಲವ । ನರಿದವಗೆ ಡಿಂಗರಿಗನಾಗುತ ನೀನು ಬದುಕೆನಲು ॥೯॥

# ಶಿವಾನುಭವ.

(ಲೇಖಕಃ— ನಾ. ಮ. ಬಸವರಾಜ ನಾಗರಹಾಳು, ತಾಲೂಕ- ಶಿರುಗುಪ್ಪ)

ಶ್ರೀ. ಮ. ನಿ. ಪ್ರ ಒಳಬಳ್ಳಾರಿ ವಿರಕ್ತಮಠಾಧ್ಯಕ್ಷ ಶ್ರೀ ಚೆನ್ನಬಸವ ಸ್ವಾಮಿಗಳು, ಶ್ರೀ. ಮ. ನಿ ಪ್ರ ಚರಣಗಿರಿ ಶಿವಯೋಗ ಬೃಹನ್ಮಠಾಧ್ಯಕ್ಷ ಶ್ರೀ ರುದ್ರಮುನಿ ಮಹಾಸನ್ನಿಧಿಯವರು, ಮತ್ತು ಶ್ರೀ. ಷ, ಬ್ರ ವಿರೂಪಾಕ್ಷ ಸ್ವಾಮಿಗಳ ಸನ್ನಿಧಿಯವರ ದಿವ್ಯ ಚರಣಾರವಿಂದಕ್ಕೆ ಗಳಿಗೆ ಪೊಡಮಟ್ಟು ಈ ಶಿವಾನುಭವ ಪ್ರವಚನ ಸಭೆಯಲ್ಲಿ ಒಂದೆರಡು ಮಾತುಗಳನ್ನಾಡ ಬಯಸುವೆನು. ಆದರೆ ಈ ಶಿವಾನುಭವದ ವಿಷಯವಾಗಿ ಮಾತನಾಡುವದೆಂದರೆ ಗಹನ ವಿಚಾರದ ಸಂಗತಿ ಯಾಕೆಂದರೆ,

> ಸ್ವಾನುಭಾವದ ನೆಲೆಯು ನಾನೇನಬಲ್ಲೆನೈ
> ನೀನೆ ಒಳಪೊಕ್ಕು ಎನ ನುಡಿಸಿದೊಡನೆ
> ನಾನುಡಿವೆ ಗುರುವೆ ಕೃಪೆಯಾಗು
> — ಶ್ರೀ ಮೈಲಾರಲಿಂಗ ಶರಣರು.

ಎಂಬ ಅನುಭವಿಗಳ ಮಾತಾಗಿದೆ. ನಾನಂತು ಜೀವಾನುಭವಿಯೇ ಅಲ್ಲವೆಂದಾಗ ಶಿವಾನುಭವಿಯಾಗುವದೆಂತು! ಕೇವಲ ಪಾಂಡಿತ್ಯದಿಂದಲೂ ಸಾಧ್ಯವಾಗದ ವಿಷಯ ಅನುಭವವಂತೂ ದೂರೇ ಉಳಿಯಿತು. ಆದರೂ ಶ್ರೀಗಳವರ ಸನ್ನಿಧಿ ಕರ್ತೃತ್ವದಿಂದ ಪ್ರೇರಣೆಯಾದಾಗ ಒಂದೆರಡು ಮಾತುಗಳಲ್ಲಿ ಮುಗಿಸುವೆನು. ಏನೆಂದರೆ,

ಶಿವಾನುಭವವು ತರ್ಕ ಪ್ರಧಾನವಾದದ್ದು ಅಲ್ಲ ಶಿವಾನುಭವವೆಂದರೆ ಭಾವಪ್ರಧಾನವಾದ ಅನುಭವಿಕ ವಿಷಯ, ಇದು ಅನುಭವಿಗಳು ಸಾಕ್ಷಾತ್ಕಾರಿಗಳು ಹೇಳಬಯಸಿದರೆ ಮಾನವ ಕಲ್ಯಾಣವಾದೀತು. ಶಬ್ದಜಾಲವು ತೊಡಕಿನ ಸಮಸ್ಯೆ. ಶಾಸ್ತ್ರವು ಹೇಳುತ್ತಿದೆ. ಕಲೆಯು ಮಾಡುತ್ತದೆ. "ಜ್ಞಾನಂಭ್ರಾಂತೇ ಭಕ್ತಿಃ ಕುರುತೆ" ಎಂಬ ವಚನದಂತೆ ಶಿವಾದ್ವೈತಜ್ಞಾನವು ಜ್ಞಾನವಾಗಿ ಉಳಿಯಬಾರದು ಅದು ನಡೆಯಲ್ಲಿ ಬಂದರೆ ಪರಿಣಾಮವಾಗಿರುತ್ತದೆ ಇಲ್ಲವಾದರೆ ಶುಷ್ಕವಿಚಾರಗಳಿಂದ ಪ್ರಯೋಜನವಿಲ್ಲವೆಂದು ಧಾರಾಳವಾಗಿ ಹೇಳಬಹುದು ಇದೇ ಮಾತನ್ನು ಗ್ರೀಸ್ ದೇಶದ ಸಪ್ತಜ್ಞಾನಿಗಳನ್ನು ಕುರಿತು ಒಬ್ಬನು ಪ್ರಶ್ನೆಮಾಡಿದನಂತೆ 'ಜಗತ್ತಿನಲ್ಲಿ ಅತಿ ಸುಲಭವಾದ ಕೆಲಸಯಾವುದು?' ಆ ಜ್ಞಾನಿಯು "ಬೇರೆಯವರಿಗೆ ಬುದ್ಧಿ ಹೇಳುವದು." ಮತ್ತು ಜಗತ್ತಿನಲ್ಲಿ ಅತಿ ಕಠಿಣ ಕೆಲಸ ಯಾವುದು? ಎಂದು ಪ್ರಶ್ನೆಮಾಡಿದಾಗ ಆತನು "ತನ್ನ ತಾನು ಅರಿಯುವುದೇ ಕಠಿಣಕೆಲಸ" ಎಂದನಂತೆ.

ಹಾಗೆ ಶಿವನನ್ನು ಅನುಸರಿಸಿ ಇರುವಿಕೆಗೆ ಶಿವಾನುಭಾವ, ಎಂಬ ಅರ್ಥವೆಂದು ಪಂಡಿತರು ಹೇಳುವರು. ಹೀಗಿರುವಾಗ 'ಗಿಳಿ ಓದಿದರೇ'ನು ಲಿಂಗವೇದಿಯಾಗಬಲ್ಲುದೇ? ಪ್ಲೇಟು ಹಾಡಿದರೆ ಗವಾಯಿ ಎನಬಹುದೇ! ಆದ್ದರಿಂದ ಇಂಥ ದೊಡ್ಡ ವಿಷಯ ದೊಡ್ಡವರಿಗೆ ಗೊತ್ತು. ನನ್ನಯೋಗ್ಯತೆಗೆ ಸಿಲುಕಲಾರದು. ಕೆಳವನು ಮರದ ಮೇಲಿರುವ ಹಣ್ಣನ್ನು ಬಯಸುವಂತೆ ಹಾಸ್ಯಾಸ್ಪದವಾದೀತು.

ಆದ್ದರಿಂದ "ಸರ್ವಂ ಶಿವಮಯ ಜಗತಾ" ಎಂಬ ಶಿವಸೂತ್ರದಂತೆ ಚರಾಚರಾತ್ಮಕವಾದ ಆ ಶಿವಸ್ವರೂಪವನ್ನು ನಾವು ಅರಿಯುವದೆಂತು? ಆದ್ದರಿಂದ ಶ್ರೀ ನವಕಲ್ಯಾಣಮಠ ಕುಮಾರ ಸ್ವಾಮಿಗಳು ಹೇಳಿದ ಮಾತುಗಳನ್ನು ಇಲ್ಲಿ ಹೇಳಬಯಸುತ್ತೇನೆ. "ಕ್ರಿಯೆ ಮತ್ತು ಜ್ಞಾನಗಳ ಸಮನ್ವಯದಿಂದಲೇ, ಕ್ರಿಯೆಯೆಂದರೆ ಯಜ್ಞಯಾಗವಾಗಲಿ ತೀರ್ಥಯಾತ್ರೆಯಾಗಲಿ ಅಲ್ಲ. ಕ್ರಿಯೆ ಎಂದರೆ ಕರ್ತವ್ಯಪಾಲನೆ ಯಾವ ಮನುಷ್ಯನು ತನ್ನ ಕರ್ತವ್ಯವನ್ನು ನಿರ್ಭಯವಾಗಿ ನಿಃಸ್ಪೃಹತೆಯಿಂದ ಮಾಡುವನೋ ಅವನೇ ಕರ್ಮವೀರನು. ಜ್ಞಾನವೆಂದರೆ ಇಲ್ಲಿ ಕೇವಲ ಗ್ರಂಥಗಳಿಂದ ಸಿಗುವ ಜ್ಞಾನವಲ್ಲ. ಜ್ಞಾನವೆಂದರೆ ಆತ್ಮಜ್ಞಾನ ಸ್ವರೂಪಜ್ಞಾನವನ್ನಲ್ಲದೆ ಕರ್ಮವೀರನಾಗಲಾರನು. "ಆದ್ದರಿಂದ ತನ್ನನ್ನು ತಾನು ಅರಿತುಕೊಂಡ ಪ್ರತಿ ಒಂದು ಕಾರ್ಯವನ್ನು ಧೈರ್ಯ ಮತ್ತು ಯುಕ್ತಿ, ಭಕ್ತಿ ಮತ್ತು ಪ್ರೇಮಗಳಿಂದ ಕೊನೆಗಾಣಿಸುವುದೇ ಕರ್ಮಯೋಗವು. ಯಾವ ಮನುಷ್ಯನು ವಿಷಯಭೋಗಗಳಲ್ಲಿಯೇ ಆಸಕ್ತನಾಗಿ ಅವುಗಳ ಪ್ರಾಪ್ತಿಗಾಗಿ ಕರ್ಮಕಾಂಡವನ್ನು ಆಶ್ರಯಿಸುತಾನೋ ಅವನು ಅಜ್ಞಾನಾಂಧಕಾರದಲ್ಲಿ ಮುಳುಗುತ್ತಾನೆ. ಯಾವನು ಅಂತಃಕರಣ ಶುದ್ಧಿಗಾಗಿ ನಿರ್ಮಲತೆ ಮತ್ತು ಪವಿತ್ರತೆಗಾಗಿ ಅಹಂಕಾರ ಅಭಿಮಾನಗಳಿಂದ ರಹಿತವಾದ ಕರ್ಮಗಳನ್ನು ಆಚರಿಸುವದಿಲ್ಲವೋ ಯಾವನು ಜ್ಞಾನಪ್ರಾಪ್ತಿಗಾಗಿ ವಿವೇಕವೈರಾಗ್ಯಾದಿಗಳ ಜ್ಞಾನದ ಪ್ರಾಥಮಿಕ ಸಾಧನೆಯ ಅನುಭವವನ್ನು ಪಡೆಯುವದಿಲ್ಲವೋ? ಮತ್ತು ಯಾವನು ನನಗೆ ಕರ್ತವ್ಯದ ಅವಶ್ಯಕತೆ ಇಲ್ಲವೆಂದು ನುಡಿದು ಕರ್ಮಭ್ರಷ್ಟನಾಗುವನೋ ಅಂಥವನು ಇನ್ನೂ ಆಳವಾದ ಅಜ್ಞಾನಾಂಧಕಾರದಲ್ಲಿ ಮುಳುಗುತ್ತಾನೋ ಇವೆರಡರಿಂದ ಪಾರಾಗುವ ಒಂದೇ ಉಪಾಯ ಕ್ರಿಯೆ ಮತ್ತು ಜ್ಞಾನ ಇವುಗಳ ನಿಜವಾದ ಅರ್ಥವನ್ನು ತಿಳಿದು ಯೋಗ್ಯ ರೀತಿಯಿಂದ ತಮ್ಮ ತಮ್ಮ ಕರ್ತವ್ಯಪಾಲನೆಯನ್ನು ಮಾಡುವದರಲ್ಲಿರುತ್ತದೆ. ಇದುವೇ ಪ್ರಭುವನ್ನು ಹೊಂದುವ ಮಾರ್ಗ.

---

ಶರೀರಗಳು ಶುದ್ಧ ಸಿದ್ಧ ಪವಿತ್ರವಾದಾಗ ಮಾತ್ರ ಶಿವಶಕ್ತಿಯರು ಒಳಗಿನಿಂದ ಪ್ರಕಟವಾಗುವರು. ದೀಪದ ಮೇಲೆ ಮಣ್ಣಿನ ಗಡಿಗೆಯನ್ನು ಹಾಕಿದರೆ ಪ್ರಕಾಶವೆಂದೂ ಬೀಳುವದಿಲ್ಲ. ಆ ಮಣ್ಣಿನ ಗಡಿಗೆ, ಸಾಧನದಿಂದ ಶುದ್ಧ ಸಿದ್ಧ ಪವಿತ್ರವಾಗಿ ಪಾರದರ್ಶಕ ವಾದಾಗಮಾತ್ರ ಆ ಒಳಗಿನ ದೀಪದ ಪ್ರಕಾಶ ಪ್ರಭಾವ ಪ್ರಕಟವಾಗುವದು. ಅಲ್ಲಿಯತನಕ ಏನೂ ಶಕ್ಯವಿಲ್ಲ. ಆಧಾರ ಶುದ್ಧಿ ಅದಕ್ಕೆ ಒಳ್ಳೇ ಮಹತ್ವ. ವೇದಾಂತದವರಿಗೆ ಇದು ಮಹತ್ವವಲ್ಲ. ತಾನೇ ಬ್ರಹ್ಮನೆಂದು ತಿಳಿದರಾಯಿತೆಂದು ಹೇಳುವರು. ಕೆಳಗಿನಿಂದ ಪವಿತ್ರ ಹೃದಯದ ಕೂಹು ಮೇಲೆಳ ಬೇಕು. ಮೇಲಿನಿಂದ ಪ್ರಭು ಕೃಪೆ ಇಳಿದು ಬರುವದೆಂದು ಕೆಲವರು ಹೇಳುವರು ಇದು ನಿಜವಲ್ಲ. ಸರಿಯಲ್ಲ ಎಲ್ಲವೂ ಇಲ್ಲೇ ಅದೆ. ಖಂದೀಲ, ಎಣ್ಣೆ, ಬತ್ತಿ ಅದೆ. ದೀಪಹಚ್ಚಿದೆ ಆದರೆ ಅದರ ಮೇಲೆ ಒಂದು ಗಡಿಗಿಯು ಪಾವು ಹಾಕಿದರೆ ಬೆಳಕು ಎಳ್ಳಷ್ಟೂ ಬೀಳುವದಿಲ್ಲ. ಅದನ್ನು ಅಂದರೆ ಆ ಗಡಿಗೆಯನ್ನು ಶಾಸ್ತ್ರೀಯ ಪ್ರಯೋಗದಿಂದ ಸಾಧನದಿಂದ ಶುದ್ಧ ಸಿದ್ಧ ಪಾರದರ್ಶಕಮಾಡಿದರೆ ಒಳಗಿದ್ದ ಪ್ರಕಾಶವು ಹೊರಗೂ ಪ್ರಕಟವಾಗುವದು. ಆಗ ಖಂದೀಲಕ್ಕೆ ಬೆಲೆ ಬರುವದು ಇಲ್ಲವಾದರೆ ಮೊದಲಿನ ಕಂದೀಲೇ ಉಳಿದರೆ ಅದನ್ನು ತಿಪ್ಪಿಗೆಹಾಕುವರು. ಅದಕ್ಕೆ ನಮ್ಮ ಆಧಾರಶುದ್ಧಿಯಾದರೆ ತೀರಿತು ಶಿವ ಶಕ್ತಿಯರ ಚಿತ್ ಕಳೆ ಸತ್ ಸ್ವರೂಪ ನಮ್ಮಲಿಂದ ತನ್ನಿಂದ ತಾನೇ ಪ್ರಕಟವಾಗುವದು. ಇದೇ ಪರಿಪೂರ್ಣ ಯೋಗದ ಮರ್ಮವಾಗಿದೆ. ಶಿವಶರಣರು ಅದಕ್ಕಾಗಿಯೇ ಸಪ್ತಾಚಾರ ಪಂಚಾಚಾರಗಳನ್ನು ಮೊದಲಿಗೆ ಆಧಾರಶುದ್ಧಿಗಾಗಿ ಹಾಕಿದ್ದಾರೆ. ಇದರ ಜೊತೆಗೆ ಅಷ್ಟಾವರಣಗಳೂ ಉಂಟು ಇವು ಒಂದಕ್ಕೊಂದು ಪೋಷಕವಾಗಿರುವವು. ಒಂದರಿಂದ ಮತ್ತೊಂದು ಪರಿಪೂರ್ಣವಾಗುವವು. ಇವುಗಳಿಂದ ಮಾನವನು ದೇವಮಾನವನಾಗುವನು. ಅದಕ್ಕೆ ಇದು ಶರಣರ ಪರಿಪೂರ್ಣಯೋಗವೆಂದು ಹೇಳಬಹುದು.

## ಷಟ್ಸ್ಥಲಗಳು ಇದರಲ್ಲಿ ಬರುವವು

ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲ ಈ ಆರು ಸ್ಥಲಗಳು ಕೂಡಿದರೆ ಮಾತ್ರ ಶಿವಶರಣರ ಶಿವಯೋಗವಾಗುವದು. ಇದೇ ಶರಣರ ಪರಿಪೂರ್ಣಯೋಗ. ಬರೇ ಒಂದೊಂದು ಸ್ಥಲದಲ್ಲಿ ನುರಿತರೆ ಅವನೆಂದೂ ಶಿವಯೋಗಿಯಾಗಲಾರ. ಅವನೆಂದೂ ಪರಿಪೂರ್ಣನಾಗಲಾರ. ಈ ಆರೂ ಸ್ಥಲದಲ್ಲಿ ಅವನು ವಿಹರಿಸಿ ಸಾಗಬೇಕು.

(೧) ಭಕ್ತಸ್ಥಲ ಇದು ವೇದಾಂತಿಗಳ ಭಕ್ತಿಯೋಗವೇ ಸರಿ. ಒಂದರಿಂದ

ಮಾನವನು ಪರಿಪೂರ್ಣವಾಗಲಾರನು. ಇದರಿಂದ ಬರೇ ಅವನ ಹೃದಯ ವಿಕಾಸವಾಗುವದು ಹೊರತು ಹೆಚ್ಚಿನದಾಗಲಾರದು. ಶರೀರದಲ್ಲಿ ಬರೇ ಹೃದಯ ಒಂದೇ ಇಲ್ಲ. ಬುದ್ಧಿ ಚಿತ್ತ ಮನ ಇಂದ್ರಿಯ ಶರೀರ ನರ ನಾಡಿ ಹೀಗೆ ಅನೇಕವುಗಳಿಂದ ಈ ಶರೀರ ಕೂಡಿಕೊಂಡಿದೆ. ಬರೇ ಭಕ್ತಿಯಿಂದ ಮೂಢ ನಂಬಿಗೆ ಅಂಧ ಶ್ರದ್ಧೆಗಳು ಹುಟ್ಟಬಹುದು. ಇದರಿಂದ ಅನ್ಯರಿಗೆ ಅನ್ಯಾಯ ಹಿಂಸೆ ಕಲಹ ಕೊಲೆಗಳು ಸಹ ಆಗಬಹುದು. ಅದಕ್ಕೆ ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವೆಂಬಂತೆ ಆಗುವದು. ಅಲ್ಲದೆ ಮೂಢ ಭಕ್ತಿಯ ಆವೇಶದಲ್ಲಿ ತನ್ನ ಶರೀರಕ್ಕೆ ಪ್ರಾಣಕ್ಕೆ ಗಂಡಾಂತರವಾದರೂ ಬರುವ ಸಂಭವ ಹೆಚ್ಚಾಗಿರುವದು. ಇದಕ್ಕಾಗಿ ಭಕ್ತಿಯಲ್ಲಿ ಸುಜ್ಞಾನ ಸುವಿಚಾರ ಬೆರಿಸಲೇ ಬೇಕು. ಇಲ್ಲವಾದರೆ ಬಹು ಕೆಡಕಾಗುವದು. ಭಕ್ತಿಯು ಪರಶಿವನ ಸಮೀಪ ಕೊಂಡೊಯ್ಯುವ ಸುಲಭಮಾರ್ಗ. ಆದರೆ ಮಾನವನು ಇದನ್ನೊಂದೇ ಸಾಧಿಸಿದರೆ ತೀರಲಿಲ್ಲ. ಜ್ಞಾನವನ್ನೂ ಸಹ ಗಳಿಸಿ ಅದನ್ನು ಕ್ರಿಯಾರೂಪದಲ್ಲಿ ತರಬೇಕು. ಕ್ರಿಯೆಯಲ್ಲಿ ದೇವನ ಧ್ಯಾನ ನಾಮ ಜಪಗಳು ಸದಾ ನಡೆಯಬೇಕು. ಇವನು ಪರಮಾತ್ಮನ ಕಾರ್ಯಕ್ಕಾಗಿ ಬಾಳಿಬದುಕುವನು. ಇವನು ಭಕ್ತನಾಗಿಯೇ ಕಡೆತನಕ ಉಳಿಯಲಾರ ಮುಂದೆ ಭಕ್ತಿಯುಕ್ತರಾಗಿ ಮಹೇಶ ಸ್ಥಲಕ್ಕೂ ಹೋಗಬೇಕು. ಶಿವಶರಣರ ಪರಿಪೂರ್ಣ ಯೋಗದಲ್ಲಿ ಭಕ್ತಿಗೆ ಮಹತ್ವದ ಸ್ಥಾನವಿರುವದು. ಅವರ ವಚನಗಳಲ್ಲಿ ಭಕ್ತಿಯ ವಚನಗಳೇ ಹೆಚ್ಚಾಗಿ ಇರುವದೇ ಇದಕ್ಕೆ ಸಾಕ್ಷಿಯಾಗಿದೆ. ಇವನು ಸಕಲವನ್ನೂ ಪರಮಾತ್ಮನ ಸಲುವಾಗಿ ಎಂದೇ ಮಾಡುವನು. "ಅದ್ವೈವನುಡಿದು ಅಹಂಕಾರಿಯಾದೆನಯ್ಯಾ, ಬ್ರಹ್ಮವ ನುಡಿದು ನಾನು ಭ್ರಮಿತನಾದೆನಯ್ಯಾ, ಶೂನ್ಯವ ನುಡಿದು ನಾನು ಸುಖದುಃಖಕ್ಕೆ ಗುರಿಯಾದೆನಯ್ಯಾ! ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಸಾನ್ನಿಧ್ಯದಿಂದ ನಾನು ಭಕ್ತನಾದೆನಯ್ಯಾ" ಎಂದು ಪ್ರಭುದೇವರು ಭಕ್ತಿಯ ಹಿರಿಮೆಯನ್ನು ಹೇಳಿದ್ದಾರೆ. ಇದರಿಂದ ಭಕ್ತಿ ಜ್ಞಾನ ಕ್ರಿಯೆಗಳನ್ನು ಕೂಡಿಸಿ ಸಾಗಿಸಬೇಕೆಂದು ಹೇಳಿದ್ದಾರೆ. ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಕಿವಿಯಲಿ ನಿಮ್ಮ ಕೀರುತಿ ತುಂಬಿ ಹೃದಯದಲಿ ನಿಮ್ಮ ಬೆಳಗು ತುಂಬಿ, ಮನದಲ್ಲಿ ನಿಮ್ಮ ನೆನಹುತುಂಬಿ, ಸರ್ವಾಂಗದೊಳಹೊರಗೆಲ್ಲ ನೀವೇ ತುಂಬಿ, ಎಂದು ಹಾಡಿದ್ದು ನೋಡಿದರೆ ಭಕ್ತಿಯ ರೂಪರೇಷೆ ಏನೆಂದು ಹೊಳೆಯುವದು ಇದೆಲ್ಲ ಶರಣರ ಪರಿಪೂರ್ಣಯೋಗದಲ್ಲಿ ಹಾಸು ಹೊಕ್ಕಾಗಿ ಇರುವದು.

ಕೇಳಿದರೆ ಕೇಳು ಕೇಳದಿರ್ದಡೆ ಮಾಣು ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆ। ಒಲಿದರೆ ಒಲಿ ಒಲಿಯದಿರ್ದರೆಮಾಣು ನಾನಿನ್ನ ಪೂಜಿಸಲಾರದೆ ಸೈರಿಸಲಾರೆನಯ್ಯಾ। ಮೆಚ್ಚಿದರೆ ಮೆಚ್ಚು ಮೆಚ್ಚದಿರ್ದಡೆಮಾಣು, ನಾನಿನ್ನ ನಪ್ಪಿದಲ್ಲದೆ ಸೈರಿಸಲಾರೆನಯ್ಯಾ। ನೋಡಿದೊಡೆ ನೋಡು ನೋಡದಿರ್ದಡೆಮಾಣು ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ ಚನ್ನಮಲ್ಲಿಕಾರ್ಜುನಯ್ಯಾ ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯಾ। ವೇದಪ್ರಿಯನಲ್ಲ ಶಾಸ್ತ್ರಪ್ರಿಯನಲ್ಲ ನಾದಪ್ರಿಯನಲ್ಲ ಯುಕ್ತಿಪ್ರಿಯನಲ್ಲ, ಭಕ್ತಿಪ್ರಿಯ ಕೂಡಲ ಸಂಗಮದೇವಾ ಎಂದು ಹಾಡಿದ್ದಾನೆ.” ನಿಷ್ಕಾಮ ಭಕ್ತಿ ಬೇಕು ದಿವ್ಯ ಪರಭಕ್ತಿಬೇಕು. ಇಷ್ಟರಿಂದ ಮುಗಿಯಲಿಲ್ಲ ಆದರೆ ಇವನು ಜ್ಞಾನಕ್ಕೂ ಮಹತ್ವಕೊಟ್ಟು ಅದನ್ನು ಪಡೆಯಲೇಬೇಕು. ಜ್ಞಾನ ಭಕ್ತಿಗಳು ಕೂಡಿ ಸಾಗಿಸಬೇಕು. ಅದರಲ್ಲಿ ಕ್ರಿಯೆಯ ಮಿಶ್ರಣವಿರಬೇಕು.

(೨) ಮಹೇಶಸ್ಥಲ:— ಭಕ್ತಸ್ಥಲವು ಭಾವಪ್ರಧಾನವಾದುದು ಹೃದಯಕ್ಕೆ ಸಂಬಂಧಿಸಿರುವದು. ಆದರೆ ಮಹೇಶಸ್ಥಲವೂ ವಿಚಾರ ಪ್ರಧಾನವು ಅಂದರೆ ಬುದ್ಧಿಗೆ ಸಂಬಂಧಿಸಿದ್ದು. ಇದೇ ವೇದಾಂತದಲ್ಲಿಯ ಜ್ಞಾನ ಯೋಗವೇ ಸರಿ. ಭಕ್ತಿಯಲ್ಲಿ ಮುಂದುವರಿದ ಸಾಧಕನು ಪರಮಾತ್ಮನ ಮಹಿಮೆ, ಹಿರಿಮೆ, ಲೀಲೆ, ಅವನ ಶಕ್ತಿ, ಸ್ವರೂಪ, ಸೃಷ್ಟಿಯ ಉತ್ಪತ್ತಿ, ಶರೀರ, ರಚನೆ, ದೇಹವೇ ದೇವಾಲಯ, ಆತ್ಮವೇ ದೇವರು, ಮೊದಲಾದ ವಿಷಯಗಳ ಬಗೆಗೆ ವಿಚಾರಿಸ ಹತ್ತುವನು. ಸ್ಥಿರಶಕ್ತಿ ಚರ ಶಕ್ತಿ ಲಿಂಗ ಅಂಗ ಜಂಗಮ ಮೊದಲಾದ ತತ್ವಗಳನ್ನು ಅರಿಯಹತ್ತುವನು. ಇದೇ ಭಕ್ತಸ್ಥಲದ ಮುಂದೆ ಏರತಕ್ಕ ಸ್ಥಲ. ಭಕ್ತಿ ಮಾಡುತ್ತ ಹೋದಂತೆ ಜ್ಞಾನ ಸೂರ್ಯನೂ ಪ್ರಕಟನಾಗುವನು. ಮಹೇಶಸ್ಥಲದಲ್ಲಿ ಸಾಮಾನ್ಯ ಹಾಗೂ ವಿಶೇಷ ಜ್ಞಾನವಾಗುವದು. ಭಕ್ತಿಯ ಸಾಧನೆ ಮಾಡಹತ್ತಲು ಆಶೆ ವಾಸನೆ ಕಾಮನೆ ಇಂದ್ರಿಯಸುಖ ವಿಷಯಸುಖಗಳೆಲ್ಲ ಮಾಯವಾಗಹತ್ತುವದು ಆಗ ಅಂತರಾತ್ಮನು ವಿಕಾಸ ಆಗಿ ಪ್ರಕಟ ಆಗಹತ್ತುವನು. ಭಕ್ತಿಯಿಂದ ಮಾನವನು ಮಾಯೆಯ ಅನುಗ್ರಹ ಪಡೆಯುವನು. ಆಗ ಆಕೆಯನ್ನು ಬ್ರಹ್ಮಮುಖವಾಗಿ ತಿರುಗಿಸುವನು. ಆಕೆ ಭಕ್ತನಿಗೆ ಅನುಗ್ರಹಿಸುವಳು. ಆಗ ಅಂತರಾತ್ಮನು ಪ್ರಕಟವಾಗಿ ಪ್ರಕಾಶಬೀರುವನು. ಆಗ ಎಲ್ಲ ಇಂದ್ರಿಯ, ಮನ, ಪ್ರಾಣ, ಮೊದಲಾದವುಗಳು ಈ ಪ್ರಕಟಿತ ಅಂತರಾತ್ಮನ ಆಧೀನವಾಗಿ ಕಾರ್ಯಮಾಡುವವು. ಅವನ ಆಜ್ಞೆಯಂತೆ ಆಗ ಅವು ವರ್ತಿಸುವವು. ಹೀಗೆ ಹೃದಯ ವಿಕಾಸವಾಗುವದರಿಂದ ಅಲ್ಲಿ

ಆತ್ಮನು ಹೃದಯ ಪೀಠವನ್ನು ಅಲಂಕರಿಸಿ ಇಡೀ ಶರೀರವನ್ನು ಆಗ ಆಳ ಹತ್ತುವನು. ಮೊದಲು ಹೃದಯದಲ್ಲಿ ಮನವು ನೆಲಿಸಿರುವದರಿಂದ ತನ್ನ ಮನ ಬಲ್ಲಂತೆ ಶರೀರ ಇಂದ್ರಿಯಗಳನ್ನು ವಿಷಯದಲ್ಲಿ ಮುಳುಗಿಸಿದ್ದನು. ಈಗ ಆ ಮನದ ಆಟವೇನೂ ನಡೆಯದಾಗುವದು. ಆಗ ಅತ್ಮನ ಆಜ್ಞೆಯಂತೆ ಎಲ್ಲ ಕಾರಭಾರವು ನಡೆಯುವದು. ಶರೀರಕ್ಕೆ ಆಗ ನಿಷ್ಕರ್ಮ ಸೇವೆ, ಕಾಯಕ, ಸತ್ಯ ಶುದ್ಧ ನಿತ್ಯ ಕಾಯಕಗಳನ್ನು ಹಚ್ಚುವನು. ಜಗತ್ತಿಗೆ ಅನುಕೂಲವಾಗುವಂತೆ ಮಾನವ ಕುಟುಂಬಕ್ಕೆ ನೆರವಾಗುವಂತೆ ಕಾರ್ಯದಲ್ಲಿ ಮನ ಬುದ್ಧಿ ಶರೀರಗಳನ್ನು ತೊಡಗಿರುವನು. ಹೀಗೆ ಶಿವಶರಣರ ಪರಿಪೂರ್ಣಯೋಗದಲ್ಲಿ ಜ್ಞಾನವೆಂದರೆ ವೈಯಕ್ತಿಕ ಪರಮಾತ್ಮನಾಗುವದೇ ಆಗಿದೆ. ಅಂದರೆ ಸಕಲ ಇಂದ್ರಿಯಗಳಲ್ಲಿ ಮನ, ಶುದ್ಧಿ, ಚಿತ್ತ, ಅಹಂಕಾರ ಮುಮುಕಾಂಗಳಲ್ಲಿ ಲಿಂಗದ ನೆಲೆ ಕಳೆ ಚೈತನ್ಯವನ್ನು ಪ್ರಕಾಶಕ್ಕೆ ತಂದು ಅವುಗಳಲ್ಲಿ ಅದನ್ನು ತುಂಬುವವೇ ಆಗಿದೆ. ಇದು ಸರ್ವಾಂಗಲಿಂಗಿಯಾಗುವದೇ ಆಗಿದೆ. ಅಂದರೆ ಮಾತ್ರ ಲಿಂಗದ ಪೂರ್ಣ ಅಧಿಕಾರವನ್ನು ಶರೀರದ ಜೀವನದ ಪ್ರತಿಯೊಂದು ಭಾಗದಲ್ಲಿ ನೆಲೆಗೊಳಿಸುವದೇ ಆಗಿದೆ. ಇದರಿಂದ ಅಷ್ಟಮಸಿದ್ಧಿಗಳು ಬರುವವು. ಅವುಗಳನ್ನು ಎಂದೂ ಉಪಯೋಗಿಸಬಾರದೆಂದು ಶರಣರು ಕಟ್ಟಪ್ಪಣೆಯನ್ನು ಮಾಡಿದ್ದಾರೆ ಮಹೇಶ್ವರಸ್ಥಲದಲ್ಲಿ ಉಚ್ಚ ದಿವ್ಯಪರ ಭಕ್ತಿಯನ್ನೇ ಹೇಳಿದೆ. ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗಾನೊಲಿದೆನವ್ವಾ! ಎಡೆ ಇಲ್ಲದ ಕಡೆಇಲ್ಲದ, ತೆರಹಿಲ್ಲದ, ಕುರುಹಿಲ್ಲದ ಚಲುವಂಗಾನೊಲಿದೆನವ್ವಾ ! ನೀಕೇಳಾ ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ! ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ ಇದುಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಇದು ನಿರಾಕಾರ ನಿರ್ಗುಣ ನಾಮರೂಪಾತೀತ ಪರಮಾತ್ಮನ ವರ್ಣನೆಯು ಈ ಮಹೇಶಸ್ಥಲದಲ್ಲಿ ಆಗುವದು. "ಮನೆ ನೋಡಾ ಬಡವರು ಮನ ನೋಡಾ ಘನ ಸಂಪನ್ನರು. ಸೊಂಕಿನಲ್ಲಿ ಸುಖಿ ಸರ್ವಾಂಗದಲಿ. ಪ್ರಸಾದಕ್ಕನುವಿಲ್ಲ ಬಂದ ತತ್ಕಾಲಕುಂಟು ಕೂಡಲಸಂಗನ ಶರಣರು ಸ್ವತಂತ್ರರು ಧೀರರು" ಭಕ್ತಿಸ್ಥಲವನ್ನು ದಾಟಿ ಮಹೇಶ್ವರಸ್ಥಲದಲ್ಲಿ ಪ್ರಗತಿಯಾದಾಗ ಸಾಧಕನು ಈ ವಚನದಂತೆ ಆಗುವನೆಂದು ಇದು ಮಹೇಶ್ವರಸ್ಥಲದಲ್ಲಿ ಪ್ರಗತಿಯಾದಾಗ ಸಾಧಕನು ಈ ವಚನದಂತೆ ಆಗುವನೆಂದು ಇದು ಬೋಧಿಸುವದು. "ತನುವಿನಲಿ ನಿರ್ಮೋಹ ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ,

ವಿಷಯದಲಿ ಉದಾಸೀನ, ಭಾವದಲಿ ದಿಗಂಬರ, ಜ್ಞಾನದ ಪರಮಾನಂದ, ನೆಲೆಗೊಂಡಬಳಿಕ ಸೌರಾಷ್ಟ್ರ ಸೋಮೇಶ್ವರಲಿಂಗವು ಬೇರಿಲ್ಲಕಾಣಿರೋ ಮಹೇಶ್ವರಸ್ಥಲದ ಅಂತ್ಯದಲ್ಲಿ ಈಪ್ರಕಾರ ನೆಲಿಸುವದು ಇದು ಜ್ಞಾನಯೋಗಿಯ ನಿಲಯವು. ಇದರಲ್ಲಿ ಭಕ್ತಿಜ್ಞಾನಗಳು ಹೆಚ್ಚುಕಡಿಮೆ ಇರುವದಿಲ್ಲ.

(೩) ಪ್ರಸಾದಿಸ್ಥಲ— ಭಕ್ತಸ್ಥಲ ಹೃದಕ್ಕೆ (ಭಾವಕ್ಕೆ) ಮಹೇಶ್ವರ ಸ್ಥಲ ಬುದ್ಧಿಗೆ (ವಿಚಾರಕ್ಕೆ) ಸಂಬಂಧಿಸಿದರೆ ಪ್ರಸಾದಿಸ್ಥಲ ಕ್ರಿಯೆಗೆ ಶರೀರಕ್ಕೆ ಕರಕ್ಕೆ ಸಂಬಂಧಿಸಿದೆ. ಇದೇ ವೇದಾಂತದ ಕರ್ಮಯೋಗವೇ ಸರಿ. ಭಾವ ವಿಚಾರ ಅಂದರೆ ಭಕ್ತಿಯಿಂದ ಗಳಿಸಿದ ಜ್ಞಾನಕ್ಕೆ ಹೊಳೆದ ಸತ್ಯಾನುಭವವನ್ನು ಆಚರಣೆಯಲ್ಲಿ ತಂದರೆ ಅದು ಸತ್ಯವೆಂದು ಗೋಚರವಾಗ್ಯುವದು. ಆಗ ಸುಜ್ಞಾನ, ಅನುಭವ, ಸಮ್ಯಕ್ ಜ್ಞಾನವಾಗುವದು. ಅದಕ್ಕಾಕರ್ಮಯೋಗವನ್ನು ಆಚರಿಸಬೇಕಾಗುವದು. ಇಲ್ಲಿ ಭಕ್ತಿ ಜ್ಞಾನ ಕರ್ಮಗಳು ಸರಿಯಾಗಿ ಕೂಡಿದಂತೆ ಆಯಿತು. ದೇವರ ಮೇಲೆ ಭಕ್ತಿ ಮಾಡಿ ಜ್ಞಾನಪಡೆದು ಅದನ್ನು ಸರಿಯಾಗಿ ಪಡೆದದ್ದನ್ನು ವರೆಗಲ್ಲಿಗೆ ಹಚ್ಚಿ ಪರೀಕ್ಷಿಸಿಕೊಳ್ಳುವದಕ್ಕೆ ಕರ್ಮಯೋಗವನ್ನು ಅಂದರೆ ಪ್ರಸಾದಿಸ್ಥಲವನ್ನು ಆಚರಿಸಬೇಕು. ಪ್ರಸಾದಿಸ್ಥಲವೆಂದರೆ ತಾನು ಸತ್ಯ ಶುದ್ಧ ನಿತ್ಯ ಕಾಯಕವನ್ನು ಮಾಡಿ ಆದರಿಂದ ಬಂದ ಫಲಪ್ರಾಪ್ತಿಯನ್ನು ಜೀವರೂಪದಲ್ಲಿರುವ ಶಿವನಿಗೆ ಅರ್ಪಿಸಿ ಉಳಿದ ಮಿಕ್ಕಪ್ರಸಾದವನ್ನು ತಾನು ಉಪಭೋಗಿಸುವದು. ಪ್ರಸಂಗ ಬಂದರೆ ಅದನ್ನುಕೂಡ ಸ್ವಸಂತೋಷದಿಂದ ಸಮರ್ಪಿಸುವದು. ಇದೇ ಕರ್ಮ ಫಲ ತ್ಯಾಗ ಇದೇ ನಿಷ್ಕಾಮ ಕರ್ಮಯೋಗವೇ ಸರಿ. ಇದೇ ದಾಸೋಹ ವೆನಿಸುವದು. ಮೊದಲಿಗೆ ನಿಷ್ಕಾಮ ಕರ್ಮಯೋಗವೇ ಸರಿ. ಇದೇ ದಾಸೋಹ ವೆನಿಸುವದು ಮೊದಲಿಗೆ ನಿಷ್ಕಾಮಕರ್ಮ ಯಾರಿಗೂ ಶಕ್ಯವಿಲ್ಲ. ಮೊಟ್ಟ ಮೊದಲು ಭಕ್ತಸ್ಥಲದಲ್ಲಿ ಸಾಮಾನ್ಯ ಕಾಯಕವನ್ನ ಮಾಡುವನು. ಮುಂದೆ ಮಹೇಶಸ್ಥಲದಲ್ಲಿ ದೇವರ ಸಂಬಂಧವಾಗಿ ಕಾರ್ಯಮಾಡುವನು. ಆಗ ಎಲ್ಲವೂ ದೇವರಿಗರ್ಪಿತವೆಂದು ಬಗೆಯುವನು. ಮುಂದೆ ಅತಿ ನಿಷ್ಕಾಮಕರ್ಮ ಮಾಡ ಹತ್ತುವನು. ಆಗ ತನ್ನ ಕಾಯಕದಲ್ಲಿ ಸದಾ ನಾಮಜಪ ದೇವರ ಧ್ಯಾನಗಳನ್ನು ಮಾಡುತ್ತ ಸತ್ಯ ಶುದ್ಧ ಕಾಯಕಮಾಡುವನು. ಬಂದ ಫಲಗಳನ್ನು ಜೀವಸ್ವರೂಪಿಗಳಾದ ಮಾನವ ಪ್ರಾಣಿಗೆ ಶಿವನೆಂದು ಬಗೆದು ಸಲ್ಲಿಸುವನು. ಇದೇ ಪ್ರಸಾದಿಸ್ಥಲದಸಾರ. ಈ ಮೂರುಸ್ಥಲದಿಂದ ಆಧಾರ ಶುದ್ಧಿಯಾಗಿ ದೇವನು ನಿಲಿಸುವನು.

ಲಿಂಗಕ್ಕೆಂದೇ ನೆನೆವೆ ಲಿಂಗಕ್ಕೆಂದೇ ಮಾಡುವೆ ಸಕಲಪದಾರ್ಥಗಳ ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಂಗಳನರಿಯೆನಯ್ಯ ಲಿಂಗಕ್ಕೆಂದೇ ಕಾಮಿಸುವೆನು ನಿಃಕಾಮಿಯಾಗಿ ಎನ್ನ ದೇಹೇಂದ್ರಿಯ ಮನಪ್ರಾಣಾದಿಗಳು ಲಿಂಗದ ಸತಿಯಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೇ ಕೈಕೊಂಬೆನು. ಅನರ್ಪಿತವನರಿಯೆ ಕೂಡಲಸಂಗಮದೇವಾ" ಇಲ್ಲಿ ಪ್ರಸಾದಿಸ್ಥಲದಲ್ಲಿ ಮಾಡುವ ನಿಜವಾದ ಪರಸೇವೆ ಅಂದರೆ ನಿಷ್ಕಾಮ ಕರ್ಮಯೋಗವನ್ನು ಸರಸಾಗಿ ಹಾಡಿದ್ದಾರೆ. ಮಾಡುವದು ಗಳಿಸುವದು ಎಲ್ಲವೂ ದೇವನಿಗಾಗಿ ಪರರಿಗಾಗಿ—'ಪರಮಪದವಿಯು ನಿಮ್ಮ ಪದರಲ್ಲಿ ಕಟ್ಟಿಕೊಳ್ಳಿ ಪರಮಪದವಿಯು ನಿಮ್ಮ ಎದೆಯಲ್ಲಿ ಕಟ್ಟಿಕೊಳ್ಳಿ ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು ಮಹಾಲಿಂಗ ಕಲ್ಲೇಶ್ವರದೇವಾ ಪರಮಪದವಿಯು ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ. ಇಂಥ ನಿಷ್ಕಾಮ ಸೇವೆಯೇ ಶರಣನಿಗೆ ಪರಮಾನಂದವನ್ನುಂಟು ಮಾಡುವದು. ಇದೇ ಪ್ರಸಾದಿಯ ನಿಲುವು. ಬರೀ ನುಡಿದರೆ ಪ್ರಯೋಜನವಿಲ್ಲ ನುಡಿದಂತೆ ನಡೆದರೆ ಮಾತ್ರ ಸಾರ್ಥಕವು. ಇದೇ ಶರಣರ ಪರಿಪೂರ್ಣಯೋಗದ ಪರಮಮಂತ್ರವಾಗಿದೆ.

ಶರಣರು ಕಾಯಕಕ್ಕೆ ಮಹತ್ವ ಕೊಟ್ಟಷ್ಟು ಜಗತ್ತಿನಲ್ಲಿ ಇನ್ನಾರೂ ಕೊಟ್ಟಿಲ್ಲ. ಯಾಕಂದರೆ ಇವರಿಗೆ ಜಗತ್ತು ಸತ್ಯ ಶರೀರವೂ ಪ್ರಸಾದಕಾಯ. ದೇವನ ಕೃಪೆಯಿಂದ ಬಂದನು. ದೇಹವೇ ದೇವಾಲಯ ಆತ್ಮನೇ ದೇವರು ಎಂದು ಬಗೆದಿದ್ದಾರೆ. ಇದನ್ನು ಕೆಡಿಸಬಾರದೆಂದು ಹೇಳಿದ್ದಾರೆ. ಸತ್ಯ ಶುದ್ಧ ಕಾಯಕದಿಂದ ತನಗೆ ಸಮಾಜಕ್ಕೆ ನಾಡಿಗೆ ಕಲ್ಯಾಣ ಮಾಡಿರೆಂದು ಶರಣರ ಈ ಪರಿಪೂರ್ಣಯೋಗವು ಸಾರುವದು. ಅಹಂಕಾರ ಮಮಕಾರ ರಹಿತನಾಗಲಿಕ್ಕೆ ಈ ಪ್ರಸಾದಿಸ್ಥಲ ಒಳ್ಳೇ ಮಹತ್ವವಾಗಿದೆ. ಪರಮಾತ್ಮನ ಕೈಯಂತ್ರವಾಗಲಿಕ್ಕೆ ಮೊದಲು ಭಕ್ತಸ್ಥಲ. ಅಹಂಕಾರ ಮಮಕಾರ ಶೂನ್ಯನಾಗಲಿಕ್ಕೆ ಮಹೇಶ್ವರಸ್ಥಲ ಇದರಿಂದ ಫಲಾಪೇಕ್ಷೆ ಇಲ್ಲದೆ ಪರಮಾತ್ಮನ ಸ್ವರೂಪಿಗಳಾಗಿ ಮಾನವರಿಗಾಗಿ ದುಡಿಯುವದೇ ಪ್ರಸಾದಿಸ್ಥಲವಾಗಿದೆ. ಇದೇ ಶರಣರ ಪರಿಪೂರ್ಣಯೋಗವಾಗಿದೆ. ಇಂಥ ಕರ್ಮಗಳು ಯಜ್ಞಗಳೆನಿಸುವವು. ಇವುಗಳಿಂದ ನಮ್ಮ ಸಕಲ ಆಧಾರ ಶುದ್ಧಿಯಾಗಿ ಪವಿತ್ರವಾಗಿ ಪರಮಾತ್ಮನು ಅದರಲ್ಲಿ ವಿರಾಜಿಸಲಿಕ್ಕೆ ಯೋಗ್ಯ ಸ್ಥಾನವಾಗುವದು.

(೪) ಪ್ರಾಣಲಿಂಗಿಯ ಸ್ಥಲ— ಹಿಂದಿನ ಮೂರು ಸ್ಥಲದಲ್ಲಿ ಹೃದಯ, ಬುದ್ಧಿ, ಮನ, ಶರೀರ, ಇಂದ್ರಿಯಗಳ ಶುದ್ಧಿಯಾಗಿರುವದು ಇನ್ನು ಈ ಸ್ಥಲ

ದಲ್ಲಿ ಶುದ್ಧಿಯಾದ ಹೃದಯ ಸಾಹಾಸನದಲ್ಲಿ ಆತ್ಮರಾಜನು ವಿರಾಜಮಾನನಾಗಿರುವ ಅನುಭವ ಬರುವದು. ಇಲ್ಲಿಯ ತನಕ ಪರಮಾತ್ಮನಿಗಾಗಿ ಆಧಾರ ಶುದ್ಧಿಯನ್ನು ಪಡೆದುದಾಯಿತು. ಇದಕ್ಕೆ ಅಷ್ಟಾವರಣ ಪಂಚಾಚಾರ ಸಪ್ತಾಚಾರಗಳ ಬೆಂಬಲವೂ ಇತ್ತು. ಎಲ್ಲವುಗಳಿಂದ ಮನ ಬುದ್ಧಿ ಹೃದಯ ಇಂದ್ರಿಯ ಶರೀರ ಮೊದಲಾದವುಗಳು ಒಳ್ಳೇ ಪವಿತ್ರವಾಗಿ ಒಳ್ಳೇ ಶುದ್ಧಿಯನ್ನು ಹೊಂದಲು ನೆರವಾದವು. ಇನ್ನು ತಾನೇ ದೇವರೆಂಬ ಪ್ರಜ್ಞೆಯು ಬಂದು ಅದರ ಅನುಭವವೂ ಆಗುವದು. ಇಲ್ಲಿಯ ವರೆಗೆ ಶಿವ ಬೇರೆ ಜೀವ ಬೇರೆ ಎಂಬ ತಿಳುವಳಿಕೆ ಇದ್ದದ್ದು ಈಗ ಮಾಯವಾಗಿ ತಾನೇ ಶಿವನೆಂಬ ಅನುಭವವಾಗುವದು ಸಾಧಕನಲ್ಲಿ ಶಿವೋಹಂ ಭಾವವು ನೆಲಗೊಳ್ಳುವದು ಆಗ ಇವನು ಲಿಂಗ ಪ್ರಾಣಿಯಾಗುವನು. ಇಲ್ಲಿಯ ವರೆಗೆ ಹೊರಗೆ ಹುಡುಕುತ್ತಿರುವ ದೇವನು ತನ್ನಲ್ಲೇ ತಾನೇ ಇರುವನೆಂದು ಅನುಭವವಾಗುತ್ತದೆ.

ಅಂಗ ಲಿಂಗವ ವೇಧಿಸಿ ಅಂಗ ಲಿಂಗದೊಳಗಾಯಿತು! ಮನಲಿಂಗವ ವೇಧಿಸಿ ,ಮನ ಲಿಂಗದೊಳಗಾಯಿತ್ತು ! ಭಾವ ಲಿಂಗವ ವೇಧಿಸಿ ಭಾವಲಿಂಗ ದೊಳಗಾಯಿತ್ತು. ಚನ್ನಮಲ್ಲಿಕಾರ್ಜುನ ನಿರ್ಮ್ಮಲಮಾಯ ಸಂಗದಲ್ಲಿರ್ದು ಸ್ವಯಲಿಂಗಿಯಾದೆನು. ಇಲ್ಲಿ ಲಿಂಗಾಂಗ ಸಾಮರಸ್ಯವನ್ನು ಸರಸಾಗಿ ಹೇಳಲಾಗಿದೆ. ಅಂಗ ಮಯವಾದವು. ಅವು ತಮ್ಮ ಮೊದಲಿನ ಗುಣಸ್ವಭಾವಗಳನ್ನು ಸಂಪೂರ್ಣ ಕಳೆದುಕೊಂಡು ಲಿಂಗದ ಗುಣ ಕಳೆ ಚೈತನ್ಯಗಳನ್ನು ಹೊಂದಿದವೆಂದು ಇದರ ಅರ್ಥ. ಇದೇ ಶರಣರ ಪರಿಪೂರ್ಣಯೋಗದ ಪೂರ್ಣ ಸಿದ್ಧಿ ಆಗ ಮಾತ್ರ ತಾನೇ ಗುರು, ತಾನೇ ಲಿಂಗ. ತಾನೇ ಜಂಗಮವಾಗುವದು. ತನ್ನ ತಾನರಿದೆಡೆ ತಾನೇ ಗುರು, ತಾನೇ ಲಿಂಗ, ತನ್ನ ನಿಷ್ಪತ್ತಿಯೇ (ಸ್ವರೂಪ ಜ್ಞಾನವೇ) ಜಂಗಮು, ಇಂತೀ ತ್ರಿವಿಧವು ಒಂದಾದಡೆ ರಾಮೇಶ್ವರ ಲಿಂಗವು ತಾನೇ ಇಲ್ಲಿಯ ತನಕ ಮೊದಲಿಗೆ ಗುರುವಿನ ಅವಶ್ಯಕತೆ ಇಲ್ಲದಿಲ್ಲ. ಮುಂದೆ ಈಗ ಮಾತ್ರ ಹೊರಗಿನ ಗುರುವಿನ ಅವಶ್ಯಕತೆ ಇಲ್ಲ. ಇದರ ಅರ್ಥ ಮೊದಲಿನ ಗುರುವನ್ನು ಜರಿದು ಬಿಡಬೇಕೆಂದು ಹೇಳಲಿಲ್ಲ. ಇನ್ನು ಮೇಲೆ ಗುರು ಲಿಂಗ ಜಂಗಮರ ನೆರವು ಬೇಕಾಗಿಲ್ಲೆಂದು ಇದರ ಭಾವ. ಆ ಸ್ಥಿತಿ ತನಗೇ ಪ್ರಾಪ್ತವಾದ ಮೇಲೆ ಹೊರಗಿನ ನೆರವು ಬೇಕಾಗುವದಿಲ್ಲ.

ಉಳ್ಳವರು ಶಿವಾಲಯುವ ಮಾಡುವರು ನಾನೇನ ಮಾಡಲಿ ಬಡವನು. ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ, ಕೂಡಲಸಂಗಮದೇವ ಕೇಳಯ್ಯ, ಸ್ಥಾವರಕ್ಕಳವಿಲ್ಲ. ಎಂದು ಹೇಳಿದ್ದನ್ನು

ಅನ.ಲಕ್ಷಿಸಿದರೆ ದೇಹವು ಪವಿತ್ರನಾಗಿ ದೇವಾಲಯವಾಯಿತು. ಒಳಗಿನ ಆತ್ಮನೇ ಲಿಂಗ ದೇವನಾದನೆಂದು ಹೇಳಿದ್ದಾನೆ. ಇದೇ ಪರಿಪೂರ್ಣಯೋಗದ ಗೊತ್ತು ಗುರಿ ಹಾಗೂ ಸ್ವರೂಪವೆಂದು ಹೇಳಬಹುದು.

(೫) ಶರಣಸ್ಥಲ:—ಇದೇ ಜೀವನ್ಮುಕ್ತನ ಸ್ಥಿತಿ ಇವನೇ ಸ್ಥಿತಪ್ರಜ್ಞ ಪ್ರತ್ಯಕ್ಷ ಪರಮೇಶ್ವರನಾದ ಬಳಿಕ ಎಲ್ಲರಲ್ಲಿ ಪರಮಾತ್ಮನನ್ನು ನೋಡುವನು ಸರ್ವಂಖಲ್ವಿದಂ ಬ್ರಹ್ಮಂ, ಎಂದು ಗೋಚರಿಸುವದು. ಆಗ ಇವನಿಗೆ ಎಲ್ಲ ಕಡೆಗೆ ಸಮತ್ವಕಾಣದು ಯಾವ ಆಶೆ, ಚಿಂತೆ, ಆಧಿ ವ್ಯಾಧಿ ಇರುವದಿಲ್ಲ. ಇಷ್ಟಾದರೂ ಕೂಡ ಜೀವಕೋಟಿಯನ್ನು ಉದ್ಧರಿಸುವ ಮುಕ್ತ ಮಾಡುವ ಹೊಣೆಯನ್ನು ಹೊತ್ತು ಪ್ರಪಂಚದಲ್ಲಿ ಇರುವನು. ಇವನಿಗೆ ಯಾವ ಕರ್ಮದ ಕಟ್ಟಳೆಗಳಿಲ್ಲ. ಎಲ್ಲರಲ್ಲಿಯೂ ಪರಮಾತ್ಮನನ್ನು ಕಾಣುವದರಿಂದ ಇವನಿಗೆ ಎಲ್ಲಿಯೂ ವೈರಿಗಳು ಶತ್ರುಗಳು ಕಾಣುವದಿಲ್ಲ. ಭವಿಯು ಮುಖ ನೋಡನೆಂದು ಅಂದರೆ ಇದೇ ಇರುವದು ಎಲ್ಲರೂ ಪರಮಾತ್ಮಸ್ವರೂಪಿಗಳಾಗಿ ಕಾಣುವದರಿಂದ ಭವಿ ಎಂಬುದೇ ಇವನ ಕಣ್ಣಿಗೆ ಗೋಚರವಾಗುವದಿಲ್ಲ. ಕಲ್ಲು, ಬಂಗಾರ, ಹೆಂಟಿ ಚಂಡಾಲ, ಪಾಪಿ, ಶರಣ, ಆಕಳು, ಹುಲಿ, ವೇಶ್ಯ, ಪತಿವ್ರತಾ, ಹೀಗೆ ಸಕಲರಲ್ಲಿ ಸಕಲದರಲ್ಲಿ ಆ ಪರಮಾತ್ಮನ ದರ್ಶನವಾಗುವದರಿಂದ ಎಲ್ಲವುಗಳನ್ನು ಸಮದೃಷ್ಟಿಯಿಂದಲೇ ನೋಡುವನು. ಅವನು ಯಾತರಲ್ಲಿಯೂ ಭೇದ ಮಾಡುವದಿಲ್ಲ ಸುಖ ದುಃಖ ಮೊದಲಾದ ದ್ವಂದ್ವಗಳನ್ನು ದಾಟಿ ಹೋಗುವನು. ಸಿಟ್ಟು ಭಯಗಳನ್ನು ಬಿಡುವನು.— "ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ ಜಲವೊಂದೇ ಶೌಚಾಚಮನಕ್ಕೆ ಕುಲವೊಂದೇ ತನ್ನ ತಾನರಿವಂಗೆ ಫಲವೊಂದೇ ಷಡುದರ್ಶನ ಮುಕ್ತಿಗೆ ನಿಲವೊಂದೇ ಕೂಡಲಸಂಗಮ ದೇವ ನಿಮ್ಮನರಿವಂಗೆ." ಇದೆಲ್ಲ ಸಮದರ್ಶನದ ಸಾರವೇ ಆಗಿದೆ. ಸ್ಫಟಿಕದ ಘಟದೊಳಗೆ ಬತ್ತಿದ ಜ್ಯೋತಿ ಒಳಹೊರಗೊಂದೇ ಸ್ವಯವಾಗಿ ಪ್ರಜ್ವಲಿಸುವಂತೆ ಎನ್ನೊಳಗಿಪ್ಪ ತನು ಹೊರಗಿಪ್ಪ, ತನು, ಒಂದೇ ವಸ್ತುವೆಂದು ಆದ್ಯಂತವ ಕಾಣಬಂದಿತ್ತು ನೋಡಾ. ಆ ಪರತತ್ವವೇ ಶರಣನು ತಾನೇ ನೋಡಾ ಬೇರೊಂದು ಸ್ವರೂಪವಿಲ್ಲ ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ" ಶರಣಸ್ಥಿತಿ ಹಾಗೂ ಪರಮಾತ್ಮ ಇವರ ಸ್ವರೂಪ ಒಂದೇ ಎಂದು ಇಲ್ಲಿ ಹೇಳಲಾಗಿದೆ. ಇದು ಪರಿಪೂರ್ಣಯೋಗದ ಫಲವಾಗಿರುವದು. ಇವನು ಜಗತ್ತಿನಲ್ಲಿ ಇರುವದು ಪರರಿಗಾಗಿ, ಪರಮಾತ್ಮನ ಕಾರ್ಯಕ್ಕಾಗಿ. ಮುಕ್ತಿಯು ಶರಣನ ಗುರಿಯಲ್ಲ. ಮಹತ್ತರ ಶಕ್ತಿ ಸಿದ್ಧಿಗಳನ್ನು ದೊರಕಿಸಿ ಜನರಿಗೆ

ಗಳನ್ನೂ ಸಿದ್ಧಿಗಳನ್ನೂ ತೋರಿಸುವದಕ್ಕಲ್ಲ ಭೂಮಿಯ ಮೇಲೆ ಸ್ವರ್ಗವನ್ನು ಸ್ಥಾಪಿಸುವ ಸಲುವಾಗಿ ಹೆಣಗುವನು- ಜೀವನ್ಮುಕ್ತನಾದರೂ ಇವನೇಂದೂ ಕ್ರಿಯೆಗಳಿಲ್ಲದೆ ಸುಮ್ಮನೇ ಕೂಡ್ರುವದಿಲ್ಲ. ಮನದೊಳಗೆ ಘನವು ವೇದ್ಯವಾದಬಳಿಕ ಪುಣ್ಯವಿಲ್ಲ, ಪಾಪವಿಲ್ಲ, ಸುಖವಿಲ್ಲ, ದುಃಖವಿಲ್ಲ. ಕಾಲವಿಲ್ಲ, ಕರ್ಮವಿಲ್ಲ, ಜನನವಿಲ್ಲ. ಮರಣವಿಲ್ಲ ಗುಹೇಶ್ವರಾ ನಿಮ್ಮ ಶರಣ ಘನಮಹಿಮನೋಡಯ್ಯ ಮತ್ತು ತೆರಹಿಲ್ಲದ ನಡೆ, ತೆರಹಿಲ್ಲದ ಸಂಭಾಷಣೆಯ ಸುಖವು, ತೆರಹಿಲ್ಲದ ಸ್ವಾನುಭಾವ ಸುಖವು, ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ, ಕೂಡಲಸಂಗಮದೇವಾ ನಿಮ್ಮ ಶರಣರಿಗೆ" ಶರಣರಿಗೆ ಪರಮಾತ್ಮನಿಗೆ ಅಭೇದವನ್ನು ಇದು ಸೂಚಿಸುವದು. ಇಷ್ಟೊಂದು ತಾದಾತ್ಮ್ಯಹೊಂದಿ ಶರಣನು ವರ್ತಿಸುವನು. ಇಷ್ಟಾದರೂ ಸದಾ ಕ್ರಿಯೆಗಳಿರುವವೆಂದು ಈ ವಚನ ಸೂಚಿಸುವದು. ಯಾರಿಗೂ ಕ್ರಿಯೆಗಳು ಎಂದೂ ಬಿಡುವದಿಲ್ಲ. ಸ್ಥೂಲ ಇಲ್ಲವೆ ಸೂಕ್ಷ್ಮ ಈ ಪದಕ್ರಿಯೆಗಳನ್ನು ಶರಣನೂ ಕೂಡ ಸದಾ ಮಾಡಬೇಕಾಗುವದೆಂದು ಇದು ಸೂಚಿಸುವದು. ಶರಣನು ಶಿವನಲ್ಲಿ ತಾದಾತ್ಮ್ಯವಾಗುವನೆಂತು? ಅದನ್ನು ಅಕ್ಕ ಹೀಗೆ ಹೇಳಿದ್ದಾಳೆ- ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯ ಎಂದು ಹೇಳಿದ್ದಾಳೆ. ಅಂದರೆ ಮೊದಲು ಇದ್ದ ಆರು ಅಂಗಸ್ಥಲಗಳು ತ್ಯಾಗಾಂಗ, ಭೋಗಾಂಗ, ಯೋಗಾಂಗ ಎಂದು ಮೂರೇ ಆಗಿ ಅವು ಮತ್ತೆ ಲಿಂಗ ಅಂಗವೆಂದು ಎರಡೇ ಉಳಿದು ಅವುಗಳಲ್ಲಿ ಅಂಗವು ಲಿಂಗದಲ್ಲಿ ಕೂಡಿ ಒಂದೇ ಆಯಿತೆಂದರೆ ಒಂದೇ ವಸ್ತುವು ಉಳಿಯುವದು ಎಂದರ್ಥ.

ಮೊದಲು ನಿಃಕಲ ಪರಶಿವನಿದ್ದನು. ಅವನಿಂದ ಚಿತ್‌ಶಕ್ತಿ ಪ್ರಕಟವಾದಳು. ಇದರಲ್ಲಿ ಶಿವಶಕ್ತ್ಯಾತ್ಮಕ ನಿಃಕಲಶಿವತತ್ವ ಇದರಿಂದ ಲಿಂಗಸ್ಥಲ ಅಂಗಸ್ಥಲ ಎಂದು ಎರಡು. ಅಂಗಸ್ಥಲದಲ್ಲಿ (೧) ತ್ಯಾಗಾಂಗ (೨ ಭೋಗಾಂಗ (೩) ಯೋಗಾಂಗಗಳೆಂದು ಮೂರು ಇನ್ನು (೧) ತ್ಯಾಗಾಂಗದಲ್ಲಿ ಭಕ್ತ ಮಹೇಶ (೨) ಭೋಗಾಂಗದಲ್ಲಿ ಪ್ರಸಾದಿ-ಪ್ರಾಣಲಿಂಗಿ (೩) ಯೋಗಾಂಗದಲ್ಲಿ ಶರಣ-ಐಕ್ಯ ಹೀಗೆ ಮೇಲಿನ ವಚನದ ಅರ್ಥವಿರುವದು. ಭಕ್ತನ ಸದ್ಭಕ್ತಿ ಮಹೇಶನ ನೈಷ್ಠಿಕಾಭಕ್ತಿಗಳಿಂದ ಭಕ್ತಿಜ್ಞಾನಗಳು ಉತ್ಪನ್ನವಾಗುವದರಿಂದ ಈ ಶರೀರವು ವಿಷಯಗಳನ್ನು ತ್ಯಾಗಮಾಡುವ ಪ್ರವೃತ್ತಿಯದಾಗಿ ಸ್ವಾಭಾವಿಕ ನಿರ್ವಿಷಯಿಯಾಗಿ ತ್ಯಾಗಾಂಗವೆನಿಸಿಕೊಳ್ಳುವದು. ಆಗ ಸಕಲ ಇಂದ್ರಿಯಗಳು ವಿಷಯ ತ್ಯಾಗದಿಂದ ಪರಿಶುದ್ಧವಾಗಿ ಅಲ್ಲಿ ಲಿಂಗದ ಕಳೆ

ಚೈತನ್ಯ ಆಯಾ ಇಂದ್ರಿಯಗಳಲ್ಲಿ ಪ್ರಕಟವಾಗುವದು. ಆಗ ಆಯಾ ಇಂದ್ರಿಯಗಳಿಂದ ಒಳಗಿನಿಂದಲೇ ಸುನಾದ, ಸುಸ್ಪರ್ಶ, ಸುರಸ, ಸುಶಬ್ದ, ಸುಗಂಧ, ಸುರೂಪ, ಸುಬಣ್ಣಗಳು ಹೊರಗೆ ಬಂದು ಪ್ರಕಟವಾಗಹತ್ತುವವು ಆಗ ಇದನ್ನು ನೋಡಿ ಸಾಧಕನಿಗೆ ಆನಂದವಾಗಿ ಅವಧಾನಭಕ್ತಿ ಅನುಭಾವಭಕ್ತಿಗಳಿಂದ ಅನುಭೋಗಿಸುವನು. ಇದೇ ಆಗ ಭೋಗಾಂಗವಾಯಿತು. ಹೊರಗಿನ ವಿಷಯಗಳನ್ನು ಭೋಗಿಸುವದು ಯೋಗಾಂಗದಲ್ಲಿ ಮೊದಲು ತ್ಯಾಗಾಂಗ ಬಂದಮೇಲೆ ಭೋಗಿಸುವ ಭೋಗಾಂಗ ಬರುವದು ಇಲ್ಲವಾದರೆ ಇಲ್ಲ. ಆಮೇಲೆ ತನ್ನಿಂದ ತಾನೇ ಯೋಗವಾಗಿ ಯೋಗಾಂಗವಾಗುವದು. ಭೋಗಿಸಿದ ಬಳಿಕ ಆನಂದ ಭಕ್ತಿ ಸಮರಸಭಕ್ತಿಗಳಿಂದ ಲಿಂಗಾಂಗ ಸಮರಸವಾಗುವದು. ಆಗ ಅದೇ ಯೋಗಾಂಗವಾಗುವದು ಇದೇ ಶರಣನ ನಿಲಯು. ಇದೇ ಪರಿಪೂರ್ಣಯೋಗದ ಗೊತ್ತು ಗುರಿ. ಶರಣರ ಈ ಕೃತಿಯು ಎಂಥ ಸುಂದರ ಉಪಯುಕ್ತವೆಂದು ಇದನ್ನರಿತವರು ಹೇಳದೆ ಇರಲಾರರು. ಇದು ಪರಿಪೂರ್ಣಯೋಗವೆಂದೆನಿಸಿಕೊಳ್ಳಲು ಎಂಥ ಉಚ್ಚ ಶ್ರೇಷ್ಠವಾಗಿರುವದು ನೋಡಿರಿ.

## ೩೬ ಸ್ಥಲಗಳು.

ಈ ಆರು ಸ್ಥಲಗಳಲ್ಲಿ ಪುನಃ ಮೂವತ್ತಾರು ಸೂಕ್ಷ್ಮ ಸ್ಥಲಗಳಾಗಿರುವವು. ಭಕ್ತಿಯಿಂದ ಐಕ್ಯದವರೆಗೆ ಇದರಲ್ಲಿ ಎಷ್ಟು ಏಕತೆ ಇರುವದೆಂದು ಸಹಜ ಹೊಳೆಯುವದು. ಭಕ್ತಸ್ಥಲದಲ್ಲಿ ಅವನು ಆರೂ ಸ್ಥಲಗಳನ್ನು ನಿತ್ಯ ಅನುಭವಿಸುವನು.

೧. ಭಕ್ತನುಃ— (೧) ಭಕ್ತನ ಭಕ್ತಸ್ಥಲ, (೨) ಭಕ್ತನ ಮಹೇಶಸ್ಥಲ (೩) ಭಕ್ತನ ಪ್ರಸಾದಿಸ್ಥಲ (೪) ಭಕ್ತನ ಪ್ರಾಣಲಿಂಗಿಸ್ಥಲ (೫) ಭಕ್ತನ ಶರಣಸ್ಥಲ (೬) ಭಕ್ತನ ಐಕ್ಯಸ್ಥಲ ನಿತ್ಯ ಭಕ್ತಿ ಮಾಡುವ ಭಕ್ತನು ಇವುಗಳನ್ನು ಅಲ್ಪಸ್ವಲ್ಪ ಅನುಭವಿಸುವನು. ಆದರೆ ಸ್ಥೂಲವಾಗಿ ಅನುಭವಿಸುವನು.

೨. ಮಹೇಶನುಃ— (೨) ಮಹೇಶ್ವರನ ಭಕ್ತಸ್ಥಲ (೨) ಮಹೇಶ್ವರನ ಮಹೇಶಸ್ಥಲ (೩) ಮಹೇಶನ ಪ್ರಸಾದಿಸ್ಥಲ (೪) ಮಹೇಶನ ಪ್ರಾಣಲಿಂಗಿಸ್ಥಲ (೫) ಮಹೇಶನ ಶರಣಸ್ಥಲ (೬) ಮಹೇಶನ ಐಕ್ಯಸ್ಥಲ ಈ ಪ್ರಕಾರ ಮಹೇಶನಿಗೆ ನಿತ್ಯ ಈ ಆರೂ ಸ್ಥಲದ ಅನುಭವವಾಗುವದು. ನಿತ್ಯ ಇದರಂತೆ ಅವುಗಳ ಸಂಬಂಧವಾಗುವದು.

೩. ಪ್ರಸಾದಿ (೧) ಪ್ರಸಾದಿಯ ಭಕ್ತಸ್ಥಲ (೨) ಪ್ರಸಾದಿಯ ಮಹೇಶ ಸ್ಥಲ (೩) ಪ್ರಸಾದಿಯ ಪ್ರಸಾದಿಯಸ್ಥಲ (೪) ಪ್ರಸಾದಿಯ ಪ್ರಾಣಲಿಂಗಿಯ ಸ್ಥಲ (೫) ಪ್ರಸಾದಿಯ ಶರಣಸ್ಥಲ (೬) ಪ್ರಸಾದಿಯ ಐಕ್ಯಸ್ಥಲ ಈ ಪ್ರಕಾರ ನಿತ್ಯ ಪ್ರಸಾದಿಗೆ ಇವೆಲ್ಲ ಸಂಬಂಧವಾಗಿ ಇವುಗಳನ್ನು ಅನುಭವಿಸುವನು.

೪. ಪ್ರಾಣಲಿಂಗಿ (೧) ಪ್ರಾಣಲಿಂಗಿಯ ಭಕ್ತಸ್ಥಲ (೨) ಪ್ರಾಣ ಲಿಂಗಿಯ ಮಹೇಶಸ್ಥಲ (೩) ಪ್ರಾಣಲಿಂಗಿಯ ಪ್ರಸಾದಿಸ್ಥಲ (೪) ಪ್ರಾಣ ಲಿಂಗಿಯ ಪ್ರಾಣಲಿಂಗಿಸ್ಥಲ (೫) ಪ್ರಾಣಲಿಂಗಿಯ ಶರಣಸ್ಥಲ (೬) ಪ್ರಾಣ ಲಿಂಗಿಯ ಐಕ್ಯಸ್ಥಲ ಈ ಪ್ರಕಾರ ನಿತ್ಯ ಪ್ರಾಣಲಿಂಗಿಗೆ ಇವೆಲ್ಲ ಸಂಬಂಧವಾಗಿ ಇವುಗಳನ್ನು ಅನುಭೋಗಿಸುವನು.

೫. (೧) ಶರಣನ ಭಕ್ತಸ್ಥಲ (೨) ಶರಣನ ಮಹೇಸ್ಥಲ (೩) ಶರ ಣನ ಪ್ರಸಾದಿಯಸ್ಥಲ (೪) ಶರಣನ ಪ್ರಾಣಲಿಂಗಿಯಸ್ಥಲ (೫) ಶರಣನ ಶರಣಸ್ಥಲ (೬) ಶರಣನ ಐಕ್ಯಸ್ಥಲ ಈ ಪ್ರಕಾರ ಶರಣನಿಗೆ ನಿತ್ಯ ಇವುಗಳ ಸಂಬಂಧವಾಗಿ ಇವುಗಳನ್ನು ಅನುಭವಿಸುವನು.

೬. ಐಕ್ಯ:— (೧) ಐಕ್ಯನ ಭಕ್ತಸ್ಥಲ (೨) ಐಕ್ಯನವು ಮಹೇಶ ಸ್ಥಲ (೩) ಐಕ್ಯನ ಪ್ರಸಾದಿಸ್ಥಲ (೪) ಐಕ್ಯನ ಪ್ರಾಣಲಿಂಗಿ ಸ್ಥಲ (೫) ಐಕ್ಯನ ಶರಣಸ್ಥಲ (೬) ಐಕ್ಯನ ಐಕ್ಯಸ್ಥಲ ಈ ಪ್ರಕಾರ ಐಕ್ಯನು ನಿತ್ಯ ಇವುಗಳನ್ನು ಸಂಬಂಧಪಡಿಸಿಕೊಳ್ಳಬೇಕು. ಅವುಗಳನ್ನು ಅನುಭವಿಸ ಬೇಕು.

ಈ ಪ್ರಕಾರ ಇರುವದನ್ನು ನೋಡಿದರೆ ಈ ಷಟ್ಥಲ ಶಾಸ್ತ್ರವು ಎಷ್ಟು ಮಹತ್ವ ಎಷ್ಟು ಸೂಕ್ಷ್ಮ ಇರುವದೆಂದು ಹೊಳೆಯುವದು. ಭಕ್ತನಿಗೂ ಆರೂ ಸ್ಥಲಗಳು, ಮಹೇಶನಿಗೂ ಆರೂ ಸ್ಥಲಗಳು, ಹೀಗೆ ಎಲ್ಲರಿಗೂ ಆರೂ ಸ್ಥಲಗಳಿರುವವು. ಐಕ್ಯನಿಗೂ ಕೂಡ ಆರೂ ಸ್ಥಲಗಳು ಬಿಟ್ಟಿದ್ದಲ್ಲ. ಕಾರಣ ಭಕ್ತನೇ ಆರೂ ಸ್ಥಲಗಳನ್ನು ಮೂವತ್ತಾರು ಸ್ಥಲಗಳನ್ನು ಅನು ಕ್ರಮವಾಗಿ ಏರಿ ಅನುಭವಿಸುವನು. ಅದಕ್ಕೆ ಇವರೆಲ್ಲರ ಸಾಮರಸ್ಯವಿರುವದು. ಕಂಡುಬರುವದು. ಅಲ್ಲದೆ ಇವೆಲ್ಲ ಒಬ್ಬನಿಗೇ ಸಂಬಂಧಿಸುವವು. ಇವರು ಎಲ್ಲ ಒಂದೇ ಎಂದು ಹೇಳಿದಂತೆ ಆಗುವದು. ಈ ಪ್ರಕಾರ ಶರಣರ ಪರಿಪೂರ್ಣ ಯೋಗವು ಎಷ್ಟು ವ್ಯಾಪಕ, ವಿಸ್ಪೃತ, ಎಂಥ ವಿಶಾಲ ಗೊತ್ತುಗುರಿಯುಳ್ಳ ದೆಂದು ಹೊಳೆಯುವದು. ಇದು ಅಷ್ಟಾವರಣ ಪಂಚಾಚಾರ ಸಪ್ತಾಚಾರ ಷಟ್ಸ್ಥಲ ಮೂವತ್ತಾರುಸ್ಥಲ ನೂರೊಂದು ಸ್ಥಲಗಳನ್ನು ತಳಕುಮಳಕು

ಹಾಕಿಕೊಂಡು ಒಂದಕ್ಕೊಂದು ವಿಶಿಷ್ಟ ಪಾರಿಭಾಷಿಕ ಅರ್ಥದಿಂದ ಕೂಡಿಕೊಂಡು ಹೇಗೆ ಪರಿಪೂರ್ಣಯೋಗವೆನಿಸಿಕೊಂಡಿವೆ ನೋಡಿರಿ. ಹೀಗಾಗುವದರಿಂದ ಮಾನವನ ಅಂಗೋಪಾಂಗಗಳಲ್ಲಿ ಶಿವಚಿತ್ಕಳೆಯು ವ್ಯಾಪಿಸುವದರಲ್ಲಿ ಏನೂ ಎಳ್ಳಷ್ಟೂ ಸಂದೇಹನೇ ಇಲ್ಲ. ಈ ಪ್ರಕಾರ ಶರಣರು ಎಷ್ಟು ಸೂಕ್ಷ್ಮ ಮೆಟ್ಟಲಕ್ಕೆ ಮುಟ್ಟಿದ್ದಾರೆ. ವಿಚಾರಿಸಿನೋಡಿರಿ. ಅವರ ಆಳವಾದ ಅನುಭವಕ್ಕೆ ಎಲ್ಲಿಯೂ ಕುಂದುಕೊರತೆಗಳಿಲ್ಲ. ಸಾಧಕನಿಗೆ ಎಲ್ಲಿಯೂ ಅಡೆತಡೆಗಳು ಬರುವನೇ ಇಲ್ಲ. ಅಂಥ ಸುಲಭ ಸರಳವಾಗಿರವದು. ಶರಣರ ಈ ಪರಿಪೂರ್ಣಯೋಗ ಹೊರಗಿನ ವೇದಾಂತಿ ಸಿದ್ಧಾಂತಿ, ಸಾಂಖ್ಯಯೋಗಿ ಜೈನ, ಬೌದ್ಧ, ಕ್ರಿಸ್ತ, ಮಹಮ್ಮದೀಯ, ದ್ವೈತಿ ಅದ್ವೈತಿ ವಿಶಿಷ್ಟಾದ್ವೈತಿ, ಶಾಕ್ತ, ತಾಂತ್ರಿಕ ಮೊದಲಾದ ಎಲ್ಲರೂ ಶರಣರ ಪರಿಪೂರ್ಣ ಯೋಗವನ್ನು ಚನ್ನಾಗಿ ಅಭ್ಯಾಸಮಾಡಿದರೆ ತಮ್ಮ ತಮ್ಮ ತತ್ವ ಸಿದ್ಧಾಂತ, ಯೋಗ, ಮೊದಲಾದವುಗಳು ಇದರಲ್ಲಿ ಇರುವವೆಂದು ಹೇಳದೇ ಬಿಡಲಾರರು. ಅಂಥ ಪರಿಪೂರ್ಣವಾದ ಯೋಗವನ್ನು ಶರಣರು ಅನುಭವಗೊಂಡು ಬಳಿಕೆಯಲ್ಲಿ ತಂದರು. ಸಾಮೂಹಿಕವಾಗಿ ಇದನ್ನು ಬೋಧಿಸಿದ್ದರಿಂದ ಅನೇಕ ತಂಡಗಳ ಮಾನವರು, ಅನೇಕ ಜಾತಿಗಳ ಮಾನವರು ಪರಿಪೂರ್ಣ ಯೋಗಿಗಳಾದರು. ಇದೇ ಮಹತ್ವವಾದ ವಿಷಯ. ಉಳಿದ ಕೆಲವು ಮತಗಳಲ್ಲಿ ತಮ್ಮಷ್ಟಕ್ಕೆ ತಾವೇ ಜ್ಞಾನಿಗಳಾದರು. ತಮ್ಮಷ್ಟಕ್ಕೆ ತಾವೇ ಮುಕ್ತರಾದರು. ಶರಣರು ಮಾತ್ರ ಹಾಗೆ ಮಾಡಲಿಲ್ಲ. ಮುಕ್ತಿಗೆ ಬಾಯ್ದೆರೆದು ಕೈಮಾಡಿ ಕರೆಯಲಿಲ್ಲ. ಇಲ್ಲೇ ಎಲ್ಲ ಇದೆ ಎಂದು ಹೇಳಿದರು.

## ಜಗತ್ತು ಬಿಟ್ಟ ಮುಕ್ತಿ ಇಹರ ಗುರಿಯಲ್ಲ.

ಶಿವಶರಣರಿಗೆ ಮುಕ್ತಿ ಅಂದರೆ ಜನನ ಮರಣ ರಹಿತ ಸ್ಥಿತಿ ಅವರಿಗೆ ಬೇಕಾಗಿಲ್ಲ. ಜಗದ ಸರ್ವ ಕಲ್ಯಾಣಬೇಕಾಗಿದೆ. ಜನರನ್ನು ಇಲ್ಲಿ ದುಃಖದಲ್ಲಿ ಅಜ್ಞಾನದಲ್ಲಿ ಕೊಳೆಯಿಸುತ್ತ ತಾವು ಒಬ್ಬರೇ ಮುಕ್ತರಾಗಬಯಸುವದಿಲ್ಲ. ಅನೇಕ ಶರಣರಿಗೆ ಶಿವನು ದರ್ಶನಕೊಟ್ಟು ಕೈಲಾಸಕ್ಕೆ ಬರಬೇಕೆಂದು ಕರೆದರೂ ಒಲ್ಲೆಂದರು. ಕಂಕರಿಕಕ್ಕಯ್ಯನಿಗೆ ಶಿವನು ಕೈಲಾಸಕ್ಕೆ ಬರಲಿಕ್ಕೆ ಕೇಳಿದರೆ ಅವನು—'ಈ ಮರ್ತ್ಯಲೋಕವೇ ನನಗೆ ಘನತರವಾದದ್ದು. ನಿನ್ನ ಗಣಪದವಿ ಎನಗೆ ಬೇಡ. ನಿನಗೆ ಬೇಕಾದರೆ ನೀನೇ ನಿನ್ನ ಒಕ್ಕಲು ಸಹವಾಗಿ ಭಕ್ತರಿದ್ದಂಥ ಈ ಮರ್ತ್ಯಲೋಕಕ್ಕೆ ಬಾ ಇಲ್ಲಿ ಮಹಿಮರಿದ್ದಾರೆ ಅವರನ್ನು ನೀನು

ಇಲ್ಲಿ ಕಾಣುವಿ ನನಗೆ ಕೈಲಾಸವು ಬೇಡ ಎಂದು ನುಡಿದನು. ಇದರಂತೆ ಅನೇಕ ಶರಣರು ನುಡಿದಿದ್ದಾರೆ. "ನನಗೆ ಕೈಲಾಸವು ಬೇಡ ಕ್ರಿಯಾಜ್ಞಾನ ದಿಂದ ಆಚರಿಸುವವರಿಗೆ ಕ್ರಿಯಾಸಮಾಧಿಯೇ ಅಧಿಕ. ಕಲಿಯುಗದಲ್ಲಿ ಶಿವಾ ರ್ಪಣದಿಂದ ಕ್ರಿಯೆಗಳನ್ನು ಮಾಡುವದೇ ಅಧಿಕವು. ಇಂಥವರಿಗೆ ಕ್ರಿಯಾ ಸಮಾಧಿಯೇ ಹೆಚ್ಚು" ಎಂದು ಚಿಕ್ಕ ಮಾದಣ್ಣನು ನುಡಿದಿದ್ದಾನೆ. ಇದಲ್ಲದೆ ಪಾಲ್ಕುರಿಕೆಯ ಸೋಮೇಶ್ವರನಿಗೆ ಶಂಕರನು ಪ್ರಸನ್ನನಾಗಿ ಕೈಲಾಸಕ್ಕೆ ಬರ ಬೇಕೆಂದು ಕೇಳಲು ಅವನು— "ಬಸವನಿಂದ ಪುನೀತವಾದ ಈ ಭೂಮಿಯೇ ನನಗೆ ಕೈಲಾಸವು. ನಾನು ಕೈಲಾಸಕ್ಕೆ ಬರಲು ಒಪ್ಪಲಾರೆ, ಆದರೆ ಕ್ರಿಯಾ ಸಮಾಧಿಯಲ್ಲಿ ನಿರವಯಲ ಲಿಂಗೈಕ್ಯವು ಸ್ವಯವಾಗುವಂತೆ ಕರುಣಿಸೆಂದನು. ಮತ್ತು ನನ್ನ ಅಂಗದಲ್ಲಿ ಆಚಾರವು ನೆಲಿಸಿರುತ್ತದೆ. ಇಂಥದನ್ನು ನಾನು ಬೇರೆ ಯಾವ ಲೋಕದಲ್ಲಿಯೂ ತರಲಾರೆನು, ಶಿವಾಚಾರವು ನನ್ನ ಆತ್ಮ ದಲ್ಲಿ ಪೂರ್ಣ ನೆಲಿಸಿರುವದರಿಂದ ಅದು ಲಿಂಗದೇಹವೆನಿಸಿಕೊಳ್ಳುತ್ತದೆ. ಆದರಿಂದ ಶಿವಶರಣರು ಜೀವನ್ಮುಕ್ತರು. ಅವರು ಇಂಥ ದೇಹವನ್ನು ಬಿಟ್ಟು ಬೇರಾವ ಲೋಕಕ್ಕೆ ಹೋಗರು. ಆದ್ದರಿಂದ ಅಖಂಡಾದ್ವೈತ ಸುಖರೂಪ ನಿರ್ಗುಣ ಪರಬ್ರಹ್ಮಸ್ವರೂಪರಾದ ಅವರು ತಮ್ಮ ಲಿಂಗದಲ್ಲಿಯೇ ಬಯಲ ವಾಗುವರು. ಆದ್ದರಿಂದ ಯಾವ ಕಾರಣದಿಂದಲೂ ನಾನು ಈ ದೇಹವನ್ನು ಬಿಟ್ಟು ನಿನ್ನ ಲೋಕಕ್ಕೆ ಬರಲಾರೆನು. ಲಿಂಗದಲ್ಲಿ ಉದಯವಾದ ಶರಣನು ಲಿಂಗದಲ್ಲಿಯೆ ಲಯವಾಗುವನು. ಆದ್ದರಿಂದ ಭೂತಳದಲ್ಲಿಯೇ ಘನಸಮಾ ಧಿಯಲ್ಲಿ ನಾನು ನನ್ನ ಶರೀರವನ್ನು ಬಿಟ್ಟು ಇಲ್ಲಿಯೇ ಲಯವಾಗುವೆನು." ಎಂದು ಹೇಳಿದನು. ಈ ಪ್ರಕಾರ ಶರಣರು ಭೂಲೋಕದಲ್ಲಿ ಕೈಲಾಸವನ್ನು ಕಂಡರು. ಅದಕ್ಕಾಗಿ— ದೇವಲೋಕ ಮೃತ್ಯಲೋಕವೆಂಬುದು ಬೇರೆ ಮತ್ತುಂಟೇ? ಈ ಲೋಕದೊಳಗೆ ಮತ್ತನಂತಲೋಕ ಶಿವಲೋಕ ಶಿವಾಚಾರ ವಯ್ಯಾ? ಶಿವಭಕ್ತನಿದ್ದ ಠಾವೇ ದೇವಲೋಕ ಭಕ್ತನಂಗಣವೇ ವಾರಣಾಸಿ ಕಾಯವೇ ಕೈಲಾಸ ಇದು ಸತ್ಯ ಶಿವನಾದರೆ ಕೂಡಲಸಂಗಮದೇವ.

## ಎಲ್ಲವೂ ಈ ಲೋಕದಲ್ಲಿ

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು. ಕೂಡಲ ಸಂಗಮದೇವ" ಕಾಯಕವೇ ಕೈಲಾಸ ದಯವೇ ಧರ್ಮದಮೂಲ. ಅಯ್ಯಾ

ಎಂದಡೆ ಸ್ವರ್ಗ. ಎಲವೊ ಎಂದಡೆ ನರಕ. ಮೃದುವಚನಂಗಳೇ ಸಕಲ ಜಪಂಗಳು ಸದುವಿನಯವೇ ಸದಾ ಶಿವನೊಲುಮೆ. ಕೊಲ್ಲುವವನೇ ಮಾದಿಗ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ. ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಕೂಡಲಸಂಗಮದೇವ ನೀವೇ ಪ್ರಮಾಣ. ಈ ಪ್ರಕಾರ ಶರಣರು ಹಾಡಿದ್ದು ನೋಡಿದರೆ ಅವರು ಇಹ ಪರ ಸ್ವರ್ಗ ಮರ್ತ್ಯಲೋಕಗಳೆಂದು ಎಂದೂ ಭೇದ ಮಾಡಲಿಲ್ಲ. ಈ ಲೋಕದಲ್ಲಿ ತಾನು ಬೇಕಾದುದನ್ನು ದೊರಕಿಸಿ ಬೇಕಾದಂತೆ ಆಗಬಹುದು ಕಾಣಬಹುದು. ಭೂಲೋಕದಲ್ಲಿಯೇ ಸ್ವರ್ಗಲೋಕವನ್ನು ತರಲೂ ಬಹುದು. ಮತ್ತು ಪರ ಲೋಕ ಪಾರಮಾರ್ಥಗಳನ್ನು ಸಹ ಇಹದಲ್ಲಿಯೂ ಕೂಡ ತಂದರು ಮತ್ತು ಎಲ್ಲರಿಗೆ ತರಲು ಶಕ್ಯವದೆ ಎಲ್ಲರೂ ಅದನ್ನು ಸಾಧಿಸಬಹುದು. ಸಾಧ್ಯವಾ ಗುತ್ತದೆ ಎಂದು ಶರಣರ ದೃಢನಂಬಿಗೆ ಇದೇ ಶರಣರ ಪೂರ್ಣಯೋಗದ ಗುರಿಯಾಗಿರುವದು. ಮರ್ತ್ಯಲೋಕದಲ್ಲಿ ಸತ್ಯಲೋಕ ನಿತ್ಯಲೋಕವನ್ನು ಕಾಣಬಹುದು ಎಂದು ಸಹಜ ಹೇಳಿದ್ದಾರೆ. ಅದರಂತೆ ಅವರು ಕಂಡು ನಲಿ ದರು. ಸ್ವರ್ಗವನ್ನು ಭೂಮಿಯು ಮೇಲೆ ಸ್ಥಾಪಿಸಿದರು. ಅದರ ಫಲವನ್ನು ಅನ್ಯರು ಉಣ್ಣುವಂತೆ ಮಾಡಿದರು. ಈ ಲೋಕಕ್ಕೂ ಕೂಡ ಸತ್ಯವೆಂದು ತಿಳಿದದ್ದರಿಂದ ಅವರು ಹೀಗೆ ನುಡಿದರು. ಅದರಂತೆ ಕಾಯಕಕ್ಕೆ ಮಹತ್ವ ಕೊಟ್ಟು ದುಡಿದು ತಮ್ಮ ಉದ್ಧಾರ ಹಾಗೂ ಲೋಕೋದ್ಧಾರಗಳೆರಡನ್ನೂ ಮಾಡಿದರು. ಈ ಲೋಕಕ್ಕೆ ಜನನಕ್ಕೆ ವೇದಾಂತಿಗಳೆಂದು ಅಂಜಲಿಲ್ಲ. ಬೇಕಾದಷ್ಟು ಸಲ ಜನಿಸಲು ಒಲ್ಲೆನ್ನಲಿಲ್ಲ ಆದರೆ ಸದಾಚಾರ ಸದ್ಭಕ್ತಿ ಕಾಯಕಗಳನ್ನು ಕರುಣಿಸೆಂದು ಬೇಡುತ್ತಿದ್ದರು. ಇದೇ ಶಿವಶರಣರ ಪರಿ ಪೂರ್ಣಯೋಗದ ಗೊತ್ತುಗುರಿ ಶರಣನು ಕಾಣಲಾರದ ಸ್ವರ್ಗಲೋಕ ದೇವಲೋಕಗಳ ಸುಖಕ್ಕೆ ಹೋರಾಡುವವನಲ್ಲ. ಸ್ವರ್ಗಕ್ಕೆ ಹಾರುವ ಹವ್ಯಾ ಸವು ಅವನಲ್ಲಿಲ್ಲ. ಅವನು ಸತ್ಯಸ್ವರ್ಗವನ್ನೇ ಈ ಮರ್ತ್ಯಲೋಕ ಭೂಲೋ ಕದಲ್ಲಿ ತರುವ ಸಾಧನ ಯೋಗಗಳನ್ನು ಮಾಡುವವನು. ಇದೇ ಶರಣರ ಪರಿಪೂರ್ಣಯೋಗವು ಈ ಪರಿಪೂರ್ಣಯೋಗದಲ್ಲಿ ಸಾಧು ಪಾಪಿ ದುರ್ಜನ ಸಜ್ಜನ ಸ್ವಮತ ಪರಮತ ಮೂರ್ಖ ಸ್ವಾರ್ಥಿ ಹೀಗೆ ಸರ್ವರನ್ನೂ ಸಮ ಭಾವದಿಂದ ನೋಡಿ ಎಲ್ಲರಿಗೂ ಪರಿಪೂರ್ಣಯೋಗವನ್ನು ತಿಳಿಸಿ ಪರಿ

ಪೂರ್ಣ ಮಾನವ ಪರಿಪೂರ್ಣಯೋಗಿಯನ್ನಾಗಿ ಮಾಡುವ ಸಾಮರ್ಥ್ಯವಿರು ವದು. ಇವರು ಸ್ತ್ರೀಪುರುಷರೆಂದು ಎಂದೂ ಯಾವತರದ ಭೇದವನ್ನು ಮಾಡದೆ ಎಲ್ಲ ಸ್ತ್ರೀಯರಿಗೂ ಕೂಡ ಪುರುಷರಷ್ಟೆ ಅಧಿಕಾರ ಧರ್ಮದಲ್ಲಿ ಕೊಟ್ಟಿ ದ್ದಾರೆ. ಅಷ್ಟಾವರ ಪಂಚಾಚಾರ ಸಪ್ತಾಚಾರ ಷಟ್‌ಸ್ಥಲ ಮೂವತ್ತಾರು ಸ್ಥಲ ಏಕೋತ್ತರ ಶತಸ್ಥಲ ಮೊದಲಾದವುಗಳನ್ನು ಸ್ತ್ರೀಯರಿಗೂ ಸಹ ಜಾತಿಭೇದ ಮಾಡದೆ ಎಲ್ಲರಿಗೂ ಸರಿಯಾಗಿ ಸಮಾನವಾಗಿ ಕೊಟ್ಟು ಕರು ಣಿಸಿದ್ದಾರೆ. ಅದಕ್ಕೆ ಈ ಪರಿಪೂರ್ಣಯೋಗವು ಯಾವ ಕುಂದುಕೊರತೆ ಅಡೆ ತಡೆ ಯಾವದೂ ಯಾವತರದಿಂದಲೂ ಇಲ್ಲದಂಥಹದೆಂದು ಧಾರಾಳವಾಗಿ ಹೇಳಬಹುದು. ಅದಕ್ಕಂತೆ ಇದು ವಿಶ್ವಧರ್ಮವಾಗಲಿಕ್ಕೆ ಅತಿ ಯೋಗ್ಯವೆಂದು ಸರೋಜಿನಿ ನಾಯಡು ಇವರೂ ಮಹಾತ್ಮಾ ಗಾಂಧಿಯವರು ಸಾರಿದ್ದಾರೆ. ಅಲ್ಲದೆ ಬಸವೇಶ್ವರನ ತತ್ವಗಳೇ ತಮಗೆ ಒಳ್ಳೇ ಆದರ್ಶಗಳೆಂದು ಸಹ ಸಾರಿರುವರು. ಇದನ್ನು ನೋಡಿದರೆ ಇದೇ ಪರಿಪೂರ್ಣಯೋಗವಲ್ಲವೇನು? ಇದಕ್ಕಿಂತ ಬೇರೆ ಪೂರ್ಣಯೋಗವೆಲ್ಲಿಂದ ಬರುವದು? ಶರಣರ ತತ್ವಗಳ ನ್ನೆಲ್ಲ ಸರಿಯಾಗಿ ಅಭ್ಯಾಸ ಮಾಡಿದವರು ಇದನ್ನು ಬಿಟ್ಟು ಎಂದೂ ಅನ್ಯ ರದಕ್ಕೆ ಪೂರ್ಣಯೋಗವೆಂದು ಹೇಳರು.

## ಪರಿಪೂರ್ಣ ಯೋಗದಲ್ಲಿ ಶಿವಶಕ್ತಿ ತತ್ವ

ಜಗತ್ತಿನ ಮೂಲತತ್ವಗಳು ಶಿವ.ಶಕ್ತಿ ಎಂಬ ಎರಡು ತತ್ವಗಳಿವೆ ಎಂದು ಈ ಪರಿಪೂರ್ಣ ಯೋಗದವರು ಒಪ್ಪುವರು. ಇವು ಎರಡೂ ಅವಿನಾಭಾವ ಸಂಬಂಧದಿಂದ ಕೂಡಿರುವವು. ಹಾಲಿನಲ್ಲಿ ಬೆಣ್ಣೆಯಂತೆ, ಚಂದ್ರನೊಳಗಿನ ತಂಪಿನಂತೆ, ಸೂರ್ಯನೊಳಗಿನ ಬಿಸಿಲಿನಂತೆ, ಕಣ್ಣೊಳಗಿನ ತೇಜದಂತೆ, ಶಿಲೆಯೊಳಗಣ ಪವನದಂತೆ, ಉದಕದೊಳಗಿನ ಪ್ರತಿಬಿಂಬದಂತೆ, ಚಿನ್ನದೊಳ ಗಣ ಬಣ್ಣದಂತೆ, ಬೀಜದೊಳಗಣ ವೃಕ್ಷದಂತೆ, ಹೂವಿನೊಳಗಿನ ಗಂಧದಂತೆ, ಮೆಣಸಿನಕಾಯಿಯೊಳಗಿನ ಕಾರದಂತೆ, ಈ ಶಿವಶಕ್ತಿಯರು ಅವಿನಾಭಾವ ಸಂಬಂಧದಿಂದ ಕೂಡಿದ್ದಾರೆ ಇದಕ್ಕೆ ಶಕ್ತಿ ವಿಶಿಷ್ಟಾದ್ವೈತವೆನ್ನುವರು. ಇದ ರಲ್ಲಿ ಶ್ರೀಮಧ್ವಾಚಾರಿಯವರ ದ್ವೈತ, ಶೈವರ ಅಂದರೆ ಶಂಕರಾಚಾರ್ಯರ ಅದ್ವೈತ, ರಾಮಾನುಜಾಚಾರಿಯವರ ವಿಶಿಷ್ಟಾದ್ವೈತ ತಾಂತ್ರಿಕರ (ಶಾಕ್ತರ) ಶಕ್ತಿ, ಈ ಎಲ್ಲವೂ ಕೂಡಿಕೊಂಡು ಶಕ್ತಿ ವಿಶಿಷ್ಟಾದ್ವೈತವೆಂದು ನಾಮ ಪಡೆದಿದೆ. ಶಂಕರಾಚಾರ್ಯರ ಸಮಕಾಲೀನರಾದ ಅಂದರೆ ಕ್ರಿ. ಶ. ೮ ನೇಯ ಶತಮಾನ

ದಲ್ಲಿ ಇದ್ದ ನೀಲಕಂಠಾಚಾರ್ಯರೆಂಬವರು ತಮ್ಮ ಗ್ರಂಥದಲ್ಲಿ ಇದನ್ನು ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾರೆ. ರಾಮಾನುಜ ಕ್ರಿ. ಶ. ೧೩೦೦ ರಲ್ಲಿ ಶ್ರೀಮಧ್ವಾಚಾರ ಕ್ರಿ. ಶ. ೧೨೦೦ ರಲ್ಲಿ ಇದ್ದವರು. ಅಂದರೆ ಈ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಆಗಮ ಗ್ರಂಥಗಳಲ್ಲಿ ಬಂದಿರುವದು. ಆಗಮಗಳು ವೇದಕ್ಕಿಂತ ಮೊದಲಿನವೆಂದು ಈಗೀಗ ಸಿದ್ಧವಾಗಿದೆ. ಉಳಿದ ಸಿದ್ಧಾಂತಗಳ ಬಗ್ಗೆ ಹಿಂದೆ ಸ್ವಲ್ಪ ಪ್ರಸ್ತಾಪವೆತ್ತಲಾಗಿದೆ. ಈಗ ನಮಗೆ ಈ ಪರಿಪೂರ್ಣಯೋಗದಲ್ಲಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಹೇಗೆ ಅಡಕವಾಗಿದೆ ಎಂಬುದನ್ನು ನೋಡುವಾ.

ಪರಶಿವನಲ್ಲಿ ಪರಶಕ್ತಿ (ಚಿತ್‌ಶಕ್ತಿ) ಅವಿನಾಭಾವ ಸಂಬಂಧದಿಂದ ಕೂಡಿದ್ದಾಗಿದೆ. ಈ ಚಿತ್‌ಶಕ್ತಿಯೇ ಪುರುಷ (ಜೀವಾತ್ಮ) ಪ್ರಕೃತಿಗಳಿಗೆ ಕಾರಣವಾಗಿದೆ. ಈ ಸೃಷ್ಟಿಯ ವಿಸ್ತಾರವೆಲ್ಲ ಪರಶಿವನಿಂದಲ್ಲ ಈ ಪರಶಕ್ತಿಯಿಂದ ಆಗಿದೆ. ಶಕ್ತಿಯು ಶಿವನ ಅಂಗ. ಸತ್ಯ-ಸಂಕಲ್ಪ ಶಕ್ತಿಗಳಲ್ಲಿ ಸಮತೂಕವಿದೆ. ಅದಕ್ಕೆ ಇದರಲ್ಲಿ ಪರಶಿವ, ಪರಶಕ್ತಿ, ಪುರುಷ, ಪ್ರಕೃತಿಗಳೆಂಬ ನಾಲ್ಕು ಮುಖ್ಯತತ್ವಗಳಿರುವವು. ಈ ಪ್ರಕೃತಿಯು ಮಾತ್ರ ಜಡಶಕ್ತಿಯಾಗಿದ್ದಾಳೆ. ಅದ್ದರಿಂದ ಪರಶಕ್ತಿಯುತ ಪರಶಿವನು ಚೈತನ್ಯಾತ್ಮಕನಾಗುವನು. ಪರಶಿವನಂತೆ ಈ ಪುರುಷನು (ಜೀವನು) ಪ್ರಕೃತಿ (ಜಡಶಕ್ತಿ) ಯಿಂದ ಕೂಡಿಕೊಂಡಿದ್ದಾನೆ. ಇದರಲ್ಲಿ ಚೈತನ್ಯ ಹಾಗೂ ಜಡಗಳಿಂದ ಪುರುಷನ ವಿಶಿಷ್ಟತೆಯು ಒಡೆದು ಕಾಣುವದು ಅದಕ್ಕೆ ಪರಶಕ್ತಿಯಿಂದೊಡಗೂಡಿದ ಪರಶಿವನಿಗೂ ಜಡಶಕ್ತಿಯಿಂದೊಡಗೂಡಿದ ಜೀವನಿಗೂ ಸಾಮರಸ್ಯವಿರುವದೇ ಶಕ್ತಿವಿಶಿಷ್ಟಾದ್ವೈತವು.

ಶಕ್ತಿಶ್ಚ ಶಕ್ತಿಶ್ಚ ಶಕ್ತಿ. ತಾಭ್ಯಾಂ ವಿಶಿಷ್ಟೌ ಜೀವೇಶೌ |
ತಯೋರದ್ವೈತಂ ಶಕ್ತಿ ವಿಶಿಷ್ಟಾದ್ವೈತಂ ||

ಸ್ಥೂಲ ಚಿದಾತ್ಮಕಶಕ್ತಿ ಸೂಕ್ಷ್ಮ ಚಿದಚಿದಾತ್ಮಕ ಶಕ್ತಿ ಎಂದು ಎರಡು ಪ್ರಕಾರಗಳು. ಜೀವನು (ಪುರುಷನು) ಸ್ಥೂಲ ಚಿದಾತ್ಮಕ ಶಕ್ತಿಯುತನು. ಶಿವನು ಸೂಕ್ಷ್ಮ ಚಿದಾತ್ಮಕ ಶಕ್ತಿಯುತನಾಗಿರುವನು. ಜೀವನ-ಸ್ಥೂಲ ಚಿಚ್ಛಕ್ತಿಯು ಅಲ್ಪಜ್ಞತೆಯುಳ್ಳದ್ದು. ಮತ್ತು ಅಲ್ಪ ಕರ್ತೃತ್ವ ಶಕ್ತಿಯುಳ್ಳದ್ದು ಅಲ್ಪ ವ್ಯಾಪಕತೆಯಾದದ್ದು ಆದರೆ ಶಿವನ-ಸೂಕ್ಷ್ಮ ಚಿಚ್ಛಕ್ತಿಯು ಸರ್ವಜ್ಞತ್ವ ಸರ್ವಕರ್ತೃತ್ವ ಶಿವನ ವ್ಯಾಪಕತೆಯುಳ್ಳದ್ದು. ಈ ಪ್ರಕಾರ ಇದ್ದ

R. B. N. 2554

From
Shivanubhava
Office
BIJAPUR

ಶ್ರೀ. ಚನವಮಲ್ಲಪ್ಪ ಸಿದ್ದಪ್ಪ ಓ[illegible]ಮಿ
ಮು— ಬನ್ನಟ್ಟಿ
ತಾ— ಜಮಖಂಡಿ

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ೧೩೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಅಚ್ಚಿಸಿ ಪ್ರಸಿದ್ಧಿಸಿದರು.

ಸಂ 34, ಅಂಕ 8,9,10



# ಅಷ್ಟಾವರಣ.

ಲೇಖಕರು:— ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು.

ಯಾರಿಗೆ ಆಗಲೀ ಆವರಣದ ಅಗತ್ಯವಿರುತ್ತದೆ. ಆವರಣಕ್ಕೆ ತಕ್ಕ ಫಲ ದೊರೆಯುತ್ತದೆ. 'ಅಷ್ಟಾವರಣ'ವು ವೀರಶೈವರನ್ನು ಮುಕ್ತಿ ಸೋಪಾನ ಗದ್ದುಗೆಯಲ್ಲಿ ಕುಳ್ಳಿರಿಸುವ 'ಆವರಣ' ಇದು ರಕ್ತದಲ್ಲಿ ರಂಜಿತವಾಗಿ ನಾಡಿಯಲ್ಲಿ ನೆಲಸಿ ಕಾರ್ಯದಲ್ಲಿ ಕಲಿಯಾಗಿ ಪರಿಣಮಿಸಿದರೆ ಅಂದೇ ಇದನ್ನು ಕೈಗೊಂಡ ಮಾನವನು ಮರಕತನಾಗುತ್ತಾನೆ. ಮಾಣಿಕ್ಯ ಶ್ರೇಷ್ಠನಾಗುತ್ತಾನೆ. ಇದರಿಂದ ಪ್ರತಿಯೊಬ್ಬ ವೀರಶೈವನೂ ಸುಲಭ ಮಾರ್ಗದಲ್ಲಿ ಮೋಕ್ಷಗೆರೆಯನ್ನು ಹೊಂದುತ್ತಾನೆ. ಅಷ್ಟಾವರಣವನ್ನು ಕೈಕೊಂಡು ಸದ್ಗತಿಯನ್ನು ಪಡೆಯುವುದಲ್ಲದೆ ಭವಬಂಧನದಿಂದ ಬಿಡುಗಡೆಯಾಗಿ ಜನನಮರಣವೆಂಬ ಕಟ್ಟನಿಂದ ಶಾಶ್ವತವಾದ ಬಿಚ್ಚನ್ನು ತೆಗೆದು ಶಿವನ ಸಮೀಪದಲ್ಲಿ ಇರುವುದು ಇತಿಹಾಸದಿಂದ ತಿಳಿದು ಬರುತ್ತದೆ.

"ಅಷ್ಟಾವರಣ ನಿಷ್ಠೆಯಿಲ್ಲದ ವೀರಶೈವನು ಅಂಗವಿಲ್ಲದ ಆತ್ಮನಂತೆ, ತಂತಿಯಿಲ್ಲದ ನಾದದಂತೆ, ಕಾವ್ಯವಿಲ್ಲದ ವಿದ್ಯೆಯಂತೆ, ಮೂರ್ತಿಯಿಲ್ಲನ

ಕಲೆಯಂತೆ, ರಸವಿಲ್ಲದ ರುಚಿಯಂತೆ ಇರುತ್ತಾನೆ.....ವೀರಶೈವನಿಗೆ ಅಷ್ಟಾವರಣಗಳ ಅಷ್ಟಾಂಗಗಳು, ಅಷ್ಟಭೋಗಂಗಳು; ಅಷ್ಟಯೋಗಂಗಳು."

—ಅಷ್ಟಾವರಣ.

ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷ, ಮಂತ್ರ, ಪಾದೋದಕ, ಪ್ರಸಾದ-ಇವುಗಳೇ ಅಷ್ಟಾವರಣ. ಅಷ್ಟಾವರಣವನ್ನೇ ಅಂಗವನ್ನಾಗಿ ಅಳವಡಿಸಿಕೊಂಡ ವೀರಶೈವನ ಸಕಲ ಸಾಧನೆಯು ಸಿದ್ಧಿಸುತ್ತದೆ.

ಅಜ್ಞಾನವನ್ನು ಪರಿಹರಿಸಿ, ಸನ್ಮಾರ್ಗದಲ್ಲಿ ಕೈಹಿಡಿದು ನಡೆಯಿಸುವವನೇ ಗುರು. ಗುರುವಿನ ಉಪದೇಶವಿಲ್ಲದೆ ಜೀವನವು ಸಾರಭರಿತವಾಗಲಾರದು. ಶಿಷ್ಯನ ಜೀವನಶಲಾಕೆಯ ಸುಭದ್ರತೆಗೆ ಗುರೂಪದೇಶವೇ ಕಾರಣ. ಭವರೋಗ ರಹಿತನನ್ನಾಗಿ ಮಾಡುವ ವೈದ್ಯನು ಗುರುವು. ಭಕ್ತನ ಆತ್ಮವಿಕಾರಕ್ಕೆ ಗುರುಕರುಣವೇ ಕಾರಣವು. ಮಾನವನ ಚರಮಧ್ಯೇಯವು ಆತ್ಮವಿಕಾಸವಾಗಿದೆ. ಗುರುವಿನ ಹಿರಿಮೆಯು ಘನವಾಗಿದೆ; ಮಹತ್ತರವಾಗಿದೆ.

ಬ್ರಹ್ಮವಿಷ್ಣುರುದ್ರಶ್ಚ ಈಶ್ವರಶ್ಚ ಸದಾಶಿವಃ ।
ಏತೇ ಗರ್ಭಗತಾಶ್ಚೈವ ತಸ್ಮೈಶ್ರೀಗುರವೇನಮಃ ॥

—ಕಾರಣಾಗಮ.

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ ಭವಬಂಧನವ ಬಿಡಿಸಿ, ಪರಮ ಸುಖವ ತೋರಿದ ಗುರುವೇ ಭವಿಯೆಂಬುದ ತೊಡೆದು ಭಕ್ತಿಯೆನಿಸಿದ ಗುರುವೇ ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ.

—ಅಕ್ಕಮಹಾದೇವಿ.

ಗುರುವಾಕ್ಯದಲ್ಲಿ ವಿಶ್ವಾಸವನ್ನಿಡದ ಹೊರತು ಈಶ್ವರಸಿದ್ಧಿಯಾಗುವುದಿಲ್ಲ.

—ರಾಮಕೃಷ್ಣ ಪರಮಹಂಸ.

ಶಿವದರ್ಶನವಾಗಬೇಕಾದರೆ ಗುರುವಿನ ಉಪದೇಶವು ಅವಶ್ಯಕ. ಲಿಂಗ ಪೂಜೆಗೆ ಮಾರ್ಗದರ್ಶವು ಗುರುವಿನ ಮಂತ್ರೋಪದೇಶವು ಅಗತ್ಯ.

ತಂದೆಯೂ ತಾಯಿಯೂ ಶಿಕ್ಷಕನೂ ನಮಗೆ ಗುರುವೇ ಆಗಿರುತ್ತಾನೆ. ತಾಯಿಯ ಮಮಕಾರದ ಹೃದಯವೂ, ತಂದೆಯೂ ವಿವೇಚನಾಮನಸ್ಸೂ ಶಿಕ್ಷಕನ ಜ್ಞಾನಪರಿಣತಿಯ ಮಿದುಳೂ ಗುರುವಿಗೆ ಇರುತ್ತವೆ. ಆದ ಕಾರಣವೇ ಗುರುರ್ಮಾತಾ, ಗುರುಃಪಿತಾ, ಗುರುರಾಚಾರ್ಯ: ಎಂದು ಗುರುವನ್ನು ಮನದುಂಬಿ ಹಿಂದೆ ಹಿರಿಯರು ಹಾಡಿದ್ದಾರೆ. ಎಲ್ಲ ಜ್ಞಾನ ಕ್ಕಿಂತಲೂ ಆತ್ಮಜ್ಞಾನವೇ ದೊಡ್ಡದು. ಈ ಘನ ಅರಿವು ಗುರುವಿನಿಂದಲೇ ಲಭಿಸುತ್ತದೆ.

ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ ।
ಸಮಿತ್ಪಾಣಿಃಶ್ರೋತ್ರಿಯಂ ಬ್ರಹ್ಮನಿಷ್ಠಂ ॥

ಶ್ರೋತ್ರಿಯನೂ, ಬ್ರಹ್ಮನಿಷ್ಠನೂ ಆದ ಗುರುವಿನಿಂದಲೇ ಆ ಪರ ವಸ್ತುವಿನ ಬೋಧೆಯಾಗುತ್ತದೆ. 'ಗೃ' ಶಬ್ದದಿಂದ 'ಗುರು' ಆಗಿದೆ. ಧರ್ಮದರ್ಶನಗಳನ್ನು ವಿವರಿಸಿ ತಿಳಿಸಿಕೊಡುವವನೇ ಗುರು. ಪಿಂಡಾಂಡದ ತಮವನ್ನು ಕಳೆಯುವ, ಅಜ್ಞಾನಾಂಧಕಾರವನ್ನು ಪರಿಹರಿಸುವ ಸಾಮರ್ಥ್ಯವಿರುವ ಗುರುವಿಲ್ಲದೆ ಗತ್ಯಂತರವಿಲ್ಲ. ಗುರುವಿಲ್ಲದೆ ಜನ್ಮ ಸಂಸ್ಕಾರವಿಲ್ಲ, ಧರ್ಮಸಂಸ್ಕಾರವಿಲ್ಲ. ಇಂದಿನ ಬೀಜ ಮುಂದಿನ ವೃಕ್ಷವು. ಈ ವೃಕ್ಷದಲ್ಲಿ ಅನೇಕ ಲಿಂಗಾಂಗಗಳು ಇರುತ್ತವೆ ಅಂತೆಯೇ ಗುರುವೇ ಮುಂದಿನ ಸಪ್ತ ಆವರಣಗಳ ರೂಪುದಾಳುತ್ತಾನೆ. ಹರ ಮುನಿದರೆ ಗುರು ಕಾಯುವ, ಗುರು ಮುನಿದರೆ ಹರಕಾಯ, ನಗುಲೋರಧಿಕಂ, ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕ್ತಿ, ಶ್ರೀಗುರು ವಚನದಿಂದ ಅಧಿಕ ಸುಧೆಯುಂಟೆ ಎಂಬ ನುಡಿಗಳನ್ನು ನೋಡಿದರೆ ಗುರುವಿನಗಲಿ ಮೆಯುಳರ ಬಿಲ್ವಪತ್ರನಾಗಿರುತ್ತದೆ.

ಲಿಂಗ ಎಂದರೆ ಪರಾತ್ಪರ ವಸ್ತುವಾದ ಪರಬ್ರಹ್ಮ, ಪರಮ ಶಾಶ್ವತವಾದ ಪರಂಜ್ಯೋತಿ, ಜಗಧಾರಣವಾದ ಸಚ್ಚಿದಾನಂದ ಸ್ವರೂಪ.

ಶಿವೋಸ್ತಿ ಸಚ್ಚಿದಾನಂದಃ ಪರಿಪೂರ್ಣೋ ನಿರಂಜನಃ ।
ಅಕಾರಣ ಮಕಾರ್ಯಂಚ ಮನೋವಾಚಾ ಮಗೋಚರಂ ।
ಪರಂಗೂಢಂ ಶರೀರಸ್ಥಲಿಂಗ ಕ್ಷೇತ್ರ ಮನಾದಿವತ್ ।
ಯಥಾದಿ ಮೈಶ್ವರ್ಯಂ ತೇಜಸ್ಸಲಿಂಗಂ ಪಂಚಸಂಜ್ಞತಂ ॥

—ಉತ್ತರವಾತೂಲ.

ಲಯಂಗಚ್ಛತಿ ಯತ್ರೈವಜಗದೇತಚ್ಚರಾಚರಂ ।
ಪುನಃ ಪುನಃ ಸಮುತ್ಪತ್ತಿಂತಲಿಂಗಂ ಬ್ರಹ್ಮಶಾಶ್ವತಂ ॥
—ಸಿದ್ಧಾಂತಶಿಖಾಮಣಿ.

ಇದರಿಂದ ಶಿಲಾದಿಗಳಲ್ಲಿ ಮಾಡಿದುದು ಲಿಂಗವಲ್ಲ ಎಂಬುದು ಗೊತ್ತಾಗುತ್ತದೆ. ಜಗದಗಲ ಮುಗಿಲಗಲಗಳಿಗಿಂತ ಹಿರಿದಾದ ವರಕರವೇ ಲಿಂಗವು. ಪ್ರಪಂಚದಲ್ಲಿನ ಜಂಗಮಸ್ಥಾವರ ವಿಕಾಯಗಳು ಲಿಂಗದಲ್ಲೆ ಉತ್ಪತ್ತಿಯಾಗಿವೆ. ನಿರಾಕಾರ ಲಿಂಗದ ಪ್ರತೀಕವೇ ನಮ್ಮಲ್ಲಿನ ಆಕಾರ ಲಿಂಗವು. ಈ ಸ್ಥೂಲ ಸೂಕ್ಷ್ಮವಾದ ಲಿಂಗದ ಮಹಿಮೆಯು ಅಗಾಧ, ಅಪಾರ ಹರಿಅಜಾದಿ ದೇವತೆಗಳಿಗೂ ಕೂಡ ದೊರಕದ ಮಹಾಲಿಂಗವು ಇದು. ಗುರುವಿನ ಕರುಣೆಯಿಂದ ಕರಿಯು ಕನ್ನಡಿಯಲ್ಲಿ ಅಡಗುವಂತೆ ನಮ್ಮ ಕರತಲಕ್ಕೆ ಚುಳುಕಾಗಿ ಬಂದಿದೆ. ಗುರುಕೃಪಾ ಕುರುಹು ಇಷ್ಟ ಲಿಂಗವು. ಇಷ್ಟಲಿಂಗದ ಮೂಲಕ ಪ್ರಾಣಲಿಂಗ ಭಾವಲಿಂಗಗಳ ಜ್ಞಾನವು ದೊರಕುತ್ತದೆ. ಲಿಂಗಪೂಜೆ ಎಂಬುದು ಮನಸ್ಸನ್ನು ಸ್ಥಿರಪಡಿಸುವದಕ್ಕೂ ಕೇಂದ್ರಿಕರಿಸುವುದಕ್ಕೂ ಸಹಾಯವಾಗುತ್ತದೆ. ಅದರಿಂದಲೇ 'ಮನವ ಕೊಟ್ಟು ಲಿಂಗವನೊಲಿಸಬೇಕು' ಎಂದು ಹಿರಿಯರು ಹೇಳಿದ್ದಾರೆ. ಇಷ್ಟಲಿಂಗವು ಸಾಕ್ಷಾತ್ ಪರಬ್ರಹ್ಮವಾಗಿರುವುದರಿಂದ ಒಳಹೊರಗೆ ಆತನ ಸಂಗಡ ತಾನು ಸೇರಿರುವೆನೆಂದು ತಿಳಿದು ಶ್ರದ್ಧಾ ಭಕ್ತಿಯಿರಿಸಿ ಅನನ್ಯ ಭಕ್ತಿಯಿಂದ ಅದರಲ್ಲಿ ನಡೆದುಕೊಳ್ಳಬೇಕು. ಆಗ ಸದ್ಗತಿಗೆ ಮಾರ್ಗವು ಸಿಕ್ಕುತ್ತದೆ.

ಲಿಂಗೇನ ಜಾಯತೇ ತತ್ರಜಗತ್ಸ್ಥಾವರ ಜಂಗಮಂ ।
ತಸ್ಮಾಲಿಂಗ ವಿಶೇಷಣ ಲಿಂಗರೂಪಿ ಮುದಾಸ್ಮೃತಂ ॥

ಶಿವನೇ ಗುರು, ಗುರುವೇ ಲಿಂಗ ಏವಂಚ ವೇದಪ್ರಿಯವೂ ಶಿವ ಪ್ರಿಯವೂ ಆದ ಇಷ್ಟಲಿಂಗವನ್ನು ಎಡೆಬಿಡದೆ ಧರಿಸಿಕೊಂಡು ಅದರ ಸೇವೆಯನ್ನು ಸಾಗಿಸುತ್ತಿರಬೇಕು. ತೀರ್ಥಯಾತ್ರೆಯಲ್ಲಿ ಗಳಿಸಿದ ಪುಣ್ಯಕ್ಕಿಂತ ಮಿಗಿಲಾಗಿ ಇಷ್ಟಲಿಂಗ ಪೂಜೆಯಿಂದ ದೊರಕುತ್ತದೆ.

"ಹಾಲ ಹಿಡಿದು ಬೆಣ್ಣೆಯ ಧರಿಸಲುಂಟೆ?
ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ ?
ಲಿಂಗವ ಪಾದತೀರ್ಥ ಪ್ರಸಾದವಕೊಂಡು ಅನ್ಯಬೋಧೆ
ಅನ್ಯಶಾಸ್ತ್ರಕ್ಕೆ ಹಾರೈಸಲೇತಕ್ಕೆ ?

ಇಷ್ಟಲಿಂಗ ವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದೊಡೆ
ತಡೆಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ,
ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಂಗಳು ಎಲ್ಲ
ಕ್ಷೇತ್ರಂಗಳ ಇಹವೆಂದು ಭಾವಿಸಿ ಮುಕ್ತರಪ್ಪುದಯ್ಯಾ.
ಇಂತಲ್ಲದೆ ಗುರುಕೊಟ್ಟ ಲಿಂಗವ ಕಿರಿದು ಮಾಡಿ,
ತೀರ್ಥಲಿಂಗವ ಹಿರಿದು ಮಾಡಿ,
ಹೋದಾತಂಗೆ ಅಘೋರ ನರಕ ತಪ್ಪದು ಕಾಣಾ
ಚೆನ್ನಮಲ್ಲಿಕಾರ್ಜುನಾ."

ಕೇವಲ ಲಿಂಗಧಾರಣೆಯಾದರೆ ಸಾಲದು. ಗುರುಮುಖದಿಂದ ಪೂಜಾ ವಿಧಾನವನ್ನು ಅರಿತುಕೊಂಡು ತಪ್ಪದೆ ಅದರಂತೆ ಆಚರಿಸ ಬೇಕು. ಲಿಂಗಪೂಜೆಯಿಂದ ಮಾನವನು ಶುದ್ಧನಾಗುತ್ತಾನೆ. ಪವಿತ್ರ ನಾಗುತ್ತಾನೆ. ನಮ್ಮ ಅನಿಷ್ಟವನ್ನು ಅಳಿಸುವ ಇಷ್ಟಲಿಂಗವನ್ನು ಅಲಕ್ಷಿ ಸದೆ ಪರಮಪ್ರೀತಿಯಿಂದ ಕಂಡು ಲಿಂಗಪ್ರಸಾದ, ಲಿಂಗತೀರ್ಥವನ್ನು ತೆಗೆದುಕೊಂಡು ನಮ್ಮ ಜೀವನ ಜಂಜಡವನ್ನು ಹಗುರ ಮಾಡಿಕೊಳ್ಳು ವುದು ಒಳ್ಳೆಯದು, ಶ್ರೇಯಸ್ಕರವು.

ಜ್ಞಾನಮೂರ್ತಿಯೇ ಜಂಗಮನು. ಬ್ರಹ್ಮ ವಿಷ್ಣು ಮಹೇಶ್ವರ— ಈ ತ್ರಿ ಮೂರ್ತಿಗಳ ಐಕ್ಯತೆಯು 'ಜಂಗಮ' ಶಬ್ದದಲ್ಲಿ ಕಾಣಬದು. ಜಂಗಮನಲ್ಲಿ ಹದಿನಾಲ್ಕು ಲೋಕಗಳಿವೆ. ಅನಾದಿ ಜಂಗಮವು ಇಂದ್ರಾದಿ ಅಷ್ಟದಿಕ್ಪಾಲಕರಿಂದ ಪೂಜೆಯನ್ನು ಸಲ್ಲಿಸಿಕೊಂಡಿದೆ. ಉದಯಕಾಲ ದೊಳು ಜಂಗಮ ದರ್ಶನ ಮಾಡಿದರೆ ಕೋಟಿ ಲಿಂಗದರ್ಶನಕ್ಕೆ ಸಮಾನ. ಜಂಗಮವಾದ ಸ್ಪರ್ಶವು ನಮ್ಮ ತಲೆಯ ಮೇಲೆ ಆದರೆ ಸರ್ವಪಾಪವು ನಾಶವಾಗುತ್ತವೆ.

"ಇಷ್ಟಲಿಂಗದ ಉತ್ಪತ್ತಿಗೆ ಗುರುವು ಮೂಲ ಗುರುವಿನ ಉತ್ಪತ್ತಿಗೆ ಜಂಗಮನು ಕಾರಣ. ಜಂಗಮನಿಗೆ ಜನ್ಮವಿಲ್ಲ."

—ಪಾರಮೇಶ್ವರಾಗಮ.

ಶಿಷ್ಯನಿಗೆ ಗುರುವು ತಾಯಿಯು. ಗುರುವಿಗೆ ಜಂಗಮನು ತಾಯಿ ಜಗದೀಶ್ವರನ ಪ್ರತಿಸ್ವರೂಪನಾದ ಜಂಗಮನಿಗೆ ಒಡೆಯರಿಲ್ಲ. ಜಂಗ ಮನ ಜಟಾಕಾರವು ಆಕಾಶ ರೂಪ. ಈತನೇ ತತ್ವಾಕಾರನು, ನಿರಂಜನು,

ಹೃದಯಾಕಾಶ ಚಿದಾಕಾರನು. ಉತ್ತಮ ಜಂಗಮಸ್ಥಲದ ಸಂಪನ್ನ ಮಾರ್ತಿಯೇ ಘನಲಿಂಗ ಚಕ್ರವರ್ತಿ ಆತನ ಲೀಲೆಯು ಅಸಾಧಾರಣ, ಗುಣಶೀಲವು ಅಸದಳವು.

> ದೀಕ್ಷಾಮೂರ್ತಿರ್ಗುರುರ್ದೇವಃ ಪ್ರಜಾಮೂರ್ತಿಸ್ಸದಾಶಿವಃ ।
> ದೀಕ್ಷಾಪ್ರಜಾಚಶಿಕ್ಷೇತಿ ಸರ್ವೈಕರ್ತಾಹಿ ಜಂಗಮಃ ॥
>
> —ಉತ್ತರವಾತುಲಾಗಮ.

ಅಣಿಮಾದ್ಯಷ್ಟ ನಿಧಿಗಳಿಗೂ, ಮಹಾಪದ್ಮಾದಿ ನವನಿಧಿಗಳಿಗೂ ಅಷ್ಟೈಶ್ವರ್ಯಗಳಿಗೂ ಮೂಲಕಾರಣವು ಜಂಗಮವು. ಗುರುವಿನ ಗುರುಜಂಗಮದಲ್ಲಿನ ನಂಬಿಕೆ ಶ್ರದ್ಧೆಗಳೇ ಸಾಧಕನನ್ನು ಗಮ್ಯಸ್ಥಾನಕ್ಕೆ ಕೊಂಡೊಯ್ಯುತ್ತವೆ. ಎಷ್ಟು ಎಂದರೆ ಅಷ್ಟರಲ್ಲಿಯೇ ತೃಪ್ತಿಪಟ್ಟುಕೊಂಡು ಎಲ್ಲಿ ಎಂದರೆ ಅಲ್ಲಿಯೇ ಶಿಷ್ಯಮಂಡಲಿಗೆ ಜ್ಞಾನ ಬೋಧೆ ಮಾಡಿ ಇರತಕ್ಕವರು ಜಂಗಮರು. ಭಕ್ತಿಗೆ ಬೇಗ ಮನಕೊಡುತ್ತಾರೆ. ಜಂಗಮವನ್ನು ಚರಲಿಂಗ, ಲಿಂಗಮುಖ ಎಂದು ಸಂಬೋಧಿಸಿದ್ದಾರೆ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು. ಎಂದು ಬಸವಣ್ಣನವರು ಬಿತ್ತರಿಸಿದ್ದಾರೆ. ಲಕ್ಷಕ್ಕಾದರೂ ಒಬ್ಬ ಭಕ್ತನುಂಟು ಕೋಟಿಗಾದರೂ ಒಬ್ಬ ಜಂಗಮನಿಲ್ಲ ಎಂದು ಚೆನ್ನಬಸವೇಶ್ವರರು ನಿರ್ಧರಿಸಿರಬೇಕಾದರೆ ಜಂಗಮದ ಘನತೆಯು ಸ್ಪಷ್ಟವಾಗುತ್ತದೆ. ಇದರಿಂದ ಜಂಗಮತತ್ವ ತುಂಬ ಹಿರಿದಾಗಿ ಗೋಚರವಾಗುತ್ತದೆ. ಜಂಗಮದಾಸೋಹಕ್ಕೆ ಜಂಗಮ ಪಾದ ಪೂಜೆಗೆ ವೀರಶೈವರಲ್ಲಿ ಮಹತ್ತರವಾದ ಸ್ಥಾನವಿದೆ. ಜಂಗಮದಾಸೋಹವನ್ನು ತ್ರಿಕರಣ ಪೂರ್ವಕವಾಗಿಯೂ, ಜಂಗಮಪಾದಪೂಜೆಯನ್ನು ಜೀವದ ಜೀವಾಳವನ್ನಾಗಿ ಇಟ್ಟುಕೊಂಡು ಸಾಗುತ್ತಿರುವ ವೀರಶೈವವು ಎಂದೋ ದಾರಿಹಾಕಿ ಕೊಟ್ಟಿರುವುದೇ ವೀರಶೈವರ ಹೆಚ್ಚಳವಾಗಿದೆ. ಯಾವ ಹಂಗಿಗೂ ಸಿಲುಕದೆ ವೈಭವ ವಿಜೃಂಭಣೆಗೆ ಮನಗೊಡದೆ ಧ್ಯಾನ ಜ್ಞಾನ ಭಿಕ್ಷಾನ್ನ ಭೋಜನ ಏಕಾಂತ ಜೀವನ ಇವುಗಳನ್ನೇ ಹೃದಯವನ್ನಾಗಿಟ್ಟುಕೊಂಡು ಜೀವನ ಸಾಗಿಸುತ್ತಿರುವ ಮಹಾಂತನೇ ಜಂಗಮನು.

ವೀರಶೈವರ ಸಹಜ ಸರ್ವಾಭರಣವು ವಿಭೂತಿಯೂ ಭಕ್ತನಿಗೆ ಭಸ್ಮವು ಚಿದಂಗವು. ಭಸ್ಮಧಾರಿ ದೇಹವು ಜ್ಯೋತಿ ಸ್ವರೂಪವು. ಮನ್ಮಥ ದಹನ ಮಾಡಿದ ಮಹೇಶ್ವರನು ಆ ಭಸ್ಮವನ್ನು ತನ್ನ ಶರೀರಕ್ಕೆ ಲೇಪನ

ಮಾಡಿಕೊಂಡ ಕಾರಣವೇ ವಿಭೂತಿಯು ಪರಮಪಾವನ. ಕಾಮಾದಿ ಅರಿಷಡ್ವರ್ಗವನ್ನು ದಹಿಸುದುದರ ಕುರುಹು ವಿಭೂತಿಧಾರಣವು. ವಿಭೂತಿಯು ನಿತ್ಯಾನಂದ ಸ್ವಯಂಜ್ಯೋತಿ ಸ್ವರೂಪವಾದ ಕಾರಣ ಭಸ್ಮಸ್ನಾನಕ್ಕೆ ಸಮನಾದದು ಮತ್ತೊಂದಿಲ್ಲ ಎಂಬು ಪರಮೇಶ್ವರನು ದೇವರ್ಷಿಗಳಿ ಗೆ ಹೇಳುತ್ತಾನೆ. ತನುಮನ ದೋಷವನ್ನು ಭಸ್ಮಸ್ನಾನವು ಕಳೆಯುತ್ತದೆ. ವೀರಶೈವನು ಗುರುಮುಖದಿಂದ ಭಸ್ಮೋಧೂಳನ ಭಸ್ಮ ಸ್ನಾನವನ್ನು ತಿಳಿದು ತಪ್ಪದೆ ಶಿವಮಂತ್ರವನ್ನು ಜಪಿಸುತ್ತ ಆಚರಿಸ ಬೇಕು.

ಸಿತೇನಾ ಭಸ್ಮನಾ ಸ್ನಾಪನ ಕೃಲ್ಲಿಂಗಂ ಪ್ರಮೋದತೇ ।
ಚಂದ್ರಾಂಶು ನಿರ್ಮಲ ಶ್ರೀಶಿವಲೋಕ ಮಹೀಯತೇ ॥

—ಶಿವಧರ್ಮ.

"ಕೂಡಲಸಂಗನ ಶರಣಶರಣೆಯರ ನೊಸಲಿಂಗೆ ವಿಭೂತಿಯೇ ಶೃಂಗಾರ." —ಬಸವೇಶ್ವರ.

ವಿಭೂತಿಯು ಪರಶಿವ ಜ್ಯೋತಿರ್ಲಿಂಗದ ಪಂಚಮುಖ ಬ್ರಹ್ಮ ನಾಗಿದೆ. ವಿಭೂತಿ ಸ್ನಾನವಿಲ್ಲದ ಲಿಂಗಪೂಜೆಯು, ಭಸ್ಮೋಧೂಳನ ವಿಲ್ಲದ ಮಂತ್ರ ಜಪವು ನಿರರ್ಥಕವು. ಇಷ್ಟಲಿಂಗ ಪೂಜೆಯಿಂದ ವೈಜ್ಞಾನಿಕ ದೃಷ್ಟಿಯಲ್ಲಿಯೂ ಪೂಜಕನಿಗೆ ಲಾಭವಿರುವಂತೆಯೇ ವೈಜ್ಞಾನಿಕರ ತರ್ಕದ ರೀತಿಯೂ ಭಸ್ಮ ಧಾರಣೆಯಿಂದ ಆರೋಗ್ಯ ಲಾಭದಾಯಕವಾಗಿದೆ. ವಿಭೂತಿ ಧಾರಣ ಶ್ರೇಯಸ್ಕರ. "ವಿಭೂತಿ ಎಂಬುದು ಐಶ್ವರ್ಯ, ವಿಭೂತಿ ಎಂಬುದು ತ್ಯಾಗ, ಪರಮಾರ್ಥದ ಐಶ್ವರ್ಯವನ್ನು ದೊರಕಿಸಿ, ಐಹಿಕದ ತ್ಯಾಗವನ್ನು ಮಾಡಿಸುವದರಿಂದ ಸಾಧಕನಿಗೆ ಇದು ಅವಶ್ಯಕ."— ವಚನಧರ್ಮ ಸಾರ—

ಭಸ್ಮದಲ್ಲಿ ಭಕ್ತಿ, ಶ್ರದ್ಧೆಗಳನ್ನಿಟ್ಟು ದಿನವೂ ಧರಿಸಿದವನಿಗೆ ಪ್ರಯೋಜನವಾಗಿರುವದು ಪುರಾಣಗಳಿಂದ ತಿಳಿದು ಬರುತ್ತದೆ.

ರುದ್ರಾಕ್ಷಿ ವೀರಶೈವರಿಗೆ ಧರ್ಮ ಸಾಧಕವು. ರುದ್ರಾಕ್ಷಿ ಧಾರಣೆ ಮಾಡಿ ಮುಗಿಸಿದ ಲಿಂಗ ಪೂಜೆಯು ಫಲದಾಯಕವು. ರತ್ನಗಳಲ್ಲೆಲ್ಲ ಶ್ರೇಷ್ಠವಾದದ್ದು ರುದ್ರಾಕ್ಷಿಯು.

ರುದ್ರಾಕ್ಷಂ ಮುಕ್ತಿ ಮೂಲಂಚ ರುದ್ರಾಕ್ಷಂ ಮುಚ್ಯತೇ ರುದ್ರಾಕ್ಷಂ
ಭಕ್ತಿ ರೂಪಂಚ ರುದ್ರಾಕ್ಷಂ ಬ್ರಹ್ಮ ಮುಚ್ಯತೇ ॥

ರುದ್ರಾಕ್ಷಿ ಧಾರಣದಿಂದ ವಾಯು ಶುದ್ಧವಾಗಿ ಆರೋಗ್ಯ ಉಂಟಾಗುತ್ತದೆ. ಸಣ್ಣ ಪುಟ್ಟ ರೋಗಗಳು ಪರಿಹಾರವಾಗುತ್ತವೆ. ಸನತ್ಕುಮಾರನಿಗೆ ಪರಮೇಶ್ವರನು. ಈ ರೀತಿ ಹೇಳುತ್ತಾನೆ.

"ತ್ರಿಪುರ ದಹನಕಾಲದಲ್ಲಿ ನನ್ನ ನೇತ್ರಗಳಿಂದ ಅಶ್ರು ಬಿಂದುಗಳು ಬಿದ್ದವು. ಅವೇ ರುದ್ರಾಕ್ಷಗಳು. ರುದ್ರಾಕ್ಷಿ ಧರಿಸಿದಾತನಿಗೂ ಹೆಸರನ್ನು ಹೇಳಿದಾತನಿಗೂ ಕೋಟ್ಯಾನು ಕೋಟಿ ದಾನಫಲ ದೊರಕುತ್ತದೆ." ರುದ್ರಾಕ್ಷಿ ಧರಿಸಿಕೊಂಡು ಸ್ನಾನ ಮಾಡಿದರೆ ನಿತ್ಯಗಂಗಾಸ್ನಾನದ ಪುಣ್ಯಫಲ ದೊರಕುತ್ತದೆ. ಶರೀರವನ್ನು ಸುಭದ್ರವಾಗಿ ಸಂರಕ್ಷಿಸುತ್ತದೆ. ರುದ್ರಾಕ್ಷವೇ ಎನಗೆ ಮೈದೊಡಿಗೆ ಎಂದು ಅಕ್ಕ ಮಹಾದೇವಿಯು ನುಡಿದಿದ್ದಾಳೆ. ಶಿವನ ಕುರುಹುಗಳನ್ನು ಧರಿಸಿ ಶಿವನಂತಾಗಬೇಕೆಂಬ ತತ್ವ ರುದ್ರಾಕ್ಷಿ ಧಾರಣದಲ್ಲಿ ಅಡಗಿದೆ. ಗುರುವು ಆಶೀರ್ವಾದ ಪೂರ್ವಕವಾಗಿ ಅನುಗ್ರಹಿಸಿ ಕೊಟ್ಟ ರುದ್ರಾಕ್ಷಿಯಿಂದ ಹೆಚ್ಚಿಗೆ ಫಲವುಂಟು.

ಪ್ರತಿಯೊಬ್ಬ ಭಾರತೀಯನಿಗೂ ಮಂತ್ರವೊಂದು ಇದೆ. ವೀರಶೈವರು ಜಪಿಸತಕ್ಕ ಷಡಕ್ಷರ ಮಂತ್ರವು ಇದರಲ್ಲಿ ಪಂಚಾಕ್ಷರಿ ಮಂತ್ರವು ಅಡಕವಾಗಿದೆ. ಷಡಕ್ಷರ ಮಂತ್ರವನ್ನು ಬಹಳ ರಹಸ್ಯದಲ್ಲಿ ಗುರುವು ಶಿಷ್ಯನಿಗೆ ಬೆಕೆಂಬ ಶ್ರುತಿ ವಚನವಿದೆ. ಸರ್ವೇವರ್ಣಾಃ ಶಿವಾತ್ಮಕಾ: ಎಂದಿದ್ದರೂ ಸರ್ವಶ್ರೇಷ್ಠವಾದದ್ದು ಈ ಮಂತ್ರ ಓಂಕಾರವು ಪಂಚಭೂತಾತ್ಮಕವಾಗಿಯೂ ನಕಾರವು ದಶೇಂದ್ರಿಯವಾಗಿಯೂ, ಮಕಾರವು ಮನಸ್ಸಂಚಕವಾಗಿಯೂ ಶಿಕಾರವು ಪ್ರಾಣ ಶಕ್ತಿಯಾಗಿಯೂ ವಾಕಾರವು ದಶವಾಯುಗಳಾಗಿಯೂ ಯಕಾರವು ತ್ರಿಗುಣಾತ್ಮಕವಾಗಿಯೂ ಇದೆ. ಷಡಕ್ಷರಿ ಮಂತ್ರದ ರಹಸ್ಯವು ಈ ಮಂತ್ರದ ಅರ್ಥವು ಬಹು ರಹಸ್ಯವೂ ಗಹನವೂ ಆಗಿರುತ್ತದೆ. ಅದನ್ನು ಗುರುವಿನಿಂದಲೇ ತಿಳಿದರೆ ಸಾರ್ಥಕವಾಗಿರುತ್ತದೆ. ಇದನ್ನು ಜಪಿಸುವದರಿಂದ ಸಕಲ ಪಾಪ ಹರವಾಗುತ್ತದೆ.

" ಓಂ ನಮ:ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು ವೇದ, ಓಂ ನಮ:ಶಿವಾಯ ಎಂಬ ಮಂತ್ರವ ಮೀರಲಮ್ಮದೆ ನಿಂದುವು

ಶಾಸ್ತ್ರ. ಓಂ ನಮಃಶಿವಾಯ ಎಂಬ ಮಂತ್ರವ ಮೀರಲನ್ಯದೆ ನಿಂದುವು ತರ್ಕ. ಭಯಂಕರ ಭ್ರಮೆಗೊಂಡಿತಃ; ಮಂತ್ರ ತಂತ್ರ ಶಿವನಂತವನರಿಯದೆ ಚಿಂತಿಸುತ್ತಿದ್ದಿತು ಲೋಕ ಸಂಗಯ್ಯ"

— ಬಸವೇಶ್ವರ —

ಪಂಚಾಕ್ಷರಿ ಮಂತ್ರವನ್ನು ಸಾನಂದ ಋಷಿಗಳು ನರಕ ವಾಸಿಗಳಿಗೆ ಹೇಳಲು ಅವರಿಗೆ ಅಲ್ಲಿಂದ ಬಿಡುಗಡೆ ಆಗಿ ಭವ್ಯ ಜೀವಿಗಳಾಗಿದ್ದಾರೆ- ಈಶ್ವರನ ರೂಪಾದ ನಕಾರ, ಮಹಾಜ್ಞಾನ ಪರಾತ್ಪರ ಸ್ವರೂಪಾದ ಮಕಾರ, ಆದಿಶೇಷನರೂಪಾದ ಶಿಕಾರ, ವೃಷಭನ ರೂಪಾದ ವಾಕಾರ, ಗುರುವಿನ ಸ್ವರೂಪಾದ ಯಕಾರವು ಪಂಚಾಕ್ಷರಿ ಮಂತ್ರದ ರಹಸ್ಯ. ಅರವತ್ತು ಮೂರು ಪುರಾತನರಲ್ಲಿ ಒಬ್ಬರಾದ ಮುರುಘರು ಮಂತ್ರ ಜಪದಿಂದ ಮುಕ್ತಿಯನ್ನು ಪಡೆದಿದ್ದಾರೆ. ಹರಿಹರ ಮಹಾಕವಿಯು ಅವರ ಮಂತ್ರ ನಿಷ್ಠೆಯನ್ನು ವರ್ಣಿಸಿದ್ದಾರೆ.

ಅರಿಯುದುಂ ನಮಶ್ಶಿವಾಯ ಮರೆವುದುಂ ನಮಶ್ಶಿವಾಯ
ಉರಿಯುದುಂ ನಮಶ್ಶಿವಾಯ ಮಹಿಮೆಯುಂ ನಮಶ್ಶಿವಾಯ
ಮನದೊಳಂ ನಮಶ್ಶಿವಾಯ ಬುದ್ಧಿಯೊಳುಂ ನಮಶ್ಶಿವಾಯ
ನೆನಹಿನೊಳುಂ ನಮಶ್ಶಿವಾಯ ಚಿಂತೆಯೊಳುಂ ನಮಶ್ಶಿವಾಯ
ನುಡಿಯುದುಂ ನಮಶ್ಶಿವಾಯ ನಡೆಯುವುದುಂ ನಮಶ್ಶಿವಾಯ
ಉಡುವುದುಂ ನಮಶ್ಶಿವಾಯ ಉಣ್ಬುದುಂ ನಮಶ್ಶಿವಾಯ
ಕಲೆವುದುಂ ನಮಶ್ಶಿವಾಯ ಕಾಣ್ಬುದುಂ ನಮಶ್ಶಿವಾಯ
ಪೊರೆವುದುಂ ನಮಶ್ಶಿವಾಯ ನೆಲೆವುದುಂ ನಮಶ್ಶಿವಾಯ
ಬರ್ಪುದುಂ ನಮಶ್ಶಿವಾಯ ಬಾಳ್ವುದುಂ ನಮಶ್ಶಿವಾಯ
ಇರ್ಪುದುಂ ನಮಶ್ಶಿವಾಯ ಪೋಪುದುಂ ನಮಶ್ಶಿವಾಯ
ಅವನೇನನೆಂಬ ನೆಂಬುದೆಲ್ಲವುಂ ನಮಶ್ಶಿವಾಯವಾಗಿ ಕೂಡಿಕರಗಿದಂ
ನಮಶ್ಶಿವಾಯ ಮುರುಘನಾಥ.

ಈ ಬಗೆಯ ಮಂತ್ರಾನುಷ್ಠಾನದಿಂದ ಮಂತ್ರಮಯನಾದ ಮುರುಘನು ಮಂತ್ರದೇಹಿಯಾಗುತ್ತಾನೆ. ಮಂತ್ರಶಕ್ತಿಯ ಮುಂದೆ ಮತ್ತೆ ಇನ್ನು ಯಾವ ಶಕ್ತಿಯೂ ನಿಲ್ಲದು. ಶರೀರಾದ್ಯಂತವೂ ಮಂತ್ರವು ವ್ಯಾಪಿಸಿಕೊಂಡಿರುತ್ತದೆ. ಈ ಶರೀರವು ಕೊಳಕಾದುದಲ್ಲ. ಹೊಲಸಲ್ಲ.

ಮಂತ್ರಸಿದ್ಧಿಯನ್ನು ಪಡೆದ ಮನುಷ್ಯನ ಜನ್ಮವು ನರಜನ್ಮವಾಗಿರದೆ ಹರಜನ್ಮವಾಗಿರುತ್ತದೆ. ಮಂತ್ರವು ಪಾಪಾತ್ಮರನ್ನು ಪಾವನಾತ್ಮಕರನ್ನಾಗಿ ಮಾಡುತ್ತದೆ. ಮಂತ್ರವಿಲ್ಲದ ಪಜೆಯು ಧ್ಯಾನ, ತಪಸ್ಸು, ಶ್ರವಣಗಳು ಕೇವಲ ನಿರರ್ಥಕ ತಂತ್ರವಿಲ್ಲದ ಕೆಲಸ, ಮಂತ್ರವಿಲ್ಲದ ಪೂಜೆ ಎಂಬ ಗಾದೆಯ ಉತ್ಪತ್ತಿಯೇ ಸಾಕಾಗಿದೆ.

ಗುರುಲಿಂಗ ಜಂಗಮದ ಸಂಬಂಧದಿಂದ ಪಾದೋದಕ ಲಭ್ಯವಾಗಿದೆ. ಪವಿತ್ರ ಕ್ಷೇತ್ರಗಳಲ್ಲಿನ ಕೆರೆ ತೊರೆ ನದೀ ನದೆಗಳ ನೀರನು ತಂದು ದೇವಸ್ಥಾನದಲ್ಲಿ ಭಕ್ತರಿಗೆ ಕೊಟ್ಟರೆ ಅದನ್ನು ತೀರ್ಥ ಎನ್ನುತ್ತೇವೆ. ಇಮಂ ಮೇ ಗಂಗೇಚ ಯಮುನೇಚ ಎಂದು ಮುಂತಾಗಿ ಹೇಳುವ ಸಕಲತೀರ್ಥಗಳು ಪಾದೋದಕದಲ್ಲಿ ಅಡಕವಾಗಿರುತ್ತವೆ. ಗುರುಲಿಂಗ ಜಂಗಮರು ಪರಮೇಶ್ವರನ ಪ್ರತಿರೂಪವಾಗಿರುವದರಿಂದ ಈ ಪಾದೋದಕವು ಪಾಪ ಪರಿಹಾರಕವಾಗಿರುತ್ತದೆ.

ಪಾದೋದಕಂ ಪರಂ ಬ್ರಹ್ಮ ಪವಿತ್ರಮಘನಾಶನಂ |
ಅಜಡಂ ಜಡ ವಿಶ್ರಾಂತು ಯೋಜನಾತಿಸಜಾ ಧರ್ಮ: ||

—ಬ್ರಹಾಂಡ ಪುರಾಣ.

ಶರೀರಶುದ್ಧಿ ಚಿತ್ತಶುದ್ಧಿ ಭಾವಶುದ್ಧಿಗಳು ಕೈಸೇರುತ್ತವೆ. ಪಾದೋದಕ ಪ್ರಾಶನದಿಂದ ಮನಸ್ಸಿನಲ್ಲಿ ನಿರ್ಭೀತಿಯೂ ಶಾಂತಿಯೂ ಉಂಟಾಗಿ ಧ್ಯಾನಕ್ಕೆ ಅನುಕೂಲವಾಗುತ್ತದೆ.

ಪಾಕಾರಂ ಪರಮಂ ಜ್ಞಾನಂದೋಕಾರೋ ದೋಷನಾಶನ: |
ದಕಾರೋ ಜನ್ಮದ ಹತಿಕಕಾರಃ ಕರ್ಮ ನಾಶನ: ||

ವಿರಾಗಮ—.

ಪಾದೋದಕ ಸೇವನೆಯಿಂದ ಕೈಂಕರ್ಯವು ಮೂಡಿ ನೈತಿಕ ಜೀವನವು ನೆಲಿಸಲು ಅವಕಾಶವಾಗುತ್ತದೆ ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕವಾಗಿ ಪಾದೋದಕವು ಬೆಳೆದಿದೆ. ಗುರು ತೀರ್ಥವನ್ನು ಶಿರದ ಮೇಲೆ ಪ್ರೋಕ್ಷಿಸಿ ಕೊಂಡರೆ ಸಕಲ ತೀರ್ಥಸ್ನಾನ ಲಭ್ಯವಾದಂತಾಗುತ್ತದೆ. ಬಿಸಿಲಿನ ಮತ್ತು ಭವದ ಬಾಯಾರಿಕೆಯನ್ನು ಜಂಗಮ ಪಾದೋದಕವು ಇಂಗಿಸುತ್ತದೆ. ಲಿಂಗ ಪಾದೋದಕ ಸ್ವೀಕಾರದಿಂದ ಆರೋಗ್ಯ ಸೌಭಾಗ್ಯ ಸಿದ್ಧಿಕರಣ ವೃತ್ತಿಗಳಡಗಿ ಪುಣ್ಯ ಪ್ರಾಪ್ತಿಯಾಗುತ್ತದೆ.

ಪಾದೋದಕದಂತೆಯೇ ಪ್ರಸಾದವೂ ವೀರಶೈವರಿಗೆ ಅತ್ಯವಶ್ಯಕವು. ಅನುಗ್ರಹ, ನೈರ್ಮಲ್ಯ, ಅನುಗ್ರಹಿಸಿ ಕೊಟ್ಟ ಪದಾರ್ಥ ಎಂದು ಪ್ರಸಾದದ ಅರ್ಥಗಳು.

"ರುದ್ರೇಣಾತ್ತಮಶ್ನಂತಿ ರುದ್ರೇಣಪೀತಂಪಿಬಂತಿ । ರುಪ್ರೇಣ ಘ್ರಾತಂ ಜಿಘ್ನಂತಿ ತಸ್ಮಾದ್ಬ್ರಾಹ್ಮಣಾಃ । ಪ್ರಶಾಂತ ಮನಸೋ ವಿದ್ವಾಂಸೋ ನಿರ್ಮಾಲ್ಯ ಮೇವಶ್ನಿಯಾತ್ ॥

—ಜಾಬಾಲೋಪನಿಷತ್ತು—

ಪ್ರಸಾದವೇ ಪರಮಜ್ಞಾನ. ಪ್ರಸಾದವೇ ಪರಾತ್ಪರ. ಪ್ರಸಾದವೇ ಪರಬ್ರಹ್ಮ. ಪ್ರಸಾದವೇ ಪರಮಾನಂದ. ಪ್ರಸಾದವೇ ಗುರು. ಪ್ರಸಾದವೇ ಲಿಂಗ. ಪ್ರಸಾದವೇ ಜಂಗಮ. ಪ್ರಸಾದವೇ ಪರಿಪೂರ್ಣ. ಸೌರಾಷ್ಟ್ರ ಸೋಮೇಶ್ವರ ಲಿಂಗದ ಪ್ರಸನ್ನತೆಯೇ ಪ್ರಸಾದ.

—ವಚನಶಾಸ್ತ್ರ ಸಾರ—

ಆಹಾರವನ್ನು ಪ್ರಸಾದವನ್ನಾಗಿ ಪರಿವರ್ತಿಸಿಕೊಂಡು ತೆಗೆದುಕೊಳ್ಳುವದು ಪರಮ ಕರ್ತವ್ಯವು. ಮಿತಹಾರಿಯಾಗಿರುವದು ನಮಗೆ ಅನುಕೂಲಕಾರಿಯು. ನಾವು ಊಟ ಮಾಡುವ ಆಹಾರವನ್ನು ಸಿಕ್ಕಾಬಟ್ಟೆಯಾಗಿ ಪೋಲು ಮಾಡದೆ ಅದರ ವಿಚಾರದಲ್ಲಿ ಭಯ ಭಕ್ತಿಯನ್ನು ಉಂಟುಮಾಡಿ ಪ್ರಸಾದವು ನಮ್ಮನ್ನು ಸಮೃದ್ಧಿಯಾಗಿರಿಸಿದೆ. ಲಿಂಗಕ್ಕೆ ಅರ್ಪಿಸದೇ ತಿಂದ ಆಹಾರವು ಆಹಾರವಲ್ಲವಾಗಿದೆ ಎಂಬ ಅಭಿಪ್ರಾಯವನ್ನು ವೀರ ತಂತ್ರದ ಪ್ರಮಾಣವು ಸಿದ್ಧ ಪಡಿಸಿದೆ. ಜಂಗಮರನ್ನು ಉದ್ದೇಶಿಸಿ ಮಾಡಿದ ಅಡಿಗೆಯು ಸಫಲವಾಗುತ್ತದೆ.

"ಲಿಂಗ ಜಂಗಮವನ್ನು ಉದ್ದೇಶಿಸಿ ಮಾಡಿದ ಅಡಿಗೆಯು ಉತ್ತಮ. ತನಗೆ ಎಂದು ಉದ್ದೇಶಿಸಿ ಮಾಡಿದ ಅಡಿಗೆಯು ಮಾಂಸಕ್ಕೆ ಸಮಾನವು."

—ಶೈವಾಗಮ—

ಭೋಜನ ಸಮಯದಲ್ಲಿ ಗುರುಜಂಗಮರು ದೊರೆಯದಿದ್ದರೆ ಅವರ ಹೆಸರು ಹೇಳಿ ಪಾತ್ರವರಿತು ಅದನ್ನು ಸಲ್ಲಿಸಿ ಕಾರ್ಯಮಾಡುವದು ಶ್ರೇಯಸ್ಕರ.

ಅಷ್ಟಾವರಣಾವಲಂಬನದಿಂದ ಸುಖಸಂಪತ್ತೂ, ಶ್ರೇಯಸ್ಸು ಯಶಸ್ಸು ತಪ್ಪದೆ ದೊರಕುತ್ತದೆ. ಸಚ್ಚಿದಾನಂದ ಸ್ವರೂಪಿ, ಪರಿಪೂರ್ಣ, ವಿದ್ಯಾರೂಪನು ಆದ ಪರಮಾತ್ಮನು ಗುರುಲಿಂಗ ಜಂಗಮನಾಗಿ ಪರಿಣಮಿಸಿ ಘೋರವಾದ ಭವಸಾಗರವನ್ನು ಗುರುವು ದಾಟಿಸುತ್ತಾನೆ. ಪಾದೋದಕವು ಮಲತ್ರಯವನ್ನು ಪರಿಹರಿಸಿ ಜ್ಞಾನಚಂದ್ರಿಕೆಯು ಹರಡುವಂತೆ ಮಾಡುತ್ತದೆ. ಪ್ರಸಾದವು ಭಕ್ತಿ ಸಸಿಯನ್ನು ಸೊಂಪಾಗಿ ಬೆಳೆಯಿಸುತ್ತದೆ. ಗುರುಲಿಂಗ ಜಂಗಮ ಸ್ವರೂಪಿಯಾಗಿ ಪರಮೇಶ್ವರನು ಪರಿಣಮಿಸುವುದರಿಂದ ದಿನವೂ ತ್ರಿವಿಧಪಾದೋದಕ ತ್ರಿವಿಧಪ್ರಸಾದವನ್ನು ತೆಗೆದುಕೊಳ್ಳಬೇಕು. ಅಷ್ಟಾವರಣ ಪರಿಪೂರ್ಣನಿಗೆ ಭಕ್ತಿಸ್ಥಲವು ನೆಲೆಗೊಂಡು ಮುಕ್ತಿಸ್ಥಾನವು ಅಭಿಮುಖವಾಗುತ್ತದೆ. ಏಕೋಮೂರ್ತಿಸ್ತ್ರಯೋಭಾಗಃ ಗುರುರ್ಲಿಂಗಂತು ಜಂಗಮಃ ಎಂಬ ಶೃತಿಯು ಗುರುಲಿಂಗಜಂಗಮದ ಅಭೇದವನ್ನು ಸ್ಪಷ್ಟಪಡಿಸುತ್ತದೆ. ಮೂರ್ತಿಗಳು ಈ ಮೂರಾದರೆ ಸಾಧನಾತ್ರಯಗಳು ಭಸ್ಮ, ರುದ್ರಾಕ್ಷಿ, ಮಂತ್ರ ಮತ್ತು ಸಿದ್ಧಿದ್ವಯಗಳು ಪಾದೋದಕ ಪ್ರಸಾದ ಅಷ್ಟಾವರಣ ಕವಚಗಳಿಂದ ಶರೀರಕ್ಕೆ ಲೋಗರುಜನ ಆಧಿವ್ಯಾಧಿಸೆಕೆಳಿಸ ಆಗದಂತೆ ಕಾಯುವದು. ಗುರುವು ಗುರುವೇ ಮೂಲವಾಗಿ ಮಂಡಿಸಿದ್ದಾನೆ.

"ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆ. ಗುರುವಿನ ಕರ್ಮದಿಂದ ಪಾದೋದಕ ಪ್ರಸಾದವಕಂಡೆ. ಚೆನ್ನಮಲ್ಲಿಕಾರ್ಜುನಯ್ಯಾ ನಾಹುಟ್ಟಲೊಡನೆ ವಿಭೂತಿಯ ಪಟ್ಟವಕಟ್ಟಿ ಸದ್ಗುರು ಸ್ವಾಮಿ ವಿಭೂತಿಯ ಪಟ್ಟವಕಟ್ಟಿ ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದವನಾಗಿ ಧನ್ಯಳಾದೆನು"

—ಅಕ್ಕ ಮಹಾದೇವಿ.

# ಶಿವ ನಿನ್ನ ಬೇಡುವೆನು.



ನನ್ನ ತುತ್ತಿನ ಚೀಲ ನಾನೆ ತುಂಬಿಸಿಕೊಳುವೆ
ಅದಕಾಗಿ ನಿನಗೆನಿತು ಕಾಡಲಾರೆ
ನನಗೆ ಹತ್ತಿದ ಬಳಗ–ನಾನೆ ನಡಿಸುತ ಕಳೆವೆ
ನೀ ನೆರೆಯಲಾಸರೆಯು ಕೇಳಲಾರೆ ೧

ಕೋಟಿ ಹಣ ಲಾಟರಿಯು ಈ ಚಣವೆ ಸಿಗಲೆಂದು
ಹಟಮಾಡಿ ಮುಡುಪಿಟ್ಟು ಪೀಡೆಕೊಡೆನು
ಅರಮನೆಯ ಸಿರಿತನವು ಈ ದಿನವೆ ಬರಲೆಂದು
ಸತ್ಯ ಶಂಕರ ವೃತವ ನಾ ಹೂಡೆನು ೨

ನನ್ನ ಬದುಕಿನ ಕೊರತೆ ಕೊರಕಲವ ಸಮಗೊಳಲು
ನಿನ್ನ ಕರುಣೆಯ ನೆರವ ಕರೆಯಲಾರೆ
ನನ್ನ ಬಾಳಿನ ಪಥದಿ ಸೌಖ್ಯ ಹೂ ಹಾಸಿಗೆಯ
ಮೇಲ್ನಡೆವ ಭಾಗ್ಯವನು ಬಯಸಲಾರೆ ೩

ಜಗವು ಅಚ್ಚರಿಗೊಳಿಪ ಅಗಾಧಮಯ ಪಾಂಡಿತ್ಯ
ವಿಷವಿದ್ಯೆಯಿರಿಸೆಕ್ಕೆ ನಾ ಬೇಡಲಾರೆ
ಹಗಲಿರುಳು ಜಪಿಸುತಲಿ ಮುಕುತಿಸೋಹಂಭಾವ್ಯ
ಪಾಷಾಣ ಪದಕೆರಗಿ ತಲೆ ಒಡೆಯಲಾರೆ ೪

ಶಿವ ನಿನ್ನ ಬೇಡುವೆನು : ಮೂರು ಜನ ಬೇಸತ್ತು
ಮೂಗು ಮುರಿಯುವ ಬದುಕೆನಗೆ ಬೇಡ
ಯಾರದೊಬ್ಬರ ಋಣದ ವೈಭಾರ ಹೊರೆಹೊತ್ತು
ಆಗಲಾರದ ಜೀವ ನನಗಿರಿಸಬೇಡ ೫

ಇನಿತೊಂದು ಆಶೆಯನೆ ಶಿವ ನನಗೆ ಜೊತೆಯಿರಿಸು
ಮತ್ತುಳಿದ ಸಂಪದಕೆ ಬೇಡೆನ್ನ ಮನಸು
ನನ್ನ ಮರಣದ ಚಣದಿ ನೂರು ಜನ ಹೃದಯದಲಿ
ಮರುಗಿ ಅಶ್ರುವ ಪಿಡಿವ ಪುಣ್ಯವಿರಿಸು ! ೬

ಈಶ್ವರ ಹಿರೇನಂದಿಹಳ್ಳಿ. ಧಾರವಾಡ.

# ವೀರಶೈವ ಧರ್ಮ.

ವ್ಯಾಖ್ಯಾನಕಾರರು: — ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ
ತೆಗ್ಗಿಹಳ್ಳಿ (ಇಂಡಿ)

---

## (೧) ಪಂಚಾಚಾರ್ಯರು ಇದನ್ನು ಸ್ಥಾಪಿಸಿಲ್ಲ.

ಪಂಚಾಚಾರ್ಯರು ಪಂಚ ಸ್ಥಾವರ ಲಿಂಗಗಳಲ್ಲಿ ಉದ್ಭವಿಸಿ ವಿರಶೈವ ಧರ್ಮವನ್ನು ಸ್ಥಾಪಿಸಿದರೆಂದು ಕೆಲವರು ಹೇಳುವರು. ಈ ವಿಜ್ಞಾನ ಯುಗದಲ್ಲಿ ಇದು ಸತ್ಯ ಸಂಗತಿ ಎನಿಸುವದಿಲ್ಲ. ಇದೆಲ್ಲ ಪುರಾಣದ ಮಾತು. ಈ ಪಂಚಾಚಾರ್ಯರ ಪಂಚ ಪೀಠಗಳನ್ನು ಬಸವನ ಕಾಲದಲ್ಲಿ ಆಗಿ ಹೋದ ರೇವಣ ಸಿದ್ಧೇಶ್ವರರು ಸ್ಥಾಪಿಸಿದರು. ಬಸವನ ತರುವಾಯ ಇವರೇ ರೇಣುಕಾಚಾರ್ಯರೆನಿಸಿಕೊಂಡು ಈ ಪೀಠಗಳನ್ನು ಸ್ಥಾಪಿಸಿದರೆಂದು ಮೈಸೂರದಲ್ಲಿ ಹೊರಡುವ ಸದ್ಧರ್ಮ ದೀಪಿಕೆಯ ಸಂಪಾದಕರಾದ ಚನ್ನಮಲ್ಲಿಕಾರ್ಜುನ ಸ್ವಾಮಿಗಳು ಸಂಶೋಧನ ಮಾಡಿ ಒಂದು ದೊಡ್ಡ ಹೊತ್ತಿಗೆಯನ್ನು ಬರೆದಿದ್ದಾರೆ. ಈ ರೇವಣಾ ಸಿದ್ಧೇಶ್ವರನು ೧೧೧೦ ರಲ್ಲಿ ಜನಿಸಿ ೧೨೧೭ ರಲ್ಲಿ ಶರೀರ ಬಿಟ್ಟಿದ್ದಾರೆ. ಮೊದಲು ಇವರು ನವನಾಥ ಸಿದ್ಧರ ಕೂಡ ಭಾರತದ ಪ್ರವಾಸ ಮಾಡಿ ಮಂತ್ರ, ಯಂತ್ರ, ತಂತ್ರ, ರಸ, ವನಸ್ಪತಿ ಮೊದಲಾದ ಸಿದ್ಧಿಗಳನ್ನು ಪಡಕೊಂಡಿದ್ದರು. ಆ ಬಳಿಕ ಇವರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದ ಮುಂದೆ ಕುಳಿತು ಶೈವದೀಕ್ಷೆಯನ್ನು ಮೊದಲು ಪಡಕೊಂಡರು. ಇವರು ಕುಣಬಿ ಜಾತಿಯವರು. ಪುನ: ಇದೇ ಸಂಶೋಧನೆಯಲ್ಲಿ ಇವರು ೧೨ ವರ್ಷ ಭಾರತದ ಪ್ರವಾಸ ಮಾಡಿ ಹಿಂದಿನಿಂದ ಕಲ್ಯಾಣದಲ್ಲಿ ನಿರ್ಲಜ್ಜ ಶಾಂತಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ೧೧೬೭ ರ ಸುಮಾರಿಗೆ ಇವರೇ ರೇಣುಕಾಚಾರ್ಯರೆನಿಸಿಕೊಂಡು ಉಜ್ಜಯಿನಿಯಲ್ಲಿ ಮರುಳಸಿದ್ಧನಿಂದ, ಬಾಳೆಹಳ್ಳಿಯಲ್ಲಿ ದಿಗಂಬರ ಮುಕ್ತಿ ಮುನಿಯಿಂದ, ಶ್ರೀಶೈಲದಲ್ಲಿ ತನ ಮಗನಾದ ರುದ್ರಮುನಿಯಿಂದ, ಕಾಶಿಯಲ್ಲಿ ವಿಶ್ವಾರಾಧ್ಯರಿಂದ ಸಿಂಹಾಸನಗಳನ್ನು ಸ್ಥಾಪಿಸಿದರು. ಅಲ್ಲದೆ ಶಿವಗಂಗೆಯಲ್ಲಿ ಮುಕ್ತಿಮುನಿಯಿಂದ

ಶೂನ್ಯ ಸಿಂಹಾಸನೆಯನ್ನು ಸಹ ಸ್ಥಾಪಿಸಿದರು. ಇವರೆಲ್ಲರೂ ರೇವಣ ಸಿದ್ಧೇಶ್ವರನ ಶಿಷ್ಯರಾಗಿದ್ದರು. ತಾವು ಕೊಲ್ಲಿಪಾಕಿಯಲ್ಲಿ ಸಿಂಹಾಸನ ಸ್ಥಾಪಿಸಿದರು. ಬಸವನ ತರುವಾಯ ಕಲ್ಯಾಣ ಹಾಳಾದ ಬಳಿಕ ಇವರು ವೀರಶೈವ ಮತವನ್ನು ಬಹುಮುಖವಾಗಿ ಬೆಳೆಸಿದರು. ಕೆಲವರು ಬಸವಣ್ಣನೇ ವೀರಶೈವ ಮತಸ್ಥಾಪಕನೆಂದು ಹೇಳುವರು. ಇದು ಸಹ ಸತ್ಯ ಸಂಗತಿಯಲ್ಲ. ಇವರೆಲ್ಲರೂ ಈ ಮತದ ಉದ್ಧಾರಕರು ಹೊರ್ತು ಸ್ಥಾಪಕರಲ್ಲ. ಯಾಕಂದರೆ ಬಸವಾದಿ ಪ್ರಮಥರಿಗಿಂತ ಮೊದಲೇ ಈ ಮತವು ಇದ್ದದ್ದು ಸಿದ್ಧವಾಗುವದು.

### (೨) ಇದನ್ನು ಯಾರು ಸ್ಥಾಪಿಸಿದರು

ಬೌದ್ಧ, ಜೈನ, ಮುಹಮ್ಮದೀಯ, ಕ್ರೈಸ್ತ ಮೊದಲಾದ ಧರ್ಮಗಳಂತೆ ವೀರಶೈವ ಧರ್ಮವನ್ನು ಒಬ್ಬ ವ್ಯಕ್ತಿಯು ಸ್ಥಾಪಿಸಿಲ್ಲ. ಈ ಧರ್ಮದವರು ತಮ್ಮ ಸರ್ವಸ್ವವನ್ನು ಒಬ್ಬಾನೊಬ್ಬ ವ್ಯಕ್ತಿಗೆ ಮಾರಿಕೊಂಡಿಲ್ಲ. ಹೀಗೆ ಮಾಡಿದರೆ ಧರ್ಮದ ಸರ್ವಾಧಿಕಾರವನ್ನು ಒಬ್ಬನಿಗೇ ಕೊಟ್ಟಂತಾಗಿ ರಾಜಕೀಯ ಸರ್ವಾಧಿಕಾರಿಗಳಂತೆ ಧಾರ್ಮಿಕ ಸರ್ವಾಧಿಕಾರಿಗಳೂ ಆಗುವರು. ಈ ಸರ್ವಾಧಿಕಾರಿಗಳು ರಾಷ್ಟ್ರಗಳಲ್ಲಿ ಬಹಳೇ ಅನಾಹುತಗಳನುಂಟು ಮಾಡಿದ್ದು ಎಲ್ಲರೂ ಕಂಡ ಮಾತಾಗಿದೆ. ಅದರಂತೆ ಧರ್ಮರಾಜ್ಯದಲ್ಲಿ ಧಾರ್ಮಿಕ ಸರ್ವಾಧಿಕಾರಿಗಳಿಂದ ಸಹ ಹೀಗೇ ಆಗುವದರಲ್ಲಿ ಸಂದೇಹವಿಲ್ಲ. ಆದರೆ ವೀರಶೈವ ಮತವು ಯಾವ ಒಂದೇ ಒಂದು ವ್ಯಕ್ತಿಗೆ ಉಳಿದವರಂತೆ ಮಾರುಹೋಗಿಲ್ಲ. ಈಗಿನ ಪ್ರಜಾರಾಜದಂತೆ ಧರ್ಮರಾಜದಲ್ಲಿಯೂ ಕೂಡ ಪ್ರಜಾಧರ್ಮ ಪದ್ಧತಿಯನ್ನೇ ಅಮಲಿನಲ್ಲಿ ತಂದರು. ಆದರೆ ಪ್ರಜಗಳೇ ಆರಿಸಿಕೊಟ್ಟ ವ್ಯಕ್ತಿಗಳು ಕಾಯ್ದೆ ಕಾನೂನುಗಳನ್ನು ಮಾಡಿ ಅವರೇ ರಾಜಭಾರ ಮಾಡುವಂತೆ ಧರ್ಮರಾಜದಲ್ಲಿ ಪ್ರಮಥರು, ಶರಣರು, ಆದ್ಯರು, ಆಚಾರ್ಯರು ಮುನಿಗಳು ಅವತರಿಸಿ ಕಾಲಕಾಲದಿಂದಲೂ ದೇಶಕಾಲ ಪರಿಸ್ಥಿತಿಗನುಸರಿಸಿ ಕಾಯ್ದೆಕಾನೂನ ಕಟ್ಟಳೆ ನಿಯಮ ಪದ್ಧತಿ ರೀತಿ ನೀತಿಗಳನ್ನು ಎಲ್ಲರೂ ಕೂಡಿ ವಿಚಾರಿಸಿ ಒಪ್ಪಿಗೆ ಪಡಕೊಂಡ ಬಳಿಕ ಅವುಗಳಂತೆ ನಡೆದು ಪ್ರಚಾರ ಮಾಡಿದರು. ಅದರಂತೆ ಆಗಮ ವಚನಗಳ ರೂಪದಿಂದ ಗ್ರಂಥಗಳನ್ನಾಗಿ ಬರೆದಿಟ್ಟರು. ಅವುಗಳಂತೆ ವೀರಶೈವ ಮತವು

ನಡೆಯುತ್ತಿರುವದು. ಈ ತರದ ಪ್ರಯತ್ನವು ಶರಣರ ಕಾಲಕ್ಕೆ ನಡೆದದ್ದು ಎಲ್ಲರೂ ಕಂಡುಂಡ ಮಾತಾಗಿದೆ. ಆಗ ಕಲ್ಯಾಣದಲ್ಲಿ ಈ ಧಾರ್ಮಿಕ ಕ್ರಾಂತಿಗಾಗಿ ಅನುಭವಮಂಟಪ ಹರುಷಗಟ್ಟಿ, ಮಹಾಮನೆ ಶೂನ್ಯಸಿಂಹಾಸನಗಳನ್ನು ಸ್ಥಾಪಿಸಿ ಇದರಂತೆ ಮಾಡಿದರು. ಅಲ್ಲಿ ಶರಣ ಶರಣಿಯರು ಕೂಡಿ! ಧರ್ಮದ ಚರ್ಚೆಗಳನ್ನು ಮಾಡಿ ಅನುಭವಗಳನ್ನು ಹೇಳಿ ಎಲ್ಲರ ಒಪ್ಪಿಗೆ ಪಡಕೊಂಡ ಬಳಿಕ ಅವುಗಳನ್ನು ಬರೆದು ಇಡುತ್ತಿದ್ದರು ಆಗ ಅವೆಲ್ಲ ಧಾರ್ಮಿಕ ನಿಯಮ ಕಟ್ಟಳೆ ಕಾಯ್ದೆ ಕಾನೂನಗಳಾಗಿ ಬಿಡುತ್ತಿದ್ದವು. ಇದರಂತೆ ಮೊದಲೂ ಕೂಡ ಅನುಭಾವಿಗಳು ತಮ್ಮ ಅನುಭಾವಗಳನ್ನು ಬರೆದು ಜನರ ಮುಂದೆ ಇಡುತ್ತಿದ್ದರು ಹೊರತು ಯಾರೂ ಧರ್ಮಸ್ಥಾಪಕರಾಗಿಲ್ಲ. ಹಿಂದೂಧರ್ಮವೂ ಕೂಡ ಇದರಂತೇ ಇರುವದು. ದೇಶಕಾಲ ಪರಿಸ್ಥಿತಿಗನುಗುಣವಾಗಿ ಪ್ರಜಾಪ್ರತಿನಿಧಿಗಳು ಹೊಸ ಹೊಸ ಕಾಯ್ದೆಕಾನೂನುಗಳನ್ನು ಮಾಡಿ ದೇಶದ ಸರ್ವತೋಮುಖದ ಏಳ್ಗೆಮಾಡುತ್ತಿರುವಂತೆ ಧರ್ಮದ ಸರ್ವತೋಮುಖ ಏಳ್ಗೆಗಾಗಿ ಹೊಸ ಹೊಸ ಕಾಯ್ದೆಕಾನೂನು ಕಟ್ಟಳೆಗಳನ್ನು ಮಾಡುವದು ತಪ್ಪಲ್ಲ. ಇವುಗಳಿಂದ ಹೆಚ್ಚಿನ ಸುಖಶಾಂತಿಗಳೇ ನೆಲಿಸುವವು.

## (೩) ಸ್ಥಾಪಿಸಿದ್ದೆಂದು?

ವೇದಪೂರ್ವದಲ್ಲಿ ಈ ಭರತಖಂಡದಲ್ಲಿ ದ್ರಾವಿಡ ಸಂಸ್ಕೃತಿಯು ಚನ್ನಾಗಿ ನೆಲಸಿತ್ತೆಂದು ಹರಪ್ಪ ಮಹೆಂಜೋದಾರೋ (ಸಿಂಧೂನದಿಯ ಕೊಳ್ಳ) ಚಂದ್ರವಳ್ಳಿ (ಚಿತ್ರದುರ್ಗ ನೆರೆಯಲ್ಲಿ) ಅಲ್ಲದೆ ನರ್ಮದಾ, ತಾಪಿ ನದಿಯ ಕೊಳ್ಳದಲ್ಲಿ ದೊರೆತ ಅನೇಕ ಅತ್ಯಂತ ಹಿಂದಿನ ಕಾಲದ ಅವಶೇಷಗಳಿಂದ ಈಗೀಗ ತಿಳಿದುಬಂದಿದೆ. ನಂದಿ ಸ್ಥಾವರ ಲಿಂಗಗಳು ಇಷ್ಟಲಿಂಗಗಳು ಕಂತೆ ಕೂಡ್ರಿಸಿದ ಇಷ್ಟಲಿಂಗಗಳು ದೊರೆತಿವೆ. ಈ ಅವಶೇಷಗಳು ೫೦೦೦-೬೦೦೦ ವರ್ಷಗಳ ಹಿಂದಿನವೆಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಇವೆಲ್ಲ ಅವಶೇಷಗಳು ದ್ರಾವಿಡ ಸಂಸ್ಕೃತಿಗೆ ಸಂಬಂಧಿಸಿದವುಗಳೆಂದು ತಿಳಿದುಬಂದಿದೆ. ಇದರ ಮೇಲಿಂದ ಶೈವ ವೀರಶೈವ ಸಂಸ್ಕೃತಿಗಳು ವೇದ ಪೂರ್ವದವೆಂದು ಹೇಳುವರು. ಮೊದಲು ಭಾರತದಲ್ಲಿ ಶೈವ ಧರ್ಮವೇ ಬಹು ಪ್ರಬಲವಾಗಿತ್ತು. ಇವರೆಲ್ಲರೂ ಸ್ಥಾವರ ಪೂಜಕರು. ಶಿವಶಕ್ತಿ ಉಪಾಸಕರು ಇವರಲ್ಲಿ ಕಾಶ್ಮೀರಿ ಶೈವರು

ಕಾಳಾಮುಖರು ಪಾಶುಪತರು, ಲಕುಲೀಶರು ಕಾಪಾಲಿಕರು, ಭೈರವರು ಎಂದು ಅನೇಕ ಪ್ರಭೇದಗಳಿದ್ದವು. ಈ ಪಾಶುಪತರೇ ಬರಬರುತ್ತ ವೀರಶೈವವಾಗಿ ಮಾರ್ಪಟ್ಟಿತೆಂದು ತಿಳಿದುಬರುತ್ತದೆ. ಇ ಕಾಲಕ್ಕೆ ೨೮ ಆಗಮಗಳು ಬೇರೆ ಬೇರೆಯವರಿಂದ ಬೇರೆ ಬೇರೆ ಕಾಲಕ್ಕೆ ಬರೆಯಲ್ಪಟ್ಟವು. ಇವು ವೇದಪೂರ್ವದವೆಂದು ತಿಳಿಯುವದು. ಯಾಕಂದರೆ ವೇದಗಳಲ್ಲಿ ಆಗಮಗಳ ಖಂಡನೆ ಟೀಕೆ ನಿಂದೆಗಳು ಬಂದಿವೆ. ದ್ರಾವಿಡರಿಗೂ ಆರ್ಯರಿಗೂ ಆಗ ಸದಾ ಕಲಹಗಳೇಳುತ್ತಿದ್ದವು. ದ್ರಾವಿಡರು ಹಿಂದುದೇಶದ ಮೂಲ ನಿವಾಸಿಗಳು. ಆರ್ಯರು ಹಿಂದುಸ್ಥಾನದ ಹೊರಗಿನಿಂದ ವಾಯುವ್ಯ ದಿಕ್ಕಿನಿಂದ ಏಶಿಯಾ ಖಂಡದಿಂದ ಬಂದು ಇಲ್ಲಿ ನೆಲಿಸಿದವರು. ಈ ದ್ರಾವಿಡ ಸಂಸ್ಕೃತಿಗೆ ವೀರಶೈವರು ಸೇರಿದವರು. ಅದಕ್ಕಾಗಿ ಅನಾದಿ ವೀರಶೈವವೆನ್ನುವರು. ವೇದದಲ್ಲಿ ಬಂದ ಸಾಂಖ್ಯಯೋಗ ದರ್ಶನಯೋಗ ಮೊದಲಾದವುಗಳು ಆಗಮದೊಳಗಿಂದ ಎತ್ತಿ ಬರದಂಥವುಗಳಿರುವವೆಂದು ತಿಳಿದು ಬಂದಿದೆ.

**(೪) ಇದು ಸನಾತನ ಧರ್ಮವೆಂಬುದಕ್ಕೆ ಆಧಾರಗಳು.**

(೧) ೧ ನೇ ಶತಮಾನದಲ್ಲಿ ಆಗಿಹೋದ ೬೩ ಜನ ಪುರಾತನರಲ್ಲಿ ಕೆಲವರು ವೀರಶೈವರಿದ್ದರು.

(೨) ಮಹಾಭಾರತದ ಕಾಲದಲ್ಲಿ ಲಿಂಗಧಾರಣವು ಪ್ರಚಾರದಲ್ಲಿತ್ತು. ಲಿಂಗಬ್ರಾಹ್ಮಣ ಅಲಿಂಗಿಬ್ರಾಹ್ಮಣರೆಂದು ಭೇದಗಳಿದ್ದವು. ಅದರಂತೆ ಈಗ ಸಹ ಆರಾಧ್ಯ ಬ್ರಾಹ್ಮಣರು ಜನಿವಾರಲಿಂಗಗಳನ್ನು ಧರಿಸುವರು.

(೩) ತಪಸ್ವಿಯಾಗಿದ್ದ ಬ್ರಾಹ್ಮಣನು ಲಿಂಗವಂತನಾಗಲಿ ಅಲಿಂಗಿಯಾಗಲಿ ಶ್ರೇಷ್ಠನೆಂದು ಭಾರತದಲ್ಲಿ ಹೇಳಿದೆ.

(೪) ಪಾಂಡವರ ಅಶ್ವಮೇಧ ಯಜ್ಞಕ್ಕೆ ಲಿಂಗಧಾರಿಗಳೂ ಸಹ ಬಂದಿದ್ದರೆಂದು ವರ್ಣನೆ ಇದೆ.

(೫) ಶಂಕರ ದಿಗ್ವಿಜಯದಲ್ಲಿ ಶಂಕರಾಚಾರ್ಯರು ಸೋಲಿಸಿದ ಜಂಗಮರ ವಿಷಯ ಬಂದಿದೆ.

(೬) ಜನಸೇನನು ತನ್ನ ಪುರಾಣದಲ್ಲಿ ಕುಲಿಂಗಿಗಳನ್ನು ಕುರಿತು ದೂರಿದ್ದಾನೆ. (೮ನೇ ಶತಮಾನದಲ್ಲಿ)

(೭) ರಸೇಶ್ವರಲಿಂಗವೆಂದು ಪಾರಜವನ್ನು ಗಟ್ಟಿಗೊಳಿಸಿ ಲಿಂಗದಂತೆ ಮಾಡಿ ಬಹುಪುರಾತನ ಕಾಲದಲ್ಲಿ ಧರಿಸಿ ಪೂಜಿಸುತ್ತಿದ್ದರೆಂದು ತಿಳಿದುಬಂದಿದೆ.

(೮) ಅಲ್ಲಮಪ್ರಭುವಿಗೆ ಅನಿಮಿಷಯ್ಯನು ಲಿಂಗಕೊಟ್ಟದ್ದು ಶರಣರ ಮೊದಲೆಂದು ತಿಳಿಯುವದು.

(೯) ದೇವರ ದಾಸಿಮಯ್ಯನು ಚಂದ್ರಗುಂಡ ದೇಶಿಕೇಂದ್ರನಿಂದ ಲಿಂಗ ಪಡಕೊಂಡು ವೀರಶೈವನಾದನು. (೧೧ನೇ ಶತಮಾನದಲ್ಲಿ)

(೧೦) ೬ ನೇ ಶತಮಾನದಲ್ಲಿದ್ದ ಕಾಂಚಿಪಲ್ಲವ ಅರಸರು ಲಿಂಗ ಧಾರಿಗಳಾಗಿದ್ದರೆಂದು ತಿಳಿದು ಬಂದಿದೆ.

(೧೧) ವಾಯಿಲೂರು ಸಾಲುವಕುಪ್ಪ ಮಾಮಲ್ಲಪುರ ತ್ರಿಚಿನಾಪಳ್ಳಿ ಕಾಂಚಿ ಶಿಲಾಶಾಸನಗಳಿಂದ ಆಗ ವೀರಶೈವ ಧರ್ಮವು ಪ್ರಭಲವಾಗಿತ್ತೆಂದು ತಿಳಿದು ಬರುವದು-

(೧೨) ಹನುಮಂತನು ವೀರಭದ್ರನಿಂದ ಲಿಂಗಪಡಕೊಂಡನೆಂದು ಪುರಾಣದಲ್ಲಿ ಇದೆ.

(೧೩) ರಾವಣನು ಶಿವನ ಆತ್ಮಲಿಂಗವನ್ನು ತಕ್ಕೊಂಡು ಬರುವಾಗ ಗೋಕರ್ಣದಲ್ಲಿ ಉಳಿದದ್ದು ಪುರಾಣಪ್ರಸಿದ್ಧವಿದೆ.

ಈ ಪ್ರಕಾರ ಐತಿಹಾಸಿಕ ಪೌರಾಣಿಕ ಇನ್ನೂ ಅನೇಕ ಆಧಾರಗಳ ಮೂಲಕ ವೀರಶೈವ ಧರ್ಮವು ಬಹು ಪುರಾತನದಿಂದಲೂ ಪ್ರಚಾರದಲ್ಲಿತ್ತೆಂದು ಹೇಳಬಹುದು.

## (೫) ಇದರ ಸಿದ್ಧಾಂತದ ಕಾಲ.

ಈ ವೀರಶೈವ ಮತದ ಸಿದ್ಧಾಂತವು ಶಕ್ತಿವಿಶಿಷ್ಟಾದ್ವೈತವಾಗಿದೆ. ಇದೂ ಕೂಡ ಅಷ್ಟೇ ಪುರಾತನದ್ದಾಗಿದೆ. ಶ್ರೀಕಂಠರು ಮೊದಲಿಗೆ ಶೈವಸಿದ್ಧಾಂತದ ಭಾಷ್ಯಕಾರರು. ಇವರು ಶಂಕರಾಚಾರ್ಯರ ಸಮಕಾಲಿನರು ಇವರನ್ನು ವೀರಶೈವರು ಮನ್ನಿಸುವರು. ಮುಂದೆ ೮ ನೇ ಶತಮಾನದಲ್ಲಿ ನೀಲಕಂಠಾಚಾರ್ಯರು ಶಿವಾದ್ವೈತಸಿದ್ಧಾಂತಕ್ಕೆ ನೀಲಕಂಠ ಭಾಷ್ಯವನ್ನು ರಚಿಸಿದರು. ಕಾರಣ ಈ ಸಿದ್ಧಾಂತವೂ ಕೂಡ ಬಹುಪುರಾತನದ್ದೆಂದು ಹೇಳಬಹುದು.

## (೬) ವೀರಶೈವ ಅಂದರೇನು?

ಇದರಲ್ಲಿ ವೀರ+ಶೈವ ಎಂದು ಎರಡು ಶಬ್ದಗಳು. ವೀರ ಅಂದರೆ ಶಕ್ತಿಯುಳ್ಳ ಶೈವ ಅಂದರೆ ಶಿವೋಪಾಸಕ ವೀರಶೈವವೆಂದರೆ ಶಕ್ತಿಯುಳ್ಳ ಶಿವೋಪಾಸಕರೆಂದು ಇದರ ಅರ್ಥವಿರುವದು. ಉಳಿದ ಮತದವರು ಬರೇ ಶಿವ ರಾಮಕೃಷ್ಣ ನಾರಾಯಣ ಹರಿ ಜಿನ ಅಲ್ಲಾ ಕ್ರಿಸ್ತ ಬೌದ್ಧ ಗಣಪತಿ ಸೂರ್ಯ ಶಕ್ತಿ ಕಾಲಿ ತಾಯಿ ಎಂದು ಉಪಾಸನೆಯನ್ನು ಮಾಡುವರು. ಆದರೆ ವೀರಶೈವರು ಮಾತ್ರ ಶಕ್ತಿಯುಳ್ಳ ಶಿವನ ಉಪಾಸನೆಯನ್ನು ಮಾಡುವರು. ಶಕ್ತಿ ಇಲ್ಲದ ಯಾವದೇ ದೇವರು ಶವದಂತೆ ಆಗಿ ಬಿಡುವದು. ಅದಕ್ಕೆ ಅದು ಪೂರ್ಣಉಪಾಸನೆಯಲ್ಲ. ಯಾರು ಶಕ್ತಿಯುಳ್ಳ ಶಿವನ ಉಪಾಸನೆಯನ್ನು ಪಂಚಾಚಾರ ಅಷ್ಟಾವರಣ ಷಟ್‌ಸ್ಥಲಗಳ ಪ್ರಕಾರ ಮಾಡುವರೋ ಅವರೆಲ್ಲರೂ ವೀರಶೈವರೇ ಸರಿ. ಇದೊಂದು ವಿಶಿಷ್ಟ ಜಾತಿಯಲ್ಲ. ಪ್ರತ್ಯೇಕ ಒಂದು ಕುಲವಲ್ಲ. ವಿಶ್ವ ಕಲ್ಯಾಣವನ್ನು ಸಾಧಿಸುವ ಮತವಿದಾಗಿದೆ. ವಿಶ್ವಧರ್ಮದ ನಿಜ ಸ್ವರೂಪ ಇದರಲ್ಲುಂಟು. ಸಕಲ ಜೀವಾತ್ಮಂಗೆ ಲೇಸನೇ ಬಯಸುವವರೇ ಕುಲಜರೆಂದು ಹೇಳುವ ವಿಶ್ವಧರ್ಮವಿದಾಗಿದೆ.

## (೭) ಜಾತಿಭೇಧವಿಲ್ಲ.

ಉದ್ಯೋಗದಿಂದ ಬಂದ ಜಾತಿ ಕುಲಗಳನ್ನು ವೀರಶೈವರು ಒಪ್ಪುವದಿಲ್ಲ. ಲಿಂಗಾಂಗಿಗಳನ್ನೆಲ್ಲ ಒಂದೇ ಎಂಬೆ ಶಿವಭಕ್ತರೆಲ್ಲ ಒಂದೇ ಎಂದು ನಂಬಿದವರು. ಭಕ್ತ+ಭವಿ ಎಂಬ ಎರಡೇ ಜಾತಿಗಳು. ಅದಕ್ಕಾಗಿ ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ ಆಶೆಯಾಮಿಷ ರೋಷ ಹರುಷಾದಿ ವಿಷಯಗಳೆಲ್ಲ ಒಂದೇ. ಏನನೋದಿ ಏನಕೇಳಿ ಏನುಫಲ ಕುಲಜನೆಂಬುದಕ್ಕೆ ಆವುದು ದೃಷ್ಟ। ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ। ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ। ಎಂದುದಾಗಿ ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ? । ಇದು ಕಾರಣ ಕೂ. ಸ. ದೇವ. ಲಿಂಗಸ್ಥಲವನರಿದವನೇ ಕುಲಜನು ॥ ಉದ್ಯೋಗಗಳೆಲ್ಲ ಹೊಟ್ಟೆ ಬಟ್ಟೆಯ ಪೂರ್ತೆ ಇರುವವು. ಅವುಗಳಲ್ಲಿ ಭೇದವಿಲ್ಲ. ಅದಕ್ಕೆ ಉದ್ಯೋಗ

ದಿಂದ ಬಂದ ಜಾತಿಗಳಿಲ್ಲ ಸುಳ್ಳು. ಶರಣರು ಬೇರೆ ಬೇರೆ ಉದ್ಯೋಗ ಮಾಡುತ್ತಿದ್ದರೂ ಅದರಿಂದ ಉಚ್ಚ ನೀಚತ್ವಗಳು ಬಂದಿರಲಿಲ್ಲ. ಅದರಲ್ಲಿ ಊಟ ಲಗ್ನ ನೀರಬಳಿಕೆ ನಿರಾತಂಕವಾಗಿ ನಡೆಯುತ್ತಿದ್ದವು.

ಉಂಬಲ್ಲಿ ಉಡುವಲ್ಲಿ ಕ್ರಿಯೆಯುಳಿತ್ತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರೇನಯ್ಯಾ ಇವರ ಭಕ್ತರೆಂತೆಂಬೆನಯ್ಯಾ ಯುಕ್ತರೆಂತೆಂಬೆನಯ್ಯಾ ಕೂ. ಸ, ದೇ ಆವ ಕುಲದವರಾದರೇನು ಶಿವಲಿಂಗವಿದ್ದವನೇ ಕುಲಜನು। ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂ. ಸ, ಶರಣರೇ ಕುಲಜರು.

## (೮) ವರ್ಣಾಶ್ರಮಗಳಿಲ್ಲ.

ವೀರಶೈವರಲ್ಲಿ ವರ್ಣಗಳೆಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಪ್ರಭೇದಗಳಿಲ್ಲ. ವೀರಶೈವರು ಅತಿ ವರ್ಣಿಗಳು ಅಂದರೆ ಈ ವರ್ಣಗಳನ್ನು ಮೀರಿದವರು. ಅದರಂತೆ ಬ್ರಹ್ಮಚರ್ಯ ಗ್ರಹಸ್ಥ ವಾನಪ್ರಸ್ಥ ಸನ್ಯಾಸಗಳೆಂದು ಆಶ್ರಮಗಳೂ ಇಲ್ಲ. ೨೫ ವರ್ಷಕ್ಕೊಂದು ಆಶ್ರಮಗಳು ಎಲ್ಲರಿಗೂ ಬ್ರಹ್ಮಚರ್ಯ ಮೊದಲಿನ ೨೫ ವರ್ಷಗಳ ತನಕ ಬೇಕೇಬೇಕು. ಆದರೆ ಮುಂದಿನ ೩ ಆಶ್ರಮಗಳು. ಬೇಕಾಗಿಲ್ಲ. ಗಹಸ್ಥನಾಗಿದ್ದರೂ ಉಂಡ ಉಪವಾಸಿ ಬಳಸಿ ಬ್ರಹ್ಮಚಾರಿಯಂತೆ ಸಂಸಾರ ವಿಷಯಗಳನ್ನು ತ್ಯಜಿಸಿ ಹೆಂಡತಿಗೆ ತಾಯಿ ಎಂದು ಭಾವಿಸಿ ಸಹಜ ಇರುವನು. ಇವನು ಸನ್ಯಾಸಿಯಾಗಿ ಅರಣ್ಯಕ್ಕೆ ಓಡಿ ಹೋಗುವದಿಲ್ಲ. ಭೋಗ ತ್ಯಾಗಗಳನ್ನು ಸಮನ್ವಯಗೊಳಿಸಿದರು. ಭೋಗದಲ್ಲಿ ತ್ಯಾಗ, ತ್ಯಾಗದಲ್ಲಿ ಭೋಗಕಂಡ ಯೋಗಿಗಳಿರುವರು.

## (೯) ಸ್ತ್ರೀಯರಿಗೆ ಪುರುಷರಷ್ಟೇ ಅಧಿಕಾರ.

ವೀರಶೈವ ಮತದಲ್ಲಿ ಪುರುಷರಷ್ಟೇ ಸ್ತ್ರೀಯರಿಗೂ ಧರ್ಮದಲ್ಲಿ ಸಮಾಜದಲ್ಲಿ ಉದ್ಯೋಗದಲ್ಲಿ ಸರಿಸಮಾನ ಹಕ್ಕುಬಾಧ್ಯತೆಗಳಿರುವವು. ಉಳಿದ ಯಾವ ಮತದ ಸ್ತ್ರೀಯರಿಗೆ ಧರ್ಮದಲ್ಲಿ ಸಮಾಜದಲ್ಲಿ ಯಾವ ಹಕ್ಕುಗಳಿಲ್ಲ. ಸಂಸ್ಕಾರಗಳೂ ಇಲ್ಲ. ಸಾಯುವತನಕ ಶೂದ್ರರಾಗಿಯೇ ಉಳಿಯಬೇಕು. ವೀರಶೈವ ಸ್ತ್ರೀಯರಿಗೆ ಪುರುಷರಂತೆ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳುಂಟು. ಸ್ತ್ರೀಯರೂ ಕೂಡ ಗುರುಜಂಗಮರಾಗಿ ಅನ್ಯರಿಗೆ ಲಿಂಗಧಾರಣ ವೀರಶೈವ ದೀಕ್ಷೆಗಳನ್ನು ಮಾಡುವರು.

ಗುಡ್ಡಾಪೂರ ದಾನವ್ವ್ವ, ವಿಮಳಾದೇವಿ ಮೊದಲಾದವರು ಅನ್ಯರನ್ನು ವೀರಶೈವರನ್ನಾಗಿ ಮಾಡಿದ್ದಾರೆ. ಉಳಿದ ಎಲ್ಲ ಧರ್ಮದ ಸ್ತ್ರೀಯರಂತೆ ಗಂಡನೇ ಪರದೈವ ಗಂಡನೇ ಗುರು ಎಂದು ಇವರು ಹೇಳುವದಿಲ್ಲ. ಶರಣಸತಿ ಲಿಂಗಪತಿ ಎಂಬ ಭಾವವಿರುವದು. ಅದಕ್ಕೆ

ಎಲ್ಲರಂಥವನಲ್ಲನನಗಂಡ ಬಲ್ಲಿದನು ಪುಂಡ ಸುಳಿಯಲಿಲ್ಲ ಸುಳಿದು
ಶೃಂಗಾರವ ಮಾಡಲಿಲ್ಲ. ಎನ್ನೊಳಗೆ ತನ್ನ ಬೈಚಿಟ್ಟನಲ್ಲ.

ಎಂದು ಹೇಳಿದ್ದಾರೆ. ಆತ್ಮನೇ ಗಂಡ, ಶರೀರವೇ ಹೆಂಡತಿ ತತ್ವದವರು. ಹೀಗಂತಲೇ ಅಕ್ಕ, ಶಿವಪ್ರಿಯನಾಚಿ, ಬೊಂತಾದೇವಿ, ಗೊಗ್ಗವ್ವ ಮೊದಲಾದ ಸ್ತ್ರೀಯರು ಆಜನ್ಮ ಬ್ರಹ್ಮಚಾರಿಗಳಾಗಿ ಬಾಳಿ ತನ್ನ ಹಾಗೂ ಅನ್ಯರ ಉದ್ಧಾರ ಮಾಡಿದರು. ಲಿಂಗಧರಿಸಿ ಎಲ್ಲ ಸಂಸ್ಕಾರಗಳನ್ನು ಸ್ತ್ರೀಯರು ಪಡೆಯುವದರಿಂದ ಇವರಿಗೆ ಪಂಚಸೂತಕಗಳಿಲ್ಲ. ಮೈಲಿಗೆ ಮುಡಚಟ್ಟುಗಳಿಲ್ಲ. ಮಾನವನು ವ್ಯವಹಾರಕ್ಕೆ ಮಾತ್ರ ಗಂಡ ಹೊರತು ಆತ್ಮೋದ್ಧಾರಕ್ಕೆ ಗಂಡನಲ್ಲ ಗುರುವೂ ಅಲ್ಲ.

## (೧೦) ನೀತಿ + ೧೧ ಧರ್ಮ ಅಂದರೇನು

ಮಾನವನು ಮಾನವರ ಕೂಡ ಮಾನವನು ಜೀವಿಗಳ ಕೂಡ ಮಾನವನು ಪ್ರಾಣಿಕೋಟಿಯ ಕೂಡ ಹೇಗೆ ನಡೆಯಬೇಕೆಂಬುದನ್ನು ಅಂದರೆ ತನಗೆ ಪಾರಮಾರ್ಥಿಕವಾಗಿ ಹಿತವಾಗುವಂತೆ ಅನ್ಯರಿಗೂ ಇಹ ಪರದಲ್ಲಿ ಹಿತವಾಗುವಂತೆ ಪರರಿಗೆ ಪೀಡೆಯಾಗದಂತೆ ನಡೆದುಕೊಳ್ಳುವದೇ ನೀತಿ ಎನಿಸುವದು. ಈಪ್ರಕಾರ ಮಾನವನು ಮಾನವಕೋಟಿ ಪ್ರಾಣಿಕೋಟಿಗಳಿಗೆ ಪೀಡೆಯಾಗದಂತೆ ಅವುಗಳಿಗೆ ಹಿತವಾಗುವಂತೆ ನಡೆದುಕೊಳ್ಳುವದಲ್ಲದೆ ಮಾನವನು ದೇವರ ಕೂಡ ಲಿಂಗಾಂಗ ಸಮರಸವಾಗುವಂತೆ ಸರ್ವಾಂಗ ಲಿಂಗಿಯಾಗುವಂತೆ ಶಿವಜೀವರ ಐಕ್ಯವಾಗುವಂತೆ ಜೀವನ್ಮುಕ್ತನಾಗುವಂತೆ ನಡಕೊಳ್ಳುವದೇ ಧರ್ಮವೆನಿಸುವದು. ಇದು ಶಿವಜೀವರ ಐಕ್ಯವನ್ನು ಮಾಡುವ ಕಟ್ಟಳೆ ನಿಯಮ ಕಾಯ್ದೆ ಕಾನೂನಗಳನ್ನು ಹೇಳುವದು.

## (೧೨) ವೀರಶೈವ ಧರ್ಮದಲ್ಲಿ ಏನೇನು ಅಡಕವಾಗಿರುವದು?

ಈ ಧರ್ಮದಲ್ಲಿ ನೀತಿ ಪ್ರಧಾನವಾದ ಪಂಚಾಚಾರ. ಕ್ರಿಯಾ ಪ್ರಧಾನವಾದ ಅಷ್ಟಾವರಣಗಳು, ತತ್ವಪ್ರಧಾನವಾದ ಷಟ್‌ಸ್ಥಲಗಳು ಬರುವವು. ಇವು ವೀರಶೈವನ ಶರೀರ ಉಸಿರು ಪ್ರಾಣ ಜೀವಗಳಿದ್ದಂತೆ ಇರುವವು.

### (೧೩) ಪಂಚಾಚಾರಗಳು.

ಲಿಂಗಾಚಾರ ಸದಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರ ಎಂದು ಐದು.

### ಜೀವ ಶುದ್ಧಿ.

ಲಿಂಗಾಚಾರ— ನಿತ್ಯ ೧-೨-೩ ವೇಳೆ ಲಿಂಗ ಪೂಜೆ ಮಾಡುವದು. ಲಿಂಗದಲ್ಲಿ ಇಷ್ಟ-ಪ್ರಾಣ-ಭಾವ ಇದರಲ್ಲಿ ಪುನಃ ಆಚಾರಲಿಂಗ ಗುರು ಲಿಂಗ ಶಿವಲಿಂಗ, ಜಂಗಮಲಿಂಗ ಪ್ರಸಾದಲಿಂಗ, ಮಹಾಲಿಂಗ ಎಂದು ಆರು ಲಿಂಗಗಳಾಗುವವು. ಇವೆಲ್ಲ ಭಕ್ತಿಜ್ಞಾನ ಕ್ರಿಯೆಗಳನ್ನೇ ಹೇಳುವವು. ಇಷ್ಟಲಿಂಗದಿಂದ ತನು, ಪ್ರಾಣಲಿಂಗದಿಂದ ಮನ, ಭಾವ ಲಿಂಗದಿಂದ ಭಾವ ಶುದ್ಧಿಯಾಗುವದು. ಒಟ್ಟಿನಲ್ಲಿ ಲಿಂಗಾಚಾರದಿಂದ ಜೀವಶುದ್ಧಿಯಾಗುವದು.

### ಮನಶುದ್ಧಿ.

ಸದಾಚಾರ— ಸತ್‌ಆಚಾರ ಒಳ್ಳೇ ಆಚಾರ ಸತ್ಯವಾದ ನಡತೆ ತನಗೂ ಅನ್ಯರಿಗೂ ಹಿತವಾಗುವಂತೆ ಪರರಿಗೆ ಪೀಡೆಯಾಗದಂತೆ ನಡೆದುಕೊಳ್ಳುವದೇ ಸದಾಚಾರ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರಹಳಿಯಲುಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲ ಸಂಗನ ಒಲಿಸುವ ಪರಿ ಇದು ಸಪ್ತ ಶೀಲಗಳನ್ನು ಹೇಳುವದು. ಇದರಿಂದ ಮನಶುದ್ಧಿಯಾಗುವದು ಸುಮನವಾಗುವದು.

### ಶರೀರ ಶುದ್ಧಿ.

ಶಿವಾಚಾರ— ಶಿವಭಕ್ತರನ್ನೆಲ್ಲ ಒಂದೆ ಎಂಬೆ. ಲಿಂಗಾಂಗಿಗಳೆಲ್ಲ ಒಂದೇ ಎಂಬ ತತ್ವದ ಪ್ರಕಾರ ಯಾವ ಜಾತಿಭೇದ ಮಾಡದೆ ಅನ

ನೀರ ಬಳಿಕಿ ಲಗ್ನ ವ್ಯವಹಾರ ಮಾಡುವದಿರದೇ ಶಿವಾಚಾರವಾಗಿರುವದು. ಭಕ್ತರಲ್ಲಿ ಬಂಧುಬಾಂಧವ್ಯ ಸರಿಯಾಗಿ ಬೆಳಿಸುವದು. ಇದರಿಂದ ಶರೀರ ಶುದ್ಧಿಯಾಗುವದು. ಮಹಾತ್ಮನು ಆಗುವದು. ಸಮಾಜದಲ್ಲಿ ಸಮತೆ ಬೆಳೆದು ವಿಷಮತೆ ಹೋಗುವದು.

### ನಡೆ ಶುದ್ಧಿ.

ಗಣಾಚಾರ— ಭಕ್ತರಿಗೆ ಲಿಂಗಾಯತರಿಗೆ ಲಿಂಗಕ್ಕೆ ಧರ್ಮಕ್ಕೆ ಅನ್ಯಾಯ ಮಾಡುವಂಥವರನ್ನು ಯೋಗ್ಯ ರೀತಿಯಿಂದ ಪ್ರತಿಭಟಿಸುವದೇ ಆಗಿದೆ. ಇದರಿಂದ ನಡೆಶುದ್ಧಿಯಾಗುವದು.

### ನುಡಿಶುದ್ಧಿ.

ಭೃತ್ಯಾಚಾರ:— ಶಿವಭಕ್ತರ ಕಲ್ಯಾಣಕ್ಕಾಗಿ ಶಿವಭಕ್ತರ ಉದ್ಧಾರಕ್ಕಾಗಿ ಅವರ ಸೇವೆ ಮಾಡುವದೇ ಇದಾಗಿದೆ. ಇದರಿಂದ ನುಡಿ ಶುದ್ಧಿವಾಗುವದು. ನಿರಹಂಕಾರಿಯಾಗುವನು. ಪಂಚಾಚಾರಗಳಿಂದ ಆಧಾರ ಶುದ್ಧಿಯಾಗುವದು. ವೀರಶೈವರು ಈ ಪಂಚಾಚಾರಕ್ಕೆ ಒಳ್ಳೇ ಮಹತ್ವಕೊಟ್ಟಿದ್ದಾರೆ. ಇದೇ ತತ್ವದ ಮೇಲೆ ಪಂಚಶೀಲಗಳನ್ನು ರಾಷ್ಟ್ರ ರಾಷ್ಟ್ರಗಳ ನಡುವೆ ಪ್ರೇಮ ಬೆಳಿಸಲಿಕ್ಕೆ ಜವಹರಲಾಲರು ಉಪಯೋಗಿಸುತ್ತಿರುವರು. ಇದರಿಂದ ಜಗತ್ತಿನಲ್ಲಿ ಎಷ್ಟೋ ಸುಖಶಾಂತಿಗಳು ನೆಲಿಸುತ್ತಿರುವದು ಕಂಡುಬರುವದು. ಈ ಪಂಚಾಚಾರಗಳ ಮೇಲೆ ವೀರಶೈವ ಧರ್ಮವೆಂಬ ಮಹಾಮಂದಿರವು ನಿಂತಿರುವದು. ಇವು ಸರಿಯಾಗಿದ್ದರೆ ಧರ್ಮ ಸರಿಯಾಗಿರುವದು. ಇವು ಕೆಟ್ಟರೆ ಧರ್ಮವೂ ಹೇಳ ಹೆಸರಿಲ್ಲದೆ ಹೋಗುವದು. ನೀತಿಯ ನೆಲಗಟ್ಟೇ ಈ ಪಂಚಾಚಾರಗಳಿರುವವು. ಧರ್ಮದ ತಳಹದಿ ಇದೇ ಆಗಿರುವದು.

### (೧೪) ಅಷ್ಟಾವರಣಗಳು

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂದು ಬಹಿರಂಗ, ಅಂತರಂಗ ಅಷ್ಟಾವರಣಗಳುಂಟು. ಬಹಿರಂಗ ಅಷ್ಟಾವರಣಗಳು ಎಲ್ಲರಿಗೂ ಗೊತ್ತು. ಗುರುವಿನ ಕಡೆಯಿಂದ ಲಿಂಗವನ್ನು ಪಡಕೊಂಡು ಗೌಪ್ಯವಾಗಿ ಅದರ ಮಂತ್ರವನ್ನು ಉಪದೇಶ ಮಾಡಿಕೊಂಡು ಭಕ್ತಿ, ಜ್ಞಾನ, ಕ್ರಿಯೆಗಳನ್ನು ಮಾಡಿ ಬಂದ ಫಲಗಳನ್ನು ಪರರಿಗೆ ಕೊಟ್ಟು ಉಳಿದ ಅಲ್ಪವನ್ನೇ

ಪ್ರಸಾದ ರೂಪದಿಂದ ಸೇವಿಸಿ ಜಲವನ್ನು ಪರಮಾತ್ಮನ ಪಾದೋದಕ ವೆಂದು ಕುಡಿದು ಮಹಾ ವಿಭೂತಿ ಪುರುಷನಾಗಿ ರುದ್ರಾಕ್ಷಿಯನ್ನು ಅಂದರೆ ತ್ರಿನೇತ್ರವನ್ನು ಪಡೆದು ಅಂದರೆ ಜ್ಞಾನನೇತ್ರ ಪಡೆಕೊಂಡು ಜಂಗಮಮೂರ್ತಿ ಆಗೆಂದು ಈ ಅಷ್ಟಾವರಣಗಳ ಸಾರವಾಗಿರುವದು. ಈ ಪ್ರಕಾರ ಅಷ್ಟಾವರಣಗಳನ್ನು ಅನುಸಂಧಾನ ಮಾಡುವದರಿಂದ ತಾನೇ ಈ ಅಷ್ಟಾವರಣದ ಸ್ವರೂಪವನ್ನೇ ಹೊಂದುವನು. ತಾನೇ ಗುರು ಲಿಂಗ ಜಂಗಮನಾಗಲಿಕ್ಕೆ ಬರುವದು. ಆಗ ಅವನೇ ವಿಭೂತಿ ರುದ್ರಾಕ್ಷಿ ಯಾಗಿ (ಜ್ಞಾನಿಯಾಗಿ) ಮಂತ್ರಮಯನಾಗುವನು. ಆಗ ಅವನು ಮುಟ್ಟಿದ ಜಲ ಪಾದೋದಕ. ಮುಟ್ಟಿದ್ದೆಲ್ಲ ಪ್ರಸಾದ ಆಗಿ ಬಿಡುವದು. ಇದೇ ಅಷ್ಟಾವರಣದ ಗುಟ್ಟು. ಇದರಂತೆ ನಡೆಯುವ ಪ್ರತಿ ಮಾನ ವನಿಗೆ ಹೀಗೆ ಆಗಲಿಕ್ಕೆ ಬರುವದು ಇದರ ಮೇಲಿಂದ ಈಗಿನ ಜಾತಿಯ ಗುರು ಜಂಗಮತ್ವಗಳು ಸರಿಯಿಲ್ಲೆಂದೆನಿಸುವದು. ಗುರು ಜಂಗಮತ್ವದ ಈಗಿನ ಗುತ್ತಿಗೆಯ ಪದ್ಧತಿ ಹೋಗಬೇಕು. ಜ್ಞಾನ, ನೀತಿಗಳ ಗುರು ಜಂಗಮತ್ವಗಳು ನಿಜವಾಗಿ ಬಳಕೆಯಲ್ಲಿ ಬರಬೇಕು. ಆಗ ಮಾತ್ರ ಧರ್ಮದಲ್ಲಿ ನೆಮ್ಮದಿಯಾಗಿ ಪರ ಧರ್ಮಕ್ಕೆ ಹೋಗುವದನ್ನು ನಿಲ್ಲಿ ಸುವರು.

## (೧೫) ಷಟ್‌ಸ್ಥಲಗಳು.

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಆರುಸ್ಥಲ ಗಳು. ಇವುಗಳನ್ನು ಎಲ್ಲರೂ ಹೊಂದಲೇಬೇಕು. ಇವು ಜಾತಿವಾಚಕವಲ್ಲ. ಯೋಗ್ಯತೆಯ ಮೇಲಿಂದ ಬಂದ ಸ್ಥಲಗಳು. ಮೊದಲ ಎಲ್ಲರೂ ಭಕ್ತರೇ ಸರಿ. ಜ್ಞಾನ ಬಂದ ಬಳಿಕ ಆ ಭಕ್ತನೇ ಮಹೇಶನಾಗುವನು. ಸರಿಯಾಗಿ ಕಾಯಕ ಮಾಡಲಿಕ್ಕೆ ಬಂದರೆ ಆ ಮಹೇಶನೇ ಪ್ರಸಾದವೆನಿಸುವನು. ಹೀಗೆ ಭಕ್ತಿ ಜ್ಞಾನ ಕರ್ಮಗಳನ್ನು ಸಮನ್ವಯಗೊಳಿಸಿ ಆಚರಿಸಲಿಕ್ಕೆ ಬಂದರೆ ಅವನೇ ಪ್ರಾಣಲಿಂಗಿ ಆಗುವನು. ತಾನೇ ಶಿವನೆನಿಸುವನು. ಆಗ ಅವನೇ ಶರಣನಾಗುವನು. ಎಲ್ಲವೂ ಶಿವಸ್ವರೂಪವೇ ಕಾಣುವದು. ಹೀಗಾಗಿ ಅವನೇ ಜೀವನ್ಮುಕ್ತನೆನಿಸಿ ಐಕ್ಯಸ್ಥಲವನ್ನು ಹತ್ತುವನು. ಎಲ್ಲ ರನ್ನು ಪ್ರೀತಿಸಿ ಜ್ಞಾನಗಳಿಸಿ ಕರ್ಮ ಫಲತ್ಯಾಗ ಮಾಡಿ ಆನಂದ ಹೊಂದಿ ಬಲಗಳಿಸಿ ಪರರಿಗಾಗಿ ಬಾಳುವೆ ನಡಿಸಿ ಸಮರಸವಾಗುವದೇ ಷಟ್ ಸ್ಥಲದ ಸಾರಸರ್ವಸ್ವವಾಗಿದೆ.

## (೧೬) ಷಟ್‌ಸ್ಥಲಗಳೇ ೩೬ ಸಲಗಳಾಗುವವು.

ಈ ಆರೂ ಸ್ಥಲದವರಿಗೆ ಈ ಎಲ್ಲ ಆರೂ ಸ್ಥಲಗಳನ್ನು ನಿತ್ಯ ರೂಢಿಸಿ ಅನುಭವಿಸಬೇಕಾಗುವದು. ಹೀಗಾಗಿ ಭಕ್ತನ ಭಕ್ತಿ, ಭಕ್ತನ ಜ್ಞಾನ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗ ಭಕ್ತನ ಶರಣ ಭಕ್ತನ ಐಕ್ಯ ಹೀಗೆ ನಿತ್ಯ ಭಕ್ತನು ಅನುಭವಿಸಿ ರೂಢಿ ಮಾಡ ಇದರಂತೆ ಸಾಗಬೇಕು. ಅದರಂತೇ ಮಹೇಶನ ಭಕ್ತಿ, ಮಹೇಶ ಜ್ಞಾನ, ಮಹೇಶನ ಪ್ರಸಾದ, ಮಹೇಶನ ಪ್ರಾಣಲಿಂಗ ಮಹೇಶನ ಶರಣ ಮಹೇಶನ ಐಕ್ಯ ಪ್ರಸಾದಿಯ ಭಕ್ತಿ, ಪ್ರಸಾದಿಯ ಜ್ಞಾನ ಪ್ರಸಾದಿಯ ಪ್ರಸಾದ ಪ್ರಸಾದಿಯ ಪ್ರಾಣಲಿಂಗ, ಪ್ರಸಾದಿಯ ಶರಣ, ಪ್ರಸಾದಿಯ ಐಕ್ಯ ಇದರಂತೆ ಪ್ರಾಣಲಿಂಗ ಶರಣ ಐಕ್ಯರಿಗೂ ಆರಾರು ಸ್ಥಲಗಳು ನಿತ್ಯ ಸಂಬಂಧ ವಾಗುವವು.

## (೧೭) ಏಕೋತ್ತರ ಶತಸ್ಥಲಗಳು.

ಶಿವತತ್ವವು ಮೊದಲಿಗೆ ಎಲ್ಲವನ್ನೂ ಸೂಕ್ಷ್ಮವಾಗಿ ಒಳಗೊಂಡು ಒಂದೇ ಒಂದಾಗಿ ಬಯಲಿಗನಂತೆ ತನ್ನ ತಾನರಿಯದೇ ಅನಂತ ಕಾಲ ಬಿದ್ದು ಬಿಟ್ಟದ್ದು ಅದಕ್ಕೆ ಸ್ಥಲವೆಂದು ಹೆಸರು. ಈಗ ಅವನಲ್ಲಿ ತನ್ನ ಪೂಜೆ, ಧ್ಯಾನಾದಿಗಳು ನಡೆಯಬೇಕೆಂದೂ ಅದರ ಲೀಲೆಯಾಡಬೇಕೆಂದೂ ಆ ಪರಾತ್ಪರ ಪರಶಿವನಲ್ಲಿ ದೋರಿತು—

> ಏನೆಂದೆನಲಿಲ್ಲದ ಮಹಾ ಘನವು ತನ್ನ ಲೀಲೆಯಿಂ ತಾನೆ ಸ್ವಯಂಭು ಲಿಂಗ ಸ್ಥಲವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ, ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ, ಆತ್ಮದಿಂದಾದುದು ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್ಪು, ಅಪ್ಪುವಿನಿಂದ ಪೃಥ್ವಿ, ಪೃಥ್ವಿಯಿಂದಾಯಿತ್ತು ಸಕಲ ಜಗಜೀವವೆಲ್ಲವೂ ನಿಮ್ಮ ನೆನಹಿನಿಂದಾದವು ಸಿಮ್ಮಲಿಗೆಯ ಚನ್ನರಾಮಾ॥

ಈ ಪ್ರಕಾರ ಜಗದ ಉತ್ಪತ್ತಿಯಾದುದನ್ನು ಹೇಳಿದೆ. ಹೀಗೆ ಆ ಸ್ಥಲದಲ್ಲಿ ಸಂಕಲ್ಪ ದೋರಲು ಲಿಂಗ, ಅಂಗಗಳೆಂದು ಎರಡಾಯಿತು. ಸಕಲ ಜೀವಿಗಳು ಈ ಲಿಂಗ + ಅಂಗಗಳಿಂದ ಕೂಡಿಕೊಂಡು ಕಾರ್ಯ ನಡಿಸಿರುವವು. ಏನೆಂದೆನಲಿಲ್ಲದ ಮಹಾ ಘನವೇ ಸ್ಥಲವೆನಿಸುವದು.

ಈ ಸ್ಥಲದಲ್ಲಿ ಸಂಕಲ್ಪ ದೋರಲು ಹೀಗೆ ಲಿಂಗ + ಅಗಗಳಾದವು. ಲಿಂಗದಲ್ಲಿ ಇಷ್ಟ+ಪ್ರಾಣ+ಭಾವ ಲಿಂಗಗಳು. ಇವುಗಳಲ್ಲಿ ಎರಡೆರಡ ರಂತೆ ಆಚಾರಲಿಂಗ+ಗುರುಲಿಂಗ, ಶಿವಲಿಂಗ+ಜಂಗಮಲಿಂಗ, ಪ್ರಸಾದಲಿಂಗ+ಮಹಾಲಿಂಗ ಹೀಗೆ ಆರು ಲಿಂಗಸ್ಥಲಗಳಾಗುವವು. ಪ್ರತಿಯೊಂದು ಲಿಂಗಸ್ಥಲದಲ್ಲಿ ೯ ರಂತೆ ಉಪಲಿಂಗ ಸ್ಥಲಗಳಲ್ಲದೆ ಪ್ರಸಾದಲಿಂಗದಲ್ಲಿ ಮೂರು ಹೆಚ್ಚಿಗೆ ಉಪಲಿಂಗ ಸ್ಥಲಗಳಾಗುವವು. ಅಂದರೆ ಲಿಂಗ ಸ್ಥಲಗಳಲ್ಲಿ ೫೭ ಉಪಲಿಂಗ ಸ್ಥಲಗಳಾಗುವವು. ಮುಂದೆ ಅಂಗ ಸ್ಥಲದಲ್ಲಿ ತ್ಯಾಗಾಂಗ, ಭೋಗಾಂಗ, ಯೋಗಾಂಗ ಇವು ಮೂರು ಅಂಗಸ್ಥಲಗಳಲ್ಲಿ ಪುನಃ ಎರಡೆರಡರಂತೆ ಭಕ್ತ, ಮಹೇಶ್ವರ, ಪ್ರಸಾದಿ ಪ್ರಾಣಲಿಂಗ, ಶರಣ ಐಕ್ಯ ಎಂದು ಆರು ಅಂಗ ಸ್ಥಲಗಳಾಗುವವು. ಈ ಆರರಲ್ಲಿ ಒಟ್ಟು ೪೪ ಉಪಾಂಗ ಸ್ಥಲಗಳಾಗುವವು. ಅಂತು (೧೦೧) ಏಕೋತ್ತರ ಶತಸ್ಥಲಗಳಾಗುವವು. ಈ ಉಪಾಂಗ ಸ್ಥಲಗಳು ಸಾಧನ ವಾಗಿಯೂ, ಉಪಲಿಂಗ ಸ್ಥಲಗಳು ಸಾಧ್ಯವಾಗಿಯೂ ಇರುವವು. ಈ ಅಂಗಸ್ಥಲಗಳಿಗೆ ನುಡಿ ಎಂತಲೂ, ಲಿಂಗಸ್ಥಲಗಳಿಗೆ ನಡೆಯೆಂತಲೂ ಹೇಳಬಹುದು. ಬರಿಯ ನುಡಿಗೆ ವೀರಶೈವ ಮತದಲ್ಲಿ ಏನೂ ಮಹತ್ವ ವಿಲ್ಲ. ನುಡಿದಂತೆ ನಡೆದರೆ ಮಾತ್ರ ಅದಕ್ಕೆ ಬೆಲೆ ಇಲ್ಲವಾದರೆ ಏನೂ ಬೆಲೆ ಇಲ್ಲ. ಆದಕ್ಕಾಗಿ ನುಡಿದಂತೆ ನಡೆಯಾದರೆ ಇದೇ ಜನ್ಮ ಕಡೆ ಎಂದಿದ್ದಾರೆ. ನಡೆನುಡಿಗೆ ತಕ್ಕ ಮೇಳ ಬೇಕೆಂದು ಶರಣರೆಲ್ಲರೂ ಹೇಳಿದ್ದಾರೆ.

ಆ ಪರಾತ್ಪರ ಪರಮಾತ್ಮನಲ್ಲಿ ಸಂಕಲ್ಪ ದೋರಲು ಅವನ ಚಿತ್ತ ಶಕ್ತಿಯೇ ಅಂಗ—ಅಂಗವೆಂದು ಉಪಾಸ್ಯ ಉಪಾಸಕರೆಂದು ಎರಡು ತೆರನಾಗಿತ್ತು. ಅಂಗ ಸ್ಥಲವನ್ನಾಶ್ರಯಿಸಿ ಭಕ್ತಿ ಎನಿಸಿತ್ತು. ಲಿಂಗ ಸ್ಥಲವನ್ನಾಶ್ರಯಿಸಿ ಶಕ್ತಿ ಎನಿಸಿತ್ತು. ಭಕ್ತಿಯೇ ನಿವೃತ್ತಿ, ಶಕ್ತಿಯೇ ಪ್ರವೃತ್ತಿ. ಅಂಗ ಆರು ಲಿಂಗ ಆರು ತೆರನಾದವು. ಇವುಗಳಲ್ಲಿ ಸದಾ ಹೋರಾಟ ನಡೆದಿರುವದು. ಕಡೆಗೆ ಈ ಹೋರಾಟದಲ್ಲಿ ಭಕ್ತಿಗೆ ಜಯ ಲಭಿಸುವದು. ಅದಕ್ಕೆ ಶಿವನಿಗಿಂತ ಶಿವಭಕ್ತರೇ ಅಧಿಕವೆಂದು ಗಾದೆ ಯಾಗಿದೆ.

ದೇವನೆಂದರೆ-ಅದೊಂದು ಬ್ರಹ್ಮಾಂಡದ ಮಹಾಜ್ಞಾನ ಚಕ್ರ. ಅದರ ಕೇಂದ್ರ ಎಲ್ಲ ಕಡೆಗಿದ್ದು ಆದರ ಪರೀಘವು ಸಹ ಎಲ್ಲ ಕಡೆಗೆ

ಇರುವದು. ಜೀವನೆಂದರೆ–ಈ ಮಹಾ ಚಕ್ರದೊಳಗೆ ಅನಂತ ಚಕ್ರಗಳು ಚಕ್ರದೊಳಗೆ ಚಕ್ರಗಳು ಇದ್ದು ಅದರ ಕೇಂದ್ರವು ಹೃದಯದಲ್ಲಿ ಇರುವದು. ಅದರ ಪರೀಘವು ಶರೀರದಲ್ಲಿ ಇರುವದು. ಪ್ರಾಣಿಗಳು ಈ ಕೇಂದ್ರ–ಪರೀಘಗಳಿಂದಲೇ ಕೂಡಿ ಇರುವವು. ಕೇಂದ್ರಕ್ಕೆ ಸ್ಥಿತಿ, ಸ್ಥಲ, ಲಿಂಗವೆಂದೂ; ಪರೀಘಕ್ಕೆ ಗತಿ, ಕಲಾಶಕ್ತಿ, ಜಂಗಮಚರವೆಂದು ಸಾಂಕೇತಿಕ ಹೆಸರುಗಳುಂಟು. ಕೇಂದ್ರವು ಯಾವಾಗಲೂ ಸ್ಥಿರವಿರುವದು. ಪರೀಘವು ಯಾವಾಗಲೂ ಚರಿಸುವದು. ಸ್ಥಿರ–ಚರ ಸ್ಥಿತಿ–ಗತಿಗಳು, ಶಿವ–ಶಕ್ತಿಯರು, ಲಿಂಗ–ಜಂಗಮರು ಅವಿನಾಭಾವ ಸಂಬಂಧದಿಂದ ಒಂದೇ ಆಗಿರುವರು. ಹೀಗೆ ಒಂದೇ ಎರಡು ಎರಡೇ ಮೂರು ಮೂರೇ ಆರು ಆರೇ ಹದಿನೆಂಟು ಮೂವತ್ತಾರಾಗಿ ಏಕೋತ್ತರ ಶತಸ್ಥಲಗಳೂ ಸಹ ಆಗುವವು. ಇದೇ ವೀರಶೈವರ ತತ್ವಜ್ಞಾನವಾದ ಏಕೋತ್ತರ ಶತಸ್ಥಲಗಳ ಸಂಕ್ಷೇಪ ವಿವರಣೆ. ಇವೆಲ್ಲವುಗಳಿಂದ ತನು, ಮನ, ಬುದ್ಧಿ, ಚಿತ್ತ, ಅಹಂಕಾರ ಭಾವಗಳೆಲ್ಲ ಶುದ್ಧವಾಗಲು ಮಹಾತ್ಮನು ಸುಮನ, ಸುಬುದ್ಧಿ, ಸುಚಿತ್ರ, ನಿರಹಂಕಾರ, ನಿರ್ಭಾವಗಳಾಗಲು ಇಡಿ ಅಂಗದ ತುಂಬ ಶಿವಚೈತನ್ಯ ಶಿವಚಿತ್ಕಳೆಯು ಶಿವಪ್ರಕಾಶ ಬೆಳಗಹತ್ತುವದು. ೪೪ ಅಂಗಸ್ಥಲಗಳಿಂದ ಆಧಾರ ಶುದ್ಧಿಯಾಗಿ ಈ ೫೭ ಲಿಂಗಸ್ಥಲಗಳಂತೆ ಆಚರಣೆ ಆಗುವದು. ಹೀಗೆ ದ್ವೈತದಿಂದ ವಿಶಿಷ್ಟಕ್ಕೆ ಇದರಿಂದ ಅದ್ವೈತಕ್ಕೆ ವೀರಶೈವರು ಹೋಗುವರು. ಇದಕ್ಕಾಗಿ ವೀರಶೈವರು ಶಕ್ತಿವಿಶಿಷ್ಟಾದ್ವೈತಿಗಳೆಂದು ಹೇಳುವರು.

### (೧೮) ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ

ಭಾರತದಲ್ಲಿ ಅದೇಕೆ ಜಗತ್ತಿನಲ್ಲಿ ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಎಂದು ಮೂರೇ ಸಿದ್ಧಾಂತಗಳಲ್ಲಿ ಬಹುತರ ಎಲ್ಲರ ಸಿದ್ಧಾಂತಗಳು ಅಡಕವಾಗುವವು.

**ದ್ವೈತ**— ಜೀವಾತ್ಮ, ಪರಮಾತ್ಮ ಎಂಬ ಎರಡು ನಿರಂತರ ತತ್ವಗಳನ್ನು ನಂಬಿ ಜೀವ ಪರಮ, ಜೀವ ಜೀವ, ಜೀವ ಜಡ, ಜಡ–ಪರಮ ಜಡ ಜಡಗಳಲ್ಲಿ ಸಾದಾ ಭೇದ ಹೇಳುವರು.

**ವಿಶಿಷ್ಟಾದ್ವೈತ**— ಚಿತ್–ಅಚಿತ್ ಈಶ್ವರ ಮಾತನ್ನು ಒಪ್ಪುವರು. ಚಿತ್ (ಜೀವ) ಅಚಿತ್ (ಪ್ರಕೃತಿ) ಇವು ಪ್ರತ್ಯೇಕವಾಗಿರದೇ

ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಸರ್ವದಾ ಸೇರುತ್ತವೆಂದು ಕಡೆಗೆ ಸಮನ್ವಯ ಗೊಳಿಸುವರು.

ಅದ್ವೈತ— ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂದು ಹೇಳುವರು. ಪರಬ್ರಹ್ಮನೊಬ್ಬನೇ ಸತ್ಯ. ಪರಶಕ್ತಿ ಇಲ್ಲ. ಈ ಜಗತ್ತು ಭ್ರಮೆ, ಭ್ರಾಂತಿ, ಮಾಯೆ ಎನುವರು. ನಸುಗತ್ತಲಲ್ಲಿ ಹಗ್ಗನ್ನು ನೋಡಿ ಹಾವೆಂದು ಭ್ರಮಿಸಿದಂತೆ ಜಗವೇ ಇಲ್ಲ. ಇದೆಲ್ಲ ಸ್ವಪ್ನದಂತೆ ಸುಳ್ಳು, ಶರೀರ ಸುಳ್ಳು, ಶರೀರ ಕ್ರಿಯೆಗಳೆಲ್ಲ ಸುಳ್ಳು ಎಂದು ಹೇಳುವರು. ಎಲ್ಲವೂ ಪರಬ್ರಹ್ಮವೇ ಇರುವದೆನ್ನುವರು.

ಆದರೆ ವೀರಶೈವ ಸಿದ್ಧಾಂತವೇ ಬೇರೆ ಕಂಡರೂ ಪರಶಕ್ತಿಯಿಂದ ಕೂಡಿಕೊಂಡು ಮೇಲಿನ ಮೂರೂ ಸಿದ್ಧಾಂತಗಳನ್ನು ಸಮನ್ವಯ ಗೊಳಿಸಿಕೊಂಡು ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ, ದ್ವೈತಾದ್ವೈತ ಎಂದು ಹೆಸರು ಪಡೆದಿರುವದು. ಪರಶಿವ, ಪರಶಕ್ತಿ, ಪ್ರಕೃತಿ ಪುರುಷರನ್ನು ಒಪ್ಪಿಕೊಂಡಿದ್ದಾರೆ.

ಪರಶಿವನಲ್ಲಿ ಪರಶಕ್ತಿಯು ಕಾರ ಮೇಘದೊಳಗಿನ ಮಿಂಚಿನಂತೆ, ಅಲಿಯೊಳಗಿನ ತೇಜದಂತೆ, ನೀರೊಳಗಿನ ತಣ್ಪಿನಂತೆ, ಶಿಲೆಯೊಳಗಿನ ಪಾವಕದಂತೆ, ಹಾಲಿನೊಳಗಿನ ಬೆಣ್ಣೆಯಂತೆ, ಸೂರ್ಯನೊಳಗಿನ ಪ್ರಕಾಶದಂತೆ, ಚಂದ್ರನೊಳಗಿನ ತಂಪಿನಂತೆ, ಮೆಣಸಿನಕಾಯಿಯೊಳಗಿನ ಕಾರಿನಂತೆ, ಬೆಲ್ಲದೊಳಗಿನ ರುಚಿಯಂತೆ, ಶಬ್ದದೊಳಗಿನ ಅರ್ಥದಂತೆ, ಪುಷ್ಪದೊಳಗಿನ ಗಂಧದಂತೆ,

ಅವಿನಾಭಾವ ಸಂಬಂಧದಿಂದ ಕೂಡಿಕೊಂಡಿದ್ದಾರೆ. ಪ್ರಕೃತಿಯು ಜಡಶಕ್ತಿ. ಪುರುಷನು ಈ ಪ್ರಕೃತಿಯ ಜಾಡ್ಯಕ್ಕೊಳಗಾಗಿರುವನು. ಆದರಿಂದ ಅವನು ಜೀವನೆನಿಸುವನು. ಜೀವನು ಈ ಜಾಡ್ಯದಿಂದ ಬಿಡುಗಡೆಯಾಗಿ ಸಂಪೂರ್ಣ ಅರಿವಿನಿಂದ ಬೆರೆತರೆ ಅವನೇ ಶಿವನಾಗುವನು. ಅದೇ ಶಿವಜೀವೈಕ್ಯವೆನಿಸುವದು. ಪರಶಕ್ತಿಯುತ ಚೈತನ್ಯ ಸೂಚಕವಾಗಿರುವಳು. ಪರಶಕ್ತಿಯುತ ಪರಶಿವನು ಚೈತನ್ಯಾತ್ಮಕನಾಗಿರುವನು. ಸೂಕ್ಷ್ಮ ಚಿದಚಿದಾತ್ಮಕ ಶಕ್ತಿಯುಕ್ತನಾದ ಶಿವ ಸ್ಥೂಲ ಚಿದಚಿದಾತ್ಮಕ ಶಕ್ತಿಯುಕ್ತನಾದ ಜೀವ ಇವರ ಅದ್ವೈತಸಮರಸವೇ ಶಕ್ತಿ ವಿಶಿಷ್ಟಾದ್ವೈತವೆನಿಸುವದು. ಶಕ್ತಿ ವಿಶಿಷ್ಟ

ಜೀವ (ಅಂಗ) ಶಕ್ತಿ ವಿಶಿಷ್ಟ. ಜೀವ (ಲಿಂಗ) ಇವರ ಸಾಮರಸ್ಯವೇ ಶಕ್ತಿ ವಿಶಿಷ್ಟಾದ್ವೈತವೆನಿಸುವದು. ಪರಶಿವನಲ್ಲಿ ಪರಶಕ್ತಿ ಸ್ವಭಾವನಿದ್ದ ವಾಗಿ ಸತ್ಯನಿತ್ಯವಾಗಿ ಅವಿನಾಭಾವ ಸಂಬಂಧದಿಂದ ಇದ್ದು ಕ್ರಿಯಾ ಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ ಆದ ಶಕ್ತಿ ಪರಾಶಕ್ತಿ ಚಿತ್‌ಶಕ್ತಿ ಎಂದೆ ನಿಸುವಳು. ಇದರಿಂದ ವಿಚಾರ-ಭಾವ (ಭಕ್ತಿ) ಮಿದುಳ-ಹೃದಯ ಜ್ಞಾನ-ಶಕ್ತಿ ಲಿಂಗ-ಅಂಗಗಳನ್ನು ಕೂಡಿಸುವದಲ್ಲದೆ ಅದನ್ನು ಕ್ರಿಯೆಯ ಮೂಲಕ ಆಚರಣೆಯಲ್ಲಿ ತರುವದಾಗಿದೆ. ಇದು ದ್ವೈತ ವಿಶಿಷ್ಟಾದ್ವೈತ ಅದ್ವೈತಗಳು ಕೂಡಿಕೊಂಡು ಮೆರಗುವದು. ಹೀಗಾಗಿ ಜಗತ್ತಿನ ಎಲ್ಲ ರಿಗೂ ಇದರಲ್ಲಿ ಸ್ಥಾನವಿರುವದು. ಇದು ದ್ವೈತದಿಂದ ಸಾಗಿ ವಿಶಿಷ್ಟ ದಲ್ಲಿ ಬೆಳೆದು ಅದ್ವೈತದಲ್ಲಿ ಕೊನೆಗೊಳ್ಳುವದು. ಅದಕ್ಕಾಗಿ ಇದಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂದು ಕರೆದರು. ಸಾಧಕನು ಮೊದಲಿಗೆ ದ್ವೈತಿ ಯಾಗಿರುವದು ಸಹಜವದೆ. ಸಾಧನ ಬಲಿತಂತೆ ವಿಶಿಷ್ಟನಾಗುವನು. ಸಾಧನದ ಗುರಿ ಮುಟ್ಟಿದಾಗ ಅದ್ವೈತಿಯಾಗುವನು. ಶಕ್ತಿ ಶಿವನೊಡನೆ ಸಮರಸವಾಗುವದಾಗಿದೆ. ಶಕ್ತಿ ಅಂದರೆ ಭಕ್ತಿ. ಭಕ್ತಿ, ಸಾಧನದಿಂದ ಬೆಳೆಬೆಳೆದು ದಿವ್ಯ ಜ್ಞಾನವಾಗುವದು. ಅದಕ್ಕಾಗಿ ಶಕ್ತಿ ಶಿವನೊಡನೆ ಒಂದಾಗಲು ನಿತ್ಯ ಅವನನ್ನು ಹೊಸ ಹೊಸ ಸಾಧನಗಳಿಂದ ಪೂಜಿ ಸುವಳು. ಶಿವನು-ಸ್ಥಿರ, ಲಿಂಗನೆನಿಸಿದರೆ; ಶಕ್ತಿ, ಚರ, ಜಂಗಮನೆನಿ ಸುವಳು ಸದಾ ಸ್ಥಿತ್ಯಂತರ ಹೊಂದುತ್ತ ನಡೆಯುವಳು ಆದರೂ ನಿತ್ಯ ಳಾಗಿರುವಳು. ನಿತ್ಯ ಸೃಷ್ಟಿ ಹೊಸಹೊಸದಾಗಿಯೇ ತೋರುವದು. ಸ್ಥಿರ ವಾದ ಶಿವಲಿಂಗದಲ್ಲಿ ಚರವಾದ ಜಂಗಮಶಕ್ತಿ ಬೆರೆತು ಬಿಡುವದೇ ಶಕ್ತಿ ವಿಶಿಷ್ಟಾದ್ವೈತದ ಸಾರ ಸರ್ವಸ್ವವಾಗಿದೆ. ಶಕ್ತಿ ಶಿವನಾಗುವದು. ಅಂಗ ಲಿಂಗವಾಗುವದು. ಜೀವ ಶಿವನಾಗುವದು. ಇದರ ಚರಮಗುರಿಯಾಗಿದೆ. ಶರೀರ ಜೀವ ಶಿವರೆಲ್ಲರೂ ಆಗ ಸಮರಸವಾಗುವರು. ಶಿವಯೋಗ ವೆಂದರೂ ಇದೇ ಆಗಿದೆ. ಮೂಲಾಧಾರದಲ್ಲಿದ್ದ ಕುಂಡಲಿನಿ ಶಕ್ತಿ ಜಾಗ್ರ ತವಾಗಿ ಮೇಲಮುಖ ಮಾಡಿ ಆರು ಚಕ್ರಗಳನ್ನು ಏರಿ ಸಹಸ್ರಾರದಲ್ಲಿಯ ಪರಶಿವನನ್ನು ಕೂಡಿದರೆ ಶಿವಯೋಗವಾಗುವದು. ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿತ್ತು । ತುಟಿ ಮಿಸುಕದೆ ಎವೆ ಹಳಚದೆ ಬಿಟ್ಟಗಣ್ಣು ಬಿಗಿದ ಹುಟ್ಟ ರಂಧ್ರದಲ್ಲಿ ಕಟ್ಟಿತು ಗುಡಿ । ನೆಟ್ಟೆಲವು ಮುರಿದು ಅಟ್ಟೆ ಅಲ್ಲಾಡಿ ತಲ್ಲಾ ಕೂ. ಸ. ದೇ. ಹಿಡಿವೆನೆಂದ । ಇದು ಕುಂಡಲಿನಶಕ್ತಿ ಜಾಗ್ರತ

ವಾಗಿ ಸಹಸ್ರಾರದಲ್ಲಿ ಸೇರಿ ಶಿವಯೋಗವಾದುದನ್ನು ಹೇಳುವದು. ಇದೇ ಶಿವಯೋಗ. ಇದೇ ಶಕ್ತಿ ವಿಶಿಷ್ಟಾದ್ವೈತ ಸ್ಥಿತಿಯಾಗಿದೆ.

ಶಿವಶಕ್ತಿಯರು ಅವಿನಾಭಾವ ಸಂಬಂಧದಿಂದ ಅಖಂಡವಾಗಿ ಹೀಗೆ ಮೊದಲು ಇದ್ದು ಈಗ ಮಾಯಾ ಆಣವ ಕಾರ್ಮಿಕ ಮಲಗಳಿಂದ ಅಗಲಿರುವದರಿಂದ ಅವರು ಪುನಃ ಅದೇ ಅವಿನಾಭಾವ ಸಂಬಂಧದಿಂದ ಸಮರಸವಾಗಿ ಅಖಂಡವಾಗಿ ಬಿಡುವದೇ ಶಕ್ತಿ ವಿಶಿಷ್ಟಾದ್ವೈತವೆನಿಸಿ ರುವದು.

## (೧೯) ಶಕ್ತಿ ಶಿವನ ಅವಿನಾಭಾವವಾಗಿರುವಳು.

ವಾಗರ್ಥಾವಿವಸಂಪ್ರಕ್ತೌ ವಾಗರ್ಥಪ್ರತಿಪತ್ತಯೇ । ಜಗತಃ ಪಿತರೌವಂದೇ ಪಾರ್ವತಿ ಪರಮೇಶ್ವರೌ ॥ ಎಂದು ಕಾಳಿದಾಸನು ಹೇಳಿದ್ದಾನೆ.

ಕಾಯವು ಜೀವವು ಜೀವವು, ಕಾಯವು. ಇವು ಎಂತು ಬೆರಸಿಪ್ಪ ದಂತೆ ಲಿಂಗದೊಳು ಜಂಗಮ, ಜಂಗಮದೊಳು ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ । ನ ಶಿವೇನವಿನಾ ಶಕ್ತಿ । ರ್ನ ಶಕ್ತಿರಹಿತಃ ಶಿವ: ಪುಷ್ಪಗಂಧ ವಿನಾದ್ವೈವ ಮರುತಾಂಬರಯೋ ಶಿವ ॥ ಭಾವಭೇದವಿಲ್ಲದ ಜಂಗಮವೇ ಲಿಂಗವು ಕೂ. ಚನ್ನ ಸ ದೇ. ಎಂದು ಹೇಳಿದ್ದಾನೆ.

ಶಿವಶಕ್ತಿ ಸ. ಪುಟನೆಂಬುದೆಂತು ಹೇಳಿರಣ್ಣಾ । ಶಿವನೇ ಚೈತನ್ಯಾತ್ಮನು । ಶಕ್ತಿಯೇ ಚಿತ್ತು ಇಂತು ಚೈತನ್ಯಾತ್ಮನೇ ಚಿತ್ ಸ್ವರೂಪನೆಂದರಿಯ ಬಲ್ಲರೆ ಭಿನ್ನವೆಲ್ಲಿಯದು ಗುಹೇಶ್ವರ ॥ ಗುಹೇಶ್ವರಲಿಂಗದ ಶಕ್ತಿಯೊಳಗಾಯಿತ್ತು ಬಟ್ಟಬರಿಯ ಬಯಲೆಂಬುದರ ಉಪಮಾನವಿಲ್ಲ ದಂದು ಪ್ರಭುದೇವರು ಹೇಳಿದ್ದಾರೆ.

ಇಂಗಡಲೊಳಿಂಪು ಬೆಳದಿಂಗಳೊಳು ತಂಪು । ಕುಸುಮಂಗಳೊಳು ಗಂಪು ಬೆರೆದಂತೆ ಪರನೊಳು ಪಿಂಗದಗಸುತೆನತನಪ್ಪೆ ಎಂದು ನಿಜ ಗುಣ ಶಿವಯೋಗಿಗಳು ಹೇಳಿದ್ದಾರೆ.

ನಿಮ್ಮ ನೆನಹೆ ನಮಗೆ ಶಕ್ತಿಯಾಯಿತ್ತಲ್ಲಾ । ಆ ನಿಮ್ಮಿಬ್ಬರ ಸಮರತಿಯೇ ಅಖಂಡವೆಂಬ ನಾಮ ಸೂಚನೆಯಾಯಿತ್ತಲ್ಲಾ । ಮಹಾಲಿಂಗ ಕಲ್ಲೇಶ್ವರ ನಿಮ್ಮ ಅಡಿಗೆ ಇದೆ ಪ್ರಥಮವಾಯಿತ್ತಲ್ಲಾ ॥

ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವನಿರ್ಮಿಸಿದ ಅನಂತ ಲೋಕಗಳನ್ನು ಸಮಸ್ಥಪ್ರಪಂಚವನ್ನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ. ಹೀಗೆ ಇನ್ನೂ ಅನೇಕರ ನುಡಿಗಳು ಇದರ ಬಗ್ಗ ಹೇಳಿದ್ದುಂಟು. ಆದರೂ ಉಳಿದ ಎಲ್ಲ ಮತದವರು ಪರಶಕ್ತಿಯನ್ನು ಅಲ್ಲಗಳೆದಿದ್ದಾರೆ. ಈಗಿನ ಕಾಲದ ಶ್ರೀ ರಾಮಕೃಷ್ಣ ಪರಮಹಂಸ ದೇವರೂ ಶ್ರೀ ಅರವಿಂದರೂ ಶಕ್ತಿಯನ್ನು ಒಪ್ಪಿಕೊಂಡಿದ್ದಾರೆ. ರೂಪಾಯಿಗೆ ಎರಡು ವೈಗಳಿದ್ದಂತೆ ಇದು ಇರುವದು. ಈ ಶಕ್ತಿಯ ಇರುವಿಕೆಯನ್ನು ಜಗತ್ತು ಅರಿಯಲೆಂಬ ಉದ್ದೇಶದಿಂದ ಶಿವನು ಅರ್ಧನಾರೀನಟೇಶ್ವರನಾಗಿ ಲೀಲೆ ಯಾಡಿದ್ದುಂಟು. ಇದೆಲ್ಲ ಶಕ್ತಿ ವಿಶಿಷ್ಟಾದ್ವೈತವನ್ನು ಸಿದ್ಧಮಾಡಿ ತೋರಿಸಿದ್ದುಂಟು.

ಓಂ ಪೂರ್ಣಮದಂ ಪೂರ್ಣಮಿದಂ। ಪೂರ್ಣಾತ್ ಪೂರ್ಣಮುದಚ್ಚತೇ ಪೂರ್ಣಸ್ಯ ಪೂರ್ಣಮಾದಾಯ । ಪೂರ್ಣಮೇವಾವ ಶಿಷ್ಯತೇ॥ ಎಂದು ಉಪನಿಷತ್ತಿನ ವಾಕ್ಯ ಸಹ ಅದನ್ನೇ ಹೇಳುವದು. ಹೀಗೆ ಇನ್ನೂ ಬೇಕಾದಷ್ಟು ಆಧಾರ ಅನುಭವಗಳಿಂದ ಸಿದ್ಧಮಾಡಲಿಕ್ಕೆ ಬರುವದು. ಅದ್ವೈತ ಶಾಸ್ತ್ರದ ಗುರುಗಳಾದ ಶಂಕರಾಚಾರ್ಯರೂ ಕೂಡ ಹಿಂದಿನಿಂದ ಶಕ್ತಿಯಿಂದ ಸೋಲಾಗಲು ಶಕ್ತಿಯನ್ನು ಒಪ್ಪಿಕೊಂಡು ಅನ್ನಪೂರ್ಣಾಸ್ತೋತ್ರ ಮಾಡಿದ್ದಾರೆ ಅಲ್ಲದೆ ಸೌಂದರ್ಯ ಲಹರಿ ಎಂಬ ಶಕ್ತಿಪರವಾದ ಕಾವ್ಯ ಬರೆದಿದ್ದಾರೆ. ಇದರಂತೆ ವಶಿಷ್ಠನೂ ಅಖಂಡಾದ್ವೈತಿ ಇದ್ದವನು ಶಕ್ತಿಯಿಂದ ಸೋಲಾಗಲು ಆಕೆಯನ್ನು ಬಹುವಾಗಿ ವರ್ಣಿಸಿದ್ದಾನೆ. ಅದರಂತೆ ಶ್ರೀ ರಾಮಕೃಷ್ಣ ಪರಮಹಂಸರ ಕಾಲಕ್ಕೆ ತೋತಾಪುರಿಯೂ ಕೂಡ ಆಕೆಗೆ ಸೋತು ಆಕೆಯನ್ನು ಒಪ್ಪಿಕೊಂಡು ಬಹು ಬಹುವಾಗಿ ಸ್ತುತಿಗೈದಿದ್ದಾನೆ.

ಶಿವನು ತನ್ನದೇ ಆದ ತನಗಿಂತ ಭಿನ್ನವಲ್ಲದ ಒಂದು ಪ್ರಕಾಶ ಶಕ್ತಿಯಿಂದ ಕೂಡಿದ್ದಾನೆ. ಇದರ ವಿಮರ್ಶೆಯೂ ಕೂಡ ಆತನಿಗುಂಟು. ರತ್ನ, ಕವಿ, ವಿದ್ಯುದ್ದೀಪ ನಕ್ಷತ್ರಗಳಿಗೆ ಸ್ವಂತ ಪ್ರಕಾಶವಿದ್ದರೂ ಅವುಗಳಿಗೆ ಅದರ ಬಗ್ಗೆ ಅರಿವು ವಿಮರ್ಶಾಶಕ್ತಿ ಇಲ್ಲ ಯಾಕಂದರೆ ಅವು ಜಡವಾಗಿವೆ. ಪರಶಿವನು ಚೈತನ್ಯಾತ್ಮಕನಿರುವದರಿಂದ ತನ್ನ ಶಕ್ತಿಯ ಅರಿವು ಆತನಿಗುಂಟು ಇದೇ ಅವಿನಾಭಾವ ಸಂಬಂಧವನ್ನು ಸೂಚಿಸುವನು.

## (೨೦) ಲಿಂಗ.

ವೀರಶೈವ ಮತದಲ್ಲಿ ಲಿಂಗಕ್ಕೆ ಒಳ್ಳೇ ಪ್ರಾಧಾನ್ಯವಿರುವದು. ವೀರಶೈವರಿಂದ ಲಿಂಗ ಶಬ್ದ ಹೋದರೆ ವೀರಶೈವವೇ ಇಲ್ಲದಾಗುವದು. ಈ ಲಿಂಗವೂ ಕೂಡ ಶಿವ ಶಕ್ತಿಯರ ಅವಿನಾಭಾವ ಸಂಬಂಧವನ್ನೇ ಸೂಚಿಸುವದು. ಅದೇ ತತ್ವದ ಮೇಲೆ ಈ ಇಷ್ಟಲಿಂಗವನ್ನು ರಚಿಸಿದ್ದಾರೆ. ಶಿವನ ಗುರ್ತು ಪೆಂಡಿಕೆ ಶಕ್ತಿಯು ಗುರ್ತು ಪೀಠ ಇದು ಸಾಮಾನ್ಯ ವರ್ಣನೆಯಾಯಿತು. ಪೇಡಿಕೆ ಮಹಾಕಾರಣನಾದ ಪರಾತ್ಪರ ಪರಶಿವ ಶಿವ ಶಕ್ತಿಯರಿಂದ ಸಮರಸವಾಗಿ ಅವಿನಾಭಾವ ಸಂಬಂಧದಿಂದ ಅಖಂಡವಾಗಿ ತೋರುವದು ಇದರಿಂದ ಸತ್-ಚಿತ್-ಆನಂದ ರೂಪದ ಸಮಭುಜ ತ್ರಿಕೋನ ಶಿರಕೋನ ಕೆಳಗೆ ಮಾಡಿದ್ದು ಪರಾಪ್ರಕೃತಿ ಚಿತ್ ಪ್ರಕೃತಿ ಊರ್ಧ್ವಜಗತ್ತು ಕಾರಣಜಗತ್ತು ಹೊರಗೆ ಬಂದಿತು. ಇದರ ಕೆಳಗೆ ಸತ್ವ ರಜ ತಮಗಳ ಸಮಭುಜತ್ರಿಕೋಣ ಶಿರಕೋನ ಮೇಲೆ ಮಾಡಿದ್ದು ಅಪರಾಪ್ರಕೃತಿ ಮಾಯಾ ಜಗತ್ತು ಅಧೋಜಗತ್ತು ಸ್ಥೂಲಜಗತ್ತು. ಹೊರಗೆ ಬಂದಿತು. ಇವೇಡು ಇವೆರಡು ತ್ರಿಕೋನಗಳ ಶಿರಕೋನಗಳ ಶಿರೋಬಿಂದು ಕೂಡಿದ್ದು ಅರುವಿನ ಜಗತ್ತು ಸೂಕ್ಷ್ಮ ಜಗತ್ತು. ಮನ ಬುದ್ಧಿ ತರ್ಕಗಳ ಜಗತ್ತು ಈ ಪ್ರಕಾರ ಜಗತ್ತಿನ ಉತ್ಪತ್ತಿ. ಇದನ್ನೇ ಈ ಲಿಂಗವು ಬೋಧಿಸುವದು. ಸ್ಥಾವರ ಲಿಂಗಕ್ಕಿಂತಲೂ ಇದರಲ್ಲಿ ಬಹಳ ತತ್ವಗಳು ಅಡಕವಾಗಿರುವವು- ಇದರ ಮೇಲೆ ಕಂಥೆಯನ್ನು ಕೂಡ್ರಿಸುವರು. ಆಗ ಬ್ರಹ್ಮಾಂಡದ ಆಕಾರದಂತೆ ಆಗುವದು. ಮೇಲಿನ ತ್ರಿಕೋನವೇ ಇಷ್ಟ. ಕೆಳಗಿನದೇ ಅನಿಷ್ಟ. ಮೇಲಿನದು ನಿರಾಕಾರ ವಿದ್ಯ ಪರಜನವೆನಿಸಿದರೆ ಕೆಳಗಿನದು ಸಾಕಾರ ಅವಿದ್ಯ ಅಪರ ಜಗವೆನಿಸುವದು. ಈ ಪ್ರಕಾರ ಈ ಲಿಂಗದಾಕಾರವಾಗುವದು. ತನ್ನ ಹಾಗೂ ಜಗತ್ತಿನ ಸಕಲ ಜೀವ ಕೋಟಿಯು ಸಕಲ ಅನಿಷ್ಟಗಳನ್ನು ಹೊಡಿದೋಡಿಸಿ ತನ್ನಲ್ಲಿ ಹಾಗೂ ಸಕಲ ಜೀವಿಗಳಲ್ಲಿ ಇಷ್ಟವನ್ನು ಸ್ಥಾಪಿಸಲು ಈ ಇಷ್ಟಲಿಂಗವನ್ನು ಧರಿಸುವ ಉದ್ದೇಶವಾಗಿರುವದು.

ಜಗತ್ತಿನಲ್ಲಿ ಅಸಂಖ್ಯ ವಸ್ತುವಡವೆಗಳು ದುಂಡಗೆ ಇರುವವು. ಆಕಾಶ ಭೂಮಿ ನಕ್ಷತ್ರ ಗ್ರಹ ಸೂರ್ಯ ಚಂದ್ರ ಮೊದಲಾದವುಗಳೆಲ್ಲವೂ ದುಂಡಗೆ ಇರುವದರಿಂದ ಲಿಂಗವನ್ನು ಸಹ ದುಂಡಗಿನ ಆಕಾರ

ದಂತೆ ಮಾಡಿದ್ದಾರೆ. ಬ್ರಹ್ಮಾಂಡವೂ ಕೂಡ ದುಂಡಗದೆ. ಬ್ರಹ್ಮಾಂಡದ ಗುರುತಾದ ಈ ಲಿಂಗವೂ ಕೂಡ ದುಂಡಗೆ ಇರಬೇಕಲ್ಲವೇ ?

## (೨೧) ಲಿಂಗ ಪೂಜೆ ಹೇಗೆ ಪ್ರಾರಂಭವಾಯಿತು?

ಅತಿ ಪೂರ್ವದಲ್ಲಿ ಸಾಮಾನ್ಯವಾಗಿ ಸೃಷ್ಟಿಯ ನಿರೀಕ್ಷಣೆ ಮಾಡಿ ದೇವನ ದಿವ್ಯಭವ್ಯ ಕೃತಿಗಳನ್ನು ನೋಡಿ ನೋಡಿ ದೇವರ ಬಗ್ಗೆ ಕಲ್ಪನೆ ಬಂದಿತು. ಅದನ್ನು ಪೂಜಿಸುವ ಬಗೆಯನ್ನು ಕುರಿತು ವಿಚಾರಿಸಿದರು, ನಿತ್ಯ ಸೂರ್ಯನ ಕೃತಿಗಳನ್ನು ಅವನ ಶಕ್ತಿಸಾಮರ್ಥ್ಯಗಳನ್ನು ನೋಡಿ ಅವನ ಪ್ರಕಾಶ ಉಷ್ಣತೆ ತೇಜಗಳನ್ನು ನೋಡಿ ಅವನು ಪ್ರತ್ಯಕ್ಷ ದೇವರೆಂದು ಬಗೆದರು. ಅದರಂತೆ ಭೂದೇವಿಯ ಶಕ್ತಿಯನ್ನು ಅರಿತರು. ಜಗತ್ತಿನಲ್ಲಿ ಇವರು ದೇವರೆಂದು ತಿಳಿಯಹತ್ತಿದರು. ಇವರನ್ನು ಪೂಜಿಸುವ ಯೋಜನೆಯನ್ನು ಮಾಡಿದರು. ಸೂರ್ಯೋದಯವನ್ನು ಬಯಲಲ್ಲಿ ನಿರೀಕ್ಷಿಸಿ ಸೂರ್ಯನೇ ಪೆಂಡಿಕೆ ಪರಾತ್ಪರ ಪರಶಿವ ಭೂಮಿಯೇ ಪೀಠ ಪರಶಕ್ತಿ ಎಂದು ಕಲ್ಪಿಸಿ ಅದರಂತೆ ಈ ಸ್ಥಾವರಲಿಂಗವನ್ನು ರಚಿಸಿ, ಗುಡಿಗಳಲ್ಲಿ ಇಟ್ಟು ಪೂಜಿಸ ಹತ್ತಿದರು. ಈ ಪ್ರಕಾರ ಮೊದಲಿಗೆ ಜಗತ್ತಿನಲ್ಲಿ ಶಿವಶಕ್ತಿಯರ ಪೂಜೆ ಪ್ರಾರಂಭವಾಯಿತು. ಆಗ ಉಳಿದ ಯಾವ ದೇವರ ಹೆಸರುಗಳು ಗೊತ್ತಿರಲಿಲ್ಲ. ಶಿವನೆಂದರೆ ಪುಣ್ಯ ಆನಂದ ಕಲ್ಯಾಣ ಮಂಗಲ ಮಹದೇವ ಸುಖ ಲಿಂಗ ಮೋಕ್ಷ ಎಂದು ಮೊದಲಾದ ಅರ್ಥಗಳಿರುವವು. ಅದಕ್ಕಾಗಿ ಸೂರ್ಯೋದಯದಿಂದ ಜನ ಈಪ್ರಕಾರ ಸ್ಥಾವರಲಿಂಗಗಳನ್ನು ಪೂಜಿಸಹತ್ತಿರಬಹುದೆಂದು ಅನಿಸುವದು.

ಭೂಮಿ ಅದರ ಮೇಲೆ ಆಕಾಶ ಹೀಗೆ ಇರುವದನ್ನು ನೋಡಿ ಪೀಠಪೆಂಡಿಕೆಗಳ ಗುರ್ತನ್ನು ಸ್ಥಾವರ ಲಿಂಗದಂತೆ ಮಾಡಿ ಪೂಜೆಗೆ ಪ್ರಾರಂಭಿಸಿರಬಹುದು.

ಕಣ ಮಾಡುವಾಗ ಮೇಟಿ ಕಣ ತೆನೆ ಹಂತಿಗಳನ್ನು ನೋಡಿ ಅದರಿಂದ ಸ್ಥಾವರಲಿಂಗದ ಕಲ್ಪನೆ ಮಾಡಿ ಪೂಜಿಸಹತ್ತಿರಬಹುದು.

ಸ್ಥಾವರಲಿಂಗಗಳನ್ನು ಗುಡಿಯಲ್ಲಿ ಇಟ್ಟು ಪೂಜಿಸಲಿಕ್ಕೆ ಪೂಜೇರಿಗಳನ್ನು ನಿಯಮಿಸಿದರು. ಜನ ಅಲ್ಲಿ ನೆರೆಯಹತ್ತಿದರು. ಗಂಟೆ, ಜಾಗಟೆ, ನಗಾರಿ, ಗದ್ದಲವಾಯಿತು. ಮುಂದೆ ಲಿಂಗ ಪೂಜೆಗೆ ಕರ ಕಂದಾಯಗಳನ್ನು ಎತ್ತಹತ್ತಿದರು. ಪೂಜೇರಿಗಳಿಗೆ ಮಹತ್ವ ಬಂದು

ಅವರ ಗದ್ದಲಗೊಂದಲಗಳು ಹೆಚ್ಚಾದವು. ಹೀಗಾಗಿ ಅಲ್ಲಿ ಶಾಂತಿ ಏಕಾಂತ ಸಿಗಲಿಲ್ಲ, ಗುಡಿಗಳಿಗೆ ಕೀಲಿಹಾಕಹತ್ತಿದರು. ಬೆಳ್ಳಿ, ಬಂಗಾರ ಸಾಮಾನುಗಳನ್ನು ದೇವರಿಗೆ ಕಾಣಿಕೆಕೊಟ್ಟರು. ಪೂಜೇರಿಗಳು ಸುಲಿಗೆಗಾರರಂತೆ ಆಗಿ ಶಿರಿವಂತರಾದರು. ಈ ಪೂಜೆಯಿಂದ ಜನಕ್ಕೆ ಲಾಭಕ್ಕಿಂತ ಹಾನಿ ಹೆಚ್ಚಾಯಿತು. ಆಗ ಪುನಃ ವಿಚಾರಿಸಿದರು. ಆಗ ಅದೇ ಆಕಾರದ ಸಣ್ಣ ಲಿಂಗಗಳನ್ನು ಮಾಡಿ ತಮ್ಮ ಮನೆಯಲ್ಲಿ ಇಟ್ಟು ಪೂಜಿಸಹತ್ತಿದರು. ಇದೂ ಅಷ್ಟು ಲಾಭವೆನಿಸಲಿಲ್ಲ. ಆಗ ಚಿಕ್ಕ ಇಷ್ಟಲಿಂಗಗಳನ್ನು ಮಾಡಿ ಅದರ ಮೇಲೆ ಕರೇ ಕಂತೆಯನ್ನು ಕೂಡ್ರಿಸಿ ಕೊರಳಲ್ಲಿ ಕಟ್ಟಿಕೊಂಡು ಹೋದಲ್ಲಿ ಬಂದಲ್ಲಿ ಬೇಕಾದಲ್ಲೆಲ್ಲ ಪೂಜಿಸಹತ್ತಿದರು. ಇದರಿಂದ ಏಕಾಂತ ಲಭಿಸಿತು. ಶಾಂತಿ ಸಿಕ್ಕಿತು. ಗದ್ದಲ ಗೊಂದಲಗಳಿಂದ ಪಾರುಮಾಡಿತು. ಕರಕಂದಾಯಗಳಿಂದ ಉಳಿಸಿತು. ಇದರಿಂದ ಬಹು ರೀತಿಯಿಂದ ಲಾಭವಾಯಿತು. ಸ್ತ್ರೀಪುರುಷರು ಸಮಾನವಾಗಿ ಧರಿಸಿ ಪೂಜಿಸಹತ್ತಿದರು. ಆಗ ಸ್ಥಾವರಲಿಂಗಗಳನ್ನು ಜಾವಾ, ಸುಮಾತ್ರಾ, ಇಂಡೋಚಾಯನಾ, ಅರಬಸ್ಥಾನ. ಭಾರತ ಮೊದಲಾದ ದೇಶಗಳಲ್ಲಿ ಸ್ಥಾಪಿಸಿದ್ದರೆಂದು ಇತಿಹಾಸದಿಂದ ತಿಳಿದು ಬರುವದು. ಆದರೆ ಭಾರತದಲ್ಲಿ ಮಾತ್ರ ಈ ಇಷ್ಟಲಿಂಗಗಳನ್ನು ಪ್ರಚಾರದಲ್ಲಿ ತಂದರು.

## (೨೨) ಇಷ್ಟಲಿಂಗ ಮೂರ್ತಿಯಲ್ಲ.

ಈ ಇಷ್ಟಲಿಂಗವನ್ನು ವೀರಶೈವರ ಹೊರತು ಅನ್ಯರಾರೂ ಧರಿಸುವದಿಲ್ಲ. ತಮ್ಮ ದೇವರನ್ನು ಶರೀರದ ಮೇಲೆ ಧರಿಸುವವರು ಜಗತ್ತಿನಲ್ಲಿ ವೀರಶೈವರೇ ಸರಿ. ಇವರು ಶಿವಶಕ್ತಿಯರ ಗುರುತೆಂದು ಇದೇ ತಮ್ಮ ಸ್ವಂತ ಸ್ವರೂಪವೆಂದು ಇದೇ ಬ್ರಹ್ಮಾಂಡ ಪಿಂಡಾಂಡಗಳ ಗುರುತೆಂದು ಧರಿಸಿ ಪೂಜಿಸುವರು. ಬೇರೆ ಹೊರಗಿನ ಅನ್ಯ ದೇವದೇವತೆಯರನ್ನು ಇವರು ಪೂಜಿಸುವದಿಲ್ಲ. ತಮ್ಮಲ್ಲಿರುವ ಶಿವಶಕ್ತಿಯರನ್ನು ಪೂಜಿಸುವರು. ಪ್ರಕೃತಿ ಪುರುಷರಿಂದ ಈ ಶರೀರ ಆಗಿದ್ದು ಅದನ್ನೇ ಈ ಪ್ರಕಾರ ಪೂಜಿಸುವರು. ಇದು ಬ್ರಹ್ಮಾಂಡ ಪಿಂಡಾಂಡಗಳ ಸ್ವರೂಪವನ್ನು ಬೋಧಿಸುವ ಅವುಗಳ ಅಂಕುರವಿದಾಗಿದೆ. ಬೀಜದಲ್ಲಿ ಅಂಕುರವಿರುವಂತೆ ಇದು ಇರುವದು. ಅಂಕುರವೆಂದೂ ಗಿಡವಾಗಲಾರದು. ಆದರೂ ಗಿಡದ ಸಕಲಭಾಗಗಳು ಅತಿ ಸೂಕ್ಷ್ಮವಾಗಿ ಅದರಲ್ಲಿರುವವು.

ಚಿಕ್ಕಬೀಜದ ಚಿಕ್ಕ ಅಂಕುರದಲ್ಲಿ ಮಹಾ ವಟವೃಕ್ಷವೇ ಇರುವಂತೆ ಈ ಇಷ್ಟಲಿಂಗದಲ್ಲಿ ಸಕಲ ಬ್ರಹ್ಮಾಂಡದ ಚಿಕ್ಕ ಸ್ವರೂಪವು ಅತಿ ಸೂಕ್ಷ್ಮವಾಗಿ ಅಡಗಿರುವದು. ಅಲ್ಲದೆ ಪಿಂಡಾಂಡದ ಸ್ವರೂಪವೂ ಅದರಂತೆ ಇರುವದು. ಅದರಿಂದ ಇಷ್ಟಲಿಂಗವು ಹೊರಗಿನ ಯಾವದೊಂದು ಮೂರ್ತಿಯಲ್ಲ. ಬ್ರಹ್ಮಾಂಡ ಪಿಂಡಾಂಡಗಳ ಜ್ಞಾನ ಸಂಪೂರ್ಣ ಮಾಡಿಕೊಳ್ಳಲಿಕ್ಕೆ ಬರುವದು. ಅದಕ್ಕೆ ಇದು ಮೂರ್ತಿಯಲ್ಲ. ಇದನ್ನು ಪೂಜಿಸುವದರಿಂದ ಮೂರ್ತಿ ಪೂಜೆ ಎನಿಸುವದಿಲ್ಲ. ಕುರುಡನ ಕೈಯುಲ್ಲಿಯೆ ಕೋಲಿದ್ದಂತೆ ಇದು ಇರುವದು.§

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಕೂಡಲಸಂಗಮದೇವಯ್ಯ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ." ಈ ವಚನವೂ ಕೂಡ ಇದನ್ನೇ ಬೋಧಿಸುವದು.

ಉಳಿದವರ ಮೂರ್ತಿಗಳಿಂದ ಬರೀ ಭಕ್ತಿಮಾತ್ರ ಮಾಡಲಿಕ್ಕೆ ಬರುವದು. ಆದರೆ ಈ ಇಷ್ಟಲಿಂಗದಿಂದ ಮಾತ್ರ ಭಕ್ತಿ, ಜ್ಞಾನ, ಕರ್ಮ ಅಷ್ಟಾಂಗ, ಹಠ, ಲಯ, ಜಪ, ಧ್ಯಾನ, ಪ್ರಾರ್ಥನಾ ಮೊದಲಾದ ಯೋಗಗಳನ್ನು ಮಾಡಲಿಕ್ಕೆ ಸಾಧಿಸುವದಲ್ಲದೆ ಬಂಧ ಮುದ್ರಾಗಳನ್ನು ಸಹ ಮಾಡಲಿಕ್ಕೆ ಬರುವದು. ಅದಕ್ಕೆ ಯೋಗಸಾಧನದ ಬಲವಾದ ಸಾಧನವೆಂದು ಹೇಳಬಹುದು.

## (೨೩) ಬ್ರಹ್ಮಾಂಡವೇ ಲಿಂಗ.

ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ | ಲಿಂಗ ಬಾಹ್ಯಾಪರಂ ನಾಸ್ತಿ | ತಸ್ಮೈಶ್ರೀಲಿಂಗಾಯನಮಃ ||

ಲಿಂಗವೆಂಬುದು ಸರ್ವಕಾರಣ ನಿರ್ಮಲ। ಲಿಂಗವೆಂಬುದು ಸರ್ವ ತತ್ವ ಪೂರ್ಣ | ಲಿಂಗವೆಂಬುದು ಸರ್ವ ಲೋಕೋತ್ಪತ್ತಿಗೆ ಕಾರಣ | ಲಿಂಗವೆಂಬುದು ಸರ್ವತತ್ವಪೂರ್ಣ | ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ। ಲಿಂಗವೆಂಬುದು ಪರಶಿವನ ಘನತೇಜ । ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖವು । ಲಿಂಗವೆಂಬುದು ಪರಶಿವನ ಪರಮಜ್ಞಾನ। ಈ ಪ್ರಕಾರ ಲಿಂಗದ ವ್ಯಾಪ್ತಿ ಹಿರಿಮೆಗಳಿರುವವು.

" ಲಿಂಗಂ ಶೈವಮಿದಂ ಸಾಕ್ಷಾತ್ 'ಶಿವಶಕ್ತ್ಯುಭಯಾತ್ಮಕಂ " ಈ ಲಿಂಗವು ಶಿವಶಕ್ತಿಯರಿಂದ ಕೂಡಿದ್ದಾಗಿದೆ ಎಂದು ಸೂಕ್ಷ್ಮಾಗಮ ದಲ್ಲಿ ಹೇಳಿದೆ.

ವಿನಾರ್ಥಂ ಗಮಕಂ ಚಿಹ್ನಂ ಲಿಂಗ ಮಿತ್ಯಭಿದಾಯತೆ ಉತ್ಪತ್ತಿ ಸ್ಥಿತಿಲಯಗಳೆಲ್ಲಕ್ಕೂ ಈ ಲಿಂಗವೇ ಕಾರಣವಾಗಿದೆ ಎಂದು ಹೇಳಲಾ ಗಿದೆ. ಈ ಲಿಂಗ ಶಿವಶಕ್ತಿಯರ ನಡುವೆ ಅವಿರಳ ಬೆಸುಗೆಯನ್ನು ಸೂಚಿ ಸುವದು. ಅದರಿಂದ ಇದು ಮೂರ್ತಿಯಲ್ಲ ಇದರ ಪೂಜೆ ಮೂರ್ತಿ ಪೂಜೆಯಲ್ಲ.

## ( ೨೪ ) ಲಿಂಗದ ಮಂತ್ರ

ಓಂ ನಮಃಶಿವಾಯ ಇದು ಲಿಂಗದ ಮಂತ್ರ. ಪಾರ್ವತಿಯ ಶಿವ ನಿಗೆ ನಮಸ್ಕಾರ ಎಂದು ಇದರ ಅರ್ಥ ಈ ಮಂತ್ರವೂ ಕೂಡ ಶಿವ ಶಕ್ತ್ಯಾತ್ಮಕ ವಿರುವದು.

## ಪರಿಪೂರ್ಣತೆ ಇದ್ದದ್ದು

ಲಿಂಗ, ಮಂತ್ರ, ಶಿವಯೋಗ, ಶಿವಾನುಭವ, ವೀರಶೈವದ ಹೆಸರು ಎಲ್ಲವೂ ಶಿವಶಕ್ತ್ಯಾತ್ಮಕಗಳೇ ಇರುವವು. ಅದಕ್ಕೆ ಇವುಗಳು ಆದರೆ ಲಿಂಗ ಪರಿಪೂರ್ಣ ಸಾಧನ. ಪರಿಪೂರ್ಣ ಮಂತ್ರ ಪರಿಪೂರ್ಣ ಯೋಗ ಪರಿಪೂರ್ಣ ಅನುಭವ ಪರಿಪೂರ್ಣ ಮತ ಹೀಗೆ ಇರುವದರಿಂದ ಇವರ ಪೂಜೆ ಪರಿಪೂರ್ಣ. ಇದರಿಂದ ಪರಿಪೂರ್ಣ ಯೋಗಿ ಪರಿಪೂರ್ಣ ದೇವ ಮಾನವರಾಗುವರೆಂದು ಹೇಳಬಹುದು.

## ( ೨೫ ) ಲಿಂಗ ಪೂಜೆಯೂ ಕೂಡ ಪರಿಪೂರ್ಣ ಯೋಗ

ಲಿಂಗವು ಶಿವ ಶಿಕ್ತಿಯರಿಂದ ಕೂಡಿದ್ದಿರುವದು. ಬರೇ ಶಿವ ಇಲ್ಲವೆ ಶಕ್ತಿಯ ಗುರುತಾಗಿದ್ದರೆ ಅದೆಂದೂ ಪರಿಪೂರ್ಣ ಪೂಜೆ ಯಾಗುತ್ತಿರ ಲಿಲ್ಲ. ಈ ಎರಡರಿಂದ ಕೂಡಿದ್ದಿರುವದರಿಂದ ಪರಿಪೂರ್ಣ ಯೋಗಕ್ಕೆ ಇದು ಒಳ್ಳೆಯ ಸಾಧನವಾಗಿರುವದು. ಇದರಿಂದ ಎಲ್ಲ ಯೋಗಗಳು ಸಹಜ ಸಾಧಿಸುವವು. ಅಲ್ಲದೆ ಬಂಧೂಗಳೂ ಮುದ್ರಾಗಳು ಸಹ ಇದು ತಾನೇ ಸಾಧಿಸುವವು.

೧) ಭಕ್ತಿ ಯೋಗಃ— ಅಷ್ಟವಿಧಾರ್ಚನೆ ಷೋಢಶೋಪಚಾರದಿಂದ ಬ್ರಹ್ಮಾಂಡ ಪಿಂಡಾಂಡಗಳ ಸ್ವರೂಪದ ಲಿಂಗವನ್ನು ಪೂಜಿಸುವದರಿಂದ

ಜಗತ್ತಿನ ತಂದೆ ತಾಯಿಗಳಾದ ಶಿವ ಶಕ್ತಿಯರನ್ನು ಪೂಜಿಸಿದಂತೆ ಆಗುವದು. ನಿತ್ಯ ಒಂದು ಎರಡು ಮೂರು ವೇಳೆ ಪೂಜಿಸ ಬಹುದು. ಇದರಿಂದ ಭಕ್ತಿ ಯೋಗ ಬರುವದು. ಅಲ್ಲದೆ ಸಕಲ ಸ್ತ್ರೀ ಪುರುಷರನ್ನು ದೇವತೆಯರಂತೆ ಭಾವಿಸಿ ಪ್ರೀತಿಸಬೇಕೆಂದು ಇದು ಭೋಧಿಸುವದು ಇದರಿಂದ ಹೃದಯ ವಿಕಾಸವಾಗುವದು.

೨) ಜ್ಞಾನ ಯೋಗ:— ಪರಾತ್ಪರ ಪರಶಿವನಿಂದ ಅಂದರೆ ಮಹಾ ಕಾರಣದಿಂದ ಕಾರಣ ಕಾರಣದಿಂದ ಸೂಕ್ಷ್ಮ ಸೂಕ್ಷ್ಮದಿಂದ ಸ್ಥೂಲ ಜನ ಹೇಗೆ ಹೇಗೆ ಆವರಣವಾಗಿ ಪ್ರಕಟವಾಯಿತೆಂದು ಹೇಳುವದು ಅಲ್ಲದೆ ಹೇಗೆ ಹೇಗೆ ಉತ್ತೀರ್ಣಗತ ಒಂದಒಂದ ರೊಳಗೊಂದು ಸೇರಿ ಲಯವಾಗಿ ಪರಾತ್ಪರ ಪರಶಿವನಾಗುವದನ್ನೂ ಸಹ ಇದರಿಂದ ಹೊಳೆ ಯುವದು. ಇನ್ನೂ ಇದರಿಂದ ಪಂಚೀಕರಣ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳನ್ನು ಸಹ ಕಲಿಯಲಿಕ್ಕೆ ಬರುವದು. ಹೆಚ್ಚಿನ ವಿವರಣೆಯು ಹಿಂದೆ ಬಂದಿದೆ. ಇದರಿಂದ ಮಿದುಳು ವಿಕಾಸವಾಗುವದು.

೩) ಕರ್ಮ ಯೋಗ:— ಪೂಜಾದಿ ಕ್ರಿಯೆಗಳೆಲ್ಲ ಕರ್ಮಯೋಗ ವಾಗುವವು ಅಲ್ಲದೆ ಸತ್ಕ್ರಿಯಾಚರಣೆ ಭಕ್ತ ಜ್ಞಾನಗಳೊಂದಿಗೆ ಮಾಡು ವದೆಲ್ಲವೂ ಕರ್ಮಯೋಗದ ಲಿಂಗಪೂಜೆಯಾಗುವದು. ಕಾಯಕದಿಂದ ಗಳಿಸಿ ದಾಸೋಹ ಭಾವದಿಂದ ಅರ್ಪಣ ಮಾಡುವದೂ ಕೂಡ ಲಿಂಗ ಪೂಜೆ ಎನಿಸುವದು. ಇದರಿಂದ ಕರಗಳು ಶುದ್ಧಿಯಾಗುವವು ದಯವೇ ಧರ್ಮದ ಮೂಲ ಎಂಬುದನ್ನು ಆಚರಣೆಯಲ್ಲಿ ತರಬೇಕು. ಇದರಿ ದ ಕರವು ಶುದ್ಧಿಯಾಗುವವು.

೪) ಹಠ ಯೋಗ:— ಪೂಜೆಯ ಕಾಲಕ್ಕೆ ಪದ್ಮಾಸನ ಸಿದ್ಧಾಸನ ಸುಖಾಸನ ಮೊದಲಾದ ಆಸನಗಳನ್ನು ಹಾಕಿ ಕುಳಿತು ಲಿಂಗ ಪೂಜೆ ಮಾಡಬೇಕಾಗುವದು. ಆರೋಗ್ಯ ಸರಿಪಡುವದು.

೫) ಅಷ್ಟಾಂಗ ಯೋಗ :— ಯಮನಿಯಮ ಆಸನ ಪ್ರಾಣಾ ಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂದು ೮ ಅಂಗಗಳು ಮೇಲೆ ಮೊದಲಿನ ಮೂರು ಬಂದೇ ಹೋಗುವವು. ಪ್ರಾಣಾಯಾಮ ವೆಂದರೆ ಪೂರಕ ಕುಂಭಕ ರೇಚಕಗಳನ್ನು ಮಾತ್ರೆಗೆ ಕ್ರಮಬದ್ಧವಾಗಿ ಉಸಿರನ್ನು ಎಳೆಯುವದು ಬಿಡುವದು ಇದಾಗದೆ ಇದರಿಂದ ಉಸಿರು ನರ, ನಾಡಿಗಳಲ್ಲಿ ಸಿಕ್ಕರೆ ಹುಚ್ಚು ಹಿಡಿಯ ಬಹುದು. ಮರಣ ಬರ

ಬಹುದು. ಆದಕೆ, ಇದು ಬಹು ಕಠಿಣ ಇದರಿಂದ ಉಸಿರು ಹಿಡಿತ
ದಲ್ಲಿ ಬಂದು ಮನಸ್ಸಿನ ಚಂಚಲತೆ ಮಾತ್ರ ಹೋಗುವದು. ಲಿಂಗ
ಪೂಜೆಯು ಈ ಅಷ್ಟಾಂಗಯೋಗಕ್ಕಿಂತ ಸುಲಭ ಸರಳ ರೀತಿಯಲ್ಲಿ
ಹೆಚ್ಚಿನ ಫಲ ದೊರಕಿಸಿ ಕೊಡುವದು. ಲಿಂಗವು ಕರೇದು ಕರೇ ವಸ್ತು
ಗಳನ್ನು ನೋಡುವದು ಕಣ್ಣಿಗೆ ಪ್ರಿಯ ಕರವು ಕಣ್ಣು ಕೆಡುವದಿಲ್ಲ.
ಕಣ್ಣಿಗೆ ತ್ರಾಸಾಗುವದಿಲ್ಲ. ಕಣ್ಣು ಮನಸ್ಸಿನ ಚಂಚಲತೆಗೆ ಕಾರಣ
ವಾಗುವದು. ಮನಸ್ಸು ವಾಯು ತತ್ವದಿಂದ ಆಗಿದೆ. ಕಣ್ಣಾಲಿ ಹಳ
ಚದೆ ಈ ಕರೇ ಲಿಂಗವನ್ನು ಏಕದೃಷ್ಟಿ ನೋಡಹತ್ತಲು ಅದಕ್ಕೆ ಅನಿ
ಮಿಷ ದೃಷ್ಟಿ ಪ್ರಾಪ್ತವಾಗುವದು. ಆಗ ಮನಸ್ಸು ತಾನೇ ನಿಲ್ಲುವದು.
ಚಂಚಲತನ ಹೋಗುವದು.

ವಾಯುಹಿಡಿತದಲ್ಲಿ ಬರುವದು. ಹೀಗಾಗಿ ಲಿಂಗದ ಮೇಲೆ ಮುದ್ರಾ
ಮಾಡುವದರಿಂದ ರಾಜಯೋಗಕ್ಕಿಂತ ಹೆಚ್ಚಿನಫಲ ಬಹುಸರಳ ರೀತಿಯಲ್ಲಿ
ಸಿಗುವದು. ಈ ತರದ ಮುದ್ರಾದಿಂದ ಹಿಪ್ನೋಟಿಝಂ ಮೆಸ್ಮರಿಝಂ
ಗಳನ್ನು ಸಹ ಮಾಡಲಿಕ್ಕೆ ಬರುವದು. ಈ ಲಿಂಗದ ಜ್ಞಾನವಿರಲಾ
ರದಕ್ಕೆ ಬಿಳೇ ಗೋಡೆಯ ಮೇಲೆ ಕರೆ ದುಂಡಾಗಿನ ಗುರತನ್ನು ಮಾಡಿ
ನೋಡುತ್ತ ಕೂಡ್ರುವರು. ಇಂಗ್ಲಂಡ, ಅಮೇರಿಕಾ, ಜಪಾನ, ಜರ್ಮನಿ
ಗಳಲ್ಲಿ ಈ ರೀತಿಯಿಂದ ಯೋಗ ಸಾಧಿಸುತ್ತಿರುವರು. ಮಹಾತ್ಮಾ
ಗಾಂಧಿ, ಅರವಿಂದ, ವಿವೇಕಾನಂದ, ರಾಮತೀರ್ಥ ಮೊದಲಾದ ಅನೇ
ಕರೂ ಕೂಡ ಬಿಳೇ ಗೋಡೆಯ ಮೇಲೆ ತೆಗೆದ ಕರೆ ದುಂಡಗಿನ
ಗುರುತನ್ನು ನೋಡುತ್ತ ಮುದ್ರಾ ಮಾಡುವರೆಂದು ಕೇಳಿದ್ದೇವೆ. ಹೀಗೆ
ಮಾಡುವದಕ್ಕಿಂತ ಈ ಇಷ್ಟಲಿಂಗವನ್ನು ಎಲ್ಲ ಯೋಗಗಳನ್ನು ಸಾಧಿ
ಸಲೋಸುಗ ಎಲ್ಲರೂ ಎಲ್ಲ ದೇಶದವರೂ ಎಲ್ಲ ಜಾತಿಯವರೂ ಸ್ತ್ರೀ
ಪುರುಷರೆಲ್ಲರೂ ಉಪಯೋಗಿಸಿ ಹೆಚ್ಚಿನ ಲಾಭ ಪಡೆಕೊಳ್ಳುವದು
ಒಳಿತಲ್ಲವೇನು? ಇದೇನು ಧಾರ್ಮಿಕ ಗುರ್ತಲ್ಲ. ಇಂಥವರೇ ಇದನ್ನು
ಉಪಯೋಗಿಬೇಕೆಂದು ನಿಯಮವೂ ಇಲ್ಲ. ಕುರುಡನ ಕೈಗೋಲಿನಂತೆ
ಇದು ಇರುವದು ಜಗತ್ತಿನ ಎಲ್ಲ ಜಾತಿಯ ಎಲ್ಲ ಸ್ತ್ರೀ ಪುರುಷ
ರಾದ ಕುರುಡರು ಕೋಲನ್ನು ಹಿಡಿಯಲಿಕ್ಕೆ ಹೇಗೆ ಅಧಿಕಾರಿಗಳೋ
ಅದರಂತೆ ಎಲ್ಲರೂ ಈ ಇಷ್ಟಲಿಂಗ ಧರಿಸಿ ಅದರ ಸದುಪಯೋಗ
ಮಾಡಿಕೊಂಡು ಪರಿಪೂರ್ಣ ಯೋಗಗಳನ್ನು ಸಾಧಿಸುವದು ಒಳ್ಳೇಯದೇ

ಸಂ! ಹೋದಲ್ಲಿ, ಬಂದಲ್ಲಿ ಬಿಳಿ ಗೋಡೆ, ಕರಿ ಗುರ್ತು ಎಲ್ಲಿ ಸಿಗುವವು? ಅದಕ್ಕಾಗಿ ಈ ಲಿಂಗವನ್ನು ಈ ಎಲ್ಲ ಕೆಲಸಗಳಿಗೆ ಉಪಯೋಗಿಸಿಕೊಳ್ಳಬೇಕೆಂದು ಸೂಚಿಸುವೆವು.

(೮) ಕುಂಡಲಿನಿಯೋಗ— ಲಿಂಗಪೂಜೆ, ಮುದ್ರಾ ಹಾಗು ಬಂಧನಗಳಿಂದ ಕುಂಡಲಿನ ಶಕ್ತಿ ಸಹಜ ಜಾಗ್ರತವಾಗುವದು ಅದು ಆರು ಚಕ್ರಗುಂಟ ಏರಿ ಸಹಸ್ರಾರದಲ್ಲಿ ಸೇರುವ ಅನುಭವವಾಗುವದು.

೯) ಜಪಯೋಗ ಧ್ಯಾನ ಯೋಗ ಪ್ರಾರ್ಥನಾ ಯೋಗ :— ಇವು ಮೂರನ್ನು ಲಿಂಗ ಪೂಜೆಯ ಕಾಲಕ್ಕೆ ಮಾಡಲೇಬೇಕಾಗುವದು. ಇವು ಇಲ್ಲದೆ ಲಿಂಗ ಪೂಜೆಯೇ ಇಲ್ಲ.

೧೦) ಮೂಲಬಂಧ :— ಲಿಂಗ ಪೂಜೆಯ ಕಾಲಕ್ಕೆ ಆಸನ ಹಾಕಿದಾಗ ಗುಧವನ್ನು ಸಡಿಲು ಬಿಡದೆ ಮೇಲಕ್ಕೆ ಎಳೆದುಕೊಂಡೆ ಕೂಡ್ರಬೇಕಾಗುವದು. ಇದರಿಂದ ಮುಲಬಂಧವಾಗುವದು.

೧೧) ಮುದ್ರಾ :— ಇದಂತೂ ರಾಜ ಯೋಗದಲ್ಲಿ ಬಂದೇ ಬಿಡುವದು.

೧೨) ಲಯ ಯೋಗ :— ಇಷ್ಟ ಲಿಂಗಕ್ಕೆ ತನು, ಪ್ರಾಣಲಿಂಗಕ್ಕೆ ಮನ, ಭಾವ ಲಿಂಗಕ್ಕೆ ಭಾವಗಳನ್ನು ಅರ್ಪಿಸುವದರಿಂದ ಮಹಾ ತನು ಸುಮನ ಸದ್ಭಾವಗಳುಂಟಾಗುವವು. ಅಲ್ಲದೆ ಆಚಾರ ಲಿಂಗಕ್ಕೆ ಚಿತ್ ಅರ್ಪಿಸುವದರಿಂದ ಸುಚಿತ್‌ನಾಗುವವು ಗುರುಲಿಂಗಕ್ಕೆ ಬುದ್ಧಿ ಅರ್ಪಿಸುವದರಿಂದ ಸುಬುದ್ಧಿಯಾಗುವದು. ಶಿವ ಲಿಂಗಕ್ಕೆ ಅಹಂಕಾರ ಅರ್ಪಿಸುವದರಿಂದ ನಿರಹಂಕಾರವಾಗುವದು. ಜಂಗಮಲಿಂಗಕ್ಕೆ ಮನವನರ್ಪಿಸುವದರಿಂದ ಸುಮನವಾಗುವದು. ಪ್ರಸಾದ ಲಿಂಗಕ್ಕೆ ಜ್ಞಾನ ಅರ್ಪಿಸುವದರಿಂದ ಸುಜ್ಞಾನವಾಗುವದು. ಮಹಾಲಿಂಗಕ್ಕೆ ಭಾವ ಅರ್ಪಿಸುವದರಿಂದ ಸದ್ಭಾವವಾಗುವದು. ಹೀಗಾಗಿ ತನು ಮನ ಬುದ್ಧಿ ಭಾವ ಅಹಂಕಾರ ಚಿತ್ತಗಳೆಲ್ಲ ಲಯವಾಗಿ ಹೋಗಿ ಆಧಾರ ಶುದ್ಧಿಯಾಗುವದು. ಇದರಿಂದ ಲಯ ಯೋಗವು ಸಾಧಿಸುವದು ಹೀಗಾಗುವದರಿಂದ ಇಷ್ಟಲಿಂಗ ಪೂಜೆ ಎಲ್ಲರ ಪೂಜೆಗಳಿಗಿಂತ ಶ್ರೇಷ್ಟ ಸುಲಭ ಹೆಚ್ಚಿಗೆ ಫಲದಾಯಕವೆಂದು ಧಾರಾಳವಾಗಿ ಹೇಳಬಹುದು. ಈ ಇಷ್ಟ ಲಿಂಗ ಪೂಜೆಯಿಂದ ತನು ಶುದ್ಧವಾಗುವದು. ಪ್ರಾಣಲಿಂಗ ಪೂಜೆ ಸಾಧಿಸಿ

ದಾಗ ಜೀವನ ಶುದ್ಧವಾಗಿ ಪ್ರಕೃತಿಯ ಜಾಡ್ಯವನ್ನು ಹರಿದೊಗೆಯು ವದು. ಲಿಂಗದ ತತ್ವ ಬಹಳವಾಗಿರುವದು ಹೇಳುವದಕ್ಕೆ ಕಾಲವಿಲ್ಲ.

೨೬) ಎಲ್ಲ ಯೋಗಗಳ ಲಾಭ ಹಾಸಿ ಅದರ ಸಮನ್ವಯ ಷಟ್ಸ್ಥಲದಲ್ಲುಂಟು. ಕೆಲವರು ಭಕ್ತಿ ಪಂಥಿಗಳು ದೇವರ ಮೇಲೆ ಖರೇ ಭಕ್ತಿ ಮಾಡುವರು. ಆರೋಗ್ಯ ಕೆಡಿಸಿ ಕೊಳ್ಳುವರು ಇವರ ಹೃದಯ ಮಾತ್ರ ಶುದ್ಧ ವಾಗಬಹುದು. ಮೂಢ ಭಕ್ತಿ ಇದ್ದರೆ ಇದೂ ಕೂಡ ಆಗುವದಿಲ್ಲ. ಕೆಲವರು ಜ್ಞಾನ ಮಾರ್ಗಿಗಳು ವಿಚಾರ ಚಂದ್ರೋದಯ ವಿಚಾರ ಸಾಗರ ಪಂಚೀಕರಣ ಪಂಚರತ್ನಗಳನ್ನು ಓದಿ ಕೊಂಡು ಜಗತ್ತು ಸುಳ್ಳು ಎನ್ನುವರು. ಭಕ್ತಿಯಿಂದ ಹೆಣ್ಣು ಸ್ವಭಾವದ ಜನರೇ ಹೆಚ್ಚಾಗಿ ಬೆಳೆದರು ಹಣೆಯಬರ ದೈವವೆನ್ನುತ್ತ ದೇವನ ಕೃಪೆಗೆ ಕೈಚಾಚಿ ಕುಳಿತರು. ಜ್ಞಾನ ಮಾರ್ಗಿಗಳು ಹೇಡಿಗಳಾದರು. ಇವರಿಬ್ಬರೂ ಕಲ್ಪಕವೃತ್ತಿ ಕರ್ತೃತ್ವಶಕ್ತಿಯನ್ನು ಕಳಕೊಂಡರು ಜೀವನದ ಕಲಹದಲ್ಲಿ ಕಲಿಯಾಗಿ ಹೋರಾಡುವದನ್ನು ತೊರೆದರು. ಸಂಸಾರ ಕೆಡಿಸಿಕೊಂಡು. ಪರಾವಲಂಬಿಗಳಾದರು. ಅನ್ಯರ ಕೂಳಿಗೆ ಕೈಯೊಡ್ಡಿ ಕುಳಿತರು. ಇವರಿಬ್ಬರೂ ಹೇಡಿಗಳಾಗಿ ಆರೋಗ್ಯ ಕೆಡಿಸಿಕೊಂಡು ಸಂಸಾರ ಸುಳ್ಳೆಂದರು. ದುಡಿಯುವದನ್ನು ಬಿಟ್ಟು ಬರೇ ಪೂಜೆ ಧ್ಯಾನ ಓದುವದರಲ್ಲೇ ಕಾಲ ಕಳೆಯುವರು. ಇವರು ಅಹಂಕಾರಿಗಳಾದರು. ವೇದಾಂತಿಗಳ ಮಿದುಳು ಬೆಳೆವದು. ಕೆಲವರು ಕರ್ಮ ಪರಾಯಣರು ದೇವರನ್ನು ಅಲ್ಲಗಳೆದು ಪ್ರಯತ್ನವೇ ಮೊದಲೆಂದರು. ಇವರು ಕರ್ಮಠರೆನಿಸಿಕೊಂಡರು. ಇವರ ಕೈಗಳು ಮಾತ್ರ ಬೆಳೆದವು. ಹಠಯೋಗದವರು ಆಸನಗಳನ್ನು ಹಾಕುವದರಿಂದ ಆರೋಗ್ಯವಂತರಾಗಿ ಶರೀರ ಸುಂದರವಾಯಿತು. ಇವರೂ ಮೇಲಿನವರಂತೆ ನಿರುದ್ಯೋಗಿಗಳಾದರು. ಜಗತ್ತು ಸುಳ್ಳೆಂದರು. ಅದರಂತೆ ರಾಜಯೋಗಿಗಳು ಪ್ರಾಣಾಯಾಮಾದಿ ಕ್ರಿಯೆಗಳಿಂದ ಅವರೂ ಅಹಂಕಾರಿಗಳಾದರು. ಉದ್ಯೋಗ ಬಿಟ್ಟು ಸದಾ ಹಠರಾಜಯೋಗ ಸಾಧನಗಳನ್ನು ಮಾಡುವದರಲ್ಲೇ ಕಾಲ ಕಳೆಯುವರು. ಇವರೂ ಕರ್ತೃತ್ವಶಕ್ತಿ ಕಲ್ಪಕವೃತ್ತಿಯನ್ನು ಕಳಕೊಂಡರು. ಜಪ ಧ್ಯಾನ ಪ್ರಾರ್ಥನಾಯೋಗದವರ ಹಣೆಯ ಬರಹವೂ ಕೂಡ ಭಕ್ತಿ ಯೋಗದವರಂತೇ ಆಗಿರುವದು. ಇವರೆಲ್ಲರೂ ಸತ್ಯ ಶುದ್ಧ ನಿತ್ಯ ಕಾಯಕದಿಂದ ಹೊರಗಾಗಿ ದೇಶವನ್ನೂ ಮನೆಯನ್ನೂ ಹಾಳುಗೆಡವಿಸಿದರು. ಈ ಒಂದೊಂದೇ

ಯೋಗಗಳಿಂದ ಶರೀರದ ಒಂದೊಂದೇ ಭಾಗಗಳು ಬೆಳೆದು ವಿಕಾಸ ಹೊಂದಿದವು. ಉಳಿದವುಗಳು ಬೆಳೆಯದೆ ಶುದ್ಧವಾಗದೆ ಯಾತಕ್ಕೂ ಬಾರದಂತೆ ನಿರುಪಯೋಗಿಯಾಗಿ ಹೋದವು. ಈ ಕೊರತೆಯನ್ನು ತಿಳಿದು ಕೊಂಡು ವೀರಶೈವರು ಸಕಲ ಯೋಗಗಳ ಸಮನ್ವಯಗೊಳಿಸಿ ಸಕಲ ಶರೀರದ ಸಕಲ ಭಾವಗಳು ಸರಿಯಾಗಿ ಯೋಗದಿಶೆಯಲ್ಲಿ ಬೆಳೆದು ವಿಕಾಸವಾಗಿ ಶುದ್ಧವಾಗಿ ಸಿದ್ಧವಾಗಿ ಹೋಗುವದಕ್ಕೆ ಅನುಕೂಲವಾಗು ವಂಥ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳನ್ನು ಶೋಧಿಸಿ ವಿಚಾ ರಿಸಿ ಧಾರ್ಮಿಕವಾಗಿ ವಿಧಿಸಿದರು. ಇದಕ್ಕಾಗಿ ಇದಕ್ಕೆ ಶಿವಯೋಗ ಅಥವಾ ಪರಿಪೂರ್ಣ ಯೋಗವೆಂದು ಹೇಳಿದರು.

ಕ್ರಿಯೆಯ ಕೊರತೆಯಿದ್ದ ಗೊಡ್ಡು ವೇದಾಂತವನ್ನು ಜ್ಞಾನದ ಕೊರತೆಯಿದ್ದ ಮಡ್ಡು ಸಿದ್ಧಾಂತವನ್ನು ಕ್ರಿಯೆ ಜ್ಞಾನಗಳ ಕೊರತೆ ಇದ್ದ ಮೂಢ ಭಕ್ತಿಯನ್ನು ಬಿಡಿಸಿ ಶುದ್ಧಭಕ್ತಿ ಜ್ಞಾನ ಕ್ರಿಯೆಗಳನ್ನು ಸಮನ್ವಯಗೊಳಿಸಿದ್ದಾರೆ. ಇದರಿಂದ ಸುಂದರವಾದ ಜಗವು ಮತ್ತಷ್ಟು ಇನ್ನಷ್ಟು ಸುಂದರವಾಗುವದೆಂದು ತಿಳಿಸಿದರು. ಇದರಿಂದ ಅನುಭವ ಜ್ಞಾನವಾಗುವದಲ್ಲದೆ ವೀರರಾಗುವರು. ಕಲ್ಪಕ ವೃತ್ತಿಕರ್ತೃತ್ವ ಶಕ್ತಿ ಗಳನ್ನು ತೋರಿಸಲು ಅನುಕೂಲವಾಯಿತು. ಜೀವನದ ಹೋರಾಟ ವನ್ನು ಸತ್ಯಶುದ್ಧವಾಗಿ ಅಚ್ಚುಕಟ್ಟಾಗಿ ಲೋಕ ಮೆಚ್ಚುವಂತೆ ಎಲ್ಲ ಯೋಗಗಳ ಸುಂದರ ಸಮನ್ವಯವಾಗುವಂತೆ ಸಾಗಿಸಲಿಕ್ಕೆ ಬಂದಿತು. ಇದರಿಂದ ಒಂದೊಂದೇ ಯೋಗದಿಂದ ಆಗುವ ಎಲ್ಲ ಹಾನಿಗಳನ್ನು ಇಲ್ಲದಂತೆ ಮಾಡಿ ಸಕಲತರದ ಲಾಭವಾಗುವಂತೆ ಇದು ಮಾಡಿತೆಂದು ಹೇಳಬಹುದು. ಇದನ್ನೇ ಮುಂದೆ ಷಟ್‌ಸ್ಥಲದ ವಿವರಣೆಯಲ್ಲಿ ನೋಡಿರಿ.

## (೨೭) ಷಟ್‌ಸ್ಥಲದ ವಿವರಣೆ ಹಾಗೂ ಸಾಧನೆಗಳು.

ಧರ್ಮಕ್ಕೆ ಅಂತರ ಬಾಹ್ಯ ಎಂದು ಎರಡು ಸ್ವರೂಪಗಳು. ಬಾಹ್ಯ ಸ್ವರೂಪದ ಬಗ್ಗೆ ಪಂಚಾಚಾರ ಅಷ್ಟಾವರಣಗಳಲ್ಲಿ ವಿಶೇಷ ಬಂದಿದೆ. ಗಹನ ಗೂಢವಾದ ಈ ಅಂತರ ಸ್ವರೂಪವು ಜೀವದ ವೈಶಿಷ್ಟ್ಯವನ್ನು ವಿವರಿಸುತ್ತದೆ. ಇದು ಶಿವಜೀವರ ಅವಿರಳ ಅವಿನಾಭಾವ ಸಂಬಂಧ ವನ್ನು ಸೂಚಿಸುತ್ತದೆ. ಅಲ್ಲದೆ ಲಿಂಗಾಂಗಸಾಮರಸ್ಯವನ್ನು ಸಹ ಬೋಧಿ ಸುವದು. ಇದೇ ಈ ಷಟ್‌ಸ್ಥಲ ಶಾಸ್ತ್ರದಿಂದ ಚನ್ನಾಗಿ ತಿಳಿದುಕೊಳ್ಳ

ಬಹುದು. ಈ ಷಟ್‌ಸ್ಥಲದ ಪ್ರಕಾರ ಸಾಧನ ಮಾಡಿದರೆ ಮಾನವನು ದೇವಮಾನವ ಪರಿಪೂರ್ಣ ಮಾನವ ಪರಿಪೂರ್ಣ ಯೋಗಿಯಾಗುವನು. ಷಟ್‌ಸ್ಥಲದಲ್ಲಿ ಇದರ ಕ್ರಮಬದ್ಧವಾದ ಸಾಧನೆಗಳನ್ನೆಲ್ಲ ಹೇಳಲಾಗಿದೆ. ಇದಕ್ಕೆ ಪಂಚಾಚಾರ ಅಷ್ಟಾವರಣಗಳೂ ಸಹ ಸಂಬಂಧಿಸುವವು. ಹಿಂದೆ ಇವುಗಳ ಬಗ್ಗೆ ಹೇಳಲಾಗಿದೆ. ಈಗ ಈ ಷಟ್‌ಸ್ಥಲದ ಸಂಕ್ಷೇಪ ವಿವರಣೆಯನ್ನು ಮಾಡುವೆವು.

ಈ ಷಟ್‌ಸ್ಥಲದ ಆಚರಣೆಯಿಂದ ಶಿರ ಉರ ಕರಗಳು ಅಲ್ಲದ ಉಳಿದ ಇಂದ್ರಿಯಗಳು ಸರಿಯಾಗಿ ವಿಕಾಸಹೊಂದಿ ಚನ್ನಾಗಿ ಶುದ್ಧಿಯಾಗಿ ಸಕಲ ಅಂಗೋಪಾಂಗಗಳಲ್ಲಿ ಶಿವಚಿತ್ಕಳೆಯು ಶಿವಪ್ರಕಾಶ ಶಿವಚೈತನ್ಯ ತುಂಬಿಕೊಂಡು ತಾನೇ ದೇವನಾಗಿ ಅನ್ಯರೂ ದೇವರಾಗಿ ಕಾಣುವರು. ಈ ಷಟ್‌ಸ್ಥಲದಾಚರಣೆಯಿಂದ ತನ್ನು, ಮನ್ನ, ಬುದ್ಧಿ, ಚಿತ್, ಅಹಂಕಾರ, ಮಮಕಾರ, ಭಾವ ಮೊದಲಾದವುಗಳೆಲ್ಲ ಲಯವಾಗಿ ಮಹಾತ್ಮನು ಸುಮನ ಸುಬುದ್ಧಿ ಸುಚಿತ್ತ ನಿರಹಂಕಾರ ಸುಗಮಕಾರ ಸದ್ಭಾವಗಳು ಬರುವವು. ಶರೀರದ ಸಕಲ ಅಂಗೋಪಾಂಗಗಳು ಸ್ಥೂಲ ಸೂಕ್ಷ್ಮ ಶರೀರದ ಭಾಗಗಳೆಲ್ಲ ಸರಿಯಾಗಿ ಬೆಳೆದು ಶುದ್ಧವಾಗಿ ಬಿಡುವವು. ಇದಕ್ಕೆ ಆಧಾರ ಶುದ್ಧಿ ಎನ್ನುವರು. ಇದೆಲ್ಲ ಸಾಧಕನು ಪ್ರಯತ್ನ ಪೂರ್ವಕ ಸಾಧಿಸಲೇಬೇಕು. ಅಷ್ಟಾವರಣ ಪಂಚಾಚಾರಗಳ ಕೈ ಬಿಡತಕ್ಕದ್ದಲ್ಲ. ನಿತ್ಯ ಅವುಗಳ ಸಾಧನೆ ನಡೆಯಬೇಕು- ಅವುಗಳ ಜೊತೆಗೆ ಈ ಷಟ್‌ಸ್ಥಲಗಳ ಸಾಧನೆ ನಡೆಯಲೇಬೇಕು.

ಭಕ್ತಸ್ಥಲ—ಇದು ವೇದಾಂತದ ಭಕ್ತಿಯೋಗವೇ ಸರಿ. ಇದರಿಂದ ಹೃದಯ ಶುದ್ಧವಾಗುವದು. ಇದರಿಂದ ಸಕಲ ಜೀವಿಗಳನ್ನು ಪ್ರೇಮದಿಂದ ಕಾಣಬೇಕೆಂದು ಗೊತ್ತಾಗಿ ಅದರಂತೆ ಆಚರಣೆಯನ್ನು ಇಟ್ಟುಕೊಳ್ಳುವನು. ಭಕ್ತಿಯೊಂದನ್ನೇ ಇವನು ಮಾಡುವದಿಲ್ಲ. ಅದರ ಜೊತೆಗೆ ಜ್ಞಾನವನ್ನೂ ಗಳಿಸುವನು. ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವೆಂಬುವಂತೆ ಜ್ಞಾನಪೂರ್ಣ ಭಕ್ತಿಯನ್ನು ಮಾಡುವನು. ಇದೇ ಇವನ ಮಹೇಶಸ್ಥಲವಾಗಿದೆ. ಇದು ವೇದಾಂತದ ಜ್ಞಾನಯೋಗವೇ ಸರಿ. ಇದರಿಂದ ಮಿದುಳು ವಿಕಾಶವಾಗುತ್ತದೆ. ಬರೇ ಜ್ಞಾನದಿಂದ ವಾಚಾಳಿಯಾಗಿ ಸರಿಯಾದ ಜ್ಞಾನಗಳಿಸಲಾರ. ಅದಕ್ಕೆ ಭಕ್ತಿ ಜ್ಞಾನಗಳನ್ನು

ಕೂಡಿಸಿ ಸಾಧನ ಮಾಡಿ ಅದರಲ್ಲಿ ಸತ್ಕ್ರಿಯಾಚರಣೆಯನ್ನು ಚನ್ನಾಗಿ ಬೆರಿಸುವನು. ಇದೇ ಪ್ರಸಾದಿಸ್ಥಲವು. ಇದು ವೇದಾಂತಿಯ ಕರ್ಮ ಯೋಗವೇ ಸರಿ. ಇದು ಕರಗಳನ್ನು ಶುದ್ಧಗೊಳಿಸುವದು. ನಿತ್ಯ ಸತ್ಯ ಶುದ್ಧ ಕಾಯಕ ಮಾಡಿ ಬಂದಗಳಿಕೆಯನ್ನು ಪರರಿಗೆ ಅರ್ಪಣಮಾಡಿ ಉಳಿದ ಅಲ್ಪವನ್ನು ಪ್ರಸಾದ ರೂಪದಿಂದ ಭೋಗಿಸುತ್ತಿದ್ದರೆ ಪ್ರಸಾದಿ ಸ್ಥಲವಾಗುವದು ಸತ್ಯಕಾಯಕದೊಂದಿಗೆ ಭಕ್ತಿಯಿಂದ ದೇವನನ್ನು ನೆನೆದು ಎಲ್ಲರನ್ನು ಪ್ರೀತಿಸಿ ಜ್ಞಾನವನ್ನು ಅನುಭವದ ಒರೆಗಲ್ಲಿಗೆ ಹಚ್ಚಿ ನೋಡಿ ಕೊಳ್ಳುವದೇ ಈ ಪ್ರಸಾದಿ ಸ್ಥಲವಾಗಿರುವದು. ಇದರಿಂದ ನಿರಹಂಕಾರ ವೃತ್ತಿ ಪ್ರಾಪ್ತವಾಗುವದು. ದಾಸೋಹ ಭಾವ ಅಳವಡುವದು. ಮುಂದ ಭಕ್ತಿ ಜ್ಞಾನ ಕರ್ಮಗಳ ಸುಂದರ ಸಮನ್ವಯದೊಂದಿಗೆ ಸಾಧನ ಬಲದಂತೆ ಪ್ರಾಣಲಿಂಗಿ ಸ್ಥಲವನ್ನು ಹತ್ತುವನು. ಆಗ ಲಿಂಗ ಪ್ರಾಣಿಯಾಗುವನು. ಅಂದರೆ ತಾನೇ ಶಿವನೆಂಬ ಅನುಭವ ಜ್ಞಾನವಾಗುವದು. ಶಿವೋಹಂ ತತ್ವ ಅಳವಡುವದು. ಇದೇ ಸಾಧನ ಬಲಿತಂತೆ ಶರಣಸ್ಥಲವನ್ನು ಹತ್ತುವನು. ಆಗ ಚರಾಚರ ಜಡಾಜಡಗಳೆಲ್ಲವೂ ದೇವರೆಂಬ ಅನುಭವವಾಗುವದು. ಅದರಂತೆ ಆಚರಣೆ ಸಹ ಆಗಿ ಬಿಡುವನು. ಸರ್ವಂ ಖಲ್ವಿದಂ ಬ್ರಹ್ಮ ತತ್ವಕ್ಕೆ ಮುಟ್ಟುವನು. ಆಗ ಈ ಶರಣನು ಸಕಲ ಆಗು ಹೋಗು ಗಳಲ್ಲಿ ಸಕಲ ಘಟನೆಗಳಲ್ಲಿ ಸಹ ಶಿವನನ್ನೇ ಅನುಭವಿಸಿ ತಾನೇ ಆ ಘಟನೆಗಳಿಗೆ ಕಾರಣನೆಂದು ತನ್ನ ಮುಖಾಂತರ ಅವು ನಡೆಯುವ ವೆಂದು ಅನುಭವವಾಗುವದು. ಇದೇ ಬ್ರಹ್ಮಸ್ಥಿತಿಯು. ಇವನೇ ಷಟ್ಸ್ಥಲ ಬ್ರಹ್ಮ ಎನಿಸುವನು. ಆಗ ಇವನಿಗೆ ತ್ರಿಗುಣಾತೀತ ಸ್ಥಿತಿ ಬರುವದು. ಆಗ ಗುಣಾತೀತ ಪುರುಷ ಜೀವನ್ಮುಕ್ತನೆನಿಸುವನು. ಇದೇ ಇವನ ಐಕ್ಯಸ್ಥಲ. ಇದು ಸಂಕ್ಷೇಪ ಷಟ್ಸ್ಥಲದ ವಿವರಣೆ ಯಾಗುವದು. ವೇಳೆಯ ಅಭಾವದ ಮೂಲಕ ವಚನಗಳನ್ನು ಇಲ್ಲಿ ಹಾಕಿಲ್ಲ. ಈ ಸ್ಥಿತಿ ಬರ ಬೇಕಾದರೆ ಮೊದಲಿನಿಂದ ಪಂಚಾಚಾರ ಅಷ್ಟಾವರಣಗಳ ಪ್ರಕಾರ ನಡೆದು ಈ ಷಟ್ಸ್ಥಲಗಳ ಆಚರಣೆಯನ್ನು ಮಾಡಿ ಈ ಜೀವನ್ಮುಕ್ತಿಯ ಸ್ಥಿತಿಯನ್ನು ಪಡಕೊಂಡು ಐಕ್ಯಸ್ಥಲವನ್ನು ಹೊಂದಬೇಕು. ಅದಕ್ಕಾಗಿ ಮೊದಲು ತ್ಯಾಗಾಂಗ ಬೇಕು, ಇದು ಭಕ್ತಮಹೇಶಸ್ಥಲಕ್ಕೆ ಸಂಬಂಧಿ ಸಿದೆ. ಆ ಬಳಿಕ ಭೋಗಾಂಗ. ತ್ಯಾಗಾಂಗವು ಸರಿಯಾಗಿ ಸಾಧಿಸ ದಿದ್ದರೆ ಈ ಭೋಗಾಂಗವೆಂದೂ ಸಾಧಿಸಲಾರದು. ಇದು ಐಹಿಕ

ವಿಷಯ. ತ್ಯಾಗದಿಂದ ತ್ಯಾಗಾಂಗಲಾಗಿ ಪಾರಮಾರ್ಥದ ಸುವಿಷಯ ಗಳನ್ನು ಭೋಗಿಸುವನು. ಭೋಗಾಂಗವು ಪ್ರಸಾದ ಪ್ರಾಣಲಿಂಗ ಸ್ಥಲಕ್ಕೆ ಸಂಬಂಧಿಸಿದ್ದನ್ನು ವಿಚಾರಿಸಿದರೆ ಇದು ನಿಜವೆನಿಸುವದು. ಆ ಬಳಿಕ ಯೋಗಾಂಗವು ಶರಣಐಕ್ಯ ಸ್ಥಲಗಳಿಗೆ ಸಂಬಂಧ ಪಡುವದು. ಆಗ ಶಿವ ಜೀವರ ಐಕ್ಯ ಸಮರಸ ಸರಿಯಾಗಿ ಸಾಧಿಸುವದು. ಇದು ಉಳಿದವರಂತೆ ಸತ್ತ ಬಳಿಕ ಸಿಗುವ ಉದ್ರಿ ಮೋಕ್ಷವಲ್ಲ. ಮೋಹವನ್ನು ಸಂಪೂರ್ಣ ಕ್ಷಯ ಮಾಡಿದರೆ ತೀರಿತು. ಈ ಜೀವನ್ಮುಕ್ತ ಸ್ಥಿತಿ ಸಹಜ ಪ್ರಾಪ್ತವಾಗುವದು. ಇದು ಒಳ್ಳೇ ಶ್ರೇಷ್ಠ ಸ್ಥಿತಿಯಾಗಿರುವದು. ಇದೇ ಶರೀರದಲ್ಲಿ ಕುಳಿತೇ ಭೋಗಿಸಲಿಕ್ಕೆ ಬರುವದು, ಅದಕ್ಕಾಗಿ ಮೊದಲು ತ್ಯಾಗಾಂಗ ಬೇಕೆಂದು ಹೇಳಿದರು. ಇದೇ ಮೋಹವನ್ನು ಕ್ಷಯ ಸುವದೇ ಆಗಿದೆ. ಹೊರಗಿನ ವಿಷಯತ್ಯಾಗವನ್ನು ಇದು ಹೇಳುವದು.

ಆಚಾರಲಿಂಗ— ಮೂಗಿನಲ್ಲಿದ್ದು ಹೊರಗಿನ ವಿಷಯ ಗಂಧ ತ್ಯಾಗದಿಂದ ಒಳಗಿನಿಂದ ತಾನೇ ಸುಗಂಧ ಹೊರಡುವದು. ಆಗ ಸುಚಿತ್ತವಾಗುವದು. ಯಾಕಂದರೆ ಚಿತ್ತವನ್ನು ಆಚಾರಲಿಂಗಕ್ಕೆ ಅರ್ಪಿಸಿದಾಗ ಸುಚಿತ್ತವಾಗುವದು. ಇದನ್ನು ಜೀವಾತ್ಮನು ಭೋಗಿಸುವನು. ಗುರುಲಿಂಗ— ನಾಲಿಗೆಯಲ್ಲಿದ್ದು ಹೊರಗಿನ ವಿಷಯ ರಸತ್ಯಾಗದಿಂದ ಒಳಗಿನಿಂದ ಸುರಸ ಹೊರಡುವದು. ಆಗ ಸುಬುದ್ಧಿಯಾಗುವದು. ಯಾಕಂದರೆ ಗುರುಲಿಂಗಕ್ಕೆ ಬುದ್ಧಿಯನ್ನು ಅರ್ಪಿಸುವೆವು. ಶಿವಲಿಂಗ— ಕಣ್ಣಲ್ಲಿದ್ದು ಹೊರಗಿನ ವಿಷಯ ರೂಪತ್ಯಾಗದಿಂದ ಒಳಗಿನಿಂದ ಸ್ವರೂಪ ಕಾಣಹತ್ತುವವು. ಆಗ ನಿರಹಂಕಾರವಾಗುವದು. ಅಹಂಕಾರವನ್ನು ಶಿವಲಿಂಗಕ್ಕೆ ಅರ್ಪಿಸುವೆವು. ಜಂಗಮಲಿಂಗ – ಚರ್ಮದಲ್ಲಿದ್ದು ಹೊರಗಿನ ವಿಷಯ ಸ್ಪರ್ಶದ ತ್ಯಾಗದಿಂದ ಒಳಗಿನ ಸುಸ್ಪರ್ಶದ ಅನುಭವವಾಗುವದು. ಆಗ ಸುಮನವಾಗುವದು. ಯಾಕಂದರೆ ಜಂಗಮಲಿಂಗಕ್ಕೆ ಮನವನ್ನು ಅರ್ಪಿಸುವೆವು. ಪ್ರಸಾದಲಿಂಗ— ಕಿವಿಯಲ್ಲಿದ್ದು ಹೊರಗಿನ ವಿಷಯ ಶಬ್ದಗಳ ತ್ಯಾಗದಿಂದ ಒಳಗಿನ ಸುಶಬ್ದಗಳ ಜ್ಞಾನವಾಗಿ ಕೇಳಹತ್ತುವವು. ಆಗ ಸುಜ್ಞಾನವಾಗುವದು. ಮಹಾಲಿಂಗ— ಹೃದಯದಲ್ಲಿದ್ದು ಹೊರಗಿನ ಎಲ್ಲ ವಿಷಯ ತ್ಯಾಗದಿಂದ ಸಂತೃಪ್ತಿ ಉಂಟಾಗುವದು. ಆಗ ಸದ್ಭಾವವಾಗುವದು. ಹೀಗೆ ವಿಷಯ ತ್ಯಾಗದಿಂದ ತ್ಯಾಗಾಂಗವಾಗಲು ಪಾರಮಾರ್ಥ ಸುವಿಷಯಗಳು ಒಳಗಿಂದ ಹೊರ

ಗಿನ ವಿಷಯ ಸಂಪರ್ಕವಿಲ್ಲದೆ ಪ್ರಕಟವಾಗುವವು. ಅವುಗಳನ್ನು ಜೀವನು ಭೋಗಿಸಲು ಭೋಗಾಂಗವಾಗುವದು. ಮುಂದೆ ಈ ಜೀವನು ಪ್ರಕೃತಿಯ ಜಾಡ್ಯದಿಂದ ಪೂರ್ಣ ಬಿಡುಗಡೆ ಹೊಂದಿ ಸಂಪೂರ್ಣ ಅರಿವಿನಿಂದ ಬೆರೆಯುವನು. ಆಗ ಯೋಗಾಂಗವಾಗುವದು. ಇದೇ ಶಿವಜೀವರ ಐಕ್ಯ. ಸಮರಸ ಲಿಂಗಾಂಗ ಸಾಮ-ರಸ್ಯವೆಂದು ಹೇಳಬಹುದು. ಇದೆಲ್ಲ ಷಟ್ಸ್ಥಲದ ಆಚರಣೆಯಿಂದ ಸಾಧಿಸುವದು.

## (೨೮) ದೇವನೊಬ್ಬನೇ ನಾಮ ಹಲವು

ದೇವನೊಬ್ಬ ನಾಮ ಹಲವು। ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ ದೇವನೊಬ್ಬನೆ ಕಾಣಿ ಕೂಡಲ ಸಂಗಮದೇವನೊಬ್ಬನೇ ದೇವನೊಬ್ಬ ಅದನ್ನೇ ಲಿಂಗರೂಪದಲ್ಲಿ ಧರಿಸಿ ಪೂಜಿಸುವರು. ಮತ್ತೊಂದಕ್ಕೆರಗಿದರೆ ಕಿವಿ ಮೂಗು ಕೊಯ್ಯುವನು ಎಂದು ಹೇಳಿದ್ದಾರೆ. ಅನೇಕ ದೇವರಾದರೆ ಭಕ್ತಿ ಸ್ಥಿರವಾಗುವದಿಲ್ಲ. ಕೆಡುವದೆಂದುತಿಳಿದು ಹೀಗೆ ಬಂಣಿಸಿದ್ದಾರೆ.

## (೨೯) ಇಹ ಪರದಲ್ಲಿ ಭೇದವಿಲ್ಲ ಒಂದೇ ಸರಿ!

ವೀರಶೈವರಲ್ಲಿ ಇಹ ಬೇರೆ ಪರ ಬೇರೆ ಎಂಬ ಭೇದವೇ ಇಲ್ಲ. ಇಹವೇ ಪರ, ಪರವೇ ಇಹವಾಗಿರುವದೆಂದು ಹೇಳಿದ್ದಾರೆ. ಪರದಲ್ಲಿಯಂತೆ ಇಹ ಜೀವನವಿರಬೇಕು. ಜೀವ ಪ್ರಪಂಚ ಬಿಟ್ಟು ಶಿವ ಪ್ರಪಂಚ ಸಾಕಿಸಬೇಕು- ಶಿವಪ್ರಪಂಚವೆಂದರೆ ವಿಷಯ ತ್ಯಾಗ ಜೀವನವೆಂದು ಅದರ ಅರ್ಥವಿರುವದು. (೧) ದೇವ ಲೋಕ ಮೃತ್ಯು ಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮೃತ್ಯುಲೋಕ ಆಚಾರವೇ ಸ್ವರ್ಗ ಅನಾಚಾರವೇ ನರಕ ಕೂಡಲ ಸಂಗಮದೇವಾ

(೨) ಮೃತ್ಯುಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವ

(೩) ದೇವಲೋಕ ಮೃತ್ಯುಲೋಕವೆಂಬುದು ಬೇರೆ ಮತ್ತುಂಟೇ? ಈ ಲೋಕದೊಳಗೆ ಮತ್ತನಂತಲೋಕ ಶಿವಲೋಕ ಶಿವಾಚಾರವಯ್ಯಾ

ಶಿವಭಕ್ತನಿದ್ದ ಠಾವೇ ದೇವಲೋಕ. ಭಕ್ತನಂಗಣವೇ ವಾರಣಾಸಿ, ಕಾಯಕವೇ ಕೈಲಾಸ ಇದು ಸತ್ಯ ಶಿವನಾಣೆ ಕೂಡಲ ಸಂಗಮದೇವ.

ಇವುಗಳ ಮೇಲಿಂದ ಇದೇ ಲೋಕದಲ್ಲಿ ಸಕಲ ಲೋಕಗಳುಂಟು. ನಮ್ಮ ಒಳ್ಳೇ ನಡೆ ನುಡಿಗಳಿಂದ ಇಲ್ಲೇ ಶಿವಲೋಕ ಮಾಡಿಕೊಳ್ಳ ಬಹುದು. ಕೆಟ್ಟ ನಡೆ ನುಡಿಗಳಿಂದ ನರಕವನ್ನು ನಾವೇ ಇಲ್ಲಿ ನಿರ್ಮಿಸಿಕೊಳ್ಳಬಹುದು.

## (೩೦) ಕಾಯಕಕ್ಕೆ ಮಹತ್ವವೇಕೆ ?

ಇಹ ಪರದಲ್ಲಿ ಭೇದವಿಲ್ಲ. ಜಗತ್ತು ಸತ್ಯವಾದುದರಿಂದ ಸತ್ಯ ಶುದ್ಧ ಕಾಯಕದಿಂದ ಈ ಸುಂದರವಾದ ಜಗವನ್ನು ಇನ್ನಷ್ಟು ಮತ್ತಷ್ಟು ಸುಂದಗೊಳಿಸಲು ಕಾಯಕಕ್ಕೆ ಅತಿ ಮಹತ್ವ ಕೊಟ್ಟಿದ್ದಾರೆ. ಹೀಗೆ ಉಳಿದವರಾರೂ ಮಹತ್ವ ಕೊಟ್ಟಿಲ್ಲ. ಎಲ್ಲರೂ ಸಂಸಾರ ಸುಳ್ಳು; ಶರೀರ ಹೊಲಸು ಎಂದು ನಂಬದವರೇ ಇದ್ದಾರೆ. ಶರೀರ ಪ್ರಸಾದ ಕಾಯವೆಂದು ವೀರಶೈವರು ಹೇಳಿ ಇದರ ಶುದ್ಧಿಗಾಗ ಸತ್ಯ ಶುದ್ಧ ಕಾಯಕವನ್ನು ಕೈಕೊಂಡರು.—ಕಾಯಕದಲ್ಲಿ ನಿರತನಾದರೆ ಗುರುದರ್ಶನ ಮರೆಯಬೇಕು. ಲಿಂಗಪೂಜೆಯ ಹಂಗು ಹರಿಯಬೇಕು. ಜಂಗಮ ಮುಂದಿದ್ದಡೆಯು ತೊರೆಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳ- ಕಾಯಕದಿಂದ ನಿತ್ಯ ಗುರುಲಿಂಗ ಜಂಗಮ ಪೂಜೆ ಸಹಜ ನಡೆಯುವದು ಯಾಕಂದರೆ ಸತ್ಯ ಶುದ್ಧವಾಗಿ ಕಾಯಕ ಮಾಡಿ ನಿತ್ಯ ಗಳಿಸಿದ್ದನ್ನು ದಾಸೋಹ ಭಾವದಿಂದ ಲೋಕ ಕಲ್ಯಾಣಕ್ಕೆ ತ್ಯಾಗ ಮಾಡುವನು. ಅದಕ್ಕೆ ಇವನ ಕಾಯಕ ಕೈಲಾಸವೆನಿಸುವದು. ಆಶ್ರಮದವರು ನಾಟಕೀ ಕಾಯಕ ಮಾಡುವರು. ದಾಸೋಹವಂತೂ ಇಲ್ಲವೇ ಇಲ್ಲ. ಪರರ ಧನದಿಂದ ಆಶ್ರಮಗಳನ್ನು ಬಹು ಅಂದಚಂದಾಗಿ ಸಿಂಗರಿಸಿಕೊಂಡಿದ್ದಾರೆ.

## (೩೧) ಉಳಿದವರತ್ಯಾಗ ಹಾಗೂ ಕಾಯಕ ಫಲ ತ್ಯಾಗಗಳಲ್ಲಿ ಅಂತರವೇನು ?

ಉಳಿದವರು ಹೊನ್ನು, ಹೆಣ್ಣು, ಮಣ್ಣುಗಳನ್ನು ತ್ಯಾಗ ಮಾಡಿ ಅವುಗಳಿಂದ ಮುಖ ತಿರುವಿ ಸಂಸಾರ ಬಿಟ್ಟು ಸಂನ್ಯಾಸಿಯಾಗಿ ಅರಣ್ಯ

ವಾಸಿಯಾಗಿ ಬಿಕ್ಷೆ ಬೇಡಿಕೊಂಡು ಉಂಡುಟ್ಟು ಉಪಜೀವಿಸಿ ಅಧ್ಯಾತ್ಮ ಸಾಧನ ಮಾಡುವರು. ಪರಾವಲಂಬಿಗಳು ಜ್ಞಾನವನ್ನು ಕ್ರಿಯೆ ಎಂಬ ಒರೆಗಲ್ಲಿಗೆ ಹಚ್ಚದೆ ಅನುಭವ ಮಾಡಿಕೊಳ್ಳದೆ ಬರೇ ಪುಸ್ತಕೀ ಪಾಂಡಿತ್ಯ ಗಳಿಸಿ ವಾಚಾಳಗಳಾಗುವರು. ಕರ್ತೃತ್ವಶಕ್ತಿ ಕಲ್ಪಕವೃತ್ತಿ ಹೋರಾಟ ಗಳಿಂದ ದೂರಾಗಿ ಎಲ್ಲವನ್ನೂ ದೇವರ ಮೇಲೆ ಭಾರ ಹಾಕಿ ಜಗತ್ತು ಸಂಸಾರ ಶರೀರ ಸುಳ್ಳೆಂದು ಹೇಳಿ ಇವರು ತ್ಯಾಗ ಮಾಡುವರು. ಆದರೆ ವೀರಶೈವರ ತ್ಯಾಗ ಬೇರೆ– ಸಂಸಾರ ಸುಳ್ಳಲ್ಲ; ಶರೀರ ಹೀನವಲ್ಲ; ಅಧ್ಯಾತ್ಮ ಸಾಧನಕ್ಕೆ ದೇವನಿಂದ ಬಂದ ಪ್ರಸಾದ ಕಾರ್ಯ ಇವರು ನಿತ್ಯ ಶುದ್ಧ ಕಾಯಕದಿಂದ ಗಳಿಸಿ ಪರರಿಗೆ ಅದರ ಫಲಗಳನ್ನು ದಾಸೋಹ ಭಾವದಿಂದ ನೀಡಿ ಉಳಿದ ಅಲ್ಪದರಲ್ಲಿಯೇ ಉಪಜೀವಿಸುವನು. ಪರಾವ ಲಂಬಿಯಲ್ಲ. ಬಿಕ್ಕೆ ಬೇಡಪು. ದೇಶವನ್ನು ಹಾಳುಗೆಡವನು. ಹೀಗಾಗಿ ಇವನ ತ್ಯಾಗವು ಶ್ರೇಷ್ಠವೆಂದು ಹೇಳಬಹುದು.

## (೩೨) ಕಾಯಕದ ಮುಖಾಂತರ ಆತ್ಮಜ್ಞಾನ

ಕಾಯಕವನ್ನು ಅವನು ತನ್ನ ಅಂತರಂಗ ಬಹಿರಂಗ ಶುದ್ಧಿಗಳಿ ಗಾಗಿ ಮಾಡುವನು. ಹೀಗೆ ಈವನು ಕಾಯಕದಿಂದ ಕೈಲಾಸವನ್ನು ಕಾಣುವನು. ಅಂದರೆ ಜ್ಞಾನವನ್ನು ಗಳಿಸುವನು. ವೀರಶೈವರು ಕಾಯ ಕಕ್ಕೂ ಜ್ಞಾನಕ್ಕೂ ವ್ಯತ್ಯಾಸ ಬಗೆದಿಲ್ಲ. ಜ್ಞಾನವೆಂದರೆ ತಿಳಿಯುವದು. ಕ್ರಿಯೆ ಅಂದರೆ ತಿಳಿದಂತೆ ಆಚರಿಸುವದು. ಅಂದಾಗ ಜ್ಞಾನ ಸಂಪೂರ್ಣ ವಾಗುವದು. ಇದೇ ಇವನ ಅಧ್ಯಾತ್ಮ ಸಾಧನ. ಪರಸ್ತ್ರೀ ಮುಟ್ಟಬಾ ರದೆಂದು ಕೇಳಿದ್ದೇ ಜ್ಞಾನ. ಅದರಂತೆ ಆಚರಿಸುವದೇ ಕ್ರಿಯೆ ಅಥವಾ ಕಾಯಕ ಅಂದಾಗ ಅನುಭವ ಜ್ಞಾನ ಸುಜ್ಞಾನವಾಗುವದು. ಬರೇ ಜ್ಞಾನದಿಂದ ಏನೂ ಉಪಯೋಗವಿಲ್ಲ. ಕ್ರಿಯೆ ಜ್ಞಾನಗಳು ಶಕ್ತಿ ಶಿವ ರಿದ್ದಂತೆ. ವೇದಾಂತಿಗಳಂತೆ ಓದಿ ಜ್ಞಾನ ಪಡೆಯುವದಿಲ್ಲ. ಈಗ ಮೂಲು ದ್ಯೋಗದ ಮುಖಾಂತರ ಜ್ಞಾನ ಅಥವಾ ವಿಧ್ಯ ಕಲಿಸುವಂತೆ ವೀರ ಶೈವರು ಕಾಯಕದ ಮುಖಾಂತರ ಜ್ಞಾನ ಸುಜ್ಞಾನವೆಂದರು. ಶರಣ ರೆಲ್ಲರೂ ಒಂದಿಲ್ಲೊಂದು ಉದ್ಯೋಗ ಮಾಡುತ್ತಿದ್ದರೆಂದು ಅವರ ಚರಿ ತ್ರೆಯಿಂದ ಗೊತ್ತಾಗುವದು. ಆದಕ್ಕಾಗಿ ಗುರುವಾದಡೂ ಕಾಯಕದಿಂದ ಮುಕ್ತ. ಜಂಗಮುಕ್ಕಾದಡೂ ಕಾಯಕ ಬೇಕೆಂದು ಹೇಳಿದ್ದಾರೆ.

## (೩೩) ಗೀತೆಯ ನಿಷ್ಕಾಮ ಕರ್ಮಕ್ಕೂ ಕಾಯಕಕ್ಕೂ ಅಂತರ

ಗೀತೆಯ ನಿಷ್ಕಾಮ ಕರ್ಮ ಫಲಾಪೇಕ್ಷೆ ಇಲ್ಲದ್ದು ಫಲ ಬಯಸಿದರೆ ದೋಷ ಬರುವದು. ಫಲದ ಬಯಕೆ ಆಶೆ ಸಹ ಇಲ್ಲದೆ ಕರ್ಮ ಮಾಡುವದಾಗಿದೆ. ಫಲ ಬಯಸಿದರೆ ಗೀತೆಯ ನಿಷ್ಕಾಮ ಕರ್ಮ ತಪ್ಪುವದು. ಆದರೆ ವೀರಶೈವರ ಕಾಯಕವು ಹಾಗೆ ಹೇಳುವದಿಲ್ಲ. ಫಲವನ್ನು ದೊರಕಿಸಿ ಅದನ್ನು ಪರರಿಗೆ ದಾಸೋಹಂ ಭಾವದಿಂದ ಅರ್ಪಿಸುವದಾಗಿದೆ. ಅದಕ್ಕಾಗಿ ಹೊಯ್ದರೆ ಹೊಯ್ಯಗಳು ಕೈ ಮೇಲೆ. ಬೈದರೆ ಬೈಗಳು ಕೈ ಮೇಲೆ ಹಿಂದಿನ ಜನನ ವೇನಾದರಾಗಲಿ ಇಂದಿನ ಫಲ ಕೈ ಮೇಲೆ ನಮ್ಮ ಕೂಡಲ ಸಂಗನ ಪೂಜಿಸಿದ ಫಲ ಕೈ ಮೇಲೆಂದು ಹೇಳಿದ್ದಾರೆ. ಕೊಲುವೆನೆಂಬ ಭಾಷೆ ದೇವನಾದರೆ ನೆಲುವೆನೆಂಬ ಭಾಷೆ ಭಕ್ತನದು ಇದು ಸಹ ಅದನ್ನೇ ಹೇಳುವದು. ನಾನು ಆರಂಭವ ಮಾಡುವೆನು ಗುರು ಪೂಜೆಗೆಂದು ನಾನು ವ್ಯವಹಾರವ ಮಾಡುವೆನು ಲಿಂಗಾರ್ಚನೆಗೆಂದು ನಾನು ಪರಸೇವೆಯ ಮಾಡುವೆನು ಜಂಗಮ ದಾಸೋಹಕ್ಕೆಂದು ನಾನಾವ ಕರ್ಮ ಮಾಡಿದರು ನೀ ಕೊಡುವೆ ಎಂಬುದನರಿತಿರ್ಪೆ ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ವ್ಯಯ ಮಾಡೆನು. ನಿಮ್ಮ ಸೊಮ್ಮಲ ನಿಮಗೆ ಸಲ್ಲಿಸುವೆನು. ನಿಮ್ಮಾಣೆ ಕೂ. ಸ. ದೇವಾ ಎಂದು ಕರ್ಮಫಲ ಬಯಸಿದ್ದು ಅದನ್ನು ಪರರಿಗಾಗಿ ದಾಸೋಹಂ ಭಾವದಿಂದ ತ್ಯಾಗ ಮಾಡುವದನ್ನೂ ಈ ವಚನ ಸೂಚಿಸುವದು.

## (೩೪) ಹೊನ್ನು ಮಣ್ಣು ತ್ಯಾಜ್ಯವಲ್ಲ.

ಇವೆರಡು ಈಹಲೋಕದ ಸಚೇತನ ಶಕ್ತಿ ಬಲಗಳಾಗಿವೆ. ಇಹಲೋಕದ ಬಲವಾದ ಸಾಧನಗಳಾಗಿವೆ. ಆದಕ್ಕೆ ಇವುಗಳನ್ನು ಸತ್ಯಶುದ್ಧ ನಿತ್ಯ ಕಾಯಕದಿಂದ ಗೆದಿಯಬೇಕು. ಸನ್ಯಾಸಿಯಂತೆ ಅವುಗಳಿಂದ ಮುಖದಿರುವಿ ಓಡಿ ಹೋಗಬಾರದು. ಶರಣರು, ಒಳ್ಳೆಯವರು, ಸತ್ಪುರುಷರು. ಯೋಗಿಗಳು ಇವುಗಳನ್ನೂ ಗೆದಿಯದಿದ್ದರೆ ದುರುಳರು, ದುರ್ಜನರು ಇವುಗಳನ್ನು ಸಹ ಗೆದಿಯುವರು. ಅವರಿಗೆ ಇವುಗಳಿಂದ ಬಹಳೇ ಬಲಬರುವದು. ಆಗ ಅವರು ಮತ್ತಷ್ಟು ದುರಾಚಾರ ಮಾಡುವರು. ಧರ್ಮಕ್ಕೆ ಅಳಿಗಾಲ ತರುವರು. ಒಳ್ಳೆಯವರಿಗೆ ಕಾಡುವರು. ಇವುಗಳಿಗಾಗಿ ಅವುಗಳನ್ನು ಬಳಸುವರು. ಅವುಗಳನ್ನು ಒಳ್ಳೆಯವರು

ಗೆದ್ದರೆ ಧರ್ಮ ಕಾರ್ಯಗಳಿಗೆ ದಾಸೋಹಕ್ಕೆ ವಿಧ್ಯಕ್ಕೆ ಲೋಕ ಕಲ್ಯಾಣಕ್ಕೆ ಬಳಸುವರು. ಇವುಗಳಿಗಾಗಿ ಒಳಗಾಗಬಾರದು. ಇವುಗಳನ್ನಾಆಳಬೇಕು. ಅದಕ್ಕಾಗಿ ಹೊನ್ನು ಮಾಯೆಯಲ್ಲ ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯಲ್ಲ ಮನದ ಮುಂದಿನ ಆಶೆಯೇ ಮಾಯೆ ಎಂದಿದ್ದಾರೆ. ಅದಕ್ಕೆ ಅವುಗಳನ್ನು ಗೆದ್ದು ಅವುಗಳ ಮೇಲೆ ಒಡೆತನ ನಡಿಸಿ ಯೋಗ್ಯ ಕೆಲಸಕ್ಕೆ ಬಳಸಬೇಕೆಂದು ವೀರಶೈವರು ಹೇಳುವರು. ಇದಕ್ಕಾಗಿಯೇ ಕಾಯಕಕ್ಕೆ ಮಹತ್ವ ಕೊಟ್ಟಿದ್ದಾರೆ.

### (೩೪) ಹೆಣ್ಣನ್ನು ತಿರಸ್ಕರಿಸಿ ಬಿಡುವದಲ್ಲ

ಸನ್ಯಾಸಿಯಂತೆ ಹೆಣ್ಣನ್ನು ತಿರಸ್ಕರಿಸಿ ಹೊಲಸೆಂದು ಬಿಟ್ಟು ಕಾಡಿಗೆ ಓಡಿ ಹೋಗಲು ವೀರಶೈವವು ಹೇಳುವದಿಲ್ಲ. ಮನೆ ಮಠಗಳಲ್ಲಿ ಹೆಣ್ಣಿದ್ದರೂ ಆಕೆಯು ಕೂಡ ಆಯಿ ತಾಯಿ ದೇವಿಯ ಭಾವನೆ ತಳೆದು ಒಳ್ಳೆ ನಿಷ್ಕಾಮವಾಗಿ ಇರಬೇಕು. ಅಧ್ಯಾತ್ಮ ಕಾರ್ಯಗಳಲ್ಲಿ ಆಕೆಯ ನೆರವನ್ನು ಪಡೆದು ತಾನೂ ಆಕೆಯು ಕೂಡ ಉದ್ಧಾರಾಗಬೇಕೆಂದು ವೀರಶೈವವು ಹೇಳುವದು. ಇದಕ್ಕೆ ಬಳಸಿ ಬ್ರಹ್ಮಚಾರಿ ಎನ್ನುವರು. ಹೆಣ್ಣಿನ ಕೂಡ ಬೆಂಬತ್ತಿದರೂ ಅದನ್ನು ಕಾಮ ತೃಪ್ತಿಗೆ ಉಪಯೋಗಿಸದೆ ಸಹಜ ಇದ್ದು ಬ್ರಹ್ಮಚಾರಿ ಯಾಗಿರಬೇಕೆಂದು ಇದರ ಅರ್ಥ. ಉಂಡ ಉಪವಾಸಿ ಅಂದರೆ ಉಪವಾಸ ಇದ್ದರೂ ಭೋಗಿಸದೆ ಇದ್ದರೂ ಸದಾ ಉಂಡವರಿಗಿಂತ ಭೋಗಿಸಿದವರಿಗಿಂತ ಹೆಚ್ಚಾಗಿ ಸಂತೃಪ್ತನಾಗಿ ಶಾಂತನಾಗಿ ಇದ್ದರೆ ಮಾತ್ರ ಉಂಡ ಉಪವಾಸಿ ಎನಿಸುವನು ಅದಕ್ಕಾಗಿ– ಸತಿಯ ಕಂಡು ಭ್ರತಿಯಾದ ಬಸವಣ್ಣ। ಭೃತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ! ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ। ಗುಹೆಶ್ವರ ನಿಮ್ಮಲ್ಲಿ ಬಾಲ ಬ್ರಹ್ಮಚಾರಿಯಾದಾತ ಬಸವಣ್ಣನೊಬ್ಬನೇ ಎಂದು ಪ್ರಭು ಬಣ್ಣಿಸಿದ್ದಾನೆ. ಬಹುತರ ಶರಣರೆಲ್ಲರೂ ಇದೇ ತರದ ಬಾಳುವೆಯನ್ನು ಹೆಚ್ಚಾಗಿ ಮಾಡಿದ್ದಾರೆ.

### (೩೬) ದಯವೇ ಧರ್ಮದ ಮೂಲವಯ್ಯ

ದಯವಿಲ್ಲದ ಧರ್ಮವಾವುದಯ್ಯ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲಿ ದಯವೇ ಧರ್ಮದ ಮೂಲವಯ್ಯಾ! ಕೂ. ಸ. ನಂತಲ್ಲದೊಲ್ಲನಯ್ಯ ಎಂದು ವೀರಶೈವರು ಬೋಧಿಸಿದರೆ ಉಳಿದವರು

ಅಹಿಂಸೋ ಪರಮೋ ಧರ್ಮಃ ಎಂದು ಹೇಳುವರು. ಕಾಯ್ಕಾವಾಚಾ ಮನಸಾ ಅನ್ಯ ಜೀವಿಗಳನ್ನು ಹಿಂಸೆ ಮಾಡದಿರುವದೇ ಶ್ರೇಷ್ಟ ಧರ್ಮ ವೆಂದು ಹೇಳುವರು. ಆದರೂ ಪ್ರಾಣಿ ವಧೆ ಮಾಡುವವರೇ ಹೆಚ್ಚಾಗಿ ದ್ದಾರೆ. ಹಿಂಸೆ ಮಾಡಬಾರದೆಂದು ಹೇಳಿ ಕೆಲವರು ಮಾತ್ರ ಕೊಲ್ಲದೆ ಇರಬಹುದು. ಆದರೆ ಈ ಅಹಿಂಸಾವಾದಿಗಳಿಂದ ಆ ಪ್ರಾಣಿಗಳಿಗೆ ಏನೂ ಕಲ್ಯಾಣವಾಗಲಿಲ್ಲ. ಅವುಗಳ ಉದ್ಧಾರವಾಗುವದಿಲ್ಲ. ಆದರೆ ಪ್ರಾಣಿಗಳಿಗೆ ದಯ ತೋರಬೇಕೆಂದು ಹೇಳಿದಾಗ ಅವುಗಳನ್ನು ಕೊಲ್ಲ ಬೇಡ ತಿನ್ನಬೇಡ ಎಂದು ಹೇಳುವದಲ್ಲದೆ ಅವುಗಳಿಗೆ ಉಪಕಾರ ಮಾಡು, ಅವುಗಳನ್ನು ಮೇಲೆತ್ತಲಿಕ್ಕೆ ತನು ಮನ ಧನಕೊಟ್ಟು ದುಡಿ, ಸೇವೆ ಮಾಡು ಎಂದು ಹೇಳಿದಂತೆ ಆಗುವದು. ಅದಕ್ಕೆ ಅಹಿಂಸೆ ದಯೆಗಳಲ್ಲಿಯ ಮಹದಂತರವನ್ನು ಇದರಿಂದ ನೀವು ಅರಿಯಬಹುದು. ಅದಕ್ಕೆ ದಯವೇ ಧರ್ಮದ ಮೂಲವೆಂದು ಹೇಳುವ ಧರ್ಮ ಶ್ರೇಷ್ಠ ವಲ್ಲವೆ? ಹೀಗೆ ವೀರಶೈವರಲ್ಲಿ ಪ್ರತಿಯೊಂದಕ್ಕೂ ಒಂದು ವೈಶಿಷ್ಟ್ಯವಿದೆ ಅರ್ಥ ಪೂರ್ಣವಾಗಿವೆ.

### (೩೭) ಯಜ್ಞ ಮಾಡಬಾರದು ಹೋಮ ಹವನ ಮಾಡಬಾರದು

ವೀರಶೈವರ ಹೊರತು ಉಳಿದವರು ಒಂದಿಲ್ಲೊಂದು ರೀತಿಯಿಂದ ಯಜ್ಞದ ನೆವದಿಂದ ಪ್ರಾಣಿವಧೆ ಮಾಡುವರು. ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆಹೊತೇ ಅಳು ಕಂಡ್ಯಾ ನೀನತ್ತುದಕ್ಕೆ ತಕ್ಕದ ಮಾಡುವನು ಕೂ. ಸ. ದೇ. ವೀರಶೈವರು ತಮ್ಮಲ್ಲಿಯ ದುರ್ಗುಣಗ ಳನ್ನು ಕೊಲ್ಲುವದೇ ಯಜ್ಞವೆನ್ನುವರು.

ಆದರಂತೆ ಹೋಮ ಹವನ ಮಾಡಿ ಅನ್ನ ತುಪ್ಪಗಳನ್ನು ಹಾಳು ಮಾಡಬಾರದೆಂದು ಹೇಳಿ ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರು ವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದ್ಧಿಯ ಧೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ ಕೂ. ಸ. ದೇ. ವಂದ ನೆಯ ಬಿಟ್ಟು ನಿಂದಿಸುತಿರ್ದರಯ್ಯ ಆದರೆ ವೀರ ಶೈವರು ಇಂಥ ಹೋಮ ಹವನಗಳನ್ನು ಮಾಡಿ ಅನ್ನದ ಅಪವ್ಯಯವನ್ನು ಮಾಡಿ ಅನ್ನದ ಆಹಾ ಕಾರವನ್ನು ಎಬ್ಬಿಸಲಿಕ್ಕೆ ನೆರವಾಗುವದಿಲ್ಲ. ಇವರು ದಾಸೋಹಂ ಭಾವ ದಿಂದ ಪರರ ಜಠರಾಗ್ನಿಯಲ್ಲಿ ಅನ್ನ ತುಪ್ಪನ್ನು ಹಾಕಿ ಹೋಮ ಹವನ

ಮಾಡುವರು. ಅದಕ್ಕಾಗಿ ವೀರಶೈವರೂ ಪ್ರತಿಯೊಂದು ರೀತಿಯಿಂದ ಅನ್ನ ದಾಸೋಹ ಹೆಚ್ಚಾಗಿ ಮಾಡುವರು. ಅದರಂತೆ ವಸ್ತ್ರ ದಾಸೋಹ ಜ್ಞಾನ ದಾಸೋಹ, ವಿದ್ಯಾ ದಾಸೋಹಗಳನ್ನು ಮಾಡುವರು. ಇವು ಒಳ್ಳೇ ಅರ್ಥ ಪೂರ್ಣ ಶ್ರೇಷ್ಠವಾದ ಹೋಮ ಹವನ ಯಜ್ಞಗಳಲ್ಲವೇನು? ಇದರಿಂದ ನಾಡಿನ ಉದ್ಧಾರವೇ ಆಗುವದು.

## (೩೮) ಜೋತಿಷ್ಯ ಕೇಳಬೇಡ.

ಮಾನವನು ಸದಾ ಪಂಚಾಂಗ ನೋಡಿ ತನ್ನ ಹಣೆಯಬರಹ ವನ್ನು ನೋಡುತ್ತ ಹೇಡಿಯಾಗುವದನ್ನು ಅರಿತು ಜೋತಿಷ್ಯ ಕೇಳ ಬೇಡೆಂದು ಹೇಳಿದ್ದಾರೆ ಇಂದು ಅಂದು ಮತ್ತೊಂದೆನಬೇಡ ಶಿವಶರ ಣೆಂಬುವಂಗೆ ಲಗ್ನವೆಲ್ಲಿಯದೊ ವಿಘ್ನವೆಲ್ಲಿಯದೋ ಸಂಗಯ್ಯ ದೋಷ ವೆಲ್ಲಿಯದೋ ದುರಿತವೆಲ್ಲಿಯದೋ ಸಂಗಯ್ಯ ನಿಮ್ಮ ಮಾಣದೆ ನೆನೆ ವಂಗೆ ಭವಕರ್ಮವೆಲ್ಲಿಯದು ಕೂಡಲಸಂಗಮದೇವ.

ಹೀಗೆ ಮಾಡಿ ಮಾನವನು ಕರ್ತೃತ್ವಶಕ್ತಿ ಕಲ್ಪಕವೃತ್ತಿ ಹೋರಾಟ ಗಳಿಂದ ಹೇಡಿಯಾಗಿ ವಿಮುಖನಾಗಬಾರದೆಂದು ಇವುಗಳನ್ನು ವಿಧಿಸಿ ದ್ದಾರೆ. ಪಂಚಾಂಗದಂತೆ ನಡೆಯಹತ್ತಿ ಅನೇಕ ಅನಾಹುತಗಳೂ ಮೂಢಾಚಾರಗಳೂ ಸಂಭವಿಸುತ್ತವೆಂದು ತಿಳಿದೇ ಇವುಗಳನ್ನು ಖಂಡಿ ಸಿದ್ದಾರೆ.

## (೩೯) ಶಕುನ ನೋಡಬೇಡ.

ಹಾವಾಡಿಗನು ಮೂಕೊರತಿಯು ತನ್ನ ಮಗನ ಲಗ್ನಕ್ಕೆ ಶಕು ನವ ನೋಡಲಿಕ್ಕೆ ಹೋಹಾಗ ಇದಿರಲೊಬ್ಬ ಹಾವಾಡಿಗ ಮೂಕೊ ರತಿಯ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ. ತನ್ನ ಕೈಯಲು ಹಾವು ತಾನು ಮೂಕೊರತಿಯು ಬಿನ್ನವನರಿಯದೆ ಅನ್ಯರನೆಂಬ ಕುನ್ನಿ ಯನೇನೆಂಬೆ ಕೂಡಲಸಂಗಮದೇವ. ಶಕುನ ನೋಡುವವರೂ ಹೇಡಿ ಗಳಾಗುವದರಿಂದ ಖಂಡಿಸಿದ್ದಾರೆ.

## (೪೦) ತೀರ್ಥ ಕ್ಷೇತ್ರಕ್ಕೆ ತಿರಗಬೇಡ.

ನೀರಕಂಡಲ್ಲಿ ಮುಳಗುವರಯ್ಯ ಮರನಕಂಡಲ್ಲಿ ಸುತ್ತುವರಯ್ಯ. ಬತ್ತುವಜರಿಯು ಒಣಗುವ ಮರನ ನಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ.

ಪಾಪಮಾಡಿ ಕ್ಷೇತ್ರತೀರ್ಥಗಳಿಗೆ ಹೋದರೆ ಅವು ಹೋಗುವ ದೆಂದು ಬಹು ಜನರ ನಂಬಿಗೆಯಿಂದ ಹೀಗೆ ಮಾಡುವರು. ಅದನ್ನು ಕಂಡೇ ವೀರಶೈವರು ಇವುಗಳನ್ನು ಖಂಡಿಸಿದ್ದಾರೆ. ಪ್ರವಾಸ ಮಾಡ ಲಿಕ್ಕೆ ಯಾರದೂ ತಕರಾರು ಇಲ್ಲ. ಆದರೆ ಪಾಪ ಮಾಡುವ ಪ್ರವೃತ್ತಿ ಇವುಗಳಿಂದ ಬೆಳೆಯುವದೆಂದು ಅವುಗಳನ್ನು ಖಂಡಿಸಿದ್ದಾರೆ.

## (೪೧) ಪುರಾಣ ಕೇಳಿದರೆ ಉಪಯೋಗವಿಲ್ಲ.

ಅನೇಕ ಅದ್ಭುತ ಕಥೆಗಳ ಪುರಾಣಗಳನ್ನು ಕೇಳಿದರೆ ಪಾಪ ಹೋಗುವದೆಂದು ಹೇಳಿ ಹೀಗೆಲ್ಲ ಮಾಡುವವರಿಗೆ ಛೀಹಾಕಿದ್ದಾರೆ— ಆದಿಪುರಾಣ ಅಸುರರಿಗೆ ಮಾರಿ । ವೇದ ಪುರಾಣ ಹೋತಿಂಗೆ ಮಾರಿ । ರಾಮ ಪುರಾಣ ರಕ್ಕಸರಿಗೆ ಮಾರಿ। ಭಾರತ ಪುರಾಣ ಗೋತ್ರಕ್ಕೆ ಮಾರಿ। ಇವೆಲ್ಲ ಪುರಾಣ ಕರ್ಮಕ್ಕೆ ಮೊದಲು । ನಿಮ್ಮ ಪುರಾಣಕ್ಕೆ ಸರಿಇಲ್ಲ ಕೂಡಲಸಂಗಮದೇವ.

ರಾಮ, ಕೃಷ್ಣ, ವಾಮನ, ನೃಸಿಂಹ ಮೊದಲಾದವರು ಅವತಾರ ತಾಳಿ ರಕ್ಕಸರನ್ನು ವಧೆಮಾಡಿ ದೇಶಕಲ್ಯಾಣ ಧರ್ಮರಕ್ಷಣೆ ಮಾಡಿ ದ್ದಾರೆಂದು ಅನೇಕ ಪುರಾಣಗಳನ್ನು ಬರೆದರು. ಜನರು ಅವುಗಳನ್ನು ಕೇಳುವದರಿಂದ ಪಾಪಹೋಗುವದೆಂದು ಹೇಳುವರು. ಆದರೆ ಇವರ ಅವತಾರದ ಉದ್ದೇಶವೇ ತಪ್ಪೆಂದೆನಿಸುವದು. ಯಾಕಂದರೆ— ಸಾಧು ಗಳ ರಕ್ಷಣೆಗೋಸ್ಕರ ದುಷ್ಟರ ವಿನಾಶಕ್ಕೋಸ್ಕರ ಮತ್ತು ಧರ್ಮದ ಪುನರುದ್ಧಾರ ಮಾಡುವದಕ್ಕೋಸ್ಕರ ಯುಗಯುಗಾಂತರದಲ್ಲಿ ಅವ ತಾರ ತಾಳಿಬರುವೆನೆಂದು ಪರಮಾತ್ಮನು ಹೇಳಿದ್ದಾನೆಂದು ಬರೆದಿದ್ದಾರೆ. ಆದರೆ ಇದು ಪರಮಾತ್ಮನಿಗೆ ಶೋಭಿಸುವದಿಲ್ಲ. ಆದರೆ ವೀರಶೈವರು ದುರ್ಜನರ ದುಷ್ಟರ ದುಷ್ಟತನಗಳನ್ನು ಹೋಗಲಾಡಿಸಿ ಅವರನ್ನು ಶಿಷ್ಟರನ್ನಾಗಿ ಮಾಡಲಿಕ್ಕೆ ದೇಶದಲ್ಲಿ ಶಾಂತಿ ನೆಲೆಗೊಳಿಸಲಿಕ್ಕೆ ಅವ ತರಿಸುವರೆಂದು ನಂಬಿದ್ದಾರೆ. ಗೀತೆಯು ಆ ವಾಕ್ಯಕ್ಕೂ ಶರಣರ ಈ ವಾಕ್ಯಕ್ಕೂ ಮಹದಂತರವಿರುವದು. ದುಷ್ಟರನ್ನು ವಧಿಸಿದರೆ ಪುನಃ ಅವರು ಹೊಸ ಜನ್ಮತಾಳಿ ಮೊದಲಿಗಿಂತ ಹೆಚ್ಚಿನ ದುಷ್ಟರಾಗು ವರು. ಇದು ಹೀಗೆ ಸಾಗುವದರಿಂದ ದೇಶದಲ್ಲಿ ನೆಮ್ಮದಿಯುಂಟಾಗು ವದಿಲ್ಲ. ಆದರೆ ದುಷ್ಟರನ್ನು ಕೊಲ್ಲದೆ ಅವರಲ್ಲಿಯ ದುರ್ಗುಣಗಳನ್ನು

ಕೊಂದರೆ ಅವರು ಶಿಷ್ಯರಾಗಿ ಬಿಡುವರು. ಇದರಿಂದ ದೇಶದಲ್ಲಿ ಕೆಲಕಾಲದ ತರವಾಯ ನೆಮ್ಮದಿ, ಶಾಂತಿಗಳು ನೆಲಿಸುವವು. ಹಾವನ್ನು ಕೊಲ್ಲದೆ ಅದರ ವಿಷದ ಹಲ್ಲನ್ನು ತೆಗೆದರೆ ಒಳಿತೇ ಆಗುವದು. ಇದನ್ನರಿತೇ ಮಹಾತ್ಮಾ ಗಾಂಧಿಯುವರು ಸತ್ಯ, ಅಹಿಂಸೆ ಅಸಹಕಾರಗಳಿಂದ ಸ್ವರಾಜ್ಯ ತಂದು ಕೊಟ್ಟರು. ಶರಣರು ಇದರಂತೆ ನಡೆದು ಅನೇಕ ದುಷ್ಟರನ್ನು ಶಿಷ್ಯರನ್ನಾಗಿ ಮಾಡಿದ್ದುಂಟು. ನನ್ನಯ್ಯನ ಕಥೆ ಇದಕ್ಕೆ ಉದಾಹರಣೆ.

## (೪೨) ದೈವವಾದ ಪ್ರಯತ್ನವಾದಗಳನ್ನು ಸಮನ್ವಯಗೊಳಿಸಿದರು.

ಪೂರ್ವಾತ್ಯರು ದೈವವಾದಿಗಳು ಹಣೆಯಬರಹವೆನ್ನುವವರು. ಎಲ್ಲವನ್ನೂ ದೇವರ ಮೇಲೆ ಭಾರ ಹಾಕಿ ಪ್ರಯತ್ನ ಮಾಡದೇ ದೇವನ ಕೃಪೆಗೆ ಕೈಚಾಚಿ ಕುಳಿತವರು ಹೇಡಿಗಳಾದರು. ಪಾಶ್ಚಿಮಾತ್ಯರು ದೇವರನ್ನು ಅಲ್ಲಗಳೆದು ಪುರುಷ ಪ್ರಯತ್ನವೇ ಮೇಲೆಂದರು. ಇವರಿಬ್ಬರಲ್ಲಿಯ ದೋಷಗಳನ್ನು ವೀರಶೈವರು ಕಂಡು ಅನುಭವಗೊಂಡು ಪ್ರಯತ್ನವೂಬೇಕು ದೈವಕೃಪೆಗಾಗಿ ಆತನ ಭಕ್ತಿಯೂ ಬೇಕೆಂದು ಸಾರಿದರು. ಭಕ್ತಿ + ಕರ್ಮಗಳನ್ನು ಕೂಡಿಸಿ ಜ್ಞಾನ ಗಳಿಸಿದರು.— ಸುಖಬಂದಡೆ ಪುಣ್ಯದ ಫಲವೆನ್ನೆನು ದುಃಖ ಬಂದಡೆ ಪಾಪದ ಫಲವೆನ್ನೆನು, ನೀ ಮಾಡಿದ್ದಾಯಿತೆಂದೆನ್ನೆನು, ಕರ್ಮಕ್ಕೆ ಕರ್ತೃವೇ ಕಡೆ ಎಂದೆನ್ನೆನು, ಉದಾಸೀನವಿಡಿದು ಶರಣೆನ್ನೆನು ಕೂಡಲ ಸಂಗಮ ದೇವ. ನೀ ಮಾಡಿದುಪದೇಶ ಎನಗೆ ಈ ಪರಿಯಲಿ ಸಂಸಾರ ಸವಿಯ ಬಳಸುವೆನು.

## ವೀರಶೈವರ ನಾಲ್ಕು ಸಮತೆಗಳು.

ಮೇಲೆ ಹೇಳಿದಂತೆ ವೀರಶೈವರಲ್ಲಿಯ ತತ್ವಗಳನ್ನು ನಾಲ್ಕು ಸಮತೆಯಲ್ಲಿ ವಿಂಗಡಿಸಬಹುದು. (೧) ಧಾರ್ಮಿಕ ಸಮತೆ (೨) ರಾಜಕೀಯ ಸಮತೆ (೩) ಸಾಮಾಜಿಕ ಸಮತೆ (೪) ಆರ್ಥಿಕ ಸಮತೆ. ಈ ಪ್ರಕಾರ ಯಾವ ದೇಶದಲ್ಲಿ ಯಾವ ಧರ್ಮದಲ್ಲಿ ಇಷ್ಟು ಸಮತೆಗಳಿಲ್ಲ.

(೧) ಧಾರ್ಮಿಕ ಸಮತೆಃ— ಜಾತಿಭೇದವಿಲ್ಲದೆ ಸ್ತ್ರೀಪುರುಷರೆಂಬ ಭೇದ ಮಾಡದೆ ಅಬಾಲವೃದ್ಧರಿಗೆಲ್ಲ ಅಷ್ಟಾವರಣ ಪಂಚಾಚಾರ ಷಟ್

ಸ್ಥಲಗಳು ಸರಿಯಾಗಿ ಇರುವವು. ಉಚ್ಚ, ನೀಚ, ಶ್ರೇಷ್ಠ, ಕನಿಷ್ಠ ಭೇದಗಳಿಲ್ಲ. ಯೋಗ್ಯ ಹೃದಯಕ್ಕೆ ಸ್ಥಾನವಿತ್ತು. ಸ್ತ್ರೀಯರೂ ಗುರು ಜಂಗಮರಾಗಿ ಅವ್ವರಿಗೆ ಲಿಂಗಧಾರಣ ಮಾಡುವರು.

(೨) ರಾಜಕೀಯ ಸಮತೆ:— ಜಾತಿಭೇದವಿಲ್ಲದೆ ಯೋಗ್ಯತೆಯುವರಿಗೆ ರಾಜ್ಯಕೀಯ ವ್ಯವಹಾರದಲ್ಲಿ ಎಲ್ಲರಿಗೂ ಯೋಗ್ಯ ಸ್ಥಾನಮಾನಗಳಿದ್ದವು, ದೇಶಭಕ್ತರೂ ಇದ್ದರು. ಈಗಿನ ಕಾಲದ ಕುಟಿಲಕಾರಸ್ಥಾನ ಕಪಟತನ, ಮೋಸ, ಪೇಚಗಳಿರಲಿಲ್ಲ. ಯೋಗ್ಯ ಮಿದುಳಿಗೆ ಸ್ಥಾನ ಮಾನವಿತ್ತು.

(೩) ಸಾಮಾಜಿಕ ಸಮತೆ—ಸಮಾಜದ ಘಟಕವಾದ ಪ್ರತಿ ವ್ಯಕ್ತಿಗೆ ಸಮಾಜ ಕಾರ್ಯದಲ್ಲಿ ಸರಿಯಾದ ಸ್ವಾತಂತ್ರ್ಯ ಸ್ಥಾನಮಾನಗಳಿದ್ದವು. ಇವೆಲ್ಲ ಜಾತಿವಾಚಕ ಎಂದೆ ನೀತಿ, ಶೀಲ, ತ್ಯಾಗ, ಸತ್ಯ, ಭಕ್ತಿ, ಜ್ಞಾನಗಳ ಮೂಲಕ ಎಲ್ಲರಿಗೂ ಸ್ಥಾನಮಾನಗಳು ಸಿಗುತ್ತಿದ್ದವು. ಭಕ್ತ ಭವಿ ಎಂದು ಎರಡೇ ಜಾತಿಗಳಿದ್ದವು. ಯೋಗ್ಯ ಮನ, ಭಾವಗಳಿಗೆ ಯೋಗ್ಯ ಸ್ಥಾನವಿತ್ತು.

(೪) ಆರ್ಥಿಕ ಸಮತೆ— ಎಲ್ಲ ಸ್ತ್ರೀಪುರುಷರು ಗುರು ಜಂಗಮ ಭಕ್ತರು ಸಹ ಬೇಕಾದ ಕಾಯಕ ಮಾಡಬಹುದಾಗಿತ್ತು. ಅವುಗಳಲ್ಲಿ ಅಂತರವಿಲ್ಲ. ಗರಜಿನ ಪೂರ್ತೆ ಬಳಸಿ ಉಳಿದುದನ್ನು ದಾಸೋಹಂ ಭಾವದಿಂದ ಪರರಿಗೆ ಅರ್ಪಣ ಮಾಡುತ್ತಿದ್ದದರಿಂದ ಒಬ್ಬರಲ್ಲೆ ಧನ ಸಂಗ್ರಹವಾಗಿ ಬೀಳುತ್ತಿರಲಿಲ್ಲ. ಹೀಗಾಗಿ ಆರ್ಥಿಕ ಸಮತೆ ಇತ್ತು. ಯೋಗ್ಯ ಕೈಗಳಿಗೆ ಸ್ಥಾನವಿತ್ತು.

## (೪೪) ಮುಕ್ತಿಯುಂಥಹದು ?

ಭಕ್ತಿಪಂಥಗಳಂತೆ ವೇದಾಂತಗಳಂತೆ ಮುಕ್ತಿ ಸಂಸಾರದಿಂದ ಬಿಡುಗಡೆ ಜನನಮರಣ ರಹಿತನಾಗಿ ಸಂಸಾರ ದುಃಖದಿಂದ ಬಿಡುಗಡೆ ಹೊಂದಬೇಕೆಂದು ಅರಚುತ್ತ ಕೂಡ್ರುವವರು ವೀರಶೈವರಲ್ಲ. ಸಂಸಾರ ವೀರಶೈವರಿಗೆ ಭಾರವಲ್ಲ ದುಃಖವೂ ಅಲ್ಲ. ಅದಕ್ಕೆ ಅಂಜುವ ಕಾರಣವೂ ಇಲ್ಲ. ಇದು ಶಿವನ ಪ್ರಸಾದ. ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ ಮಳೆ ನಿಮ್ಮ ದಾನವೆಂದು ಹೇಳಿದ್ದಾರೆ. ಇದನ್ನು ಸರಿಯಾಗಿ ಸಾಧನವಾಗಿ ಉಪಯೋಗಿಸಿಕೊಂಡರೆ ಇಹವೇ ಪರನಾಗುವದು. ಪರದಲ್ಲಿ

ಯಂತೆ ಇಹದಲ್ಲಿ ಬಾಳಬೇಕು. ತನ್ನ ಅನಿಷ್ಟಗಳನ್ನು ಹೊಡೆದೋಡಿಸಿ ಜಗತ್ತಿನ ಎಲ್ಲರ ಅನಿಷ್ಟಗಳನ್ನು ಹೊಡೆದೋಡಿಸಿ ತನ್ನಲ್ಲಿ ಹಾಗೂ ಎಲ್ಲರಲ್ಲಿ ಇಷ್ಟಗಳನ್ನು ಸ್ಥಾಪಿಸುವದೇ ಇವರ ಮುಕ್ತಿ. ಸಂಸಾರಕ್ಕೆ ಅಂಜಿ ಓಡುವದಿಲ್ಲ. ಅದಕ್ಕಾಗಿಯೇ ವೀರಶೈವರು ಇಷ್ಟಲಿಂಗಗಳನ್ನು ಧರಿಸಿದ್ದಾರೆ. ಭೂಮಿಯ ಮೇಲೆ ಸ್ವರ್ಗತರುವದೇ ಇವರ ಮುಕ್ತಿಯಾಗಿದೆ. ಭೂಮಿಯಲ್ಲಿ ಭೂಕೈಲಾಸ ಮಾಡಲಿಕ್ಕೆ ಹೋಗುವದೇ ಇವರ ಮುಕ್ತಿ. ಎಲ್ಲರಲ್ಲಿ ಸ್ವರ್ಗವನ್ನು ಇರಿಸುವರು. ಮೋಹವನ್ನು ಕ್ಷಯಮಾಡಿ ನಿರ್ಮೋಹಿತರಾಗಿ ಸರಿಯಾಗಿ ಸಂಸಾರ ಸಾಗಿಸಿ ಪರರ ಕಲ್ಯಾಣಕ್ಕಾಗಿ ತನ್ನ ಸರ್ವಸ್ವವನ್ನೇ ಧಾರೆಯರೆಯುವದೇ ಇವರ ಮುಕ್ತಿಯಾಗಿದೆ. ಶಿವನಂತೆ ಸಕಲ ಶಕ್ತಿ ಸಂಪನ್ನನಾಗಿ ಭೂಕೈಲಾಸ ಮಾಡಲು ಹೆಣಗುವದೇ ಇವರ ಮುಕ್ತಿಯಾಗಿದೆ. ಹೀಗೆ ಜಗತ್ತಿನಲ್ಲೆಲ್ಲ ಸಕಲ ಪ್ರಾಣಿಗಳಾಗುವತನಕ ವೀರಶೈವನಿಗೆ ಬಿಡುಗಡೆ ಇಲ್ಲ. ಇದೇ ಅವನ ಮುಕ್ತಿಯಾಗಿದೆ.

### (೪೫) ಯೋಮುಕಾಯ.

ಈ ಪ್ರಕಾರ ನಿತ್ಯ ಸಾಧನದಿಂಗ ಜೀವನವನ್ನು ಸಾಗಿಸುತ್ತಿದ್ದರೆ ಶರೀರವಿಕಾಸ ಆತ್ಮವಿಕಾಸ ಬುದ್ಧಿವಿಕಾಸ ಮನವಿಕಾಸ ಚಿತ್ತವಿಕಾಸ ಭಾವವಿಕಾಸ ಆಗಿ ಕಡೆಗೆ ಯೋಮುಕಾಯವನ್ನು ಪಡೆಯುವತನಕ ವಿಕಾಸ ಹೊಂದುವನು. ಯೋಮುಕಾಯವೆಂದರೆ ಬಯಲುಸ್ವರೂಪದ ಕಾಯವೆಂದರ್ಥವಿರುವದು. ಆತ್ಮಲಿಂಗದ ಗುಣಗಳು ಶರೀರದಲ್ಲಿ ಸಂಪೂರ್ಣ ಅಳವಡುವವು. ಆಗ ಅದನ್ನು ಕತ್ತಿ ಕಡಿಯದ ಮಳೆ ತೋಯಿಸದು, ನೀರು ಮುಳುಗಿಸದು, ಮುಳ್ಳುಚುಚ್ಚದು, ಗುಂಡು ಹಾರದು, ಛಳಿನಡುಗಿಸದು, ಅಗ್ನಿಸುಡದು ಎಂಬಂತೆ ಈ ಶರೀರ ಆಗುವದು. ಆಗ ಸರ್ವಾಂಗಲಿಂಗಿ ಲಿಂಗಾಂಗ ಸಾಮರಸ್ಯ ಶಿವಜೀವರ ಐಕ್ಯ ಸಂಪೂರ್ಣಸಾಧಿಸಿತೆಂದು ಹೇಳಬಹುದು. ಇದನ್ನು ಉಳಿದವರ ಗ್ರಂಥಗಳಲ್ಲಿ ಹೇಳಿಲ್ಲ. ಇದನ್ನು ಪ್ರಭುದೇವರು ಸಾಧಿಸಿದ್ದರು. ನೀಲಾಂಬಿಕೆ ಬೊಂತಾದೇವಿ ಬಸವಣ್ಣ ಮೊದಲಾದವರಿಗೆ ಇದು ಸಾಧಿಸಿದ್ದರಿಂದ ಕಾಯವೆರಸಿ ಕೈಲಾಸಕ್ಕೆ ಹೋದರೆಂದು ಹೇಳುವರು. ಇದರ ಅರ್ಥವೇನಂದರೆ ಕಾಯವನ್ನು ಬಯಲಿನೊಡನೆ ಬಯಲು ಮಾಡಿ ಬಿಟ್ಟರೆಂದು ತಿಳಿಯಬೇಕು. ತಮ್ಮ ಲಿಂಗದಲ್ಲಿ ಐಕ್ಯ ಆದರೆಂದರೆ ಇದೇ ಸರಿ. ಲಿಂಗ

ಒಡೆದು ಒಳಗೆ ಇಳಿಯಲಿಲ್ಲ. ಕಾಯಬಯಲ ಮಾಡಿದರು. ಹೀಗೆ ಜೀವ ಶರೀರ ಶಿವ ಈ ಮೂವರಲ್ಲಿ ಅತಿ ಸಾಮರಸವನ್ನುಂಟು ಮಾಡಿದರೆಂದು ತಿಳಿಯಬೇಕು.

## (೪೬) ವೀರಶೈವರಲ್ಲಿ ನಿಜವಾದ ಸಾಮರಸ್ಯವಿರುವದು.

ವೀರಶೈವರ ಸಾಮರಸ್ಯವು ಬಹು ವಿಶಾಲ ವ್ಯಾಪಕವಿರುವದು. ಹೇಗೆಂದರೆ ಜೀವ ಜೀವಗಳಲ್ಲಿ ಜೀವ ಜಡದಲ್ಲಿ ಜಡಜಡದಲ್ಲಿ ಜೀವ ಪರಮನಲ್ಲ. ಜಡಪರಮನಲ್ಲಿ ಸಹ ಸಾಮರಸ್ಯವನ್ನು ಕಟ್ಟಕಡೆಗೆ ಕಾಣುವರು. ಇದೇ ಅವರ ಮುಕ್ತಿಯ ಚರಮ ವಾಕ್ಯವಾಗಿದೆ. ಹೀಗೆ ಎಲ್ಲ ರೀತಿಯ ಸಾಮರಸ್ಯವನ್ನು ಪಡೆಯುವತನಕ ಸಾಧನ ಕಾಯಕ ಭಕ್ತಿ ಜ್ಞಾನಗಳನ್ನು ಮಾಡುತ್ತಿದ್ದರು. ಇಂಥ ಚರಮಾವಸ್ಥೆಯೇ ಶಿವಸ್ವರೂಪವಾಗಿದೆ. ಇದನ್ನು ವೀರಶೈವರು ಪಡೆದು ಅನ್ಯರಿಗೂ ಪಡೆಯಲಿಕ್ಕೆ ನೆರವಾಗುವರು. ಅವರು ತಮ್ಮಷ್ಟಕ್ಕೆ ತಾವೇ ಮುಕ್ತಿ ಮುಕ್ತಿ ಎಂದು ಅರಚುತ್ತ ಕೂಡ್ರುವವರಲ್ಲ.

ಇಷ್ಟು ಹೇಳಿ ನನ್ನ ಭಾಷಣವನ್ನು ಮುಗಿಸುವೆನು ಶರಣು ಶರಣು.

# ಹಿತವಚನಗಳು.

ಲೇಖಕರುಃ— ವೇ॥ ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ ರಾಮಪೂರ

( ಜುಲೈ ಸಂಚಿಕೆಯಿಂದ ಸಾಗಿಬಂದದ್ದು. )

೪೨. ಮನುಷ್ಯ ಜನ್ಮವು ಬಹು ಶ್ರೇಷ್ಠವಾದದ್ದು. ಈ ಮಾನವ ಜನ್ಮದಲ್ಲಿ ಜನಿಸಬೇಕಾದರೆ ಹಿಂದಿನ ಜನ್ಮದಲ್ಲಿಯ ಪುಣ್ಯದ ಪ್ರಭಾವ ದಿಂದ ಈ ಉಚ್ಚಮನುಷ್ಯ ಕಾಯವನ್ನು ಧರಿಸಬೇಕಾವದು. ಅದಕ್ಕಾಗಿ—

ಶ್ಲೋಕಃ—ದುರ್ಲಭಂ ಮನುಷ್ಯ ಜನ್ಮಾನಾಂ । ವಿವೇಕಮತೀ ದುರ್ಲಭಂ ।
ದುರ್ಲಭಂ ಶಿವಪೂಜಾನಾಂ । ಜ್ಞಾನೀ ತ್ರೈಲೋಕ್ಯ ದುರ್ಲಭಂ ॥

ಹೀಗೆ ಹೇಳಿದ್ದಾರೆ—ಅಂದರೆ— "ದುಲಂಭಂ ಮನುಷ್ಯ ಜನ್ಮಾನಾಂ" । ಈ ಮನುಷ್ಯ ಜನ್ಮವು ದೊರೆಯಬೇಕಾದರೆ ಬಹಳೇ ದುರ್ಲಭವು. ಯಾಕಂದರೆಃ—ಎಂಬತ್ತುನಾಲ್ಕುಲಕ್ಷ ಯೋನಿಗಳಲ್ಲಿ ತಿರುಗಿ ತಿರುಗಿ ಬರಬೇಕಾಗುವದು. ಅದಕ್ಕಾಗಿ ದುರ್ಲಭವೆಂದು ಹೇಳಿದ್ದಾರೆ.

ಅದರಲ್ಲಿ ವಿವೇಕ ಮತಿಗಳೂ ದುರ್ಲಭ—ಮತ್ತೂ "ದುರ್ಲಭಂ ಶಿವ ಪೂಜಾನಾಂ" । ಅಂದರೆ ಶಿವನ ಪಾದಾರವಿಂದವನ್ನು ಅನನ್ಯ ಭಕ್ತಿಯಿಂದ ಪೂಜಾ ಮಾಡುವಂಥವರು ದೊರೆಯುವದು. ಅತೀ ದುರ್ಲಭವೆಂದು ಹೇಳಿದ್ದಾರೆ. ಇದಕ್ಕೂ ಸಾರಾಸಾರ ವಿಚಾರ ಮಾಡಿ ನಾನು ಯಾರು ? ಇಲ್ಲಿಗೆ ಯಾತಕ್ಕೆ ಬಂದೆ ? ನಾನಿನ್ನು ಏನು ಮಾಡಬೇಕು? ಯಾವದರಿಂದ ಸುಖ-ಯಾವದರಿಂದ ದುಃಖ ಎಂಬ ವಿಷಯುಗಳನ್ನು ಅರಿತು ಆಚರಿಸುವವರು ದುರ್ಲಭ. ಇಂಥವರು ಮೂರು ಲೋಕದಲ್ಲಿಯೂ ದೊರೆಯುವದು ವಿರಳ. ಒಂದು ವೇಳೆ ಈ ಮನುಷ್ಯ ಜನ್ಮವು ತಪ್ಪಿದರೆ ಪುನಃ ಎಂಭತ್ತುನಾಲ್ಕು ಲಕ್ಷ ಯೋನಿಗಳಲ್ಲಿ ತಿರುಗಿ ತಿರುಗಿ ಬಂದು "ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ ಶಯನಂ"॥ ಅದಕ್ಕಾಗಿಯೇ ದುರ್ಲಭವೆಂದು ನುಡಿದಿದ್ದಾರೆ.

೪೩. ಈ ಸಂಸಾರ ತಾಪದಿಂದ ಬಳಲಿ ಬಾಯಾರಿದವರಿಗೆ ಶ್ರೀ ಪ್ರಮಥರ ವಚನವೆಂಬುದೇ ಹಾಲಿನ ಹೊಳೆ. ಈ ಹೊಳೆಯ ಹತ್ತಿರಿರುವ ಕೆಸರಾದರೂ ಬೆಲ್ಲವಿದ್ದಂತೆ ದಂಡೆಯಲ್ಲಿರುವ ಉಸುಕಾದರೂ ಸಕ್ಕರೆ. ಈ ಹೊಳೆಯಲ್ಲಿರುವ ನೊರೆ ತೆರೆಗಳು ಅಮೃತ. ಇಂಥ ವಚನಾಮೃತವನ್ನು ನಿತ್ಯ ಸೇವಿಸಿ ಎಂದೂ ಬಾಯಾರಿಕೆಯಾಗದಂತೆ ಮಾಡಿಕೊಳ್ಳುವದು ಪ್ರತಿಯೊಬ್ಬ ಭಕ್ತನ ಕರ್ತವ್ಯವಾಗಿದೆ.

೪೪. ಮನಸ್ಸೆಂಬ ಕಬ್ಬಿಣಕ್ಕೆ ಪ್ರಮಥರ ವಚನವು ಪರುಷದಂತೆ ಮನಸ್ಸಿನ ಮಲಿನತ್ವವನ್ನೆಲ್ಲಾ ತೊಳೆದು ಬಂಗಾರದಂತೆ ಶುದ್ಧಗೊಳಿಸುತ್ತದೆ. ಬೇವು ಬಾಯಿಯಲ್ಲಿ ಕಹಿಯಾಗಿದ್ದರೂ ಹೊಟ್ಟೆಯೊಳಗಿನ ಹುಳಗಳನ್ನೆಲ್ಲಾ ಕೊಂದು ಹೇಗೆ ಆರೋಗ್ಯವನ್ನು ಕೊಡುತ್ತದೆಯೋ ಹಾಗೆಯೇ ಪ್ರಮಥರ ವಚನಗಳಲ್ಲಿ ಸತ್ಯ ನಿದಾಕ್ಷಿಣ್ಯಗಳ ಹೊಳಪು ಇರುವದರಿಂದ ನಡೆಯಲು ಕಷ್ಟವಾಗಿ, ಕೇಳಲು ಕಟುವಾಗಿ ಇದ್ದರೂ ಅವುಗಳನ್ನು ಆದರದಿಂದ ಕೇಳಿ ಅವುಗಳಂತೆ ನಡೆದರೆ ಮನಸ್ಸಿನ ನಾನಾ ಕೆಟ್ಟ ಕಲ್ಪನೆಗಳೆಂಬ ಕ್ರಿಮಿಗಳೆಲ್ಲಾ ನಾಶವಾಗಿ ಈ ಭವರೋಗವು ನಿವಾರಣೆಯಾಗುತ್ತದೆ.

೪೫. ಪ್ರಮಥರ ವಚನಗಳಲ್ಲಿ ಇಂತಹ ಸತ್ಯ ಸಿದ್ಧಾಂತ ಮತ್ತು ಸಾಮರ್ಥ್ಯಗಳಿರುವದರಿಂದಲೇ ಶ್ರೀ ಶಿದ್ಧರಾಮ ಶಿವಯೋಗಿಗಳು ಹೀಗೆ ಹೇಳಿರುವರು.

ಎಮ್ಮ ವಚನದೊಂದು ಪಾರಾಯಣಕ್ಕೆ ವ್ಯಾಸನದೊಂದು ।
ಪುರಾಣ ಸರಿಬಾರದಯ್ಯಾ ನಮ್ಮ ವಚನದ ನೂರೆಂಟರ ।
ಧ್ಯಯನಕ್ಕೆ ಶತ ರುದ್ರಿಯಾದಿ ಸಮಬಾರದಯ್ಯಾ ।
ಎಮ್ಮ ವಚನದ ಸಾಗರ ಪಾರಾಯಣಕ್ಕೆ ಗಾಯತ್ರಿ ಲಕ್ಷ ಜಪ ।
ಸಮಬಾರದಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ. ॥

ಕಾರಣ ವೀರಶೈವರ ನಡೆನುಡಿಗಳನ್ನು ತಿದ್ದಲು ಮುಖ್ಯ ಸಾಧನಗಳಾದ ಈ ಪ್ರಮಥರ ವಚನಗಳೇ ಪ್ರಧಾನ್ಯವು. ಇವುಗಳನ್ನು ನಂಬಿ ನಡೆವವರಿಗೆ ಸಾಂಬನು ಇಂಬುಗೊಡುವನು.

೪೬ ಸಾಮಾನ್ಯ ಆಚರಣೆ ನಡಾವಳಿಯುಳ್ಳವನು ಸಾಮಾನ್ಯ ವೀರಶೈವನೆಂದು ಕರೆಯುವರು. ಇವನಿಗಿಂತ ಸ್ವಲ್ಪ ಹೆಚ್ಚು ಆಚರಣೆಯನು ಕೈಕೊಂಡವನಿಗೆ ವಿಶೇಷ ವೀರಶೈವನೆಂದು ಕರೆಯುವದುಂಟು—

ಸಂಸಾರ ಸುಖವನ್ನು ತೊರೆದು ವಿದ್ಯೆಯೇ ಸತಿ, ಸಂತೋಷವೇ ಸುತ, ವಿರಾಗವೇ ಬಂಧು, ಕ್ಷಮವೇ ಪರಿಚಾರಕರು, ಶಾಂತಿಯೇ ಸಖನು, ಭಕ್ತಿಯೇ ಮಾತೆ, ಆಚಾರವೇ ತಂದೆ ಎಂಬ ಮೊದಲಾದ ಗುಣಗಳುಳ್ಳವನಾಗಿ ಕ್ರಯ ವಿಕ್ರಯಾದೀ ಲೌಕಿಕ ವ್ಯವಹಾರಗಳನ್ನು ಬಿಟ್ಟು ಶಿವ ಧ್ಯಾನಾರೂಢನಾಗಿ ಸಂಚರಿಸುವಾತನೇ ನಿರಾಭಾರಿ ವೀರಶೈವನೆಂದು ಕರೆಯಲ್ಪಡುವರು.

೪೭ ಭಕ್ತಸ್ಥಲವೇ ವಿಶಿಷ್ಟಾಚರಣ ಸಂಪನ್ನತೆಯಿಂದ ಮಹೇಶ್ವರ ಸ್ಥಲನಾಗುವದು. ಆ ಮಹೇಶ್ವರಸ್ಥಲವೇ ಮನಸ್ಸು ನಿರ್ಮಲತೆಯಿಂದ ವಿಕಸಿತವಾಗಿ ಪ್ರಸಾದಿಸ್ಥಲವಾಗುವದು. ಆ ಪ್ರಸಾದಿಸ್ಥಲವೇ ಜ್ಞಾನಯೋಗದಿಂದ ಪ್ರಾಣಲಿಂಗಿ ಸ್ಥಲವಾಗುವದು. ಆ ಪ್ರಾಣಲಿಂಗಿ ಸ್ಥಲವೇ ಶರಣ ಸತಿ-ಲಿಂಗ ಪತಿ ಎಂಬ ಭಾವದಿಂದ ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿಸುತ್ತಾ ಬಾಹ್ಯ ವ್ಯಾಪಾರವನ್ನು ಮರೆತಿರುವದರಿಂದ ಶರಣಸ್ಥಲವಾಗುವದು. ಆ ಶರಣಸ್ಥಲವೇ ಶಿವ ಲಿಂಗದಲ್ಲಿ ಐಕ್ಯವನ್ನೈದು ಭಿನ್ನ ಭಾವವನ್ನಳಿದಿರುವದರಿಂದ ಐಕ್ಯಸ್ಥಲವಾಗುವದು. ಇವೆಲ್ಲವುಗಳ ಮೂಲಕ ಜ್ಞಾನಾಚರಣೆಯ ಮೂಲಕ ಆರು ಸ್ಥಲಗಳು ಉಂಟಾಗಿರುತ್ತವೆ.

೪೮ ಸಂಸಾರ ಬಂಧನವನ್ನು ಕಿತ್ತು ಹಾಕಿದ ಮೇಲೆ ಸ್ಥಿರವಾಗಿ ನಿಲ್ಲುವ ಭಕ್ತಿಯ ರೀತಿಗೆ ಸ್ಥಲವೆನ್ನುವರು.

೪೯ ಶ್ರೀ ಸದ್ಗುರುವಿನ ಕೃಪೆಯೊಂದನ್ನು ಬಿಟ್ಟು ಬೇರೊಂದು ಸುಖದಿಂದ ಆತ್ಮ ಶಾಂತಿಯಾಗಲಾರದು.

೫೦ ಸದ್ಗುರುವಿನ ಪಾದಕಮಲದ ಧೂಳಿಯೆಂಬ ವಿಭೂತಿಯು ಸರ್ವ ಲಿಂಗಾಂಗಿಗಳಲ್ಲಿಯೂ, ಭಕ್ತಾದಿಗಳಲ್ಲಿಯೂ ಇದ್ದು ಅಜ್ಞಾನವೆಂಬ ಗ್ರಹವನ್ನು ಓಡಿಸಿ ಜನನ ಮರಣ ರೂಪವಾದ ಸಂಸಾರದ ವಿಕಾರಗಳಲ್ಲದೆ ಸ್ವ ಸ್ವರೂಪ ಜ್ಞಾನದಿಂದ ಸಂತೋಷವಾಗುವಂತೆ ಮಾಡಿದರೆ ನಮ್ಮ ಪುಣ್ಯವೆಂಬ ಬೆಟ್ಟದ ಶಿಖರದಲ್ಲಿ ಗುರುಕೃಪೆಯೆಂಬ ಸೂರ್ಯನು ಹುಟ್ಟಿ ಅಜ್ಞಾನವೆಂಬ ಕತ್ತಲೆಯನ್ನು ನಾಶ ಮಾಡಿದಂತೆ ಸ್ವಾನುಭಾವ ಶಿವನ ಸಾಕ್ಷಾತ್ಕಾರವನ್ನು ಹೊಂದುವೆವು.

೫೧ ಬುದ್ಧಿ ಎಂಬ ಸಸಿಯು ಒಣಗಿ ಹೋದಾಗ ಶ್ರೀ ಗುರು ಕರುಣ ಕಟಾಕ್ಷವೆಂಬ ಬೆಳ್ದಿಂಗಳಿಂದ ತಿಳಿವಳಿಕೆಯೆಂಬ ನೀರನ್ನು

ಪಡೆದು ಒಳ್ಳೇ ಕಾಂತಿಯನ್ನು ಹೊಂದಿ ಅದರಲ್ಲಿ ನಿಶ್ಚಲವಾದ ಆತ್ಮ ಅನುಭವವನ್ನು ಹೊಂದಬೇಕು.

೫೨ ಈಶ್ವರನ ಕೃಪೆಯೆಂಬ ಸಿದ್ಧರಸವನ್ನು ತಲೆಯಲ್ಲಿರಿಸಿ ದುರ್ಗುಣವೆಂಬ ಅಲ್ಪವಾದ ಲೋಹವನ್ನು ಹೋಗಲಾಡಿಸಿ ಪಂಚತತ್ವಗಳು ಸ್ಥಿರವಲ್ಲವೆಂದು, ಸ್ಥಿರವಲ್ಲವೆಂಬ ಬೀಜವನ್ನು ಗುರುಮುಖದಿಂದ ಅರಿತು ಅವನ್ನು ತಿರಸ್ಕರಿಸಿ ಕೇವಲ ಗುರುವಿನ ಉಪದೇಶವೆಂಬ ಅಮೃತ ಧಾರೆಯಲ್ಲಿ ನಮ್ಮ ಪಾಪ ದುಃಖಗಳನ್ನು ನಾಶ ಮಾಡಿಕೊಂಡು ಸ್ಥಿರಸುಖವನ್ನು ಹೊಂದಿ ಕೈವಲ್ಯವನ್ನು ಪಡೆಯಬೇಕು.

(ನಿಜಗುಣ ಶಿವಯೋಗಿಗಳು.)

೫೩ ತಿಳಿಯುವಂತೆ ಸದ್ಬೋಧ ಮಾಡಿದ ಗುರುವಿನ ಮಾತಿನ ಅಭಿಪ್ರಾಯವನ್ನು ಅರಿತು ಅದರಂತೆ ಆಚರಿಸುವವನೇ ವಿವೇಕಿಯು. (ಬಲ್ಲವನು) (ಜ್ಞಾನಿಯು.)

೫೪ ಈ ದೇಹವು ಸಾರ್ಥಕ ಮಾಡಿಕೊಳ್ಳ ಬೇಕಾದರೆ ಪರೋಪಕಾರಿಯಾಗಬೇಕು.

೫೫ ಪ್ರಾಣಕ್ಕೆ ಸಮಾನವಾದದ್ದು ಮಾನ. ಜಾಗರೂಕತೆಯೇ ವಿವೇಕ. ಚಂದ್ರ ಕಿರಣಗಳಂತೆ ತೋರಬೇಕು ಶಾಂತಿ ಎಂಬ ಗುಣ;

೫೬ ಅಮೃತ ಧಾರೆಯಂತಿರಬೇಕು; ಸವಿ ನುಡಿಯು.

೫೭ ಗುರು-ಲಿಂಗ-ಜಂಗಮದಲ್ಲಿ ಪ್ರೇಮವಿರಿಸಿ - ಮಾಯಾಪಾಶವನ್ನು ಪರಿಹರಿಸಿಕೊಳ್ಳುವವನೇ— ಜ್ಞಾನಿ- (ಅನುಭಾವಿ) (ಮುಕ್ತ).

೫೮ ಗುರುವಿನನ್ನು ಪೊಗಳುವದೇ ಭಕ್ತನ ಕಾರ್ಯ—ಗುರುವೇ ಸರ್ವಸ್ವ ಎಂಬ ಭಾವವು ಸರ್ವರಲ್ಲಿಯೂ ಪ್ರತಿಬಿಂಬಿಸಬೇಕು.

೫೯ ಶ್ರೀ ಗುರುವಿನ ಒಲುಮೆ ಇಲ್ಲದ ಮಾನವನು ಅಂತ್ಯದ ವರೆಗೂ ಹಲುಬುವದು ತಪ್ಪದು.

೬೦ ಗುರು ಕರುಣೆಯು. ಅಂತ್ಯದಿ ಅಂತರೀಕ್ಷಣನ ಚರಣವ ಪಿಡಿಯುವನು.

೬೧ ಅಧಿಕವಾದ ಗುರುರಾಯನ ನಾಮವನ್ನು ಹಗಲಿರುಳೂ ಕೊಂಡಾಡಿ ಅಮೃತದೋಪಾದಿಯಂತಿರುವ ಹಿತೋಪದೇಶವನ್ನು ಉಂಡು ಈ ಭವದಿಂದ ಉರುಳಬೇಕು.

ಇಲ್ಲಿಗೆ ಗುರುಸ್ತೋತ್ರದೊಂದಿಗೆ ಮುಕ್ತಾಯಿಸುವೆನು.

ಸುಜನ ಸಂಗ ಸದನುಲಾಂಗ ಭಜಿಪೆನಿಮ್ಮನು ।
ಮದನ ವೈರಿ ಮುದದಿ ಬಂದು ಪೊರೆಯೋ ಎನ್ನನೂ ॥ಪ॥

ಗುರುಲಿಂಗೇಶಾ । ತರುಣ ಪೋಷಾ । ಭಕ್ತರಕ್ಷನೂ ।
ಚರಣಪೂಜ್ಯರನ್ನು । ಬಿಡದೆ ಪೊರೆಯೋ ದೇವನು ॥೧॥

ಧರಣಿಯೊಳು ಕರುಣವಂತ । ವರದ ಹಸ್ತನೂ ।
ಶರಣು ಬಂದೆ ಪೂರ್ಣ । ಪಡಿಸು ಮನದ ಅರ್ಥನೂ ॥೨॥

ದುರಿತ ಪಾಶದೊಳಗೆ ಶಿಲ್ಕೀ ಮರೆತು ಕುಂತೆನೂ ।
ತುರತಬಂದು ವರದ । ಹಸ್ತದಿ ಬಿಡಿಸೊ ಯನ್ನನೂ ॥೩॥

ಶಾಂತಪೂರಿತ ಯಿಂತು ನಿಮ್ಮ ಸ್ವಂತ ಪೊಗಳ್ವೆನೂ ।
ಭ್ರಾಂತಿ ಬಿಡಿಸಿ । ಶಾಂತಿ ಯಿರಿಸಿ ಸಂತಿಶೆನ್ನನೂ ॥೪॥

ಕಲ್ಪ ತರುವೆ ಸ್ವಲ್ಪ ಭವದಿ ಸುಖವು ಇಲ್ಲವೋ ।
ಬಳಲಿ ಭವದಿ ತೊಳಲಿ । ದುಃಖ ಪಟ್ಟೆನಲ್ಲವೋ ॥೫॥

ಮಾಯಿ ಮೆಚ್ಚಿ ಬಾಯಿ ಬಡುತ ಮರುಳನಾದೆನೋ ।
ಪಾಹಿ ನಿಮಗೆ । ದೇಹಿ ಎಂದು ಮೊರೆಯ ಹೊಕ್ಕೆನೋ ॥೬॥

ಹರಿಸೋ ಭವದ ಪಾಶ ನಿಮ್ಮ ಪಾದಕ್ಹೊಂದ್ವೆನು ।
ಇರಿಸಿ ನಿಮ್ಮ ಧ್ಯಾನ । ದೋಳ್ ಯಚ್ಚರಿಸು ಯನ್ನನೂ ॥೭॥

ಭರತ ನಿಮ್ಮ ಮರತು ಪಾದಕ್ಹೊರತು ಆದೆನೋ ।
ಶರತಿನಿಂದ ಗುರು । ತು ತೋರಿ ಪೊರಿಯೋ ಯನ್ನನೂ ॥೮॥

ಗುರುಲಿಂಗಸ್ವಾಮಿ ದೇವ ದೇವ ರಕ್ಷಿಸೆನ್ನನೂ ।
ಬಳಲಿ ಬೆಂದು ಭ್ರಮಿತನಾದೆ । ಪೊರೆಯೊ ಯನ್ನನೂ ॥೯॥

ಗುರುವರೇಣ್ಯ ಕರುಣ ಧೀಶ ದೀನ ಕ್ಷೇಮನೂ ।
ದೈನ್ಯದಿಂದೆನುವೆ ನಾನು । ಬಿಡದೆ ಪೊರೆಯೋ ನೀ ॥೧೦॥

ಸತ್ಯ ಸದ್ಗುರು ನಿತ್ಯ ಪೂಜಿತ ಮೂರ್ತಿ ಮಹಿಮನೂ ।
ಎಂದವುತಿಯು । ಇಂದು ನಾನು ನುತಿಪೆ ನಿಮ್ಮನೂ ॥೧೧॥

ಬಂದ ಭಕ್ತರಾನಂದ ಗೊಳಿಪ ನಂದಿವಾಹನನೂ |
ದೀನ ಜನಕೆ ಅನ್ನ ವಿದ್ಯ । ನೀಡಿದಾತನೂ ||೧೨||

ಹರುಷದಿಂದ ಪರುಷ ಹಸ್ತದಿ ಹಾಯಿಸ್ಕೂಲ ನಿರ್ಮಿಸಿದೀ |
ಹೊನ್ನ । ಪಡೆದ ರನ್ನ ಸೌಂದರ್ಯ ಲಿಂಬೆಣ್ಣನೆನಸಿದಿ ||೧೩||

ಶಾಂತ ಗೌರಿ ಕಾಂತನೆಂಬ ನಾಮದಿಂದಲೀ |
ಸ್ವರ್ಗರಿಂದ ಸಂತಿಸೆನ್ನ | ಸಕಲ ಅರ್ಥನೂ ||೧೪||

ಅನ್ನ ದಾಸೋಹ ಮುನ್ನ ನಡಿಸಿ ಬಸವಲಿಂಗನೆನಸಿದೀ |
ಕ್ಷಿತಿಗೆ । ಪೂಜಿತನಾಗಿ ಮೆರೆದ ಮಹಿಮನೆನಸಿದೀ ||೧೫||

ಬಸವ ಅಲ್ಲಮರನ್ನು ನಿತ್ಯ ಸ್ಮರಿಸಿದೀ । ಸ್ಮರಿಸಿ
ಆತ್ಮ | ಶಾಂತಿ ಇರಿಸಿ ಅಜ್ಞರನ್ನು ಉದ್ಧರಿಸಿದೀ ||೧೬||

ಕಾಮಿತಾರ್ಥವನ್ನು ಬಿಡದೆ ಕೊಟ್ಟ ಕರುಣಿಯೂ !
ಭರದಿ ಬಂದು | ಭವದಿ ಬಿದ್ದ ಬಿಡಿಸೊ ಯನ್ನನೂ ||೧೭||

ಹೊನ್ನ ಹೆಣ್ಣು ಮಣ್ಣು ನಂಬಿ ನಿನ್ನ ಮರೆತೆನೋ |
ಚನ್ನಬಸವ ಇನ್ನು । ನೀನು ಚನ್ನಾಗಿ ರಕ್ಷಿಸೋ ||೧೮||

ಅರವತ್ತುಮೂರು ಮಂಟಪ ಮಾಡಿ ಮೆರೆದ ಧೀರ ಈಶನೂ |
ಅನಾಥ ರಕ್ಷಕ | ನಾವು ಪಡೆದ ನಂದಿವಾಹನನೂ ||೧೯||

ಭಕ್ತ ಬಸವನ ಮಾರ್ಗದಲ್ಲಿ । ಸಾಗಿರೆಂದನೂ |
ಅಷ್ಟಮದವ ಕಡಿಎನಗೆ | ಅಷ್ಟಾವರಣ ಮಹಿಮೆ ತಿಳಿಸಿದೀ ||೨೦||

ಅಲಾದಿ ಖುದ್ಧ ಕಲಾದಗಿ ಪುರಕೆ ಮೆರೆದ ಮಹಿಮನೂ |
ಭಕ್ತ ಜನಕೆ | ಮುಕ್ತಿ ಕೊಡುವ ಶಕ್ತಿ ಸಾಂಬನೂ ||೨೧||

# ಗೋಹೇಶ್ವರನೇ ಗೊಗ್ಗೇಶ್ವರನೆ?

**ಸೂರ್ಯಸಿಂಹಾಸನಾಧೀಶ್ವರ.**

(ಶ್ರೀ ಜ ಚ. ನಿ.)



ಶರಣಸಾಹಿತ್ಯ, ಎಪ್ರಿಲ್ ತಿಂಗಳ ಮೊದಲನೆಯ ಸಂಚಿಕೆಯಲ್ಲಿ ಶ್ರೀ ಡಾ. ಬಿ. ಎಸ್ ಗದ್ದಗಿಮಠ ಧಾರವಾಡ ಅವರು 'ಗೋಹೇಶ್ವರ' ಎಂಬ ಹೆಸರಿನ ಬರೆಹವೊಂದನ್ನು ಪ್ರಕಟಿಸಿ ಪ್ರಸಿದ್ಧ ವಚನಕಾರರಾದ ಪ್ರಭುದೇವರ ವಚನ ಮುದ್ರಿಕೆಯ ಮೇಲೆ ವಾಚಕರ ವಿಮರ್ಶಕರ ಗಮನವನ್ನು ಸೆಳೆದಿದ್ದಾರೆ ಇಂತಹ ವಿಚಾರಾರ್ಹ ಲೇಖಗಳು ಅತ್ಯಗತ್ಯ. ಇವುಗಳಿಂದ ಮೂಲ ರೂಪವೇನೆಂಬುದನ್ನು ತಿಳಿಯಲು ತುಸು ಮಟ್ಟಿಗಾದರೂ ಸಹಜ ಸಧನ. ಇದಿರಲಿ;

ವಚನ ಮುದ್ರಿಕೆಗಳ ಮೇಲೆ ಈಚೆಗೆ ಅವರವರ ಬುದ್ಧಿಬಲದ ಮೇಲೆ ಬೇರೆ ಬೇರೆ ಅರ್ಥ ಅಭಿಪ್ರಾಯಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ. ಅನುಭಾವದ ಆಳಕ್ಕೆ ಒಯ್ದು ನಿಲ್ಲಿಸುತ್ತಿದ್ದಾರೆ. ಇದೆಲ್ಲವೂ ವಚನಾಭ್ಯಾಸದಿಂದಾದ ಪರಿಣತಿ ಮತ್ತು ಸ್ವಾನುಭೂತಿಗಳ ದ್ಯೋತಕ.

ಮುಖ್ಯವಾಗಿ ಆ ಆ ವಚನಕಾರರ ಮುದ್ರಿಕೆಗಳು ಅವರವರ ಉಪಾಸನಾ ದೇವಲಿಂಗ ನಾಮಗಳೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅವರವರ ಆ ಆ ಅಂಕಿತಗಳು ಆ ಆ ಕ್ಷೇತ್ರ (ಪ್ರಾಂತ) ದ ಪ್ರಸಿದ್ಧ ದೇವ ಮಂದಿರಗಳಲ್ಲಿರುವ ಮೂರ್ತಿ ನಾಮಗಳೆಂಬುವದು ಸಹಜ. ಈ ದೃಷ್ಟಿಯಿಂದ ನೋಡುವಲ್ಲಿ ದೇವರ ದಾಸಿಮಯ್ಯನ 'ರಾಮನಾಥ', ಬಸವಣ್ಣನ 'ಕೂಡಲ ಸಂಗಮದೇವ', ಅಕ್ಕ ಮಹಾದೇವಿಯ 'ಚೆನ್ನಮಲ್ಲಿಕಾರ್ಜುನ' ಮುಂತಾದವುಗಳು ಮೇಲಿನ ನಮ್ಮ ಅಭಿಪ್ರಾಯವನ್ನೇ ಎತ್ತಿ ತೋರುತ್ತವೆ. ಈ ನಿಯಮಿತಿಗೆ ಅನುಗುಣವಾಗಿ ಪ್ರಭುದೇವರ ವಚನ ಮುದ್ರಿಕೆಯೂ ಸಹ ಇದೇ ಮಾದರಿಯದೆಂದು ಭಾವಿಸಲು ಶ್ರೀ ಬಿ. ಎಸ್. ಗದ್ದಗಿಮಠ ಅವರ ಬರಹದಿಂದ ಸಾಧ್ಯವಿದೆ.

ಇವರು ಈಚೆಗೆ ಪ್ರಕಟವಾಗಿ ಪ್ರಚಾರವಾದ 'ಗುಹೇಶ್ವರ' ಎಂಬುದು ಹಸ್ತಪ್ರತಿತಾಳೆಗರಿಗಳಲ್ಲಿರುವ ಗೊಹೇಶ್ವರ, ಗೋಹೇಶ್ವರ ಮುದ್ರಿಕೆಗಳ ಅರ್ಥವಾಗದೆ ಸಂಸ್ಕೃತ ಭಾಷಾನುಗುಣವಾಗಿ ತಿದ್ದಿ ಬಂದ ಮುದ್ರಿಕೆಯೊಂದನ್ನು ವಿವೇಚಿಸಿದ್ದಾರೆ. ಹಳೆಯ ಹಸ್ತಪ್ರತಿ ಮುಂತಾದವುಗಳಲ್ಲಿ ಗೋಹೇಶ್ವರ, ಗೊಹೇಶ್ವರ ಎಂದೇ ಇರುವಾಗ ಗುಹೇಶ್ವರ ಎಂಬುದು ತಿದ್ದಿ ಬಂದುದೆಂದು ಅವಾಸ್ತವವೇದು ಒಪ್ಪಲೇಬೇಕಾದುದು. ಆದರೆ ಮಾನ್ಯ ಲೇಖಕರು ತೋರಿದ ಗುಹೇಶ್ವರ-ಗೋಹೇಶ್ವರಗಳ ಅರ್ಥವ್ಯತ್ಯಾಸವು ಇಷ್ಟೇನು ಗಮನಾರ್ಹವಲ್ಲ. ಇವರು ಗೋಹ ಅಥವಾ ಗೋಪ ಶಬ್ದಕ್ಕೆ ಹೇಳುವ ಏಕಾಂತಾರ್ಥವು. ಗುಹ ಶಬ್ದಕ್ಕೂ ಆಗುತ್ತದೆ. ಸಾಲದ್ದಕ್ಕೆ ಗೌಹ್ಯ ಶಬ್ದದ ತದ್ಭವವೆಂದು ವಿಶಿಷ್ಟಾರ್ಥವಿದೆಯೆಂದು ಹೇಳಿ ಪರ್ಯಾಯವಾಗಿ ಗುಹ ಗೌಹ್ಯಗಳನ್ನು (ಸಂಸ್ಕೃತ ಪದಗಳನ್ನು) ಒಪ್ಪಿದಂತಾಗಿದೆ. ಅಲ್ಲದೆ ಪುರಾಣ ಶಾಸನಗಳಲ್ಲಿ ಬಂದವುಗಳನ್ನೇ ಬಳಸಬೇಕೆಂಬ ನಿಯಮವೇನಿಲ್ಲ. ಆದ್ದರಿಂದ ಈ ಒಂದು ಕಾರಣದಿಂದಲೇ ಗೋಹ ಪದವೇ ಮುದ್ರಿಕೆಯ ಅಂಕಿತವೆಂದು ಹೇಳುವುದು ಕಷ್ಟದ ಕೆಲಸ.

ಈಗಿನವರು ಹಿಂದಿನ ಪ್ರತಿಗಳಲ್ಲಿರುವುದನ್ನು ತಿದ್ದಿದಂತೆ ಮೊದಲಿನವರು ಅಂದರೆ ತಾಳೇಗರಿ ಹಸ್ತಪ್ರತಿಗಳನ್ನು ಬರೆದವರು ಮೂಲ ಪ್ರತಿಯಲ್ಲಿರುವುದನ್ನೂ ತಿದ್ದಿರಬಹುದೆಂದು ಭಾವಿಸಬಹುದಾಗಿದೆ. ಆ ಕಾಲಕ್ಕೆ ಇದೇ ಲೇಖಕರು ಹೇಳುವಂತೆ ವೀರಶೈವರಲ್ಲಿ ಹೆಚ್ಚು ಬಳಕೆಯಲ್ಲಿದ್ದ ಏಕಾಂತ ಶಿವಪೂಜಾಸ್ಥಲ-ಹೃತ್ಕಮಲ ಅರ್ಥಗಳಲ್ಲಿ ಇರುವ ಗೋಹ, ಗೋಪ ಪದಗಳನ್ನು ಮೂಲ ಪ್ರತಿಯಲ್ಲಿರುವ ಗೊಗ್ಗೇಶ್ವರ ಎಂಬ ಪದಕ್ಕೆ ಬದಲಾಗಿ ತಿದ್ದಿ ಬಾರದೇಕೆ? ಈ ಊಹೆಯಿಂದ ಮೂಲ ಪದವು ಗೊಗ್ಗೇಶ್ವರ ಎಂದಿರಬೇಕೆಂದೆ ನಾವು ಭಾವಿಸುತ್ತೇವೆ. ಈ ನಮ್ಮ ಭಾವನೆಗೆ ಸಮರ್ಥನೆಯೂ ಸಿಕ್ಕುತ್ತದೆ. ದೇವರ ದಾಸಿಮಯ್ಯ. ಬಸವಣ್ಣ' ಮಹಾದೇವಿಯಕ್ಕಗಳವರಿಗೆ ಒಂದೊಂದು ಉಪಾಸನಾದೇವತೆಗಳಿರುವಂತೆ ಅಲ್ಲಯ್ಯನ ಮನೆತನಕ್ಕೂ ಒಂದು ಉಪಾಸನಾ ದೇವತೆಯಿದೆ.

ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯಂ ತಂದು
ಹಿಗ್ಗುತ್ತಲಿಕ್ಕಿದಳು ಜನನಿ ನೇಹದಲಂದು ೧

ಹರೆಯದೊಳ್ ಗಿರಿಜೇಶನಂ ಕೇಳಿಸಲ್ಕೆಂದು
ಹರುಷದಿಂ ಗೊಗ್ಗೇಶ್ವರಾಲಯಕ್ಕೈತಂದು; ೨

ಪೊರವಮಟ್ಟನಲ್ಲವಂ ಗೊಗ್ಗೇಶ್ವರಂ ಮೆಚ್ಚಿ
ಬೆರಗಾಗಿ ನೋಡಲಮ್ಮದೆ ನೃಪಂ ಕಣ್ಮುಚ್ಚಿ ೩

ಎಂದುದಾಗಿ ಹರಿಹರ ಕವಿಯು ಪ್ರಭುದೇವರ ರಗಳೆಯಲ್ಲಿ ಹೇಳಿದ್ದಾನೆ. ಇದರಿಂದ ಪ್ರಭುದೇವರ ಮನೆತನದ ಉಪಾಸನಾ ದೇವತೆ ಗೊಗ್ಗೇಶ್ವರ ಎಂಬುದು ಗೊತ್ತಾಗುತ್ತದೆ. ಮನೆತನದವರು ಅದನ್ನು ಉಪಾಸಿಸುತ್ತಿರುವಂತೆ ಅಲ್ಲಯ್ಯನೂ ಉಪಾಸಿಸುತ್ತಿದ್ದನೆಂಬುದನ್ನು ೨-೩ ಅಂಕಿಯುಳ್ಳ ಪದ್ಯಗಳು ವ್ಯಕ್ತಗೊಳಿಸುತ್ತವೆ. ಹೀಗೆ ತನ್ನ ಮನೆತನದವರಿಗೂ ತನಗೂ ಉಪಾಸನಾ ಮೂರ್ತಿಯಾದ 'ಗೊಗ್ಗೇಶ್ವರ' ದೇವನ ಅಂಕಿತವನ್ನೆ ಪ್ರಭುವು ತನ್ನ ವಚನಕ್ಕೆ ಉಪಯೋಗಿಸಿಕೊಂಡಿರಬೇಕೆಂಬುದರಲ್ಲಿ ತುಂಬಾ ಔಚಿತ್ಯವಿದೆ; ವಾಸ್ತವಿಕತೆಯಿದೆ; ಒಪ್ಪುವಂತಿದೆ. ಈ ಗೊಗ್ಗೇಶ್ವರ ಎಂಬ ಮೂಲ ಮುದ್ರಿಕೆಯನ್ನು ಆತನಿಂದ ಇತ್ತೀಚಿನವರು ಪ್ರತಿಮಾಡಿಕೊಳ್ಳುವಾಗ ಗೊಹೇಶ್ವರ ಗೋಹೇಶ್ವರ ಎಂದು ತಮ್ಮ ತಮ್ಮ ಇಷ್ಟಾನುಸಾರವಾಗಿ ತಿದ್ದಿರಬೇಕೆಂಬುದಾಗಿ ತಿಳಿದು ಬರುತ್ತದೆ. ಆದಕಾರಣ ಪ್ರಭುದೇವರ ಮೂಲ ವಚನಮುದ್ರಿಕೆಯು 'ಗೊಗ್ಗೇಶ್ವರ" ಎಂದಿರಬೇಕೆಂಬುದೆ ನಮ್ಮ ಅಭಿಪ್ರಾಯವು. ಸಂಶೋಧಕರು ಇದನ್ನು ಗಮನಿಸಬೇಕೆಂಬುದಾಗಿ ಭಾವಿಸಿ ಈ ಚಿಕ್ಕ ಬರೆಹವನ್ನು ಬರೆಯೋಣವಾಗಿದೆ.



ಸಂಚಿಕೆ ೧೧. ಸಂಪುಟ ೩೪

# ಶಿವಾನುಭವ

✱

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.

●

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ನೆವ್ಹಂಬರ ೧೯೬೦.

ಓಂ ನಮಃ ಶಿವಾಯ

# ವಿಷಯಾನುಕ್ರಮಣಿಕೆ


೧. ಕಣ್ಣಪ್ಪನ ರಗಳೆ. .... ೩೨೯

— ಶ್ರೀ ಪು. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.

೨. ಶವದ ಮೇಲೆ ರಚಿಸಿದ ನವಚಿಂತ ಪುಷ್ಪಾಂಜಲಿಗಳು ೩೪೧

— ವೇ। ವಿರುಪಾಕ್ಷಯ್ಯ ಹಿರೇಮಠ, ರಾಮಪೂರ.

೩. ವೀರಶೈವ ಲಾಂಛನ ಮತ್ತು ರಾಷ್ಟ್ರಧ್ವಜ ೩೪೨

— ಜಿ. ಆರ್. ಭಸ್ಮಾಂಗದೇವರು, ಎಲ್. ಇ. ಇ.
ಭಸ್ಮಾಂಗಮಠ, ಬಿ. ಆರ್. ಪ್ರಾಜೆಕ್ಟ. ವ್ಹಾಯಾ ಬಿರೂರ.

೪. ಗವಿಯಪ್ಪನ ಗದ್ದುಗೆ .... ೩೫೧

— ಪು. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.

೫. "ಧರ್ಮಸೂಕ್ತ" ೩೫೯

— ಶ್ರೀ ಪಾ. ರಾ. ಪಾಟೀಲ ಪ್ರ. ಗುರುಗಳು ಕ. ಗಂ. ಜಿ. ಶಿ.
ಶಾಲೆ ಚೊಳಚಗುಡ್ಡ.

೬. ಅನುಭವ ಮಂಟಪ ಅರ್ಥಾತ ಧಾರ್ಮಿಕ ಪಾರ್ಲಿಮೆಂಟ ೩೬೨

— ಶ್ರೀ ಮ. ನಿ. ಪ್ರ. ಪೂಜ್ಯ ಬಂಥನಾಳ ಶಿವಯೋಗಿಗಳು.

೭. ಶಿವಶರಣರದೇ ಪರಿಪೂರ್ಣ ಯೋಗ .... ೭೩–೮೮

— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ಶೆಗ್ಗಿಹಳ್ಳಿ.


ಚಂದಾದಾರರಾಗಿರಿ !!

ಚಂದಾದಾರರಾಗಿರಿ !!




# ಕಣ್ಣಪ್ಪನ ರಗಳೆ.

(ಲೇಖಕರು:—ಶ್ರೀ ಮ. ಷುಲ್ಲಪ್ಪ ಜ್ಞಾನಮಂದಿರ, ಹಲಗೂರು.)

---

ಕಣ್ಣಪ್ಪನ ರಗಳೆಯಲ್ಲಿ ಕರ್ಮಠತನದ ಉಪವಾಸ ಮತ್ತು ನೈಜಭಕ್ತಿಯ ಶ್ರೇಷ್ಠತೆ ಇವು ಬಹು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿವೆ.

— ರಾ॥ ಬ॥ ಫ. ಗು. ಹಳಕಟ್ಟಿ.

ವೀರಶೈವರ ಆದಿಕವಿಯೂ, ರಗಳೆಯ ಮಹಾಕವಿಯೂ, ಕರ್ನಾಟಕದ ಪ್ರೌಢ ಕವಿಗಳಲ್ಲಿ ಒಬ್ಬನೂ ಆದ ಹರಿಹರ ರಘಟಾ ಕಾವ್ಯಗಳನ್ನೂ, ಗಿರಿಜಾಕಲ್ಯಾಣವೆಂಬ ಚಂಪೂ ಮಹಾ ಕಾವ್ಯವನ್ನೂ, ಪಂಪಾಶತಕ, ರಕ್ಷಾಶತಕವೆಂಬ ಎರಡು ಶತಕಗಳನ್ನೂ ಬರೆದು ಖ್ಯಾತಿಗೊಂಡಿದ್ದಾನೆ. ಉಪಲಬ್ಧವಾಗಿರುವ ರಗಳೆಗಳು ಸುಮಾರು ಸಂಖ್ಯೆಯಲ್ಲಿ ನೂರಿವೆ. ಒಂದೊಂದು ರಗಳೆಯಲ್ಲಿಯೂ ಒಬ್ಬೊಬ್ಬನ ಕಥೆಯಿದೆ. ಅಱುವತ್ತು ಮೂವರ ಶಿವಭಕ್ತರ ಕಥೆಗಳಿರುವ 'ಪೆರಿಯ ಪುರಾಣಮ್' ಎಂಬ ತಮಿಳ

ಕಾವ್ಯ ಒಂದಲ್ಲ ಒಂದು ವಿಷಯದಲ್ಲಿ ಕ್ಷಪಿಸುವ ಈ ರಗಳೆಗಳನ್ನು ಬರೆಯುವುದಕ್ಕೆ ನೆರವಾಗಿರಬೇಕು. ಪ್ರತಿಯೊಬ್ಬ ಭಕ್ತನೂ ತನಗೆ ಯೋಗ್ಯವೆಂದು ಕಂಡ ಬಗೆಯಲ್ಲಿ ಹರನನ್ನು ಮೆಚ್ಚಿಸುವುದಕ್ಕೆ ಯತ್ನಿಸುತ್ತಾನೆ. ಈ ಉದ್ದೇಶ ಏನೇ ತೊಂದರೆ ಬಂದರೂ ಅದನ್ನು ಬಿಡದೆ ಆ ಭಕ್ತನು ಸಾಧಿಸುತ್ತಾನೆ. ಆತನನ್ನು ಶಿವನು ಮೆಚ್ಚಿ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ರಗಳೆಗಳು ಭಕ್ತಿಯ ಆವೇಶವನ್ನೂ, ಉತ್ಸಾಹವನ್ನೂ ಎತ್ತಿ ತೋರಿಸುತ್ತದೆ. ಭಕ್ತಿಯನ್ನೇ ಮೈಗೂಡಿಸಿಕೊಂಡ ಹರಿಹರನ ಪ್ರತಿಭಾ ಸಾಮರ್ಥ್ಯದಿಂದ ರಗಳೆಗಳಲ್ಲಿ ವ್ಯಕ್ತಿ ವಿಶೇಷವು ಎದ್ದು ಕಾಣುತ್ತದೆ. ಪ್ರೊಫೆಸರ್ ರಂ. ಶ್ರೀ. ಮುಗುಳಿಯವರು ಇವುಗಳನ್ನು ಕುರಿತು "ಹರಿಹರನ ವ್ಯಕ್ತಿತ್ವ ಸಿದ್ಧಿಯ ಪತಾಕೆಗಳು ಅವುಗಳ ಎತ್ತರ ಸೊಬಗು ಬೇರೆ ಬೇರೆಯಾದರೂ ಒಂದೇ ವ್ಯಕ್ತಿತ್ವದ ಪರಿಪಾಕದಲ್ಲಿ ಅವುಗಳ ಮೂಲ ಆಧಾರವಿದೆ. ಅವುಗಳ ಕಥಾ-ವಸ್ತು ಭಿನ್ನವಾದರೂ ಕಾವ್ಯರೂಪ, ವರ್ಣನೆ, ಶೈಲಿಗಳಲ್ಲಿ ಒಂದೇ ಪ್ರತಿಭೆಯು ಕೈವಾಡವಿದೆ, ಹರಿಹರನ ಕೃತಿಯೆಂದು ಹೆಸರು ಹೇಳದೆ ಸಹ ಗುರುತಿಸಲು ಬರುವಷ್ಟು ಅದು ನಿಚ್ಚಳವಾಗಿದೆ." ಎಂದು ಹೇಳಿರುವುದು "ರಗಳೆಗಳ ಮಹತ್ವವನ್ನು ವಿವರಿಸುತ್ತದೆ. ಹರಿಹರನ ರಗಳೆಗಳಲ್ಲಿ ಕಥನ ಕಲೆಯು ತಕ್ಕಷ್ಟು ಕುಣಿದಾಡುವುದು ಅಲ್ಲಲ್ಲಿ ವ್ಯಕ್ತವಾಗುತ್ತದೆ.

ಕಥನ ಕವಿ ಹರಿಹರನ ಸರಳ ಸುಂದರ ಕಾವ್ಯಗಳಲ್ಲಿ ಒಂದು 'ಕಣ್ಣಪ್ಪನ ರಗಳೆ'ಯು. ಇದರಲ್ಲಿ ಶಿವಭಕ್ತಿಯು ಉಜ್ವಲವಾಗಿದೆ. ರಗಳೆಯ ಅಂತ್ಯಭಾಗವೇ ಇದನ್ನು ಎತ್ತಿ ತೋರಿಸುತ್ತದೆ. ಬೇಡ ಕಣ್ಣಪ್ಪನ ಭಕ್ತಿಯ ಮುಗ್ಧತೆ, ಸರಳತೆಯ ವ್ಯಕ್ತಿತ್ವಕ್ಕೆ ಕವಿಯು ಪ್ರಧಾನ ಗಮನವನ್ನು ಹರಿಯಿಸಿದ್ದಾನೆ. ಆದ ಕಾರಣವೇ ಆರಂಭದಲ್ಲಿ ನಗರದ ನಾಲ್ಕಾರು ಬಗೆಯ ಬಣ್ಣನೆಗಳನ್ನಾದರೂ ಮಾಡದೇ ಶಬರ ಕಣ್ಣಪ್ಪನ ಪಾತ್ರ ವರ್ಣನೆಯನ್ನು ಮಾಡಿದ್ದಾನೆ. ಕೈಗೊಂಡ ಕೆಲಸದಲ್ಲಿ ಕಣ್ಣಪ್ಪನಿಗೆ ಅತ್ಯಂತ ಶ್ರದ್ಧೆ ನಿಷ್ಠೆಯನ್ನಿಡುವದು ಆತನಿಗೆ ಮುಖ್ಯವಾಗಿದೆ. ಕುಲ ಕಸಬು ಬೇಟೆ. ಅದರಲ್ಲಿ ನಿರತನಾದ ಆತನಿಗೆ ಮತ್ತೆ ಇನ್ನು ಯಾವ ಕಡೆಗೂ ಗಮನ ಹೋಗದು.

ಪಸಿವಿಂಗೆ ತೆರಪಿಲ್ಲ. ವಿಷಯಕ್ಕೆ ತೆರಪಿಲ್ಲ,
ವ್ಯಸನಕೆ ತೆರಪಿಲ್ಲ ಪುಸಿವುದಕ್ಕೆ ತೆರಪಿಲ್ಲ.

ಬೇಟೆಯಲ್ಲಿ ತಲ್ಲೀನನಾಗಿದ್ದ ಕಣ್ಣಪ್ಪನ ಸಹಜ ಸ್ವಭಾವವನ್ನು ಕವಿಯು ಚಿತ್ರಿಸಿ ಆತನ ವೇಷ ಭೂಷಣಗಳನ್ನು ವರ್ಣಿಸುತ್ತಾನೆ. ಶಿವನೇ ಶ್ರೇಷ್ಠ, ದೇವರೆಂಬ ತಿಳಿವು ಆತನಿಗಿಲ್ಲ ಎಂಬುದನ್ನು ಕವಿಯು ತಿಳಿಸುತ್ತಾನೆ. ಬೇಟೆಗಾರ ಕಣ್ಣಪ್ಪನ ವರ್ಣನೆಯನ್ನು ಕೇವಲ ಕೆಲವು ಮಾತುಗಳಲ್ಲಿಯೇ ಜೀವಂತ ಕಳೆಯಿಂದ ಕವಿಯು ಕೊಡುತ್ತಾನೆ.

ಜುಂಜುದಲೆ ಕೆಂಗಣ್ಣ ಗುಂಜಾಭರಣಮೆಸೆಯೆ
ತಲೆಯುರದಕರದ ಕವಡಿಕೆಯ ದಂಡೆಗಳೆಸೆಯೆ
ಬಿಡುವುದೇ ತಾಗುವುದೋ ತಾಗುವುದೇ ನಡಗುವುದೋ
ನಡಗುವುದೇ ನೋಟವೋ ನೋಟವೇ ನಡುಗುವುದೋ

ಈ ಏಕಾಗ್ರತೆಯ ಕರ್ಮಕೌಶಲ್ಯವೇ ಶಂಕರನ ಗುರಿಯನ್ನು ಎಳೆಯುತ್ತದೆ. ಆತನ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಯತ್ನಿಸುತ್ತಾನೆ.

ಶಿವನು ಮಾಯಾಮೃಗವನ್ನು ಸೃಷ್ಟಿಸುತ್ತಾನೆ. ಅಡವಿಯಲ್ಲಿ ಅವುಗಳನ್ನು ಬೆನ್ನಟ್ಟಿಕೊಂಡು ಕಣ್ಣಪ್ಪನು ಸಾಗುತ್ತಾನೆ. ಈ ವರ್ಣನೆಯು ಆ ಸಂದರ್ಭವನ್ನು ನಮ್ಮ ಕಣ್ಣ ಮುಂದೆ ತರಿಸುತ್ತದೆ. ಕವಿಯು ಅದನ್ನು ಏನಾದರೂ ಪ್ರತ್ಯಕ್ಷವಾಗಿ ನೋಡಿದನೋ ಏನೋ ಎಂಬಂತೆ ಸಂದೇಹವು ಸೂಕ್ಷ್ಮವಾಗಿ ಹೊಳೆಯುತ್ತದೆ. ಅನುಭವ ಪಾಂಡಿತ್ಯ ಹುಟ್ಟುಗವಿತೆಯ ಸಂಗಮ ಸಾನಿಧ್ಯವು ಕವಿಯನ್ನು ಅಪ್ರತಿಮನನ್ನಾಗಿ ಮಾಡಿದೆ. ಬೆನ್ನಟ್ಟಿಕೊಂಡು ಹೋಗುತ್ತಿದ್ದ ಮೃಗವು ಮಾಯವಾಗುತ್ತದೆ. ಕಷ್ಟ ಬಂದಾಗ ಭಗವಂತನನ್ನು ಮೊರೆಹೋಗುವುದು ರೂಢಿಯಾಗಿರುತ್ತದೆ. ಮೃಗವು ಸಿಕ್ಕದೆ ಕಣ್ಣಪ್ಪನು ಬಹು ಪೇಚಾಡುತ್ತಾನೆ. ಕೈಗೆ ಬಂದದ್ದು ಬಾಯಿಗೆ ಬರಲಿಲ್ಲವಲ್ಲಾ ಎಂದು ಬಹಳ ಸಂಕಟ ಪಡುತ್ತಾನೆ. ದೇವಸ್ಥಾನದ ಲಿಂಗವನ್ನೇ ದೇವರೆಂದು ಭಾವಿಸಿ ಪರಮೇಶ್ವರನಿಗೆ ಮನೋವ್ಯಗ್ರತೆಯಿಂದ ಮೊರೆಯಿಡುತ್ತಾನೆ. ಆಗ ಮೃಗ ಕಾಣುತ್ತದೆ. ಶಂಕರನಲ್ಲಿ ಕಣ್ಣಪ್ಪನಿಗೆ ನಿಶ್ಚಲ ಭಕ್ತಿಯು ಆಳವಡುತ್ತದೆ. ಈಶ್ವರನೇ ಲಿಂಗರೂಪಿಯಾಗಿ ಬಂದನೆಂಬ ಭಾವನೆ ಭಾವಿಸಿಗೊಂಡ ಕಣ್ಣಪ್ಪ ಆ ಜಾಗವನ್ನು ನೆಲೆನಂಬಿ ಆ ಕಾಳಹಸ್ತೀಶ್ವರನನ್ನು ಭಕ್ತಿಯಿಂದ ತನಗೆ ತಿಳಿದಂತೆ ಅರ್ಚಿಸಿ ಆರಾಧಿಸಲು ಆರಂಭಿಸುತ್ತಾನೆ.

ಬೇರೆಯವರ ಮನೆಯಲ್ಲಿ ಬೇಡರು ಉಪ್ಪು ಹಾಲನ್ನು ತೆಗೆದುಕೊಳ್ಳುವದಿಲ್ಲವಂತೆ! ಒಂದು ಸಮಯ ತೆಗೆದು ಕೊಂಡರೆ ಅವರ ವಿಚಾರದಲ್ಲಿ ಕೃತಘ್ನರಾಗುವುದಿಲ್ಲವಂತೆ! ಭಗವಂತನಿಂದ ಉಪಕೃತನಾದ ಕಣ್ಣಪ್ಪನ ಕೃತಜ್ಞತೆಯು ಕಲಿಗೊಂಡಿದೆ.

ಅಯ್ಯಯ್ಯ ಇಂತಪ್ಪನನ್ನಿಯಂ ಕಂಡೆನೆ
ಕಯ್ಯ ಮೇಲೆ ತೋರುವಡೆಯನಂ ಕಂಡೆನೆ
ಇನ್ನಗಲೆ ನಿನ್ನಗಲೆನಯ್ಯಂ ನಿನ್ನುವಂ
ಮುನ್ನವರಿಯದೆ ಕೆಟ್ಟನಿನಿತುವರ ನಿನ್ನುವಂ

ಆತನ ದೃಢನಿಶ್ಚಯದ ಭಕ್ತಿಯನ್ನೂ, ಅವನ ಶ್ರದ್ಧೆಯ ತೀವ್ರತೆಯನ್ನೂ ಸೊಗಸಾಗಿ ವರ್ಣಿಸಿದಂತೆ ಆತನ ಮುಗ್ಧಭಕ್ತಿಯ ವರ್ಣನೆಯಲ್ಲಿ ಹೆಜ್ಜೆ ಹೆಜ್ಜೆಗೂ ಅತಿಚಾತುರ್ಯವನ್ನು ವ್ಯಕ್ತಗೊಳಿಸಿ ಆತನ ಸವಿಸ್ತಾರವಾದ ಕೆಲಸಗಳುಳ್ಳ ಪಾತ್ರಚಿತ್ರಣವನ್ನು ಕವಿಯು ಕೊಡುತ್ತಾನೆ.

ತನ್ನ ಬೇಟೆಗಿಂತಲೂ, ತನಗಿಂತಲೂ ಶಿವನ ಯೋಗಕ್ಷೇಮದ ವಿಚಾರವೇ ಕಣ್ಣಪ್ಪನಿಗೆ ಹೆಚ್ಚಾಗುತ್ತದೆ. ಮೃಗವನ್ನು ಕೊಂದು ಅದರ ಮಾಂಸವನ್ನು ಲಿಂಗಕ್ಕೆ ನಿವೇದಿಸುತ್ತಾನೆ. ಶಿವಲಿಂಗವು ಆತನಿಗೆ ಕೇವಲ ಕಲ್ಲಲ್ಲ; ಜೀವಂತ ಮೂರ್ತಿ. ಅದನ್ನು ಅಸಹಾಯ ಶಿಶುವೆಂದು ಉಪಚಾರ ಮಾಡುತ್ತಾನೆ. ಮಗುವನ್ನು ಮಲಗಿಸಿ ನಿದ್ರೆ ಮಾಡಿಸುವಂತೆ ಮಾಡುತ್ತಾನೆ. ಮೃಗಪಕ್ಷಿಗಳ ಗಲಾಟೆಯ ಶಬ್ದವಿಲ್ಲದಂತೆ ಮಾಡಲು ಅವುಗಳನ್ನು ದೂರ ಹೊಡೆದಟ್ಟುತ್ತಾನೆ. ಇರುಳೆಲ್ಲ ಜಾಗರಣೆಯಿಂದ ತಾನು ಕಾದರೆ ವನಮೃಗಗಳಿಂದ ಯಾವ ರೀತಿ ಬಾಧೆಯು ಶಿವನಿಗಿಲ್ಲವೆಂದು ಕಾಯುತ್ತಾನೆ. ಶಿವನು ನಿದ್ರೆಗೆಟ್ಟರೆ ಹಸಿವಾಗದೆ ಮೂರನೆಯ ದಿವಸ ಏನನ್ನೂ ಉಣ್ಣನು ಎಂಬ ಅಂಜಿಕೆಯು ಆತನಿಗೆ.

ಬರುತೆನ್ನವಂ ಪಸಿದನಿರಲಾರನೆನ್ನವಂ
ಪಿರಿದು ತಳ್ವಿದೆನೆಂದು ಕೋಪಿಸುವನೆನ್ನವಂ
ಪೊತ್ತು ಪೋಯ್ತೆಂದೆನ್ನ ಬರವನೆಳಸಿರ್ಪನೋ
ಹೊತ್ತುಗಳೆದೆಂ ಪಾಪಿಯಾದೆನೆಂತಿರ್ಪನೋ
ಮಿಗೆಪಸಿದು ನಿಲಾದಿದಿರಾಗಿ ಬರ್ಪನೋ

ಮಗನಬರವಂ ಕಾಣದೊಬ್ಬನೈತರ್ಪನೋ
ಪುಲಿಬಂದೊಡಂಜಿ ಪೊರಮಡಲಮ್ಮದಿರ್ಪನೋ
ಪರಮನ ಸಮೀಪಕ್ಕೆ ಈ ಪೊಳ್ತು ಪೋಪೆನೋ
ತಮ್ಮವರ ನೆನದೆನ್ನ ಬಿಟ್ಟನೆಂದಳುವನೋ
ದುಮ್ಮಾನದಿಂದೆನ್ನ ಕೂಡೆ ಮುನಿದಿಪ್ಪನೋ
ಎಂದು ನೇಹದ ಚಿಂತೆಯಿಂ ಚಿಂತಿಸುತಬರಲು

ಇಲ್ಲಿ ಕಣ್ಣಪ್ಪನ ನೆಪದಿಂದ ಹರಿಹರನ ಮಾತೃಪ್ರೇಮವು ಅಗಾಧವಾಗಿ ಅರಳಿವೆ. ಅಂತರಂಗದಲ್ಲಿ ಅದು ಒಡಮೂಡಿ ಉಚ್ಛ್ವಳಿಸಿದ ತೀವ್ರ ಭಾವನೆ ಕವಿಯು ಅದನ್ನು ಅನುಭವದಿಂದ ಹೊರಪಡಿಸಿದ್ದಾನೆ. ದಿನಚರಿಯ ನೀತಿ ನಿಯಮವು ಮನೋಭೀತಿಯಲ್ಲಿ ಅಚ್ಚೊತ್ತುವಂತಿದೆ. ಮನೆಯಲ್ಲಿ ಸಣ್ಣ ಮಗುವೊಂದನ್ನು ಬಿಟ್ಟು ತನ್ನ ಕೆಲಸಕ್ಕೆ ಹೋದ ತಾಯಿಯು ಅದು ಹಸಿದಿರಬಹುದೆಂದು ಅವಸರ ಆತುರದಿಂದ ಬಂದು ಮೊದಲು ಅದನ್ನು ಎತ್ತಿಕೊಂಡು ಮುದ್ದಾಡಿ ಅದರ ಹಸಿವನ್ನು ಇಂಗಿಸಿ ಅದನ್ನು ಸಮಾಧಾನಗೊಳಿಸಿ ಆನಂದಪಡಿಸಿ ಅನಂತರ ತನ್ನ ಇತರ ಕೆಲಸಗಳಿಗೆ ಕೈ ಹಾಕುತ್ತಾಳೆ. ಪ್ರೇಮಮೂಲವಾದ ಭಕ್ತಿಯು ಕಣ್ಣಪ್ಪನಲ್ಲಿ ಕಂಗೊಳಿಸುತ್ತದೆ. ಕಾಳಹಸ್ತಿ ದೇವಸ್ಥಾನವನ್ನು ಬಿಟ್ಟು ನಾಲ್ಕು ಹೆಜ್ಜೆ ಹೋಗಿ ಮತ್ತೆ ಮರಳಿ ಅಗಲಲಾರದೆ ಹಿಂದೆ ಹಿಂದಕ್ಕೆ ಹೆಜ್ಜೆಯಿಡುತ್ತ ಕೊಂಚಕಾಲ ಶಿವನನ್ನು ನೋಡುತ್ತ ಚಿಂತಾಭಾರದಿಂದ ಮೃಗಬೇಟೆಗೆ ಹೊರಡುತ್ತಾನೆ.

ಪೊಸಮಾಂಸವಂ ತರಲ್ಪೋಪನೈ ಎನ್ನವವನೆ
ಕಡು ವೇಗದಿಂ ಬಂದಪಂ ನೋಡು ನಿನ್ನಾಣೆ
ತಡೆಯೆನಾನೊಂದೆಡೆಯೊಳುಂ ನಿಲ್ಲೆ ನಿನ್ನಾಣೆ
ಎನುತೆ ಸಂತಯಿಸುತಂ ನೇಹದಿಂ ಪೊರಮಟ್ಟು
ಮನದೊಳಗೆ ದೂರಿಸುತಲೆರಡು ಮೂರಡಿಯಿಟ್ಟು
ತಿರುಗಿಬಂದೆನ್ನವನೆಯುಮ್ಮಳಿಸಬೇಡೆಂದು
ಚರಿತದಿಂದೀಬರ್ಪೆನೆನ್ನವನೆ ನೋಡೆಂದು
ತೆಗೆದಪ್ಪಿಕೊಂಡಾಡಿ ಮುಂಡಾಡಿ ಮುದ್ದಾಡಿ
ಅಗಲಲಾರದೆ ಮತ್ತೆ ಮತ್ತೆ ಹೋಗದೆ ನೋಡಿ
ಏನೆಂಬೆನಾ ಶಿವನ ಲೀಲೆಯುತ್ಸಾಹಮಂ

ಏನೆಂಬೆನಾಭಕ್ತನುತ್ತಮದ ಸ್ನೇಹವುಂ
ನಡೆನಡೆದು ತಿರುತಿರುಗಿ ಹಿಂಬೆರಕಿನಿಂ ನಡೆದು
ದಡೆದಡಿಸಿಹೆರೆ ಹಿಂಗಲಾರದೆ ಮನಂಬಿಡಿದು

ಕಾಡಿಗೆ ಹೋಗಿ ಪರಮೇಶ್ವರನ ನೈವೇದ್ಯಕ್ಕೆ ಉತ್ತಮವಾದ ಮಾಂಸವು ಬೇಕೆಂದು ತಾನು ಕಂಡ ಮೃಗಗಳಲ್ಲಿ ಸುಪುಷ್ಟವಾದ ನಿರೋಗಿಯಾದ ತಾರುಣ್ಯದ ಮೃಗವನ್ನು ಆರಿಸಿ ನೋಡಿ ಬಾಣದಿಂದ ಹೊಡೆದು ಅದು ಕೆಳಗೆ ಬೀಳುವ ಮೊದಲೆ ಅದನ್ನು ಸಮೀಪಿಸಿ ಎತ್ತಿ ಕೊಂಡು ಬಂದು ಮಾವಿನ ಮರದ ಬುಡದಲ್ಲಿ ಎಳೆಯ ಮುತ್ತುಗದ ಎಲೆಗಳ ಮೇಲೆ ಇರಿಸಿ ಚೆನ್ನಾಗಿ ಬೇಯಿಸುತ್ತಾನೆ.

ಆಹಾ ಇದೆನ್ನವರಿಗೆಂದು ಮುಚ್ಚಿರಿಸುತಂ
ಮೃದುವಪ್ಪವಂ ಕೈಗಳಿಂದರಿತು ಶೋಧಿಸುತ
ಕಂಪುಳ್ಳವಂ ಘ್ರಾಣದಿಂದರಿದು ಶೋಧಿಸುತೆ
ಇಂಪುಳ್ಳವಂ ಜಿಹ್ವೆಯಿಂದರಿದು ಶೋಧಿಸುತ
ಎಂಜಲೆಂಬವರ ಬರಿ ಜಿಹ್ವೆಯಂ ಹುಸಿಮಾಡಿ
ಸಂಚರಿತ ಕರಣಂಗಳಿಂದೆ ಶೋಧಿಸಿ ನೋಡಿ

ದೇವರಿಗೆ ನೈವೇದ್ಯವನ್ನು ಸಲ್ಲಿಸುತ್ತಾನೆ. ಪಂಚೇಂದ್ರಿಯಗಳು ಶಿವಮಯವಾಗುತ್ತವೆ. ಪ್ರಾಣಲಿಂಗಿಯ ಧರ್ಮವು ಇಲ್ಲಿ ಅವ್ಯಕ್ತವಾಗಿ ಅಳವಟ್ಟಿದೆ. ಎಂಜಲು ನೈವೇದ್ಯವನ್ನು ಯಾರೂ ಆಸ್ವಾದಿಸಬಾರದು. ಶಿವನಲ್ಲಿ ತನ್ಮಯನಾಗಿ ತಾನೇ ಶಿವಮಯನಾಗಿರುವಾಗ ಎಂಜಲು ಎಂಬುದು ಎಲ್ಲಿದೆ? ಪರಮಪ್ರೀತಿಯಿಂದ ಶಿವನನ್ನು ಕಾಣುತ್ತಿರುವ ಕಣ್ಣಪ್ಪನು ಶಿವನಸಲುವಾಗಿ ರುಚಿ ನೋಡಿ ಆತನಿಗಾಗಿ ಬೇರೆಯಿರಿಸು ತ್ತಾನೆ. ಶಬರಿಯು ಶ್ರೀರಾಮನಿಗೆಂದು ವನ್ಯ ಫಲಗಳನ್ನು ರುಚಿನೋಡಿ ಬೇರಿರಿಸಿರಲಿಲ್ಲವೇ! ಅವುಗಳನ್ನು ಆದರಅಕ್ಕರತಿಯಿಂದ ಶ್ರೀರಾಮನು ಸೇವಿಸಲಿಲ್ಲವೇ! ಭಕ್ತಿಯ ಉನ್ಮಾಧವು ತನ್ಮಯತೆಯನ್ನು ಕೊಟ್ಟಿ ರುವಾಗ ಕುಂದುಕೊರತೆಗೆ ಎಡೆ ತಾನೇ ಎಲ್ಲಿದೆ?

ತನ್ನ ಸ್ವಾಮಿಗೆಂದು ಕಣ್ಣಪ್ಪನು ತರುತ್ತಿದ್ದ ಉಪಕರಣಗಳಲ್ಲಿಯೂ ಆತನ ಸಂಸ್ಕೃತಿಗೆ ಅನುಗುಣವಾದ ಸ್ವಭಾವವಿದೆ. ಭಗವಂತನಿಗೆ ಜೀವಿ ಗಳ ಬಲಿ ಕೊಡುವದೂ, ಮಾಂಸದ ನೈವೇದ್ಯ ತೋರುವದೂ, ವನ್ಯ

ಪುಷ್ಪಗಳನ್ನು ಭಗವಂತನಿಗೆ ಅರ್ಪಿಸುವದೂ ಬೇಡರಿಗೆ ವಾಡಿಕೆಯ ವಿಷಯಗಳು. ಅದಕ್ಕೆ ಹೊಂದಿಕೆಯಾಗುವಂತೆಯೇ ಕಣ್ಣಪ್ಪನ ಅನುಷ್ಠಾನವು ಅರ್ಚನೆಯಲ್ಲಿ ಕಂಡು ಬರುತ್ತದೆ. ವನಸುಮಗಳನ್ನು ಶಿರ ಕರಂಡಿಗೆಯಲ್ಲಿ ಹಾಕಿ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಬರುತ್ತಾನೆ. ಪರಿಶುದ್ಧವಾದ ಪೂಜಾಜಲವನ್ನು ಬಾಯಿಯಲ್ಲಿ ತುಂಬಿಕೊಂಡು ಬರುತ್ತಾನೆ. ಹಸ್ತವೊಂದರಲ್ಲಿ ಬಿಲ್ಲು, ಬಾಣ. ಮತ್ತೊಂದು ಹಸ್ತದಲ್ಲಿ ನೈವೇದ್ಯದ ಮಾಂಸ.

ನಖದಿಂದ ಕಾಡುವೊಲ್ಲೆಯ ಹೂವುಗಳನಳವಡಿಸಿ
ಉತ್ತಮಾಂಗದ ಕರಡಿಗೆಯೊಳಿರಿಸುತಂತಲ್ಲಿ
ಉತ್ತಮೋತ್ತಮ ಭಕ್ತಿ-ಭರದಿಂ ಬರುತಲ್ಲಿ
ಒಂದು ಕೈಯ್ಯೊಳ್ಮೇಸಲೋಗರಮಂ ಪಿಡಿದು
ಒಂದು ಕೈಯ್ಯೊಳ್ಬಿಲ್ಲು ಬಾಣಂಗಳಂ ಪಿಡಿದು
ಮೊಗದಗ್ಗವ ಶಿರಕರಂಡಿಗೆಯ ಪೂವೊಪ್ಪ
ಮೃಗದ ಮಾಂಸಂ ನವಸ್ನೇಹದೋಗರವೊಪ್ಪ

ಕಣ್ಣಪ್ಪನ ಭಕ್ತಿಯ ಭರ ಉದ್ದೀಪನವಾಗುತ್ತಲಿದೆ. ಸಂಭ್ರಮ ಸಡಗರ ಬಿರಿಯುತ್ತಲಿದೆ.

ಮುಡಿಯೊಳಿರ್ದ ನರಿನೊಯ್ಯನ ಪೂಜೆಯಂ ಮಾಡಿ
ಕಡುನೇಹದಿಂದಿಪಸಿದೆ ಪಸಿದೈ ಎನೆನೋಡಿ
ನೇಹದೋಗರಮುಮಂ ತಂದಲ್ಲಿ ಮುಂದಿರಿಸಿ
ಓ ಹೋ ಹೋ ಹೊತ್ತು ಹೋಯಿತೆನಲಾದರಿಸಿ
ಎನ್ನವನೆ ಎನ್ನವನೆ ಪಸಿದೆಯಯ್ಯ ಪಸಿದೆಯಯ್ಯ
ಎನ್ನವನೇ ಚೆನ್ನವನೆ ಹೊತ್ತು ಹೋದುದೆ ಅಯ್ಯ
ಅರಿದೆನರಿದೆಂನಾಚೆ ಇರ್ದಪೆಯ ನೀನೆಂದು
ಅರಿದಂತೆ ಹಿಂದು ಮುಂದಾಗಿ ನೋಡುವೆನೆಂದು
ಇರಲೀಶನೆಂದಿನಂದಲುಂಡಪಾಳ್ಕೆಯಿಂ
ಪರಿಹರಿಸಿ ಭವಂಗೆ ಕೊಟ್ಟನೊಲ್ದಳ್ತಿಯಿಂ
ಆರೋಗಿಸಲ್ತಿರುಗಿ ನೋಡಿ ಹರುಷಂದಳೆದು
ಲಿಂಗಪ್ರಸಾದಮಂ ಕೈಕೊಂಡು ಸವಿ ಸವಿದು
ಹಿಂಗದಾಸವಿಗೆ ಹಾರಯಿಸುತುಂ ಮನ ಮೊಸೆದು

ಉಂಡನಿಂದೆನ್ನವಂ ಬರ್ದುಕಿದೆಂ ಬರ್ದುಕಿದೆಂ
ಇನ್ನೆನಗಸಾಧ್ಯಮುಪ್ಪುದದೊಂದುಮಿಲ್ಲೆನುತೆ
ಒಡೆಯನಂ ನೋಡುತಂ ಭುಜವನಪ್ಪಳಿಗೊಂಡು
ಕಡುಮೋಹವೆತ್ತಿರೆ ಯಾಡಲನಂಗೊಂಡು
ಬಾಗುತುಂ ಕೈಚಪ್ಪಳಿಕ್ಕಿ ತಾಂ ಬೀಗುತುಂ
ಕೂಗುತಾಂ ತೊನೆಯುತೊಂದೇ ಕಾಲೊಳಾಡುತುಂ
ಉಬು ಬೆಂದು ಬೊಬ್ಬಿಟ್ಟುಕೋ ಎಂದು ಕೂಗಿಟ್ಟು
ಅಬು ಬೆಂದು ನಿಂದಾರ್ದುನಾಲ್ದೆಸೆಗೆ ಕೊಣಕಿಟ್ಟು
ಆಡಲರಿಯದೆ ಕಾಲ್ಗೆ ಬಂದಂತೆಯಾಡುತಂ
ಪಾಡಲರಿಯದೆ ಎನ್ನವನೆ ಎಂದು ಪಾಡುತಂ
ಬೆರಿಕೆ ಇಲ್ಲದ ಬಚ್ಚಬರಿಯ ಭಕ್ತಿಯೊಳಾಡಿ
ನೆರವಿಲ್ಲವೇಕಾಂತ ಶಾಂತ ಭಕ್ತಿಯೊಳಾಡಿ

ಪೂಜೆ ಮಾಡಿದ ಭಕ್ತನು ನೈವೇದ್ಯವನ್ನು ಸಮರ್ಪಿಸುತ್ತಾನೆ. ಹಸಿದೆಯಾ ಹಸಿದೆಯಾ ಎಂದು ಅತಿ ಸ್ನೇಹದೋಗರವನ್ನು ತಂದು ಮುಂದಿರುಸುತ್ತಾನೆ. ಶಿವನು ಅದನ್ನು ಉಂಡನೆಂದು ಹಿರಿ ಹಿಗ್ಗೋ ಹಿಗ್ಗು. ಶಿವನಿಗೆ ತನ್ನ "ದೃಷ್ಟಿ" ತಾಗಬಾರದೆಂದು ತೂಪಿರಿಯುತ್ತಾನೆ. ಲಿಂಗಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸುತ್ತಾನೆ ಶಿವನು ಮುಗ್ಧನೆಂದು ಅರಿತು ಭಕ್ತಿಯ ಆಚರಣೆ ಮಾಡಿದ ಆನಂದವುಕ್ಕುವ ವರ್ಣನೆಯು ಸಹಜ ಸ್ವಭಾವವಾಗಿದೆ. ಹಳ್ಳಿಯಹೈವ ಭಕ್ತನ ಕುಣಿತ ಹಾಡುಗಳನ್ನು ಕಣ್ಣಿಗೆ ಕಣ್ಣಿಟ್ಟು ಕವಿಯು ನೋಡಿದ್ದಾನೆ ನೈವೇದ್ಯ, ಪ್ರಸಾದಸೇವನೆ, ಪರಮೇಶ್ವರ ಭಕ್ತಿ, ಭಕ್ತಿಯಾನಂದಾದಿಗಳು ಬಸವರಾಜದೇವರ ರಗಳೆ, ಚನ್ನಯ್ಯನ ರಗಳೆ, ತಿರುನೀಲಕಂಠರ ರಗಳೆ, ತಿರುನಾಳ್ವೊವರ ರಗಳೆ, ಅರಿವಾಳ್ತಂಡರ ರಗಳೆ ಇವುಗಳಲ್ಲಿ ಇದ್ದಂತೆ ಇದರಲ್ಲಿಯೂ ಬಂದಿವೆ. ಶಿವಭಕ್ತಿಯಲ್ಲವೂ ಏಕತರನಾಗಿರುತ್ತವೆ. ಭಕ್ತಿಯಿಂದ ಮನಸ್ಸು ಪರಮೇಶ್ವರನಲ್ಲಿ ಮಗ್ನವಾದ ಮೇಲೆ ಆತ್ಮೀಯತೆಯೂ ಆತ್ಮೀಯತೆಯಿಂದ ತನ್ನ ಮರವು. ಆ ಮರುವಿನಿಂದ ಆತ್ಮಾನಂದವು ದೊರಕುತ್ತದೆ. ಅದೇ ಜೀವನ್ಮುಕ್ತಿ ಅರ್ಥಾತ್ ಐಕ್ಯ. ಈ ವೈಶಿಷ್ಟ್ಯವನ್ನು ತಿಳಿಸಲೆಂದೇ ಕವಿಯು ಕೃತಿಯಲ್ಲಿ ಕರ್ಮಠ ವಿಪ್ರ ಮತ್ತು ನೈಜಭಕ್ತಿಯ ಕಣ್ಣಪ್ಪನ ಪಾತ್ರವನ್ನು ಸೃಷ್ಟಿಸಿದ್ದಾನೆ.

ದೇಗುಲದಲ್ಲಿ ಪೂಜಿಸುತ್ತಿರುವ ವಿಪ್ರನು ಬಲು ಸಾತ್ವಿಕನು. ಆಗ ಮೋಕ್ತ ಮಾರ್ಗದಲ್ಲಿ ಸಂಪ್ರದಾಯ ನಿಷ್ಠೆಯಿಂದ ಅರ್ಚಿಸುತ್ತಿದ್ದನು. ಕಣ್ಣಪ್ಪನ ಮುಗ್ಧಭಕ್ತಿಯನ್ನು ಅರ್ಥ ಮಾಡಿಕೊಳ್ಳಲಾರದ ಈ ವಿಪ್ರನ ಭಕ್ತಿಯು ಬರಿಯ ಡಂಭಾಚಾರವಾಗಿದೆ. ಕವಿಯು ಶಿವ ಭಕ್ತಿಯ ಅತಿರೇಕದಿಂದ ಶಿವಬ್ರಾಹ್ಮಣನ ರಚನೆ ಕಣ್ಣಪ್ಪನಿಗೆ ವಿರೋಧವಾಗಿ ಆಗಿದೆ. ಹೊರಗಿನ ಆಚಾರ ವಿಚಾರ ನಿಷ್ಠಾಪರ, ರುದ್ರಾಕ್ಷಿಧಾರಕ ದೇವಸ್ಥಾನದಲ್ಲಿ ಮಾಂಸ ಬಿದ್ದು ಶಿವನ ಮನೆ ಅಪವಿತ್ರವಾಯಿತೆಂದು ವಿಪ್ರನು ಉರಿದು ಉಪ್ಪಾಗುತ್ತಾನೆ. ಕಸಗುಡಿಸಿ ಗೋಮಯ ಚಿಕ್ಕಿ ಸಾರಿಸಿ ಸ್ವಚ್ಛ ಮಾಡಿ ವಿಧಿಪೂರ್ವಕವಾಗಿ ಬಿಲ್ವಾರ್ಚನೆ ಮಾಡಿ ಧೂಪದೀಪವನ್ನು ದೇವರ ಎದುರು ವಿಪ್ರನು ಬೆಳಗಿಸುತ್ತಾನೆ. ದುಃಖಗೊಂಡ ಈ ವಿಪ್ರನ ವರ್ಣನೆಯನ್ನು ಕವಿಯು ಕೊಟ್ಟಿರುವುದನ್ನು ನೋಡಿದರೆ ಮರುಕ ಹುಟ್ಟದೆ ಇರುವುದೇ?

ಪುಗಿಸದಿರುಕಂಡಯ್ಯ ಪಶುಕರ್ಮಕಾರನಂ
ಪುಗಿಸದಿರು ಹೇಸಿಗೆಯ ಮಾಡುವ ಕಿರಾತನಂ
ಎಂದೆನುತೆ ಪೊಡಮಟ್ಟು ಬಲಗೊಂಡು ಪಟ್ಟಿರ್ದು
ಇಂದುಶೇಖರ ಕರುಣಿಸೆಂದೆನುತೆ ನಿಂದಿರ್ದು
ಸುಖನಾಸಿಗರ್ಭ ಗೃಹದಿಂ ರಂಗಮುಂಟಪದ
ಮುಖದ ಮೂರುಂ ಕದವ ನಿಕ್ಕುತುಂವಿಸ್ತರದ
ಸಂಕೋಲೆಗಳಂ ಹೂಡಿ ಬಿಯ್ಯಗಂಗಳನಿಕ್ಕಿ
ಶಂಕರಾ ಪುಗಸದಿರು ಇನ್ನವನೆನುತಿಕ್ಕಿ.

ಸಹೃದಯ ವಾಚಕರಿಗೂ ಮರುಕ ಹುಟ್ಟಿದಂತೆಯೇ ಈಶ್ವರನಿಗೂ ಮರುಕ ಹುಟ್ಟಿ ಕನಸಿನಲ್ಲಿ ಕಾಣಿಸಿಕೊಂಡು ಸಮಾಧಾನ ಪಡಿಸುತ್ತಾನೆ. "ನಾಳೆಯ ದಿವಸ ಕಂಭದ ಮರೆಯಲ್ಲಿದ್ದು ನೋಡು; ಕಣ್ಣಪ್ಪನು ಎಂತಹ ಭಕ್ತ ಎನ್ನುವದು ಗೊತ್ತಾಗುತ್ತದೆ." ಎಂದು ಬುದ್ಧಿಹೇಳಿ ಮಾಯವಾಗುತ್ತಾನೆ. ಅಹಿಂಸಾ ಪ್ರಿಯನೆನಿಸಿಕೊಂಡ ಬ್ರಾಹ್ಮಣನು ಬೇಡನನ್ನು ಕೊಲ್ಲುವ ಹಿಂಸಾ ಭಾವನೆಯನ್ನು ಪ್ರಕಟಿಸುತ್ತಾನೆ. ನುಡಿ ಒಂದಾದರೆ ನಡೆ ಬೇರೊಂದು; ನೇಮದಲ್ಲಿ ನಿಷ್ಠೆಯೇ ಹೊರತು ನೀತಿ

ಯಲ್ಲಿ ನಿಷ್ಠೆಯಿಲ್ಲ. ಬಾಹ್ಯಭಕ್ತಿಯೇ ಹೊರತು ನಿಜವಾದ ಅಂತರಂಗಿಕ ಭಕ್ತಿಯು ಇಲ್ಲ. ಇಷ್ಟಾದರೂ ಪಾರ್ವತಿಯು ಈ ಬ್ರಾಹ್ಮಣನ ಪರವಾಗಿ ಪರಮೇಶ್ವರನ ಸಂಗಡ ವಾದಿಸುತ್ತಾಳೆ.

ಪೂಜಿಸುವ ಪಾರ್ವಂಗೆ ಬಾಯ್ಮಿಡುಕದಿರ್ದಪಿರಿ
ಓಜೆಗೆಟ್ಟಾಲುಬ್ಧಕಂಗೆ ಕರುಣಿಸಿದಿರ್ಪಿರಿ
ಆ ಪರಿಯಲಿಂದೊಲ್ದಿರಭವಾ ಕಿರಾತಂಗೆ
ದೇವವಿಲ್ಲದ ದುಶ್ಚರಿತ್ರದ ಕಿರಾತಂಗೆ

ಪಾರ್ವತಿಗೆ ಪರಮೇಶ್ವರನು ಉತ್ತರಿಸುತ್ತಾನೆ.

ನಿನಗೆ ಪೇಳ್ದಪೆನಗಜೆ ತಿಳಿಯ ಕೇಳೆಂದೆನುತೆ
ಪರ್ವನಗ್ಗವಣೆ ತಿಳಿಮುನಕದಡು ಎಲೆಗೌರಿ
ಪಾರ್ವನರ್ಚನೆ ಇನಿತು ಮನವತಿ ವಿಷಂ ಗೌರಿ
ಅವನಿಟ್ಟ ಭಸಿತವನಂ ಮುಟ್ಟದೆಲೆಗೌರಿ
ಅವನ ರುದ್ರಾಕ್ಷಿಯುವನಂ ಪೋರ್ದದೆಲೆಗೌರಿ
ಬಾಯಮಂತ್ರಂ ಮನದ ಕ್ಷುದ್ರತಂತ್ರಂ ಸೂಸೆ
ಕಾಯವೇಲಂ ಮನದ ಭವಿನವದೇಂಲೇಸೆ
ಸತ್ಯವಿಲ್ಲದ ಪೂಜೆ ಸಸಿನವಪ್ಪುದೆ ಗೌರಿ
ನಿತ್ಯವಲ್ಲದ ಹಾಡು ಸೊಗಸಪ್ಪುದೆ ಗೌರಿ
ಮನವಿಲ್ಲದವ ಮುಟ್ಟಿ ಬಡಿವಡೆದ ತೆರನೆನಗೆ
ಮನವುಳ್ಳವಂಬಡಿಯ ಪೂಜಿಸಿದ ತೆರನೆನಗೆ
ಅವನ ಕಯ್ಯೋಳ್ಪೊಲಸು ಮನದೊಳಂಮೃತಂ ಗೌರಿ
ಅವನ ಮುಖದೊಳು ಜಲಂ ಮನದೊಳಗ್ಗವಣಿ ಗೌರಿ
ಅವನ ಮಂಡೆಯ ಹೊವು ಮನದ ಪರಿಮಳವೆನಗೆ
ಅವನ ಕಾಲಾಟವತಿ ನೇಹದರ್ಚನೆಯೆನಗೆ

ಲಿಂಗದಲ್ಲಿ ಕಣ್ಣೊಡೆದು ರಕ್ತ ಸುರಿಸುತ್ತಿದ್ದರೆ ಊರಿನ ಕಡೆ ಈ ವಿಪ್ರ ಶಂಕಿಸಿ ತೆರಳುತ್ತಾನೆ.

ಅರಸಿಂಗೆ ಕೇಡಿತ್ತೋ ದೇಶಕ್ಕೆ ಪೊಲ್ಲುದೋ
ಹರನೆ ಬಲ್ಲಂ ಮಹೋತ್ಪಾತವೇನಪ್ಪುದೋ

ಇದರಿಂದಲೇ ಈ ವಿಪ್ರನ ಭಕ್ತಿಯ ಬರಡು ತಿಳಿಯುತ್ತದೆ. ಈತನ ಪೂಜೆ ಕೇವಲ ಯಾಂತ್ರಿಕ ಪೂಜೆ, ನಿಷ್ಠೆ ಬರಿಯ ಸಾಂಪ್ರದಾಯಿಕ ನಿಷ್ಠೆ, ವಿದ್ಯೆಯು ವಿಚಾರಿಕನೇ ಹೊರತು ಅನುಷ್ಠಾನಪರವಲ್ಲ. ಸ್ವಸುಖ ಕಾಂಕ್ಷೆಯ ವ್ಯಾಪಾರಿ ಭಕ್ತಿಯು ಈ ವಿಪ್ರನದು. ಕವಿಯ ಕೃತಿ ರಚನೆಯು ವಾಚಕರ ಮನಸ್ಸಿನ ಒಲವನ್ನು ಅವಲಂಬಿಸಿಲ್ಲ. ಆದ ಕಾರಣ ಕವಿದೃಷ್ಟಿ ಇಲ್ಲಿ ಕಾಣಬೇಕಾಗಿದೆ. ಕವಿಯು ಪರಿಶುದ್ಧವಾದ ಶಿವಭಕ್ತಿಯ ಮಹಿಮೆಯನ್ನು ಬಣ್ಣಿಸಬೇಕಾಗಿದೆ. ಪುರಾತನರು ಯಾವ ಜಾತಿಯವರೇ ಆಗಲಿ ಅವರಲ್ಲಿನ ಅಚಲ ಶಿವಭಕ್ತಿಯಿಂದಲೇ ಅವರು ಉತ್ತಮರು ಎಂಬ ಸಂಗತಿಯನ್ನು ಕವಿಯು ಎತ್ತಿ ತೋರಿಸಿದ್ದಾನೆ. ರೂಢಿಯ ವಿಧಿ ವಿಧಾನಗಳು, ಮಡಿ ಮೈಲಿಗೆಗಳು ಮೊದಲಾದ ಬಾಹ್ಯಾಡಂಬರಗಳ ಪ್ರಯೋಜನವು ನಿವೃತ್ತಿ ಮಾರ್ಗದಲ್ಲಿ ಎಳ್ಳಷ್ಟು ಇಲ್ಲವೆಂಬುದನ್ನು ಒತ್ತಿ ಹೇಳುವದೇ ಕವಿಯ ಅಭಿಲಾಷೆ. ಆದ ಕಾರಣವೇ ವಿಪ್ರನ ಭಕ್ತಿಯ ಕನಿಷ್ಠತೆಯನ್ನು ಹೊರಗೆಡವಿ ಕಣ್ಣಪ್ಪನ ಶುದ್ಧವಾದ ಅಚಲ ಭಕ್ತಿಯು ಎದ್ದು ಕಾಣುವಂತೆ ಕವಿಯು ಮಾಡಿದ್ದಾನೆ. ಪೆರಿಯ ಪುರಾಣದಲ್ಲಿ ಈ ವಿಪ್ರ ಭಕ್ತಿಯ ವರ್ಣನೆಯ ವೈಗ್ಗಳತೆಯು ಇಷ್ಟಾಗಿ ಇಲ್ಲವಾಗಿದೆ.

ಕಣ್ಣಪ್ಪನಿಗೆ ಸ್ವ ಸುಖದ ಚಿಂತೆಯು ಲವಲೇಶವೂ ಇಲ್ಲವಾಗಿದೆ. ಯಾವ ಇಂದ್ರಲೋಕ, ಚಂದ್ರಲೋಕ, ಸ್ವರ್ಗಲೋಕ ಕೈಲಾಸವನ್ನು ಕನಸಿನಲ್ಲಿಯೂ ಕಣ್ಣಪ್ಪನು ಕೇಳನು. ಶಿವದರ್ಶನವೊಂದೇ ಈತನ ಜೀವನ ದರ್ಶನ. ಭಾವನೆಗಳನ್ನು ಅಲಂಕಾರಗಳನ್ನು ಅತಿ ಕಡಿಮೆ ಉಪಯೋಗಿಸಿ ಭಾವ ಪರಿಣಾಮವಾಗುವಂತೆ ಚಿತ್ರಿಸುವದರಲ್ಲಿ ನಿಪುಣನಾದ ಹರಿಹರನು ತುಂಬಾ ಯಶಸ್ವಿಯಾಗಿದ್ದಾನೆ. ನಿರಾಭರಣವಾದ ಶೈಲಿಯು ಕಣ್ಣಪ್ಪನ ವ್ಯಕ್ತಿತ್ವದ ಸರಳತೆಗೆ ಕನ್ನಡಿ ಹಿಡಿಯುತ್ತದೆ. ಶಿವನ ಕ್ಷೇಮ ಚಿಂತನದಲ್ಲಿಯೂ ಇರುವ ಬೇಡ ಕಣ್ಣಪ್ಪನ ಎಚ್ಚರಿಕೆಯನ್ನು ಕವಿಯು ಬಣ್ಣಿಸಿದ್ದಾನೆ. ಕಾಲಹಸ್ತೀಶ್ವರನ ಕಣ್ಣಿನಲ್ಲಿ ರಕ್ತ ಸುರಿಯುತ್ತಿರುವುದನ್ನು ಕಂಡ ಕಣ್ಣಪ್ಪನು ದುಃಖಿಸುತ್ತಾನೆ.

ಕೆಟ್ಟೆನಾಂ ಕೆಟ್ಟೆನಾಂ ಬೆಂದೆನಾಂ ಬೆಂದೆನಾಂ
ದಿಟ್ಟಿ ಇಂತೇಕಾಯ್ತು ನೊಂದೆನಾನುರಿದೆನಾಂ

ಎನ್ನೊಡೆಯುನೇಂ ಸ್ಪರಿಸಲಾರ್ಪನೇಯಿದಕೆ
ಮುನ್ನವೇ ಮುಂದ.ದೋರಿತ್ತು ಪಾಪಿಯು ಮನಕೆ
ಎನ್ನೊಡೆಯು ಕಣ್ಣೊಡೆಯೆ ನೋಡುತಿರಲಾರ್ಪನೇ
ಎನ್ನವನೆ ಸಾರ್ದಿರದೆ ಅಗಲ್ದಾನೆ ಕೆಟ್ಟನೇ

ರಂಗಮಂಟಪದಲ್ಲಿ ಹೊರಳುತ್ತಾನೆ, ಭ್ರಾಂತಿಗೆಟ್ಟು ಬೀಳುತ್ತಾನೆ ತನ್ನಷ್ಟಕ್ಕೆ ತಾನೇ ಸಂತೈಸಿಕೊಳ್ಳುತ್ತಾನೆ, ಕುಳಿತಿದ್ದಂತೆಯೇ ಮರುಗುತ್ತಾನೆ. ಬಳಲುತ್ತಾನೆ, ಕಣ್ಣಪ್ಪನು ಕಣ್ಣೊಡೆದ ಲಿಂಗಕ್ಕೆ ಉಪಚಾರ ಮಾಡುತ್ತಾನೆ. ಆ ಕಣ್ಣಿಗೆ ಬದಲು ತನ್ನದೊಂದು ಕಣ್ಣನ್ನು ಮೀಟಿ ಅದಕ್ಕೆ ಅಂಟಿಸುತ್ತಾನೆ. ಅದು ವಾಸಿಯಾದರೂ ಮತ್ತೊಂದು ಕಣ್ಣಿನಲ್ಲಿ ರಕ್ತವು ಸುರಿಯುತ್ತದೆ, ಅದಕ್ಕೂ ಮತ್ತೊಂದು ಕಣ್ಣನ್ನು ಅಂಟಿಸಲು ಯತ್ನಿಸುತ್ತಾನೆ. ಭಕ್ತಿಯು ಆರಂಭದಲ್ಲಿ ವಾತ್ಸಲ್ಯದಂತೆ ಕಂಡು ಕೊನೆಗೆ ಶಿವಜೀವರೈಕ್ಯದಲ್ಲಿ ಪರಿಣಮಿಸುವ ಸಂದೇಶವನ್ನು ಕವಿಯು ಕಣ್ಣಪ್ಪನ ಆತ್ಮಾರ್ಪಣೆಯ ಮೂಲಕ ಕೊಟ್ಟಿದ್ದಾನೆ.

ಇನ್ನಂಜೆ ನಿನ್ನಂಜೆ ನಿನ್ನೊಂದು ಕಣ್ಣುಂಟು
ಎನ್ನವನೆ ಎನ್ನವನೆ ಬಳಿಕ ನೀನೆನಗುಂಟು
ಎಂದೆನುತ ಸದ್ಭಕ್ತಿ ಕುಶಲನಾನಂದದಿಂ
ಇಂದು ಶೇಖರನೊಡೆದ ಕಣ್ಣೋಯದಂದದಿಂ
ಉಂಗುಟದೊಳೊತ್ತಿ ಕಣ್ಗುರುಹ ಮಾಡುತ್ತಲ್ಲಿ
ಮುಂಗುಡಿಸಿ ತನ್ನ ಮತ್ತೊಂದು ಕಣ್ದೆರೆದಲ್ಲಿ
ಗಣಪದವಿಯುಂಬಯಸಿಯೊಲ್ದು ಕಣ್ಣಿಡುವಂತೆ
ತ್ರಿಣಯನಂ ಭಕ್ತಿಯಿಂ ಕಣ್ದೆರೆದು ನೋಳ್ಪಂತೆ
ತಂದುಂಗುಟದ ಕುರುಹಿನಂದಲ್ಲಿ ಕಣ್ಗೊಳಿಸಿ

ಭವನಿಗೆ ಭಕ್ತ ಕಣ್ಣಪ್ಪನು ತನ್ನೆರಡು ಕಣ್ಣುಗಳನ್ನೂ ಕೊಟ್ಟು ಧನ್ಯ ಜೀವಿಯಾಗುತ್ತಾನೆ ಪುಣ್ಯ ಜೀವಿಯಾಗುತ್ತಾನೆ.

# ಶಿವನ ಮೇಲೆ ರಚಿಸಿದ ನವರಚಿತ ಪುಷ್ಪಾಂಜಲಿಗಳು

(ಲೇಖಕರು:— ವೇ| ವಿರುಪಾಕ್ಷಯ್ಯ ಹಿರೇಮಠ, ರಾಮಪುರ)

ಈ ಪರಿಭವದೊಳಗೆ ನರಜನ್ಮವನು ತಾಳಿ । ವರವೇದವನು ಕೇಳಿ ।
ಜರೆಮರಣವನು ಸೀಳಿ ಪುರಹರನ ಕರುಣದಲಿ ಮೆರೆದು ।
ಮರೆಯದೇ ಗುರುವರಗೆ ಸುರಪುರುಷ ವರಕಲ್ಪಪರತರಧುರ ।
ಧೀರನಾಗಿಬಾಳಿ ಮೆರೆಯುತ್ತಾ ಕರವೆತ್ತಿ ಸಿರದ ಮೇಲೆ ವರಪಾ ।
ದವನಿರಿಸಿ ಸುವರ್ಣ ಪುಷ್ಪವ ನೀವನು ॥೧॥
ಜನ್ಮ ಈ ಭವದೊಳಗೆ ಮಾನ್ಯ ಜೀವಿಯೆನಿಸಿ । ಪುಣ್ಯದ ರಾಶಿಯನು।
ಚನ್ನಾಗಿ ಅನ್ಯಾರ್ಥಕೆ ಎಳಿಸದೆ ಸತ್ಪಾತ್ರದೋಳ್ ಸವಿದು ನರಜನ್ಮ।
ದೊಳು ಈ ಪರಿಭವದ ಎಸರುಗಳಿಗೆಳಿಸದೆ ತೊಡರಿನೊಳು ಸಿಗದೆ ।
ಕಡುಜಾಣ್ಮನಾಗಿ ವೃಷಭಶೀಲಕಂಠನಡಿದಾವರೆಗಳಲ್ಲಿ ಧೃಢವಿಂ ।
ದ ನೆರೆನಂಬಿ ಸ್ಥಿರ ಪೂಜ್ಯನಾಗಿ ಮೆರೆ ಎಂದು ಸುವರ್ಣ ।
ಪುಷ್ಪವ ನೀವನು ॥೨॥
ಪರಮ ಸುಕೃತದಿಂದ ಹರನ ಕೃಪೆಯಂ ಪಡೆದು । ಗಿರಿಜಾಧವನ ।
ಚರಣಾರವಿಂದದಲಿ ಸ್ಥಿರ ಪೂಜ್ಯನಾಗಿ । ದುರುಳ ಭವಸಾಗರಕೆ ।
ಮರುಳಿಬಾರನ ಹಾಗೆ ಸ್ಥಿರಸಾಯುಜ್ಯವನೆ ಪಡೆದು ।
ಹರಕುಲದ ವರವೇದವನು ಕೇಳಿ ಜರೆಮರಣವನು ಸೀಳಿ ।
ಸ್ಥಿರವಾದ ದೃಷ್ಟಿಯಲಿ ಸಿರಮಾಲಾಧರನ ಚರಣದಲಿ ।
ವಂದಿತನಾಗಿ ಮರುಳಿ ಮೃತ್ಯುವ ಬಯಸದಿರೆಂದು ।
ಸುವರ್ಣ ಪುಷ್ಪವ ನೀವೇನು ॥೩॥
ಸರಸ ಸಂಸಾರದಲಿ ಸಮರಸವ ಸವೆಯುತ್ತಾ ।
ಶಿವಾನುಭವ ಸವಿಯನೇ ಸವಿದು ನಿತ್ಯದಲಿ ।
ಪುರಹರನ ಪೂಜ್ಯ ಪಾದವ ಪಿಡಿದು ।
ಜರೆಮರಣವನೆ ಸೀಳಿ ಶಿರಹರಣ ಕರುಣ ಕೃಪೆ ।
ಯಂ ಪಡೆದು ಹೇಯಭವ ನೀಗಿ ಮರುಳಿ ಮತ್ಯವ ।
ಬಯಸದಿರೆಂದು ಸುವರ್ಣ ಪುಷ್ಪವ ನೀವನು ॥೪॥

———

# ವೀರಶೈವ ಲಾಂಛನ ಮತ್ತು ರಾಷ್ಟ್ರಧ್ವಜ.

(ಲೇಖಕರು:— ಜಿ. ಆರ್. ಭಸ್ಮಾಂಗದೇವರು, ಎಲ್ ಇ. ಇ.
ಭಸ್ಮಾಂಗಮಠ, ಬಿ. ಆರ್. ಪ್ರಾಜೆಕ್ಟ್. ವ್ಹಾಯಾ ಬೀರೂರು)

ಶ್ರೀ ವಿಶ್ವೇಶ್ವರನು ತನ್ನ ಲೀಲಾ ವಿನೋದಗೋಸ್ಕರ ವಿಶ್ವದ ಎಲ್ಲಾ ಕಡೆಯಲ್ಲಿಯೂ ಆದಿಯಿಂದಲೂ ಅನೇಕ ಲೀಲೆಗಳನ್ನು ತನ್ನ ಭಕ್ತರ ಮೂಲ ಪ್ರಕಾಶಕ್ಕೆ ತಂದಿರುತ್ತಾನೆ. ಆಯಾ ದೇಶಗಳಲ್ಲಿ ಆಯಾ ಕಾಲಕ್ಕೆ ತಕ್ಕಂತೆ ಆಯಾ ಜನಾಂಗದಲ್ಲಿಯೇ ಅನೇಕ ಭಕ್ತರು ಅವತರಿಸುತ್ತಾರೆ. ತಮ್ಮ ತಮ್ಮ ಸಂಸ್ಕೃತಿಗೆ ತಕ್ಕಂತೆ ಭಕ್ತಿ ಪ್ರಚಾರ ಮಾಡುತ್ತ ಸಮಾಜದಲ್ಲಿ ಶಾಂತಿ, ಸಮಾಧಾನ, ಸಹಕಾರ, ಮಾನ ಮರ್ಯಾದೆಗಳನ್ನು ಸ್ಥಾಪಿಸಿ ಸಂಸ್ಕೃತಿಯ ಬೆಳವಣಿಗೆಗೆ ಸುಭದ್ರವಾದ ತಳಹದಿಯನ್ನು ವಿಶ್ವದ ಎಲ್ಲಾ ಭಾಗಗಳಲ್ಲಿಯೂ ಸ್ಥಾಪಿಸಿರುತ್ತಾರೆ. ವಿಶ್ವದ ಎಲ್ಲ ಭಾಗಗಳ ಜನಾಂಗದವರು ತಮ್ಮ ತಮ್ಮ ಸಂಸ್ಕೃತಿಗೆ ತಕ್ಕಂತಹ ಉಡುಪುಗಳನ್ನು, ಆಹಾರವನ್ನು, ರೂಢಿಗೆ ತಂದಿರುತ್ತಾರೆ. ತಮ್ಮ ತಮ್ಮ ಸಂಸ್ಕೃತಿಗೆ ಅನುಕೂಲವಾದ ಲಾಂಛನಗಳನ್ನು ಇಟ್ಟುಕೊಂಡು ಮುಂಬರಿದು ಬಂದಿರುತ್ತಾರೆ. ಈ ಲಾಂಛನವು ಅಥವಾ ರಾಷ್ಟ್ರಧ್ವಜವು ಕೇವಲ ಹತ್ತಿ, ರೇಶಿಮೆ, ದಾರಗಳಿಂದ ಮಾಡಿದ್ದರೂ ಅವುಗಳು ತಮ್ಮ ತಮ್ಮ ಮೂಲ ಮಾನ, ಮರ್ಯಾದೆಗಳ ಗುರುತುಗಳಾಗಿವೆ. ಪ್ರಪಂಚದಲ್ಲಿ ಎಲ್ಲ ಜನರೂ ತಮ್ಮ ರಾಜಕೀಯದಲ್ಲಿ ತಮ್ಮದೇ ಆದ ರಾಷ್ಟ್ರಧ್ವಜವನ್ನು ಸ್ಥಾಪಿಸಿಕೊಂಡಿರುತ್ತಾರೆ. ಈ ರಾಷ್ಟ್ರಧ್ವಜವೂ ಕೂಡ ಮೂಲ ಹತ್ತಿ, ರೇಷ್ಮೆಗಳಿಂದ ಆಗಿದ್ದರೂ ಆಯಾ ರಾಷ್ಟ್ರದ ಜನಾಂಗದವರಿಗೆ ಬಹಳ ಪವಿತ್ರವಾದದ್ದು. ದೇಶದ ಐಕ್ಯಮತ್ಯ, ಮರ್ಯಾದೆ, ಶಿಸ್ತು, ಸುಖ, ಶಾಂತಿಗಳನ್ನು ಈ ರಾಷ್ಟ್ರಧ್ವಜವೇ ಅಂಬರದಲ್ಲಿ ತಲೆ ಎತ್ತಿ ಸಾರುತ್ತದೆ. ಆಯಾ ರಾಷ್ಟ್ರದ ಧ್ವಜಕ್ಕೆ ಆಯಾ ರಾಷ್ಟ್ರದ ಜನರು ಯಾರೇ ಆಗಲಿ ತಲೆಬಾಗಿ ಶರಣಾಗತರಾಗಬೇಕು. ಒಂದು ವೇಳೆ ಯಾರಾದರೂ ರಾಷ್ಟ್ರಧ್ವಜಕ್ಕೆ ತಲೆಬಾಗದೇ ಇದ್ದಲ್ಲಿ ಅವರನ್ನು ರಾಷ್ಟ್ರದ್ರೋಹಿಗಳೆಂದು ಪರಿಗಣಿಸುತ್ತಾರೆ. ಅಲ್ಲದೆ ಈ ರಾಷ್ಟ್ರದ್ರೋಹಿಗಳು ಅತಿ ಕ್ರೂರವಾದ ಶಿಕ್ಷೆಗೆ ಗುರಿಯಾಗುತ್ತಾರೆ. ಈ ಸಂಕೇ

ತವು ರಾಷ್ಟ್ರಧ್ವಜದ ರಾಷ್ಟ್ರಭಕ್ತಿಯ ಶಕ್ತಿಯನ್ನು ತೋರಿಸುತ್ತದೆ. ಈ ವಾಡಿಕೆಯು ಬಹು ಶತಮಾನಗಳಿಂದಲೂ ಪ್ರಪಂಚದ ಎಲ್ಲಾ ರಾಷ್ಟ್ರೀಯ ಕೀಯ ರಂಗದಲ್ಲಿ ಅನುಷ್ಠಾನಕ್ಕೆ ಬಂದಿರುತ್ತದೆ. ಭಾರತ, ರಾಮಾಯಣ ಮೊದಲಾದ ಚರಿತ್ರೆಗಳಿಂದಲೂ ನಾವು ಧ್ವಜದ ಸ್ಥಾನವನ್ನು ತಿಳಿಯ ಬಹುದು. ಶಿವಪುರಾಣ, ವಿಷ್ಣುಪುರಾಣ ಮೊದಲಾದ ಕಥೆಗಳಲ್ಲಿ ಲಾಂಛನದ ಶಕ್ತಿಯನ್ನು ನಾವು ತಿಳಿಯಬಹುದು. ಈ ವಾಡಿಕೆಯು ಎಲ್ಲಾ ಪೂರ್ವ ಪಶ್ಚಿಮ ಖಂಡಗಳ ರಾಷ್ಟ್ರಗಳಲ್ಲಿಯೂ ಇತ್ತು ಎಂಬು ದನ್ನು ಚರಿತ್ರೆಗಳಿಂದ ತಿಳಿಯುತ್ತೇವೆ. ಆದುದರಿಂದ ರಾಷ್ಟ್ರಧ್ವಜವನ್ನು ಎಲ್ಲರೂ ಕಾಪಾಡಿಕೊಂಡು ಬಂದು ಸ್ವತಂತ್ರದ ಸುಖವನ್ನು ಅನುಭವಿ ಸಬೇಕು. ಮುಂದಿನ ಜನಾಂಗಕ್ಕೆ ಮಾರ್ಗದರ್ಶಕರಾಗಬೇಕು, ಎಂದು ಎಲ್ಲರೂ ಒಪ್ಪುವರು; ಅಲ್ಲವೇ ?

ಅದರಂತೆಯೇ ಪ್ರಪಂಚದ ಎಲ್ಲಾ ಜನರು ತಮ್ಮ ತಮ್ಮ ಆಧ್ಯಾತ್ಮಿಕ ರಂಗದಲ್ಲಿ ತಮ್ಮದೇ ಆದ ಧರ್ಮದ ಸಂಸ್ಕೃತಿ ಸಂಕೇತವನ್ನು ತೋರಿಸುವ ನಿಯಮಗಳನ್ನು ಇಟ್ಟುಕೊಂಡಿರುತ್ತಾರೆ. ಕ್ರೈಸ್ತರು ಶಿಲುಬೆ ಗಳನ್ನೂ ಮಣಿಗಳನ್ನೂ ತಮ್ಮ ತಮ್ಮ ಧರ್ಮ ಭಾವನೆಗೆ ಧರಿಸಿರು ತ್ತಾರೆ. ಅವರೂ ತಮ್ಮ ಆಧ್ಯಾತ್ಮಿಕ ಶಕ್ತಿಯನ್ನು ಬೆಳಸಿಕೊಂಡು ಬಂದಿರುತ್ತಾರೆ. ತಾವುಗಳು ರಾಜಕೀಯ ರಂಗದಲ್ಲಿ ಮುಖಂಡರಾದರೂ ತಮ್ಮ ತಮ್ಮ ಸಂಸ್ಕೃತಿಯನ್ನು ಯಾರೂ ಬಿಡುವದಿಲ್ಲ. ಅದರಂತೆಯೇ ಮುಸಲ್ಮಾನರೂ ಕೂಡ ತಮ್ಮ ಧರ್ಮಕ್ಕೋಸ್ಕರ ತಮ್ಮ ಸಂಸ್ಕೃತಿಗೆ ಅನುಸಾರವಾಗಿ ಮುಂಜಿ ಮಾಡಿಕೊಂಡು ಗಡ್ಡವನ್ನು ಬಿಟ್ಟು, ದಿವಸಕ್ಕೆ ೩ ಸಲವಾದರೂ ನಮಾಜ ಮಾಡುತ್ತಾ ಒಗ್ಗಟ್ಟು, ಆಧ್ಯಾತ್ಮಿಕ ಭಾವನೆ ದೊದಲಾಡವುಗಳನ್ನು ಬೆಳಸಿಕೊಂಡು ಬಂದರು. ರಾಜಕೀಯ ಮುಖಂಡರೂ ಕೂಡ ತಮ್ಮ ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿರುತ್ತಾರೆ. ಹಿಂದುಗಳಲ್ಲಿ ಅನೇಕರು ಪವಿತ್ರವಾದ ಯಜ್ಞೋಪ ವೀತವನ್ನು ಧರಿಸಿ ಹಣೆಗೆ ತಮ್ಮ ತಮ್ಮ ಸಂಸ್ಕೃತಿಗೆ ತಕ್ಕಂತೆ ಚಿನ್ಹೆ ಗಳನ್ನು ಧರಿಸಿ ಆಧ್ಯಾತ್ಮಿಕ ರಂಗದಲ್ಲಿ ಸಿದ್ಧಿಯನ್ನು ಪಡೆದಿರುತ್ತಾರೆ.

ಆದರೂ ರಾಜಕೀಯ ಮುಖಂಡರೂ ತಮ್ಮ ತಮ್ಮ ಸಂಸ್ಕೃತಿಯನ್ನು ಮುಂದುವರಿಸಿಕೊಂಡು ಬರುತ್ತಲೇ ಭಾರತ ಮಾತೆಯ ಸೇವೆಯನ್ನು ಮಾಡಿರುತ್ತಾರೆಂಬುದನ್ನು ಅವರ ಜೀವನ ಚರಿತ್ರೆಗಳ ಮೂಲಕ ತಿಳಿಯಬಹುದು.

ಸ್ವತಂತ್ರ ಧರ್ಮವಾದ ವೀರಶೈವ ಸಂಸ್ಥೆಯೂ ಕೂಡ ತನ್ನದೇ ಆದ ಸಂಸ್ಕೃತಿಯ ಮೂಲವಾದ ಪವಿತ್ರ ಇಷ್ಟ ಲಿಂಗವನ್ನು ಶ್ರೀ ಗುರುವಿನ ಮೂಲಕ ಪಡೆದು ಧರ್ಮ ಲಾಂಛನಗಳಾದ ಭಸ್ಮ, ರುದ್ರಾಕ್ಷಿಗಳನ್ನು ಧರಿಸಿ ರಾಷ್ಟ್ರ ಸೇವೆಯನ್ನು ಮಾಡುತ್ತ ಆಧ್ಯಾತ್ಮಿಕ ಭಾವನೆಗಳನ್ನು ಬೆಳಸಿಕೊಂಡು ಲಿಂಗಾಂಗ ಸಾಮರಸ್ಯವನ್ನು ಅನುಭವಿಸುತ್ತಾ ಬಂದಿರುತ್ತಾರೆ. ಜೀವ, ಈಶ್ವರ, ಜಗತ್ತು ಎಂದು ವ್ಯವಹಾರಗಳನ್ನು ಆರಂಭ ಮಾಡುತ್ತಾರೆ ಜಗತ್ತಿನ ಎಲ್ಲ ವ್ಯವಹಾರಗಳನ್ನು ಜಗದೀಶನ ಮೂಲಕ ಮುಂಬರಿಸಿಕೊಂಡು ಸುಖ ಶಾಂತಿಗಳನ್ನು ಪಡೆಯುವದೇ ವೀರಶೈವರ ಮುಖ್ಯ ಸಂಸ್ಕೃತಿಯಾಗಿದೆ. ಅನೇಕ ಶಿವಶರಣರು ಅನೇಕ ಶತಮಾನಗಳಿಂದಲೂ ಈ ಸಂಸ್ಕೃತಿಯನ್ನು ಲೀಲಾಜಾಲವಾಗಿ ನಡೆಸಿಕೊಂಡು ಬಂದಿರುತ್ತಾರೆ. ತಮ್ಮ ತಮ್ಮ ಸಿದ್ಧಿಯಿಂದ ಅನೇಕ ಪವಾಡಗಳನ್ನೂ ಜನತೆಯ ಮುಂದಿಟ್ಟು ಭಕ್ತಿ ಬಳ್ಳಿಯ ಶಕ್ತಿಯನ್ನು ಬೆಳೆಸುತ್ತಾ ಬಂದಿರುವರು. ಇವುಗಳನ್ನು ಭಾರತ ಹಾಗೂ ಕರ್ನಾಟಕಗಳ ಎಲ್ಲಾ ಭಾಗಗಳಲ್ಲಿಯೂ ನೆಲೆಸಿರುವ ಶ್ರೀ ಗುರು ಗದ್ದಿಗೆಗಳ ಮಹತ್ವದ ಮೂಲಕ ಅನುಭವಕ್ಕೆ ತಂದುಕೊಳ್ಳಬಹುದು. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ ಪಾದೋದಕ, ಪ್ರಸಾದ ಈ ಅಷ್ಟಾವರಣಗಳು ವೀರಶೈವ ಸಮಾಜದ ವಜ್ರ ಕವಚಗಳಾಗಿವೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯವೆಂಬ ಆರು ಸ್ಥಲಗಳು ಲಿಂಗಾಂಗ ಸಾಮರಸ್ಯವನ್ನು ಪಡೆಯುವ ಮುಖ್ಯ ಗದ್ದುಗೆಗಳು. ಸದಾಚಾರ, ಶಿವಾಚಾರ, ಲಿಂಗಾಚಾರ, ಭೃತ್ಯಾಚಾರ, ಗಣಾಚಾರ ವೆಂಬ ೫ ಪಂಚಾಚಾರಗಳು ವೀರಶೈವ ಸಮಾಜಕ್ಕೆ ಪ್ರಾಣವಾಗಿವೆ.

ಶ್ರೀ ಶಿವಶರಣರು ತಮ್ಮ ಸಂಸ್ಕೃತಿ ಮಾತೆಯನ್ನು ಕಾಪಾಡಿಕೊಂಡು ಬರಲು ಅನೇಕ ಕಷ್ಟನಷ್ಟಗಳನ್ನು ಅನುಭವಿಸಿದರು. ಧೈರ್ಯದಿಂದ ಲಿಂಗ ಲಾಂಛನ, ವಿಭೂತಿ ಲಾಂಛನಗಳನ್ನು ಧರಿಸುತ್ತಾ ಸಂಸ್ಕೃತಿಯನ್ನು ಮುಂಬರಿಸಿಕೊಂಡು ಕಾಯಕವೇ ಕೈಲಾಸವೆಂದು ನಂಬಿ

ಸ್ವತಂತ್ರವಾಗಿ ಬಾಳಿ ಬದುಕಿ ರಾಷ್ಟ್ರಸೇವೆ ಮಾಡಿರುವದನ್ನು ಚರಿತ್ರೆಗಳಿಂದ ಯಾರು ಬೇಕಾದರೂ ತಿಳಿಯಬಹುದು. ಈ ಸಂಸ್ಕೃತಿಯನ್ನು ಕಾಪಾಡಿಕೊಂಡು ಬರಲು ಕೋಟಿಗಟ್ಟಲೆ ಬೆಲೆ ಬಾಳುವ ಮನೆ ಮಠಗಳನ್ನೂ ಹಾಗೂ ಆಸ್ತಿ ಆಭರಣಗಳನ್ನೂ, ಸಾಹಿತ್ಯ ಕಲೆಗಳನ್ನೂ ನಮಗಾಗಿ ಇಟ್ಟಿರುವರು. ವೀರಶೈವರಿಗೆ ಇರುವಷ್ಟು ಸ್ವತಂತ್ರವಾದ ಆಸ್ತಿ, ಸಾಹಿತ್ಯ, ಕಲೆ, ಸಮಾಜದ ರಚನೆ, ರಾಜಕೀಯ ಮತ್ತಾರಿಗೂ ಇಲ್ಲವೆಂದು ಧೈರ್ಯವಾಗಿ ಹೇಳಬಹುದು. ಇದಕ್ಕೆ ಮೂಲ ಸರ್ವಶ್ರೇಷ್ಠ ಲಾಂಛನಗಳಾದ ಇಷ್ಟಲಿಂಗಧಾರಣೆ, ವಿಭೂತಿಧಾರಣೆಯಿಂದ ಉಂಟಾಗುವ ಸ್ವಪ್ರಕಾಶವೆಂದು ಎಲ್ಲರೂ ಹೇಳುವರು. ನಮ್ಮಲ್ಲಿ ಅನೇಕ ರಾಜರೂ ರಾಜ್ಯವಾಳಿದರೂ, ತಮ್ಮ ಮೂಲ ಲಾಂಛನವಾದ ಇಷ್ಟಲಿಂಗಧಾರಣೆಯನ್ನೂ, ಸಂಸ್ಕೃತಿಯನ್ನೂ ಕಾಪಾಡಿಕೊಂಡು ಬಂದು ದೇಶಸೇವೆಯನ್ನು ಮಾಡುತ್ತ ಪ್ರಜೆಗಳಿಗೆ ಶ್ರೇಷ್ಠವಾದ ಮಾರ್ಗವನ್ನು ತೋರಿಸಿರುವುದು ನಮ್ಮ ಕರ್ನಾಟಕದ ಎಲ್ಲ ಭಾಗಗಳ ರಾಜಚರಿತ್ರೆಯಲ್ಲಿ ಕಾಣಬಹುದು. ನಮ್ಮ ಮೈಸೂರ ದೇಶದ ರಾಜಮನೆತನದವರೂ ರಾಜರೂ ಪಾಶ್ಚಿಮಾತ್ಯ ದೇಶಗಳಲ್ಲಿಯೂ ರಶ್ಯಾ, ಜರ್ಮನಿ ಮುಂತಾದ ದೇಶಗಳಲ್ಲಿಯೂ ಸಂಚರಿಸಿ ಬಂದರೂ ತಮ್ಮ ಇಷ್ಟಲಿಂಗ ಸಂಸ್ಕೃತಿಯನ್ನು ಬಿಡದೆ ಜನತೆಗೆ ಮಾರ್ಗದರ್ಶಕವಾಗಿರುವುದು ಎಲ್ಲರಿಗೂ ತಿಳಿದ ವಿಚಾರ. ರಾಜಮನೆತನದವರು ಶಿವಪೂಜಾ ದುರಂಧರರು, ಭಕ್ತಿಭಾಂಡಾರಿಗಳು, ಭಕ್ತಿಪುಂಗವರು ಎಂಬುದನ್ನು ಮೈಸೂರು ಅರಮನೆಯ ಆವರಣದಲ್ಲಿಯೂ ಕಾಣಬಹುದು. ಇದು ಇಂತಹ ಕಾಲಗಳಲ್ಲಿಯೂ ಮುಂಬರಿದು ಬರುತ್ತಿರುವುದು ಜಗತ್ತಿಗೇನೆ ಮಾರ್ಗದರ್ಶಕವಾಗಿದೆ ಎಂದು ಹೇಳಲು ಹರ್ಷಿಸುತ್ತೇನೆ.

ಆದರೆ ಈಗಿನ ರಾಜಕೀಯ ಮುಂದಾಳುಗಳು ತಮ್ಮ ಸಂಸ್ಕೃತಿಯ ಲಾಂಛನ ವಿಚಾರವಾಗಿ ಹೆಚ್ಚಿಗೆ ಅಧ್ಯಯನ ಮಾಡದೆ ರಾಷ್ಟ್ರಸೇವೆಯಲ್ಲಿ ಉತ್ತೀರ್ಣರಾಗದೆ ಇರುವರು. ಕಾರಣ ಸಂಸ್ಕೃತಿಯ ಕಡೆಗೆ ಗಮನವಿಲ್ಲ. ಇವರು ಹೆಚ್ಚಿಗೆ ಅಧ್ಯಯನ ಮಾಡಬೇಕು. ರಾಜಕೀಯ ಮುಖಂಡರಲ್ಲಿ ಕೆಲವು ಹಿರಿಯ ವ್ಯಕ್ತಿಗಳೆ;

ಇಷ್ಟಲಿಂಗಧಾರಣೆ, ವಿಭೂತಿಧಾರಣೆ ಮೊದಲಾದ ಲಾಂಛನಗಳನ್ನು ತಿರಸ್ಕರಿಸಿ ಇಷ್ಟಲಿಂಗವನ್ನು ಬಿಟ್ಟು ಭವಿಗಳಂತೆ ಬಾಳು ಮಾಡು

ತ್ತಿರುವುದು ತುಂಬಾ ದುಃಖಕರ. ಅಲ್ಲದೆ ಈ ಕಪಟಿ ಮುಂದಾಳುಗಳು ನಮ್ಮ ಸಂಸ್ಕೃತಿಯನ್ನು ಅವಹೇಳನ ಮಾಡುತ್ತಾ ಅವಮಾನ ಮಾಡು ತ್ತಿರುವುದು ತುಂಬಾ ಸಂಕಟವಾಗಿದೆ ಅನ್ನುವಹಾಗಿಲ್ಲ. ಅನುಭವಿಸುವ ಹಾಗಿಲ್ಲ ಒಂದೊಂದು ವೇಳೆ ಇಂತಹವರ ಮೇಲೆ ಸಮಾಜದವರು ಮಾನನಷ್ಟ ಮೊಕದ್ದಮೆಗಳನ್ನು ಏಕೆ ಹೂಡಬಾರದು ಎನ್ನಿಸುತ್ತದೆ. ವೀರಶೈವ ರಾಜಕೀಯ ಮುಂದಾಳುಗಳಲ್ಲಿ ಕೆಲವರು ತಮಗೆ ಮಾರ್ಗ ದರ್ಶಕರಾದ ಮಹಾತ್ಮಾ ಗಾಂಧಿ ಮೊದಲಾದವರ ಉನ್ನತ ಧ್ಯೇಯ ವನ್ನು ಬಿಟ್ಟಿರುವರು. ಸತ್ಯ, ಧರ್ಮ, ಅಹಿಂಸೆ, ಬ್ರಹ್ಮಚರ್ಯ, ಸ್ವಾವಲಂ ಬನ ಮೊದಲಾದವುಗಳನ್ನು ಲೆಕ್ಕಕ್ಕೆ ತಂದುಕೊಳ್ಳದೆ ಜನತೆಗೆ ಮೋಸ ಮಾಡುತ್ತ ಸ್ವಾರ್ಥಿಗಳಾಗಿ ಆಸ್ತಿಯ ಮೇಲೆ ಆಸ್ತಿ, ಮನೆಯ ಮೇಲೆ ಮನೆ ಗಳನ್ನು ಕಟ್ಟುತ್ತಾ ಸಂಸ್ಥೆಗೇನೇ ಕೆಟ್ಟ ಹೆಸರುಗಳನ್ನು ತಂದಿರುತ್ತಾರೆ. ಇನ್ನು ಕೆಲವರು ರಾಷ್ಟ್ರಧ್ವಜದ ಬೆಲೆಯನ್ನು ಅರಿತಿದ್ದರೂ ತನ್ನ ಜನ್ಮದಾತರಾದ ಜನನ ಜನಕರ ಸಂಸ್ಕೃತಿಯ ಲಿಂಗಲಾಂಛನದ ಬೆಲೆಯನ್ನು ತಿಳಿದಿಲ್ಲ. ಇದನ್ನು ತಿಳಿಯುವದು ತಪ್ಪಾಗಿದೆಯೇ ? ನಿತ್ಯವೂ ಲಿಂಗ ಪೂಜೆ ಯನ್ನು ಮಾಡದಿದ್ದರೂ ದೋಷವಿಲ್ಲ. ಸುಮ್ಮನೆ ಇಷ್ಟಲಿಂಗ ಲಾಂಛನ ವನ್ನು ಯಾವಾಗಲೂ ಅಂಗದ ಮೇಲೆ ಧರಿಸಿದ್ದರೆ ದೇಶಭಕ್ತಿ, ರಾಷ್ಟ್ರ ಭಕ್ತಿಗಳು ದ್ವಿಗುಣವಾಗುವವು. ಇದನ್ನು ಅರಿಯದೆ ಇಷ್ಟಲಿಂಗ ಲಾಂಛನವನ್ನು ಬಿಟ್ಟಿರುವದು ದೇಶದ ಜನಾಂಗಕ್ಕೆ ಮತ್ತು ತನ್ನನ್ನೇ ನಂಬಿರುವ ತನ್ನ ಸಮಾಜ ಬಂಧುಗಳಿಗೆ ಅಪಮಾನ ಮಾಡಿದಂತಾ ಗಿದೆ. ತನ್ನನ್ನು ಹೆತ್ತು, ಹೊತ್ತು ಸಾಕಿದವರು ಎಷ್ಟು ಸಂಕಟ ಪಡು ವರು; ಎಂಬುದನ್ನು ತಾವು ತಿಳಿಯಲಾರರೆ? ಜನನೀ ಜನಕರ, ಪವಿತ್ರ ವಾದ ಆಶೀರ್ವಾದವನ್ನು ಪಡೆಯದೆ ದೇಶಸೇವೆ ಮಾಡುತ್ತೇವೆ ಎಂದು ನಟಿಸುವ ಈ ಹೇಡಿಗಳು ಏನು ತಾನೆ ಕೆಲಸವನ್ನು ಮಾಡಿ ದೇಶ ವನ್ನು ಉದ್ಧಾರ ಮಾಡಿಯಾರು ? ಭಾರತ ಕಥಾಭಾಗದಲ್ಲಿ ಕರ್ಣನ ಗತಿಯನ್ನು ತೆಗೆದುಕೊಂಡರೆ ಗುರು ಹಿರಿಯರ ಆಶಿರ್ವಾದವಿಲ್ಲದ ಕರ್ಣ ನಿಗೆ ಧನುರ್ವಿದ್ಯೆಯು ಸಿದ್ಧಿಸದೆ ಸಮಯದಲ್ಲಿ ಮರೆತು ಹೋಯಿತು ಎಂಬುದನ್ನು ನಾವು ನೋಡಬಹುದು. ಎಷ್ಟು ಅಧಿಕಾರವನ್ನು ಪಡೆ ದರೂ, ಎಷ್ಟು ಐಶ್ವರ್ಯವನ್ನು ಸಂಪಾದನೆ ಮಾಡಿದರೂ ಒಂದು ದಿನ ಅಧಿಕಾರದಿಂದ ಕೆಳಗಿಳಿಯಲೇಬೇಕು. ಐಶ್ವರ್ಯವನ್ನು ಮತ್ತೊಬ್ಬರ

ಪಾಲು ಮಾಡಲೇಬೇಕು. ಅಧಿಕಾರ, ಐಶ್ವರ್ಯ ಸ್ಥಿರವಲ್ಲವೆಂಬುದು ಇವರಿಗೆ ತಿಳಿದಿದ್ದರೂ ಸಮಾಜ ದ್ರೋಹ ಮಾಡುತ್ತಿರುವುದು ಸರಿಯಲ್ಲ. ಇಂತಹವರ ಮೇಲೆ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳಬಾರದೇ ? ವೀರಶೈವ ಸಮಾಜವೆಂಬುದು ಒಂದು ಸಂಸ್ಥೆಯಲ್ಲವೇ ? ಈ ಸಂಸ್ಥೆಯಲ್ಲಿ ಅನೇಕ ವಿಧವಾತ ಕಾಯಕದವರು ಇರುತ್ತಾರೆ. ಎಲ್ಲರೂ ಸಮಾನರು. ಕಾಯಕವೇ ಕೈಲಾಸ. ಪವಿತ್ರವಾದ ಕಾಯಕವನ್ನು ಮಾಡಿ ಮೇಲು, ಕೀಳುಎಂಬ ಭಾವನೆಯು ಇಲ್ಲದೆ ಇಷ್ಟಲಿಂಗ, ವಿಭೂತಿ, ಲಾಂಛನಗಳಿಂದ ಕೂಡಿ, ಒಳಗೂ ಹೊರಗೂ ಪವಿತ್ರರಾಗಿ ರಾಷ್ಟ್ರ ಸೇವೆಯನ್ನು ಮಾಡಿ ತಾವೂ ಮುಕ್ತರಾಗಿ ಮತ್ತೊಬ್ಬರನ್ನು ಉದ್ಧರಿಸಿದ ಮಹಾ ವಿಭೂತಿಗಳು ನಮ್ಮಲ್ಲಿ ಬಹು ಮಂದಿ ಇರುವರು. ಇಂತಹವರ ಚರಿತ್ರೆಗಳನ್ನಾದರೂ ಅಧ್ಯಯನ ಮಾಡಿ ವೀರಶೈವ ಲಾಂಛನಗಳು ಶಾಂತಿ, ಸಮಾಧಾನ, ಸ್ವಾತಂತ್ರ್ಯದ ಕುರುಗಳೆಂದು ಸ್ವತಂತ್ರವಾದ ಇಷ್ಟಲಿಂಗ ಪೂಜೆಯನ್ನು ಯಾವ ಸಮೂಹದಲ್ಲಿದ್ದರೂ ಬಿಡದೆ ಮಾಡಿ ತತ್ವ ಸಾಧಕರಾಗಬಹುದು. ಜನತೆಗೆ ಸುಖವನ್ನೂ, ಕಾಯಕಗಳನ್ನೂ ಒದಗಿಸಿ ಕೃತಕೃತ್ಯರಾಗಬಹುದಲ್ಲವೇ ?

ಕಾಂಗ್ರೇಸ ಸಂಸ್ಥೆಯು ಮೊನ್ನೆ ತಾನೆ ತನ್ನಲ್ಲಿ ನಿಷ್ಠೆಯಿಲ್ಲದವರನ್ನು ಭ್ರಷ್ಟಾವಂತರೆಂದು ಸಂಸ್ಥೆಯಿಂದ ಹೊರಹಾಕಲಿಲ್ಲವೇ ? ಇದು ಸರಿಯಾದ ಶಿಸ್ತಿನ ಕ್ರಮ. ಅದರಂತೆಯೇ ವೀರಶೈವ-ಲಿಂಗಾಯತ ಸಂಸ್ಥೆಯವರೂ ಕೂಡ ಪವಿತ್ರ ಧ್ವಜದಂತಿರುವ- ತನ್ನನ್ನೇ ಉದ್ಧರಿಸುವ ಐಕ್ಯಮತ್ಯ ಸೂಚಕವೂ ಪುಣ್ಯಪ್ರದವೂ ಆದ ಇಷ್ಟಲಿಂಗಧಾರಣೆಯನ್ನು ತ್ಯಜಿಸಿದ ಆತ್ಮಭವಿ-ಲಿಂಗದ್ರೋಹಿ-ಸಮಾಜ ದ್ರೋಹಿಯನ್ನು ಆದರಿಸದಿರಬೇಕು. ಇವರು ಪುನಃ ಇಷ್ಟಲಿಂಗ ಧಾರಣೆಯನ್ನು ಮಾಡಿಸಿಕೊಂಡು ಭಕ್ತರಾಗುವಂತೆ ಎಲ್ಲಾ ಮಠಪತಿಗಳೂ- ನಿಷ್ಠಾಪರರೂ- ಸುಧಾರಕರೂ ತಮ್ಮ ಪವಿತ್ರ ಕರ್ತವ್ಯವೆಂದು ಪ್ರಯತ್ನ ಮಾಡಬೇಕು. ಈ ಪ್ರಯತ್ನಗಳಿಗೆ ಅವರು ಬಾಗದೆ ಹೋದರೆ ಅವರು ನಮ್ಮ ಮುಂದಾಳುಗಳಲ್ಲವೆಂದು ಭಾವಿಸಬೇಕು. ಅಂಥವರು ಸಮಾಜದ ಯಾವ ಮರ್ಯಾದೆಗೂ ಅರ್ಹರಲ್ಲ. ಅವರಿಗೆ ಓಟು ಕೊಡಕೂಡದು. ಇಹಲೋಕವನ್ನು ತ್ಯಜಿಸಿದಾಗಲೂ ನಿಷ್ಠೆಯಿಲ್ಲದ ಭ್ರಷ್ಟನೆಂದು ಭವಿಯೆಂದು ತಿಳಿದು ಆತನ ಪ್ರೇತವನ್ನು ಮುಟ್ಟಕೂಡದು. ಶಿವಜನ್ಮದಲ್ಲಿ

ಹುಟ್ಟಿ ಬೆಳೆದು ಬಾಳಿ ಕೊನೆಗೆ ಇಷ್ಟಲಿಂಗವನ್ನು ತ್ಯಜಿಸಿ ಸಮಾಜಕ್ಕೆ ದ್ರೋಹವನ್ನು ಎಸಗುವ ಲಿಂಗದ್ರೋಹಿಗೆ ತಕ್ಕ ಪ್ರಾಯಶ್ಚಿತ್ತವಾಗಲೇ ಬೇಕು.

ತಾವು ಲಿಂಗಾಯತರು- ಒಳ್ಳೇ ವಂಶಸ್ಥರು ಎಂದು ಹೇಳಿಕೊಂಡು ಅಂಗದ ಮೇಲೆ ಲಿಂಗವಂ ಧರಿಸದೆ ಕಡೆಗ್ಗೆದು, ವೇದಿಕೆಗಳ ಮೇಲೆ ಭಾಷಣಗಳನ್ನು ಮಾಡುತ್ತ ಜನತೆಯನ್ನು ಮೋಸಗೊಳಿಸುವ ವ್ಯಕ್ತಿಯು ಯಾವನೇ ಇರಲಿ ಅವನು ಸಂಸ್ಕಾರದ್ರೋಹಿ- ದೇಶದ್ರೋಹಿ, ಆತನಿಗೆ ಧಿಕ್ಕಾರವಿರಲಿ; ಆತನ ಬಾಳು ನಾಯಿಬಾಳು;- ಅವನು ಇಹಕ್ಕೂ ಪರಕ್ಕೂ ದೂರ.

ಬರೇ ರಾಷ್ಟ್ರ ಭಕ್ತರೆಂದು ಹೇಳಿಕೊಳ್ಳುವ ಈ ರಾಷ್ಟ್ರ ಭಕ್ತರಿಗೆ ತಮ್ಮ ಧ್ವಜದ ಮೇಲೆ ಎಷ್ಟು ಅಭಿಮಾನ ಭಕ್ತಿಗಳು ಇರುವವೋ ಅವುಗಳ ಸಾಸಿರಪಾಲು ಸಕ್ಕಿಯಾವಂತರಿಂದ ರಾಷ್ಟ್ರ ಮತ್ತು ಸಂಸ್ಕೃತೀ ಭಕ್ತರಿಗೆ ಭಕ್ತಿ, ಶಕ್ತಿ, ಅಭಿಮಾನಗಳು ಶಾಶ್ವತವಾಗಿರುವವು.

ಒಂದು ವೇಳೆ ಒಳಗೆ ಸಂಸ್ಕೃತಿಯ ಮೇಲೆ ಪ್ರೇಮವಿದೆ ಹೊರಗೇಕೆ ಬೇಕು ಎಂದು ಹೇಳುವದಾದರೆ- ಒಳಗೆ ರಾಷ್ಟ್ರ ಧ್ವಜದ ಮೇಲೆ ಅಗಾಧವಾದ ಪ್ರೇಮವಿದೆ ಎಂದು ಧ್ವಜವನ್ನು ಕಿತ್ತು ಬೀಸಾಟಿ ಅವಮಾನ ಮಾಡಿದರೆ ಸಹಿಸುವರೆ ?

ಒಳಗೆ ಗಂಡನ ಮೇಲೆ ಪ್ರೇಮವಿದೆಯೆಂದು ತನ್ನ ಸಂಸ್ಕೃತಿಗನು ಸರಿಸಿ ಕಟ್ಟಿದ ತಾಳಿಯನ್ನು ಕಿತ್ತೊಗೆದರೆ ಆಕೆಯನ್ನು ತನ್ನ ಸತಿಯೆಂದು ಇವರು ಒಪ್ಪಿಕೊಳ್ಳುವರೇ ? ಒಪ್ಪಿಕೊಳ್ಳುವದಾದರೆ ನಮ್ಮ ಭಾರತ ಮಾತೆಯ ಪವಿತ್ರವಾದ ಮಾಂಗಲ್ಯ ಭಕ್ತಿ ಇರುತ್ತದೆಯೇ ? ಹೇಳಲಿ.

ಪ್ರಪಂಚದಲ್ಲಿರುವ ಯಾವ ದೇಶವೇ ಆಗಲಿ ತಮ್ಮ ತಮ್ಮ ಸಂಸ್ಕೃತಿಗೆ ಧಕ್ಕೆ ಬಂದರೆ ಪ್ರಾಣವಿರುವ ಸರಿಯಂತರವೂ ಹೋರಾಡಿ ಲಾಂಛನ- ಧ್ವಜವನ್ನು ಕಾಪಾಡುವದು. ಅಲ್ಲದೆ ಲಾಂಛನಕ್ಕೆ ಧಕ್ಕೆ

ಮಾಡಿದವನಿಗೂ– ಮಾಡುವಂತೆ ಹೇಳಿ ಕೊಟ್ಟವನಿಗೂ– ಅನುಮೋದಿಕನಿಗೂ ಉಗ್ರ ಶಿಕ್ಷೆ ವಿಧಿಸುವರು. ಚರಿತ್ರೆಗಳಿಂದ ಸರ್ವಶೃತ ಈ ಅನ್ಯಾದಂತೆ ಇಷ್ಟಲಿಂಗ ಲಾಂಛನವನ್ನು ತೆಗೆದ ಭ್ರಷ್ಟಾವಂತನನ್ನು ದಾಕ್ಷಿಣ್ಯಕ್ಕೆ ಒಳಗಾಗಿ ಆದರಿಸಿ ಅನುಮೋದಿಸಿದರೆ ಲಿಂಗದ್ರೋಹ,– ಗುರುದ್ರೋಹ,– ಜಂಗಮದ್ರೋಹಕ್ಕೆ ಒಳಗಾಗಿ ಜನ್ಮ ಜನ್ಮಗಳಲ್ಲಿಯೂ ನಾಯಕ ನರಕವನ್ನು ಅನುಭವಿಸಬೇಕಾಗುವದು; ಎಚ್ಚರಿಕೆ. ಕೃತನಿಗೂ ಕಾರಿಕನಿಗೂ, ಅನುಮೋದಗನಿಗೂ ನ್ಯಾಯಾಲಯದಲ್ಲಿ ಶಿಕ್ಷೆ ವಿಧಿಸುವಂತೆ ಧರ್ಮವು ಧರ್ಮಬಾಹಿರನನ್ನು ಶಿಕ್ಷಿಸುವದು. ಇದು ಪ್ರಕೃತಿಯ ನಿಯಮ.

ರಾಜಕೀಯ ರಂಗದಲ್ಲಿ ದುಡಿಯುವ ಲಿಂಗಾಯತ ರಾಷ್ಟ್ರಸೇವಕರೇ, ನ್ಯಾಯಬದ್ಧವಾಗಿ ವಿಚಾರ ಮಾಡಿರಿ ತಮ್ಮಲ್ಲಿಯ ಕೆಲವರು ರಾಷ್ಟ್ರಸೇವಕನಿಗೇಕೆ ಇಷ್ಟಲಿಂಗಧಾರಣೆ ಎಂದು ಲಿಂಗವನ್ನು ಬಿಟ್ಟು ಭವಿಯಂತೆ ಇರುವದು ತಮಗೆ ಗೊತ್ತಿದ್ದರೂ ದಾಕ್ಷಿಣ್ಯಕ್ಕೆ ಒಳಪಟ್ಟು ಅವರಿಗೆ ಬುದ್ಧಿ ಹೇಳದೆ ಹೋದಲ್ಲಿ ತಾವೂ ಮಿತ್ರದ್ರೋಹಕ್ಕೆ ಒಳಗಾದಂತಾಗುವದಿಲ್ಲವೇ? ಆದುದರಿಂದ ನಮ್ಮ ಹುಟ್ಟು ಸಂಸ್ಕೃತಿಯಾದ ಇಷ್ಟಲಿಂಗವನ್ನು ಅಂಗದ ಮೇಲೆ ಸದಾ ಧರಿಸಿ ನಮ್ಮ ಸ್ವತಂತ್ರ ಸಂಸ್ಕೃತಿಯನ್ನು ಕಾಪಾಡುತ್ತ ಭಾರತ ಮಾತೆಯ ಮತ್ತು ರಾಷ್ಟ್ರದ ಸೇವೆ ಮಾಡುತ್ತ ವಿಶ್ವವೇ ಲಿಂಗವೆಂದು ತಿಳಿದು ಧರ್ಮ, ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಸ್ವಾವಲಂಬನ, ಶಕ್ತಿಗಳ ಸಿದ್ಧಿಯನ್ನು ಪಡೆಯಬೇಕು. "ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯ ಸಚರಾಚರಂ" ಎಂಬುದನ್ನಾದರೂ ತಿಳಿದು ಸರ್ವವ್ಯಾಪಿ, ಸರ್ವಶಕ್ತ, ಸರ್ವಕರ್ತ, ಸರ್ವಭರ್ತ, ಸರ್ವಹರ್ತ,ಸರ್ವೇಶ್ವರನಾದ ಶ್ರೀ ಗುರು ದತ್ತ ಇಷ್ಟಲಿಂಗ ಧಾರಣೆ, ವಿಭೂತಿ ಧಾರಣೆ, ಮೊದಲಾದ ವೀರಶೈವ ಲಾಂಛನ– ಧ್ವಜಗಳನ್ನೂ ಸಂಸ್ಕೃತಿಯನ್ನು ಕಾಪಾಡಬೇಕೆಂದು ಬೇಡುತ್ತೇನೆ. "ಆಚಾರ ವಿಚಾರ ತಪ್ಪಿದಲ್ಲಿ ಶರಣರವಾದವೆಲ್ಲಿದೆ ಮತ್ತೊಂದರಲ್ಲಿ ವಾದವಿಲ್ಲ ಶರಣರ ವಾದ ಲಿಂಗದನಾಡು– ಶರಣರ ವಾದ ಲಿಂಗದ ಬೀಡು– ಶರಣರ ವಾದ ಕಾಳಿ ಲಿಂಗ ದೇವನು ಮಾಡಿದ ಮಾಯೆಯ ಕೇಡು ಕೂಡಲ ಸಂಗಮದೇವ."

ಎನ್ನುವ ಉಪದೇಶ ವಾಣಿಯನ್ನುಗ್ರಹಿಸಿ ನಿಮ್ಮಡಿಯ ಸೇವಕನನ್ನು ಕ್ಷಮಿಸಬೇಕು. “ಸುಮ್ಮನೆ ಲಿಂಗವ ಅಂಗದಲ್ಲಿ ಧರಿಸಿರ್ಪುದೇ ಪರಮ ಪದವಿ ಕಣಾ ಶಿವಸಾಧನಾ” ಶ್ರೀ ಮಗ್ಗೆಮಾಯಿ ದೇವರ ಶತಕದಲ್ಲಿನ ಉಪದೇಶವಾಣಿ. ಪವಿತ್ರವಾದ ಲಿಂಗಾಯತ ಉದರದಲ್ಲಿ ಜನ್ಮತಾಳಿದ ಎಲ್ಲಾ ನಾಗರೀಕರಿಗೂ, ರಾಜಕೀಯ ಮುಖಂಡರಿಗೂ, ವಿದ್ಯಾವಂತರಿಗೂ ಹಾಗು ಪಂಡಿತರಿಗೂ, ಸಕಲ ಕಾಯಕದವರಿಗೂ ನನ್ನ ವಂದನೆಯನ್ನು ಅರ್ಪಿಸುತ್ತೇನೆ. ತಾವು ಯಾವ ಪದವಿಯಲ್ಲಿದ್ದರೂ ಇಷ್ಟ ಲಿಂಗ ಲಾಂಛನವನ್ನು ಸದಾ ಧರಿಸಿತ್ತಾ ನಮ್ಮ ಮುಂದಿನ ಪೀಳಿಗೆಗೆ ಮಾರ್ಗದರ್ಶಕರಾಗಿ ಬಾಳಿ ಬಾಳಿನಲ್ಲಿ ಬೆಳಕನ್ನುಂಡು ಬೆಳಗಾಗಬೇಕೆಂದು ಬೇಡುತ್ತೇನೆ.

# ಗವಿಯಪ್ಪನ ಗದ್ದುಗೆ.

(ಲೇಖಕರು:— ಮು. ಮಲ್ಲಪ್ಪ ಜ್ಞಾನಮಂದಿರ ಹಲಗೂರು.)

ಪ್ರವಾಸ ಮಾಡುತ್ತಿದ್ದಂತೆಯೇ ದಾರಿಯಲ್ಲಿ ಊರೊಂದು ಸಿಕ್ಕಿತು. ಊರಿನ ಕೊನೆಯಲ್ಲಿ ಮಂಟಪವೊಂದು ನಾಲ್ಕಾರು ಜನ ಕೂಡಿದ್ದರು. ಸಕಾಲ ಕ್ಷೇಪವು ಸಾಗುತ್ತಿತ್ತು. ಜೊತೆಯಲ್ಲಿದ್ದವರನ್ನು ಪ್ರಶ್ನಿಸಿದೆನು. ಶಾಸ್ತ್ರಿಗಳೇ? ಇದು ಯಾವ ಮಂಟಪ?

ಇದು ಗವಿಯಪ್ಪನ ಗದ್ದುಗೆ.

ಸರಿ. ಗವಿಯಪ್ಪ!

ಗವಿಯಪ್ಪ ಮಹಾ ಶಿವಾನುಭವಿ.

ಶಿವಾನುಭವ, ಶಿವಾನುಭವಿ.

ಶಿವಾನುಭವ ತತ್ವವು ದೊಡ್ಡದು ನಮ್ಮ ನಾಡಿನಲ್ಲಿನ ಉಳಿದ ತತ್ವಗಳು ಅದೆಷ್ಟೋ ಅಪರಿಪೂರ್ಣವಾಗಿವೆ; ಆದರೆ ಶಿವಾನುಭವ ತತ್ವವು ಮಾತ್ರ ಪರಿಪೂರ್ಣವಾಗಿದೆ. ಕೇವಲ ಪ್ರಶಂಸೆಯೇ ಸರಿ. ಹಾಗಲ್ಲ. ಮನೋ ಯೋಗವು ಮನಸ್ಸನ್ನು ಕುರಿತೂ, ಕರ್ಮಯೋಗವು ಕೇವಲ ಕಾಯವನ್ನೇ ಕುರಿತು ಜ್ಞಾನಯೋಗವು ಬರೀ ಜ್ಞಾನವನ್ನೇ ಕುರಿತು ಆಗಿದೆ. ಆದರೆ ಶಿವಾನುಭವವು ಅರುಹು ಆಚಂಣೆಯಲ್ಲಿ ಮುಪ್ಪುರಿಗೊಂಡ ಶಿವಯೋಗದ ಜೀವವಾಗಿದೆ ಪರಿಪೂರ್ಣತೆಗೆ ಶಿವಾನುಭ ಒಂದೇ ಸಾಕಾಗಿದೆ. ಶಿವಾನುಭವಿ ಎಂದರಲ್ಲಾ!

ಅನುಭಾವವನ್ನು ಅಳವಡಿಸಿಕೊಂಡಿರುವ ಶಿವಶರಣನೇ ಶಿವಾನುಭವಿ ಅನುಭಾವವು ಘನವು.

ಅನುಭಾವವಿಲ್ಲದವನ ಭಕ್ತಿ ತಲೆಕೆಳಗಪ್ಪುದಯ್ಯಾ.<br>
ಅನುಭಾವವೇ ಭಕ್ತಿಗಾಧಾರ<br>
ಅನುಭಾವವೇ ಭಕ್ತಿಗೆ ನೆಲೆವನೆ

ಅನುಭಾವವುಳ್ಳವರ ಕಂಡರೆ ತುರ್ಯ ತುರ್ಯ
ಸಂಭಾಷಣೆಯ ಮಾಡದಿದ್ದರೆ ನರಕದಲ್ಲಿಕ್ಕಯ್ಯಾ
ರಾಮನಾಥಾ.

ಗವಿಯಪ್ಪನ ವಿಚಾರವನ್ನು ಹೇಳಿ ಹಾಗಾದರೆ ಹೇಳ್ತೇನಿ ಕೇಳಿ. ನಮ್ಮ ಭೂಮಿಯು ಪುಣ್ಯಭೂಮಿಯು. ರತ್ನ ವಸುಂಧರೆಯು. ಶರಣರು ಉದಯಿಸಿ ಅಸ್ತಮಯವಾದ ನಾಡು ನಮ್ಮ ನಾಡು. ಆಯಾಯ ಜಾಗದಲ್ಲಿ ಆಯಾಯ ವಾಸನೆಯು ಅಚ್ಚಳಿಯದ ಅಳವಟ್ಟಿರಲು ಏನಾದರೂ ಒಂದು ಬಗೆಯ ಅವಕಾಶ ಇದ್ದೇ ಇರುತ್ತದೆ. ಈ ನಾಡು ಭಕ್ತಿಯ ಬೀಡು, ಮಹಾಮಹಿಮರ ನೆಲೆವನಾಡು. ಈ ಬಗೆಯ ಜಾಗದಲ್ಲಿ ಈ ಭಾಗ ಒಂದಾಗಿತ್ತು. ಈ ನಮ್ಮ ಸುತ್ತಮುತ್ತ ಜಾಗವೆಲ್ಲ ಪೂರ್ಣ ಒಂದು ಆವರಣವಾಗಿತ್ತು. ಇಲ್ಲಿಗೆ ಉತ್ತರ ದೇಶದಿಂದ ಮಹನೀಯರೊಬ್ಬರು ಈ ಮಿಡಬಯ್ಯನ ಹುಂಡಿಗೆ ದಯಮಾಡಿಸಿದರು. ಇಲ್ಲಿ ಈಗ ಕಾಣುತ್ತಿರುವ ಆ ಪೊದೆಯ ಹತ್ತಿರ ಅವರು ಮನೆಯೊಂದನ್ನು ಮಾಡಿಕೊಂಡು ನಿಂತರು. ಅವರ ಆಗಮನದಿಂದ ಊರಿನವರ ಆನಂದವನ್ನು ಹೇಳತೀರದು! ಶರಣರಿದ್ದ ಠಾವೆ ಕೈಲಾಸವು ಶರಣರ ಸೇವೆಯೇ ದೇವರ ಸೇವೆಯು. ಕಾಲಿಗೊಬ್ಬ ಕೈಗೊಬ್ಬ ಭಕ್ತರು. ಪರಿಚಾರಿಕೆಗೆ ಸಲಭ ಸಾಧ್ಯವಾಗಿ ಸಿಕ್ಕಿದರು. ಆದರೆ ಆ ಸ್ವಾಮಿಗಳು ಅದಕ್ಕೆ ಮನಗೊಡಬೇಕಲ್ಲ! ಕೆಲಸಕ್ಕೆ ಕಾಯವನ್ನು ಉಪಯೋಗಿಸದೆ ಸುಮ್ಮನೆ ಕುಳಿತು ಮೈ ಬೆಳೆಯಿಸಿ ಜೀವಿಸುವದು ಸ್ವಾಮಿಗಳಿಗೆ ಒಗ್ಗಲಿಲ್ಲ. ಯಾರೇ ಆಗಲಿ ಕಾಯಕವೊಂದನ್ನು ಕೈಕೊಳ್ಳದೆ ಜೀವನ ಪುರುಷಾರ್ಥವು ಸಲೆಸಿದ್ಧಿಸುವದಿರವಂತೆ! ಕಾಯಕದಿಂದ ಪುಣ್ಯ ಪುಂಜವು. ಪರಿಶುದ್ಧ ಮನಸ್ಸು ಕಾಯಕ ಸಹಕಾರ.

ಚಿತ್ತಶುದ್ಧಿಯಿಂದ ಮಾಡಿದ ಪುಣ್ಯವು |
ಸ್ವಲ್ಪವಾದರದುವೆ ದೊಡ್ಡದಹುದು |
ಬಿತ್ತವೆನಿತು ನೋಡಲಾಲದ ವೃಕ್ಷಕೆ |
ವಿಶ್ವತೋಭಿರಾಮ ಕೇಳೊವೆಮಾ ||

ಕಾಯಕದಿಂದ ಹಿಂದೆ ಶಿವ ಶರಣರು ಭವ್ಯ ಜೀವಿಗಳಾಗಿದ್ದರು. ಶ್ರೀ ಗುರು ಕಾರುಣ್ಯ ಕಂಥೆ ಭಿಕ್ಷಾ ವೃತ್ತಿಯು ಅನೇಕ ಶರಣರಿಗೆ

ಕೈವಲ್ಯ ಕಲ್ಪವಲ್ಲರಿಯನ್ನು ಕರತಲಾಮಲಕ ಮಾಡಿಕೊಟ್ಟಿದೆ. ನಿಷ್ಕಳಂಕವಾಗಿ ತ್ರಿಕರಣ ಶುದ್ಧಿಯಿಂದ ಇದನ್ನು ಆಚರಿಸಿದ ಮಹನೀಯರಿಗೆ ಪರುಷವು ತಾನೇ ತಾನಾಗಿ ದೊರಕುತ್ತದೆ. ಅಣುಮಾದ್ಯ ಅಷ್ಟಸಿದ್ಧಿಗಳನ್ನು ಪಡೆಯುವ ಯೋಗವೂ ಕೂಡ ಸಿಕ್ಕುತ್ತದೆ. ಈ ತತ್ವವನ್ನು ಈ ಸ್ವಾಮಿಗಳು ತಿಳಿಯದೆ ಇರಲಿಲ್ಲ. ಈ ಸುತ್ತ ಮುತ್ತಣ ಹಳ್ಳಿಯಿಂದ ಸ್ವಾಮಿಗಳು ಕಂಥೆ ಬಿಕ್ಷವನ್ನು ಮಾಡಿ ಅತಿಥಿ ಅಭ್ಯಾಗತರಿಗೆ ಭಕ್ತ ಭಾಗವತರಿಗೆ ಪ್ರಸಾದ ವಿನಿಯೋಗ ಮಾಡಿ ತೃಪ್ತಿಗೊಳಿಸುವದೇ ಇವರ ನಿತ್ಯಗಟ್ಟಲೆ ಕೆಲಸವಾಗಿತ್ತು. ಬಂದ ಜನರು ಇವರ ಪ್ರತಿಭೆಗೆ ಬೆಕ್ಕಸ ಬೆರಗಾಗುತ್ತಿದ್ದರು.

ಆವ ಪರಿಯಲಿ ತಿಳಿಯಬಹುದು ನಿಮ್ಮ ಶರಣರಿರವನು
ಭಾವದಲಿ ನಾ ತಿಳಿವೆ ಲಿಂಗವು ಇರಲು ಶಿವನೆಂದು
ಶರಣರಿರವನು ನರರ ಭಾವದಿ ತಿಳಿಯಲೆಂತಹುದೋ

ಮುಪ್ಪಿನಾರ್ಯರ ಅಮೃತವಾಣಿಯು ಸತ್ಯಭೂತವಾಗುತ್ತಿತ್ತು. ದಾಸೋಹ ವೈಭವ ಚಕ್ರವರ್ತಿಯಾದ ಈ ಮಹಾ ಮಹಿಮರ ಮಹತ್ವವು ಮೆರೆಯುವಂತಿತ್ತು. ಆ ಜಂಗಮರು ಅಲ್ಲಿನ ಪ್ರತ್ಯಕ್ಷಶಿವನಾಗಿದ್ದರು. ದುಃಖವಿದ್ದಲ್ಲಿ ಸಂತೋಷ, ಕಷ್ಟವಿದ್ದಲ್ಲಿ ಸುಖ, ಕಹಿ ಇದ್ದಲ್ಲಿ ಸಿಹಿ, ಕತ್ತಲಿದ್ದಲ್ಲಿ ಬೆಳಕು ಇರುವಂತೆಯೇ ಒಳ್ಳೆಯದಿದ್ದ ಕಡೆ ಕೆಟ್ಟದ್ದು ಇರುವದು ಲೋಕರೂಢಿ. ಅಲ್ಲಿಯೂ ಶ್ರದ್ಧಾವಂತ ಹೆಂಗಸರ ಗುಂಪಿನಲ್ಲಿ ಸಂದೇಹ ಸಂಶಯ ಪಿಶಾಚಿಗ್ರಸ್ಥರಾದ ಹೆಂಗಸರು ಒಬ್ಬಿಬ್ಬರು ಇದ್ದರು. ಒಂದು ದಿನ ಇಬ್ಬರು ಹೆಂಗಸರು ಸ್ವಾಮಿಗಳಲ್ಲಿಗೆ ಬಂದರು. ಅವರಲ್ಲಿ ದುಷ್ಟೆಯೊಬ್ಬಳು ಪರೀಕ್ಷಾರ್ಥವಾಗಿಯೇ ಅಲ್ಲಿಗೆ ಬಂದಿದ್ದಳು.

ಏನವ್ವಾ ? ತಾಯಂದಿರಾ ಬಂದಿರಲ್ಲಾ ಏನಾಗಬೇಕು ?
ಬುದ್ಧಿಯವರ ದರ್ಶನಕ್ಕಿಂತ ಇನ್ನೇನಾಗಬೇಕು ಬುದ್ಧಿ !
ಶಿವನ ಅನುಗ್ರಹವು ಅರಳಲಿ !
ಬುದ್ದಿ, ಈಗ ತಮ್ಮ ಅನುಗ್ರಹವಾಗಬೇಕು.
ಎಲ್ಲವೂ ಶಿವನ ಅನುಗ್ರಹ ! ಬಯಕೆ ಏನು !
ಮಕ್ಕಳಿಲ್ಲ....... ಮಕ್ಕಳು;

ಇಗೋ ! ತೆಗೆದುಕೊಳ್ಳಿರಿ ಈ ಪ್ರಸಾದವನು;

ದಯಪಾಲಿಸಿ ಬುದ್ಧಿ;

ಪ್ರಸಾದ, ಶಿವಪ್ರಸಾದ; ಶಿವಪ್ರಸಾದ ಶಿವಾನುಗ್ರಹವು. ಎಚ್ಚರಿಕೆ ಪ್ರಸಾದವು ಘನಕರವಾಗಿದೆ.

ಊರೊಳಗಿರ್ದೊಡೆ ನರರ ಹಂಗು
ಅರಣ್ಯದೊಳಗಿರ್ದೊಡೆ ತರುಗಳ ಹಂಗು
ಬಂದ ಪದಾರ್ಥವ ಲಿಂಗಾರ್ಪಿತ ಮಾಡಿಕೊಂಬ
ಶರಣನೇ ಜಾಣ ಸಕಳೇಶ್ವರಾ

ಆಗಲಿ ಬುದ್ಧಿ;

ಸರ್ವವೂ ಪ್ರಸಾದದಲ್ಲಿ ಅಡಕವಾಗಿದೆ. ಸರ್ವ ಸಿದ್ಧಿಯೂ ಪ್ರಸಾದ ಸೇವನೆಯಿಂದಾಗಿದೆ. ಶಿವನ ಹೆಸರಿನಿಂದ ಈ ಪ್ರಸಾದವನ್ನು ತೆಗೆದು ಕೊಳ್ಳಿ.

ಸ್ವಾಮಿಗಳು ಗುರುಕಾರುಣ್ಯ ಕಂಥೆ ಬಿಕ್ಷೆ ಮಾಡಿದ ಪ್ರಸಾದದಲ್ಲಿ ಒಂದಷ್ಟನ್ನು ಆ ಇಬ್ಬರು ಹೆಂಗಸರಿಗೆ ಪರಮ ಪ್ರೀತಿಯಿಂದ ಕೊಟ್ಟರು. ಅದನ್ನು ತೆಗೆದುಕೊಂಡ ಅವರಿಬ್ಬರು ಮಠ ಬಿಟ್ಟು ಹೊರಟರು. ಅವರಲ್ಲಿ ಸುಗುಣವತಿಯಾದ ಗೃಹಿಣಿಯು ಭಕ್ತಿ, ವಿಶ್ವಾಸದಿಂದ ಸೇವಿಸಿದಳು. ಸ್ವಾಮಿಗಳನ್ನು ಪರೀಕ್ಷಿಸಲು ಬಂದಿದ್ದ ಇನ್ನೊಬ್ಬ ಅಸೂಯಾಪರೆಯಾದ ದುಷ್ಟೆಯು ಆ ಪ್ರಸಾದವನ್ನು ತಿನ್ನದೆ, ದಾರಿಯಲ್ಲಿ ಸಿಕ್ಕಿದ ಒಂದು ಹಳ್ಳದಲ್ಲಿ ಗುಳಿತೋಡಿ ಅದರಲ್ಲಿ ಹಾಕಿ ಮುಚ್ಚಿದಳು. ಕಾಲವು ಕಳೆಯುತ್ತ ಬಂದಂತೆಲ್ಲ ಅನೇಕ ದಿನಗಳ ಮೇಲೆ ಪ್ರಸಾದ ಸೇವಿಸಿದ ಸ್ತ್ರೀಗೆ ಗರ್ಭ ಬೆಳೆಯಿತು. ತತ್ಫಲವಾಗಿ ಆಕೆಯು ಶಿಶುವೊಂದನ್ನು ಪಡೆದಳು. ಇದನ್ನು ಕಂಡ ಅಸೂಯಾಪರಳಾದ ಇನ್ನೊಬ್ಬ ದುಷ್ಟ ಸ್ತ್ರೀಗೆ ಹೊಟ್ಟೆ ಉರಿಯಾಯಿತು. ಸ್ವಾಮಿಗಳಲ್ಲಿಗೆ ಬಂದಳು. ಸಂತಾನ ವಿಹೀನತೆಯ ದುಃಖದಿಂದ ಸೊರಗಿ ನಿಂತಳು.

ಏನಮ್ಮಾ ತಾಯಿ, ಸಂಕಟವೇನು ?

ಬುದ್ಧಿ, ಗುರುವಿನ ಅನುಗ್ರಹವು ಆಗಲಿಲ್ಲ.

ಶಿವಕರುಣೆ;

ತಾವು ಪ್ರಸಾದ ಕೊಟ್ಟಿರಿ; ಜೊತೆಯವಳಿಗೆ ಸಂತಾನವಾಗಿ ನನಗೆ ಮಾತ್ರ ಆಗಲಿಲ್ಲ.

ಎಲ್ಲಿಯೋ ಶಿವನಿಗೆ ತಪ್ಪಿ ನಡೆದಿದ್ದೀಯೋ ?

ಇಲ್ಲ, ಗುರುವೆ;

ಇಲ್ಲವೇ ?

ನಿಜವಾಗಿಯೂ ಗುರುಪಾದ....

ಹಾಗೆಯೇ ? ನಡೆ !

ಇಬ್ಬರೂ ಹೊರಟರು ಪ್ರಸಾದವನ್ನು ಹೂತಿದ್ದ ಹಳ್ಳಕ್ಕೆ; ಸ್ವಾಮಿಗಳು ಹೋದರು, ಕುಳಿಯ ಮೇಲ್ಮಣ್ಣನ್ನು ಸ್ವಾಮಿಗಳೇ ಖುದ್ದಾಗಿ ತೆಗೆಯುತ್ತಿದ್ದಂತೆಯೇ ಶಿಶುವೊಂದರ ತೇಜೋಮೂರ್ತಿಯು ಭಾಸವಾದಂತಾಯಿತು. ಆ ಕುಳಿಯಲ್ಲಿ ಮಾತ್ರ ಗುರುಕಾರುಣ್ಯ ಕಂಥೆ ಬಿಕ್ಷದ ಪ್ರಸಾದವು ಕೊಂಚವೂ ಕೆಡದೆ ಇದ್ದ ಹಾಗೆಯೇ ಇದ್ದಿತ್ತು. ಸ್ವಾಮಿ ನೋಟ ಸಿಡಿದಾಗಿತ್ತು.

"ತಾಯಿ ! ಕಣ್ಣಾರೆ ಕಂಡೆಯಾ ? ಪ್ರಸಾದವು ಘನವು. ರೋಗಕ್ಕೆ ಔಷಧ, ಯೋಗಕ್ಕೆ ಪ್ರಸಾದ ಎಂದುದಾತುಲಾಗಮವು ಹೇಳಿದೆ. ನಮ್ಮ ದೇಹಕ್ಕೆ ಬರುವ ರೋಗಗಳನ್ನು ಔಷಧಿಯು ಕಳೆದಂತೆ ಭವರೋಗವನ್ನು ಪ್ರಸಾದವು ಕಳೆಯುತ್ತದೆ. ಪ್ರಸಾದ ಮಹಿಮೆಯು ಅಗಾಧವು. ಪ್ರತಿಯೊಬ್ಬ ಶರಣ ಶರಣೆಯರ ಕ್ರಿಯೆಯಂತೆ ಪ್ರಸಾದವು ಫಲವನ್ನು ನೀಡುತ್ತದೆ. ನಂಬಿ ನಚ್ಚಿದವರಿಗೆ ಪ್ರಸಾದವು ಅಮೃತ ಫಲ, ಸಂಶಯ ಗ್ರಸ್ತರಿಗೆ ಮಹಾಕಾಳಸಿಂಗಿ ವಿಷ. ಗುರುಕರುಣವಿಲ್ಲದ ನಿನಗೆ ಮಾಡಬಾರದ್ದಕ್ಕೆ ಆಗಬಾರದ್ದು ಆಯಿತು. ನಿನ್ನ ಪಾಲಿಗೆ ಬಂದದನ್ನು ನೀನೇ ಉಣಬೇಕು. ಇನ್ನಾದರೂ ಗುರುಕೃಪೆಗೆ ಯತ್ನಿಸು." ಇದನ್ನು ಕೇಳುತ್ತಿದ್ದಂತೆಯೇ ಉಸಿರು ಬಿಡದೆ ಆ ಹೆಂಗಸು ತನ್ನ ದಾರಿಯನ್ನು ಹಿಡಿದಳು.

"ಅಯ್ಯಾ ನಿಮ್ಮ ಶರಣರ ಇರವು ಕಯ್ಯದೀವಿಗೆಯಂತಿರ್ದಿತಯ್ಯಾ. ಅಯ್ಯಾ ನಿಮ್ಮ ಶರಣರ ಸುಳುಹು ಪವನನ ಕಯ್ಯಪರಿಮಳದಂತಯ್ಯಾ. ಹತಾಶನನೆಂಬ ಗದ್ದುಗೆಯ ಮೇಲೆ ಕರ್ಪೂರದರಸು ಕುಳ್ಳಿರಲು ಅರಸು ಗದ್ದುಗೆಯ ನುಂಗಿದನೋ, ಗದ್ದುಗೆ ಅರಸನ ನುಂಗಿತ್ತೋ ಎಂಬದೃಷ್ಟ

ದಲ್ಲಿ ಕಂಗಳ ಗದುಗೆಯ ಮೇಲೆ ಮಹಾ ಗುರುಲಿಂಗವೆಂಬರಸು ಕುಳ್ಳಿ ರಲು ಲಿಂಗ ಕಂಗಳ ನುಂಗಿತ್ತೋ, ಕಂಗಳು ಲಿಂಗವ ನುಂಗಿತ್ತೋ ಈ ಉಭಯವ ನುಂಗಿದ ಬೆಡಗಿನ ಬಿನ್ನಾಣವ ನಿಜಗುರು ಭೋಗೇ ಶ್ವರಾ ನಿಮ್ಮ ಶರಣರಲ್ಲೇ ಕಾಣಬಹುದು."

ಈ ಸ್ವಾಮಿಗಳು ತಮ್ಮ ದಿನಚರಿಯ ಕರ್ತವ್ಯ ಕಾಯಕವನ್ನು ನಡೆಯಿಸಿಕೊಂಡು ಹೋಗುತ್ತಿದ್ದರು. ಈ ಮಧ್ಯೆ ಮತ್ತೊಬ್ಬ ನೀಚೆ ಯೊಬ್ಬಳು ಸ್ವಾಮಿಯವರನ್ನು ಪರೀಕ್ಷಿಸುವ ಸಲುವಾಗಿ ಮನೆಗೆ ಬಂದ ಸ್ವಾಮಿಗಳ ದಾಸೋಹ ಜೋಳಿಗೆಗೆ ಸಿದ್ಧ ಪಡಿಸಿದ್ದ ವಿಷದ ಕಜ್ಜಾಯ ವೊಂದನ್ನು ಹಾಕಿದಳು. ಅವರು ಹೊಸ್ತಿಲವನ್ನು ದಾಟುತ್ತಿದ್ದಂತೆ ಆಕೆಯ ಮಗುವೊಂದು ಬಂದು 'ಬುದ್ಧಿ' ಎನಲು ಜೋಳಿಗೆಗೆ ಕೈ ಹಾಕಿ ಕೈಗೆ ಸಿಕ್ಕಿದ ಆ ಕಜ್ಜಾಯವನ್ನು ಅದಕ್ಕೆ ಕೊಟ್ಟು ಮುಂದೆ ಹೋದರು. ಅದನ್ನು ತಿನ್ನುತಿದ್ದ ಮಗುವು ಇದ್ದಕ್ಕಿದ್ದಂತೆಯೇ ವಿಲ ವಿಲನೆ ಒದರುತ್ತಾ ಕೆಳಕ್ಕೆ ಬಿದ್ದಿತು. ಇದನ್ನು ಆ ನೀಚೆಯು ಕಂಡಳೋ ಇಲ್ಲವೋ ಬೆದರಿ ಬೆಚ್ಚಿ ಆ ಮಗುವಿನ ಸಹಿತ ಮಠಕ್ಕೆ ಓಡಿದಳು. ಅದನ್ನು ಸ್ವಾಮಿಗಳ ಪಾದದಲ್ಲಿ ಹಾಕಿ, ತಾನೂ ಆ ಪಾದದ ಮೇಲೆ ಬಿದ್ದಳು.

ಏಕಮ್ಮಾ, ಈ ಗಾಬರಿ ?

ಬುದ್ಧಿ, ನನ್ನ ಮಗುವಿಗೆ ಜ್ಞಾನ ತಪ್ಪಿದೆ.

ಕಾರಣ !

ತಾವು ಕೊಟ್ಟ ಕಜ್ಜಾಯವನ್ನು ತಿಂದಿತು.

ನೀನು ಕೊಟ್ಟ ಕಜ್ಜಾಯವೇ ಅದು.

ಗುರುವೇ ಅಜ್ಞಾನದಿಂದ ಹಾಗೆ ಮಾಡಿದೆ.

ಎಲ್ಲವೂ ಶಿವನಾಟ !

ಗುರುವೇ ಮಗುವಿನ ಪ್ರಾಣ?

ಇನ್ನಾದರೂ ನಿನ್ನ ಹೀನ ಬುದ್ಧಿಯನ್ನು ಬಿಡು. ಗುರುವನ್ನು ನಂಬು. ಶಿವನು ನಿನಗೆ ಒಳ್ಳೇಯದನ್ನು ಮಾಡುತ್ತಾನೆ.

ಅಪ್ಪಣೆ ಗುರುವೆ.

ಮಂತ್ರೋಚ್ಚಾರಣೆಯಿಂದ ಮಗುವಿನ ಮೈಗೆಲ್ಲ ಭಸ್ಮವನ್ನು ಹಚ್ಚಿ ತೀರ್ಥವನ್ನು ಪ್ರೋಕ್ಷಿಸಿ ಪ್ರಸಾದವನ್ನು ಮಗುವಿನ ಬಾಯಿಗೆ ಹಾಕಿ ಶೈತೋಪಚಾರ ಮಾಡಲು ಮಗುವು ಇದ್ದಕ್ಕಿದ್ದಂತೆಯೇ ಕಣ್ತೆರೆದು ಆಕಳಿಸಿತು. ಬಾಯಿಯಲ್ಲಿದ್ದ ಪ್ರಸಾದವನ್ನು ನುಂಗಿ ಚಕ್ಕನೆ ಮೇಲ ಕ್ಕೆದ್ದು ಗುರುಪಾದದ ಮೇಲೆ ತಲೆಯಿಟ್ಟಿತು ಕೈ ಹಿಡಿದು ಮಗುವನ್ನು ಸ್ವಾಮಿಗಳು ಮೇಲೆತ್ತಿದರು. ನೀಚ ಹೆಂಗಸಿಗೆ ಗುರುಭಕ್ತಿಯು ಅಂಕು ರಿಸಿ, ಗುರುವಿಗೆ ದೀರ್ಘದಂಡ ಸಾಷ್ಟಾಂಗ ನಮಸ್ಕಾರ ಮಾಡಿ, ಸ್ವಾಮಿ ಯವರ ಆಶೀರ್ವಾದವನ್ನು ತೆಗೆದುಕೊಂಡು ಬಾಲಕನ ಜೊತೆಯಲ್ಲಿ ಮನೆಗೆ ಹೊರಟಳು.

ಹಲವು ಕಾಲ ಹೀಗೆಯೇ ಸ್ವಾಮಿಯವರು ಜೀವಿಸಿದರು. ಪವಾಡ ವನ್ನು ಇಂದಿನ ಜನವು ನಂಬದಿರಬಹುದು. ಪುರುಷ ಶಕ್ತಿಯಿರುವ ವಿಭೂತಿಗೆ ಇದು ಸರ್ವ ಸಾಮಾನ್ಯ; ವಿಶೇಷವೇನೂ ಅಲ್ಲ. ಪ್ರಕೃತಿ ಯನ್ನೇ ಮನುಜನು ತನ್ನ ಗುಲಾಮನನ್ನಾಗಿ ಮಾಡಿಕೊಂಡು ಜೀವನ ಚಕ್ರಾಧಿಪತ್ಯವನ್ನು ಆಳುತ್ತಿರುವಲ್ಲಿ ಇದೆಲ್ಲದರಲ್ಲಿ ನಂಬಿಗೆಯಿಡಲೇಬೇಕು. ಇಳೆಗೆ ಬಂದು ಮಾಡಬೇಕಾದ ಕಾರ್ಯವನ್ನು ಈ ಸ್ವಾಮಿಗಳು ಮಾಡಿ ದರು. ದುರ್ಮಾರ್ಗಿಗಳಿಗೆ ಬುದ್ಧಿ ಕಲಿಸಿ ದಾರಿಗೆ ತಂದರು. ತೀರ್ಥ ಪ್ರಸಾದದಲ್ಲಿ ನಂಬಿಕೆ, ಗುರು ಜಂಗಮರಲ್ಲಿ ಪ್ರೇಮವು ಮೊಳೆತು ಬೆಳೆ ಯಾಗುವಂತೆ ಭಕ್ತ ಭಕ್ತೆಯರ ಹೃದಯ ಕ್ಷೇತ್ರವನ್ನು ಹದಗೊಳಿಸಿ ದರು. ದಿವ್ಯ ಜ್ಞಾನಿಗಳ ಅರಿವಿಗೆ ಸಿಗದ ಭಾವನೆಗೆ ನಿಲುಕದ ವಿಚಾರ ಯಾವುದುತಾನೆ ಇದೆ ? ಮುಂದೆ ಪಾಪ ಕರ್ಮವು ಕವಲೊಡೆಯುವದು ಸ್ವಾಮಿಯವರಿಗೆ ಗೊತ್ತಾಯಿತೋ ಏನೋ! ಊರ ಹೊರಗಿನ ಗವಿಗೆ ಬಂದರು. ತಾಯಿ ಹಸುವನ್ನು ಅಗಲಿದ ಕರುಗಳಂತೆ ಊರಿನವರ ಅವಸ್ಥೆ ಆಯಿತು. ಸ್ವಾಮಿಗಳಿಗಾಗಿ ಪಡಬಾರದ ಪಡುಪಾಡನ್ನು ಅನು ಭವಿಸಿದರು. ಗುರುದರ್ಶನವೂ ದೊರಕಲಿಲ್ಲ. ಬಹುವಾಗಿ ಬೇಗುದಿ ಗೊಂಡರು. ಹಗಲೆಲ್ಲ ಗವಿಯಲ್ಲಿ ವಾಸ; ರಾತ್ರಿಯೆಲ್ಲ ಊರ ಸಂಚಾರ ಸ್ವಾಮಿಗಳಿಗೆ. ಯಾರೋ ಭಕ್ತನೊಬ್ಬನ ಆಚಾರ್ಯದಿಂದ ಕೆಲವು ದಿನ ಗಳ ಮೇಲೆ ಜನರೆಲ್ಲರೂ ಗವಿಯಲ್ಲಿಗೆ ಬಂದರು. ಮುಚ್ಚಿದ ಬಾಗಿ

ಲನ್ನು ಬಹಳ ಸಹಾಸದಿಂದ ತೆಗೆದರು. ಅಲ್ಲಿ ಬರೀ ಕಾಯದ ಪ್ರತಿಬಿಂಬ. ಜನರ ಗೋಳೋಗೋಳು. ಇಲ್ಲಿ ಕಾಣುವ ಈ ಗವಿಯಪ್ಪನ ಗದ್ದುಗೆಯೇ ಆ ಜನಗಳು ಬಂದು ಅವರ ಹೆಸರು ಹೇಳಿ ಆರಾಧನೆ ನಡೆಯಿಸಿದ್ದು ಆ ಕೆರೆಯ ಎಡಭಾಗದಲ್ಲಿರುವ ತೋಟದಲ್ಲಿ ಸ್ವಾಮಿಗಳು ಬಯಲಾದ ಗವಿಯಿತ್ತು. ಈಗ ಅದು ಲತೆ, ಪೊದೆಗಳಿಂದ ಅವೃತವಾಗಿ ಕಣ್ಣಿಗೆ ಕಾಣದಂತೆ ಇದೆ. ಗತ ವಿಚಾರಗಳು ನಮ್ಮ ಭಾವನೆಯನ್ನು ಬಲಿಯಿಸುತ್ತವೆ. ಕ್ರಿಯಾಶಕ್ತಿಯನ್ನು ಕರಿಗೊಳಿಸುತ್ತವೆ. ಜೀವನವನ್ನು ಪುಟಗೊಳಿಸುತ್ತದೆ. ಇಂತಹ ಕಥೆಗಳು ನಮ್ಮ ನಾಡಿನಲ್ಲಿ ಹೇರಳವಾಗಿವೆ. ಇವು ಕಲ್ಪನೆಯ ಕಂತೆಯಲ್ಲ. ಬಾಳ ಕುಲುಮೆಯಲ್ಲಿ ಉಳಿದ ಲಾವಾರಸ. ನಮ್ಮ ಭೂಮಿಯು ಪುಣ್ಯ ಭೂಮಿ. ಪಾವನ ಕ್ಷೇತ್ರ. ಭಕ್ತಿ ಭಾವುಕರ ಬಯಲು, ಭಾಗವತರ ಭಾವಿಯು.

# "ಧರ್ಮಸೂಕ್ತ"

ಲೇಖಕರು:— ಶ್ರೀ ಪಾ. ರಾ. ಪಾಟೀಲ
ಪ್ರಧಾನ ಗುರುಗಳು ಕ. ಗಂ. ಜೀ. ಶಿ. ಶಾಲೆ ಚೊಳಚಗುಡ್ಡ.

---

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕ ಶರಣಂ ವ್ರಜ ।
ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ॥

ಸತ್ಯಸುಂದರ ಶಿವನು । ನಿತ್ಯವೊಂದಾಗಿಹನು । ಸತ್ತು ಚಿತ್ತಾನಂದರೂಪ ।
ಸತ್ತು ಚಿತ್ತಾನಂದರೂಪ । ನೀನಾಗಿರುವಿ । ನಿತ್ಯ ನಿತ್ಯದಿ
ನಂಬು ಮನವೆ ॥೧॥

ದೇವನೊಬ್ಬನೆ ಇದ್ದು । ನಾಮಹಲತೆರನಂದು ಭಾವಶುದ್ಧಿಗೆ
ಜಪವು ತಪವು
ಭಾವಶುದ್ಧಿಗೆ ಜಪವು ತಪವು । ಭಜನಾದಿಗಳು । ಹೋಮ ಹವನವು
ಧ್ಯಾನ ಮೌನ ॥೨॥

ಶಾಂತತೆಯ ಹೆಸರಿನಲಿ । ಸಂತರಿಂ ಧರ್ಮಗಳು ।
ಶಾಂತಿಯನು ನೀಡಲುದಿಸಿದವು । ಶಾಂ
ತಿಯನು ನೀಡಲುದಿಸಿದವು । ಸಂತತ ನಮಗೆ ।
ಶಾಂತಿಯನು ಸಾಧಿಸುದೆ ಧರ್ಮ ॥೩॥

ಪೂಜಿಸುವ ವಸ್ತುಗಳು । ಈ ಜನತೆಗವಸರವು ।
ಸಾಜವಾಗಿರುವದೀ ನೇಮ । ಸಾಜ
ವಾಗಿರುವದೀ ನೇಮ । ನಿಜವರಿಯದಲೆ । ಈಜುತಿಹರಿಲ್ಲಿ ವ್ಯರ್ಥಕಟಾ ॥೪॥

ತುಲಸಿ ಶಮಿ ಬಿಲ್ವಗಳು । ಹಲವೌಷಧಿಗಳಾಗಿ ।
ಬಳಿಕೆಯಲಿ ನಿತ್ಯ ಬರಲೆಂದೆ । ಬ
ಳಿಕೆಯಲಿ ನಿತ್ಯ ಬರಲೆಂದೆ । ಬೇವರಳೆಗಳ । ಸಲೆಪೂಜಿಸಿರಬೇಕಲಾ ॥೫॥

ಆಕಳಾನೆಯು ಮಹಿಷ । ಈ ಕುದುರೆಯುಪಯೋಗ ।
ಸಾಕಷ್ಟಿದೆಂದರಿತಜನತೆ । ಸಾಕ
ಷ್ಟಿದೆಂದರಿತ ಜನತೆ । ಕಾಲಾಂತರದಿ । ಸಾಕುತ್ತ ಪೂಜಿಸಿರಬೇಕು ॥೬॥

ಹರಿಯು ನಮ್ಮಯ ದೇವ । ಹರಹೆಚ್ಚು ನಮಗಿಂತು ।
ವರಗಣೇಶನು ಸೂರ್ಯ ಶಕ್ತಿ । ವರ
ಗಣೇಶನು ಸೂರ್ಯ ಶಕ್ತಿ । ಇಂದ್ರಾಗ್ನಿಗಳು ।
ವರುಣಲಿಂಗಗಳಧಿಕ ಅಧಿಕ ॥೭॥

ದೇವಿ ಪಾರ್ವತಿ ಲಕ್ಷ್ಮಿ । ದೇವಿ ಮಾರಿಯು ಮಸಣಿ ।
ದೇವಿ ಸರಸತಿಯೆ ಮಿಗಿಲೆಂದು । ದೇವಿ
ಸರಸತಿಯೆ ಮಿಗಿಲೆಂದು । ವಾಮಾದಿಗಳು ।
ದೇವಿ ಕಾಳಾಕ್ಷಿ ಕಾಮಾಕ್ಷಿ ॥೮॥

ದ್ವೈತಿಗಳು ಕೆಲವರ । ದ್ವೈತಿ ಕೆಲವರು ಶಿವಾ ।
ದ್ವೈತಿಗಳು ಕೆಲವರು ವಿಶಿಷ್ಟಾ । ದ್ವೈತಿಗಳು
ಕೆಲವರು ವಿಶಿಷ್ಟಾದ್ವೈಗಳೆಂದು । ಔತಣಿತ್ತಿಹರು ಕಲಹದಲಿ ॥೯॥

ಕೆಲರು ಶೈವಾಸ್ತಿಕರು । ಕೆಲರು ವೈಷ್ಣವ ಶಾಕ್ತ ।
ಕೆಲರು ಪಶುಪತಿ ಗಾಣಪತ್ಯ ।
ಕೆಲರು ಪಶುಪತಿ ಗಾಣಪತ್ಯ । ಲಿಂಗಾಂಗಿಗಳು ।
ಬಲವಂತರಾಗಿಹರು ಕುಲದಿ ॥೧೦॥

ಜೈನ ಬೌದ್ಧರು ಕ್ರೈಸ್ತ । ಹೀನಹಿಂದುಗಳಾದಿ ।
ನಾನಕೀ ಶೀಖ ನಾಸ್ತಿಕರು । ನಾನಕೀ ಶೀಖ
ನಾಸ್ತಿಕರು । ಮುಸ್ಲಿಂ ಫಾರ್ಶಿ । ಏನು ಬ್ರಹ್ಮಾರ್ಯ ಸಂಘಗಳು ॥೧೧॥

ಗಿಡನಪೂಜಿಸಿ ಪಶುವ ಕೊಡಲಿ ಹಾವ್ ಮಂಗಗಳ ।
ಬೆಡಗಿನಲಿ ಬೆಂಕಿ ಹಕ್ಕಿಗಳ ।
ಬೆಡಗಿನಲಿ ಬೆಂಕಿ ಹಕ್ಕಿಗಳ । ಕಲ್ಮಣ್ಣುಗಳ ।
ಪುಡಿಮಾಡಿ ಬಿಡದೆ ಪೂಜಿಪರು ॥೧೨॥

ಸೋಹಮೆನ್ನುವರು ದಾ । ಸೋಹ ಮೆನರೆಂದೆಂದು ।
ಸೋಹ ದಾಸೋಹಮೆನ್ನುವರು ।
ಸೋಹ ದಾಸೋಹಮೆನ್ನುವರು । ಬೇರುಂಟಲ್ಲಿ ।
ಈ ಹದನವೇನು ಕೌತುಕವೋ ॥೧೩॥

ತತ್ವ ಧರ್ಮಗಳಿಂತು । ಕತ್ತಿತ್ತಿ ಮೆರೆದಾಗ । ತತ್ವ ತತ್ವಂಗಳಲಿ ಧರ್ಮ ।
ತತ್ವ ತತ್ವಂಗಳಲಿ ಧರ್ಮ । ಧರ್ಮಂಗಳಲಿ ।
ಮತ್ತೆ ನೂರಾರು ಜಾತಿಗಳು ||೧೪||

ಕಲಿಯುದವರೊಗೆಗೊಂದು । ಕಲಿತವರೊಳಗೊಂದು ತೆರ ।
ಕುಲದ ಅಭಿಮಾನ ಮರೆಯಾಗಿ ।
ಕುಲದ ಅಭಿಮಾನ ಮರೆಯಾಗಿ । ಕಲಕುತ್ತಿಹುದು ।
ನಿಲವುಗಾಣದ ಸಕಲ ಜನಕೆ ||೧೫||

ಹಿರಿಯ ಕ್ಷೇತ್ರಂಗಳನು । ಪರಮ ತೀರ್ಥಂಗಳನು ।
ಸರುವ ದೈವಿಕ ಶಕ್ತಿಗಳನು । ಸರುವ
ದೈವಿಕ ಶಕ್ತಿಗಳನು ಕುಲದಿಂ ಕುಲಕೆ ।
ಹರಿದು ಹಂಚಿದರಿವರು ಅಲ್ತೆ ||೧೬||

ಇಂತು ಕುಲಧರ್ಮಗಳ । ತಂತಂಮ್ಮ ಹಿರಿಮೆಯುಲಿ ।
ಸಂತಸದಿ ಜೀವನಕೆ ಶಾಂತಿ । ಸಂತ
ಸದಿ ಜೀವನಕೆ ಶಾಂತಿ । ಬೀರುವ ಬದಲು ।
ಸಂತಸದಿ ಕಲಹ ಕೊಟ್ಟಿಹವು ||೧೭||

# ಅನುಭವ ಮಂಟಪ
## ಅರ್ಥಾತ
# ಧಾರ್ಮಿಕ ಪಾರ್ಲಿಮೆಂಟ



ಲೇಖಕರುಃ— ಶ್ರೀ ಮ. ನಿ. ಪ್ರ. ಪೂಜ್ಯ ಬಂಥನಾಳ ಶಿವಯೋಗಿಗಳು.

ಅಕಾರಲಿಂಗವೇವ್ರೋಕ್ತಂ । ನುಕಾರೋಜೀವ ಉಚ್ಚತೆ ।
ಭಾವಯೋಗ ಸಂಯೋಗ ಏವ್ರೋಕ್ತೋ । ಅನುಭಾವಿ ನಿಗದ್ಯತೆ ॥

ಎಂಬುದಾಗಿದೆ.

ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರು ಅನುಭಾವವೆಂಬುದು ಲಿಂಗಾಂಗ ಸಾಮರಸ್ಯವಾಗಿರುವದೆಂದು ಅಪ್ಪಣೆ ಕೊಟ್ಟದ್ಧಾರೆ.

ಜನಾಂಗದ ಧಾರಣೆ, ಪೋಷಣೆಗೆ ಯೋಗ್ಯವಾದ ನಿಜಧರ್ಮವನ್ನು ಪಾರ್ಲಿಮೆಂಟ, ಅಸೆಂಬ್ಲಿ, ಕಾಯ್ದೆ ಕೌನ್ಸಿಲ್‌ಗಳಂತೆ ಶುದ್ಧಾಂತಃಕರಣವುಳ್ಳ ಬಹು ಜನರ ಅನುಭವ ಮೇಲಿಂದಲೇ ನಿರ್ಣಯಿಸಬೇಕೆಂಬ ಅತ್ಯಂತ ಶ್ರೇಷ್ಠ ತರವಾದ ಸಿದ್ಧಾಂತವನ್ನು ಧಾರ್ಮಿಕ ರಾಜ್ಯದಲ್ಲಿ ಹೊಸದಾಗಿ ಶೋಧನಮಾಡಿದ ಪ್ರಥಮಾಚಾರ್ಯನೆಂದರೆ ಶ್ರೀ ಭಗವಾನ ಬಸವಾಚಾರ್ಯನೇ ಸರಿ.

ಎಂಥ ಶ್ರೇಷ್ಠವಾದ ಜ್ಞಾನಿಯ ಅನುಭವವು ಕೂಡ ಒಮ್ಮೊಮ್ಮೆ ವಿಕಾರವಶವಾಗುತ್ತಿರುವದರಿಂದ ಸ್ಮೃತಿಕಾರರಂತೆ ವ್ಯಕ್ತಿಗತವಾದ ಅನುಭವದಿಂದ ಸರ್ವಜನರ ಧರ್ಮಾಚರಣೆಯ ಕಟ್ಟಳೆಗಳನ್ನು ನಿಶ್ಚಯಿಸುವ ಪದ್ಧತಿಯು ಘಾತುಕವಾದುದೆಂದು ಅನುಭವದಿಂದ ಕಂಡುಹಿಡಿದು "ಅನುಭವ ಮಂಟಪ" ವೆಂಬ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರವಾಗಿಯೇ ಮಹಾ ಮಹಾ ಜ್ಞಾನಿಗಳ ಅನುಭವವನ್ನು ವಾದರೂಪದಿಂದ ಚರ್ಚಿಸಿ ಕಡೆಗೆ ಎಲ್ಲರ ಅನುಭವಕ್ಕೆ ಹೊಂದಿ ಹೋದ ವಿಷಯವನ್ನೇ ವೇದಾಗಮಾದಿಗಳ ಆಧಾರದೊಂದಿಗೆ ಜನಾಂಗವು ಅನುಸರಿಸತಕ್ಕ ಧರ್ಮಾಚರಣೆಯೆಂದ ಜಯಭೇರಿಯನ್ನು ಹೊಡೆದ ಮಹಾತ್ಮನೆಂದರೆ ಆ ಮಹಾನುಭಾವಿ ಬಸವಣ್ಣನೇ ಸರಿ.

ಬಸವಾಚಾರ್ಯನು ಸ್ಥಾಪಿಸಿದ ಅನುಭವ ಮಂಟಪಕ್ಕೆ ಸತ್ಯನಿಷ್ಠರಾದ, ಅದ್ವೇಶರಾಗಿಗಳಾದ ಪ್ರಭುದೇವ ಏಕೋರಾಮ, ಸಿದ್ಧರಾಮ, ಚನ್ನಬಸವಣ್ಣ, ಸಕಳೇಶ ಮಾದರಸ, ಮೋಳಿಗೆ ಮಾರಯ್ಯ, ಮಧುವರಸ, ಸಿಂಗಿರಾಜ, ಆದಯ್ಯ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಮಡಿವಾಳ ಮಾದೇವ, ಅಂಬಿಗರ ಚೌಡಯ್ಯ, ಮೊಚ್ಚಿಗಾರ ಹರಳಯ್ಯ, ಡೋಹರ ಕಕ್ಕಯ್ಯ, ಅಕ್ಕಮಹಾದೇವಿ, ಸತ್ಯಕ್ಕ, ಮುಕ್ತಾಯಕ್ಕ ಮೊದಲಾದ ಸಹಸ್ರಾರು ಜನರು ಸದಸ್ಯರಾಗಿದ್ದರು. ಅವರೆಲ್ಲರೂ ಮಹಾತತ್ವಜ್ಞಾನಿಯಾದ ಹಾಗೂ ಸ್ವಾನುಭವಿಯಾದ ಜಗದ್ಗುರು ಪ್ರಭುದೇವರ ಅಧ್ಯಕ್ಷತೆಯಲ್ಲಿ ತಮ್ಮ ತಮ್ಮ ಸ್ವಾನುಭವವನ್ನು ಸರ್ವ ಸದಸ್ಯರ ಮುಂದಿಡುತ್ತಿದ್ದರು. ಆ ನಂತರ ಆ ವಿಷಯದ ಚರ್ಚೆಗಾಗಿ ಕಡೆಗೆ ಎಲ್ಲರ ಅನುಭವಕ್ಕೆ ಒಪ್ಪಿಗೆಯಾಗಿ ಧರ್ಮ ಗ್ರಂಥಗಳ ಆಧಾರದೊಂದಿಗೆ ಸಮಾಜವು ಆಚರಿಸತಕ್ಕ ಧರ್ಮಾಚರಣೆಯೆಂದು ನಿರ್ಣಯಿಸಲ್ಪಡುತ್ತಿತ್ತು. ಈ ಪ್ರಕಾರವಾಗಿ ನಿರ್ಣಯವಾದ ಸಮಾಜ ಸುಧಾರಣೆ ಪೋಷಣೆಗೆ ಯೋಗ್ಯವಾದ ಅನಂತ ವಿಚಾರಗಳಲ್ಲಿಯ ಕಿಂಚಿತ ವಿಷಯಗಳನ್ನು ಇದರಡಿಯಲ್ಲಿ ಬರೆದುದಾಗಿದೆ.

೧ ಈ ಸಂಸ್ಥೆಯು ಅನಂತ ದೇವತೆಗಳ ಕಲಕಲಾಟದಿಂದ ತುಂಬಿ ತುಳುಕುತ್ತಿರುವ ಭಾರತ ದೇಶದಲ್ಲಿ "ಏಕಂ ಸದ್ವಿಪ್ರಾ ಬಹುಧಾವದಂತಿ" ಎಂಬ ಶೃತಿವಾಕ್ಯದಂತೆ "ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ ಒಬ್ಬನೇ ದೇವ ಕಾಣಿರೋ" ಎಂಬ ಬಸ

ಉಚ್ಚನೀಚ ಸ್ತ್ರೀಪುರುಷರೆಂಬ ವ್ಯತ್ಯಾಸವಿಲ್ಲದೆ ಎಲ್ಲರು ಶಿವಾನುಭವವನ್ನು ಸಂಪಾದಿಸಿಕೊಳ್ಳಲಿಕ್ಕೆ ಪ್ರಯತ್ನಿಸಲಾರಂಭಿಸಿದರು. ಇದು ಕನ್ನಡ ವಾಙ್ಮಯಕ್ಕೆ ಹೊಸ ತೇಜವನ್ನು ತಂದುಕೊಟ್ಟಿತು. ಶಿವಶರಣ ಶರಣೆಯರ ಹೃದಯದಿಂದ ಹೊರದೋರಿದ ಮಿಂಚಿನಂತಹ ದಿವ್ಯೋದ್ಗಾರಗಳು ಕನ್ನಡ ವಾಙ್ಮಯದಲ್ಲಿ ನವೀನ ಬೆಳಕನ್ನು ಹುಟ್ಟಿಸಿದವು. ಈ ಅನುಭವಮಂಟಪದ ವಿದ್ಯುತ್ ಶಕ್ತಿಯು ಇಡೀ ಸಮಾಜದಲ್ಲಿ ನವಚೇತನ, ನವಪ್ರಕಾಶ, ನವತೇಜ ಉಂಟಾಗುವಂತೆ ಮಾಡಿತು. ಆದರಿಂದ ಪಾಪಿಗಳೂ ನೀಚರೂ ಎಂದೆನಿಸಿಕೊಳ್ಳುವವರೂ ಕೂಡ ಪಾವನರಾದರು. ಇವರು ತಮ್ಮ ನೀಚತನವನ್ನು ಬಿಟ್ಟು ಉತ್ತಮ ಮಾರ್ಗಾವಲಂಬಿಗಳಾದರು. ಒಟ್ಟಿನ ಮೇಲೆ ಹೇಳುವದೇನಂದರೆ ಬಸವಾವತಾರ ಕಾಲಕ್ಕೆ ಭಾರತದಲ್ಲಿ ಅದರಲ್ಲಿ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಕರ್ಮಠತನವು ಧೃಢವಾಗಿ ನೆಲೆಗೊಂಡಿತ್ತು. ಕೇವಲ ಶಬ್ದ ಪ್ರಾಮಾಣ್ಯವು ಅರ್ಥಾತ್ ಶೃತಿಸ್ಮೃತ್ಯಾದಿಗಳ ವಚನಗಳಂತೆ ನಡೆಯುವದೇ ಧರ್ಮವೆಂಬ ಅಭಿಪ್ರಾಯವು ಬಹು ಮತವಾಗಿತ್ತು. ಇದರಿಂದ ಜನಾಂಗದಲ್ಲಿ ಬೇಕಾದಷ್ಟು ಅನೀತಿಯಿಂದ ನಡೆದರೂ ಕೂಡಾ ಧರ್ಮದ ಬಹಿರಚರಣೆಗಳನ್ನು ಮಾತ್ರ ಕವಾಯಿತದಂತೆ ಮಾಡಿದರೆ ಸದ್ಗತಿಯು ದೊರೆಯುವದೆಂಬ ಅಂಧ ಶ್ರದ್ಧೆಯು ಎಲ್ಲ ಕಡೆಗೆ ವ್ಯಾಪಿಸಿತ್ತು. ಇದನ್ನು ನೋಡಿ ತನ್ನ ಬಾಲ್ಯಾವಸ್ಥೆಯಲ್ಲಿಯೆ ಸತ್ಯನಿಷ್ಠ, ನ್ಯಾಯಪ್ರಿಯನಾದ ಬಸವಚಾರ್ಯನು ಶ್ರುತಿ ಸ್ಮೃತ್ಯಾದಿಗಳ ಸತ್ಯಾರ್ಥವನ್ನು ಮನನ ಮಾಡಿಕೊಂಡು ಧರ್ಮಾಚರಣೆಯನ್ನು ನಿರ್ಣಯಿಸಲಿಕ್ಕೆ ಕೇವಲ ಧರ್ಮಶಾಸ್ತ್ರಗಳು, ವಚನಗಳು ಅಪೂರ್ಣವಾದವುಗಳೆಂದು ಒಂದುವೇಳೆ ಕರ್ಮಠರ ಅಭಿಪ್ರಾಯದ ಮೇರೆಗೆ ಶಾಸ್ತ್ರಗಳ ವಚನಗಳನ್ನೇ ಪ್ರಮಾಣವಾಗಿ ಗಹಿಸಬೇಕೆಂದರೂ ಕೂಡ ಧರ್ಮಚಾರಣೆಯನ್ನು ನಿಶ್ಚಯಿಸುವದಕ್ಕೆ ಹೇಗೆ ತೊಂದರೆಯಾಗುತ್ತದೆಂಬುವ ವಿಷಯುವನ್ನು ಪ್ರಮಾಣಬದ್ಧವಾಗಿ ಸಿದ್ಧಮಾಡಿ ತೋರಿಸಿದನು.

ಧರ್ಮಶಾಸ್ತ್ರವು ಒಂದುಕಡೆ "ಅಗ್ನಿಷ್ಟೋಮಿಯಂ ಪಶು ಮಾಲಭತ" ಅಂದರೆ ಅಗ್ನಿದೇವನ ಸಲುವಾಗಿ ಪಶುವನ್ನು ಕೊಲ್ಲು ಎಂದು ಆಜ್ಞಾಪಿಸತ್ತದೆ. ಮತ್ತೊಂದು ಕಡೆ "ಮಾಹಿಂಸ್ಯಾತ್ ಸರ್ವಭೂತಾನಿ" ಅಂದರೆ ಯಾವ ಪ್ರಾಣಿಯನ್ನು ಯಾವ ಕಾರಣದಿಂದಲೂ ಕೊಲ್ಲಬೇ

ಡದೆಂದು ಆಜ್ಞಾಪಿಸುತ್ತದೆ. ಮತ್ತು ಮೃತನಾದ ಪತಿಯುಕೂಡ ಸಹ ಗಮನ ಮಾಡುವದು ಧರ್ಮವೆಂದು ಒಂದೆಡೆ ಆಜ್ಞೆ ಮಾಡಿದರೆ ಮತ್ತೊಂದುಕಡೆ ಮೃತ ಪತಿಯುಕೂಡ ಸಹಗಮನ ಮಾಡಿದರೆ ಆತ್ಮ ಹತ್ಯ ದೋಷಬಂದು ಮುಂದೆ ಭಿಕ್ಷುಣಿಯಾಗಿ ಹುಟ್ಟುವಳು, ಕಾರಣ ಸಹಗಮನ ಮಾಡಬಾರದೆಂದು ಆಜ್ಞಾಪಿಸುತ್ತದೆ. ಹೀಗೆ ಪರಸ್ಪರ ವಿರೋಧವಾದ ವಾಕ್ಯಗಳು ಧರ್ಮಶಾಸ್ತ್ರದಲ್ಲಿ ಹೇರಳವಾಗಿ ದೊರೆಯು ವದರಿಂದ ಇವುಗಳಲ್ಲಿ ಯಾವದನ್ನು ಅನುಸರಿಸಬೇಕು? ಮತ್ತು ಯಾವ ದನ್ನು ಬಿಡಬೇಕು? ಇಲ್ಲಿ ರೂಢಿವಾದಿಗಳು (ಕರ್ಮಠರ) ದಿಙ್ಮೂಢ ರಾಗಿ ಕುಳಿತುಬಿಡುತ್ತಾರೆ. ಧರ್ಮ ನಿರ್ಣಯವನ್ನು ಮಾಡುವ ಮಾರ್ಗ ವನ್ನು ಮನುವು ಸ್ಪಷ್ಟವಾಗಿ ಹೇಳಿದ್ದಾನೆ "ಪ್ರತ್ಯಕ್ಷಂಚಾನುಮಾ ನುಂಚಶಾಸ್ತ್ರಂಚ ವಿವಿದಾಗಮಂ" ತ್ರಯಂ ಸುವಿದಿತಂ ಕಾರ್ಯಂ ಧರ್ಮ ಶುದ್ಧಿಮಭಿಪ್ಸತಾ' ॥೧॥ ಅಂದರೆ ಪ್ರತ್ಯಕ್ಷಾನುಭವ, ಅನುಮಾನ ಮತ್ತು ಶಾಸ್ತ್ರ, ವಚನ ಈ ಮೂರರಿಂದ ಧರ್ಮವನ್ನು ನಿರ್ಣಯಿಸ ಬೇಕು. ಅದರಲ್ಲಿ ವಿಶೇಷವಾಗಿ ಅಗ್ರಸ್ಥಾನವನ್ನು ಅನುಭವಕ್ಕೇನೇ ಕೊಟ್ಟಿರುತ್ತಾನೆ. ಅದಕ್ಕನುಸರಿಸಿಯೇ ಹಿಂದು ಧರ್ಮ ಪುರಸ್ಕರ್ತದಲ್ಲಿ ಅಗ್ರಗಣ್ಯನಾದ ಬಸವಾಚಾರ್ಯನು ಕರ್ಮಠರಂತೆ ಕೇವಲ ಶಬ್ದಗಳಿಗೆ ವಿಶೇಷ ಮಹತ್ವಕೊಡದೆ ಮೊದಲು ನಡೆಯುವದು ಆಮೇಲೆ ನುಡಿ ಯುವದು ಎಂದು ನಿಶ್ಚಯಿಸಿ ಪ್ರತ್ಯಕ್ಷಾನುಭವಕ್ಕೆ ಮಹತ್ವಕೊಟ್ಟು "ಅನುಭವಮಂಟಪ"ವೆಂಬ ಹೊಸ ಮಾದರಿ ಸಂಸ್ಥೆಯನ್ನು ಸ್ಥಾಪಿಸಿ ಸತ್ತುಹೋಗುತ್ತಿದ್ದ ಧರ್ಮಕ್ಕೆ ನವಜೀವನವನ್ನು ತಂದುಕೊಟ್ಟನು.

ಪ್ರತಿಯೊಬ್ಬನು ಯಾವ ಪ್ರಾಣಿಯಿಂದಲೂ ಯಾವ ಕಾಲದಲ್ಲಿಯೂ ಯಾವ ರೀತಿಯಿಂದಲೂ ತನಗೆ ಅಪಾಯ ಸಂಭವಿಸಬಾರದೆಂದು ಹೇಗೆ ಅಪೇಕ್ಷಿಸುತ್ತಿರುವನೋ ಹಾಗೆಯೇ ಸಕಲ ಪ್ರಾಣಿಗಳು ಕೂಡ ಅಪೇಕ್ಷಿ ಸುತ್ತವೆ.

ಎಂಬುದನ್ನು ಅನುಭವದಿಂದ ಕಂಡುಹಿಡಿದು "ದಯವಿಲ್ಲದ ಧರ್ಮವದಾವುದಯ್ಯ, ದಯವೇಬೇಕು ಸರ್ವಪ್ರಾಣಿಗಳೆಲ್ಲರಲ್ಲಿ, ದಯವೇ ಧರ್ಮದಮೂಲವಯ್ಯ; ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ" ಎಂದು ಅನುಭವಕ್ಕೆ ಹೊಂದುವ ಧರ್ಮಸಿದ್ಧಾಂತವನ್ನು 'ಮಾಹಿಂಸ್ಯಾತ್ ಸರ್ವಭೂತಾನಿ' ಎಂಬ ಶಾಸ್ತ್ರವಚನ ಪ್ರಕಾರ ಸಿದ್ಧಮಾಡಿದನು.

"ಅಗ್ನಿಷ್ಟೋಮಿಯಂ ಪಶುಮಾಲಭತ" ಎಂಬ ಶಾಸ್ತ್ರವಚನವು ಅನುಭವಕ್ಕೆ ವಿರೋಧವಾದುದರಿಂದ ಅದನ್ನು ಅದಕ್ಕೆ ಸಂಬಂಧಿಸಿ ಯಜ್ಞಯಾಗಾದಿಗಳನ್ನು ಒಳ್ಳೆ ಕಠೋರತನದಿಂದ ಖಂಡಿಸಿದನು.

ಹೀಗೆ ಪ್ರತ್ಯಕ್ಷಾನುಭವಕ್ಕೆ ಹೊಂದಿಯೇ ಧರ್ಮ ನಿರ್ಣಯವನ್ನು ಮಾಡುವದು ನೈಜವಾದ ಮಾರ್ಗವು. ಕಲಂಕರಹಿತವಾದ ಕ್ರಮವು ಈ ೨೦ನೇ ಶತಮಾನದಲ್ಲಿ ಇಡೀ ಜಗತ್ತಿನ ತುಂಬೆಲ್ಲ ನಿಜವಾದ ಧರ್ಮ ಸ್ವರೂಪವನ್ನು ನಿರ್ಣಯಿಸುವದಕ್ಕೆ ಪುರುಷ ಬುದ್ಧಿಗೆ ಅರ್ಥಾತ್ ಪ್ರತ್ಯಕ್ಷಾನುಭವಕ್ಕೆ ಅಧಿಕ ಮಹತ್ವವನ್ನು ಕೊಟ್ಟು ಮಹಾಮಹೋಪಾಧ್ಯಾಯರೂ, ಪಂಡಿತರೂ, ಪದವೀಧರರೂ, ಮಹಾತ್ಮರೂ, ದೇಶ ಭಕ್ತರೂ, ಧರ್ಮಭಕ್ತರೂ ಅನೇಕ ಗ್ರಂಥಗಳನ್ನು ಬರೆದು ಅನೇಕ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿ ತನ್ಮೂಲಕ ಲೋಕಜಾಗ್ರತಿಯನ್ನು ಮಾಡುತ್ತಿರುವದನ್ನು ನೋಡಿದರೆ ಸ್ವರೂಪ ನಿರ್ಣಯಕ್ಕೆ ಬಸವಾಚಾರ್ಯನು ಸ್ಥಾಪಿಸಿದ ಅನುಭವಮಂಟಪ ಅರ್ಥಾತ್ ಧಾರ್ಮಿಕ ಪಾರ್ಲಿಮೆಂಟದ ಕಿತ್ತಿಯನ್ನೇ ಸರ್ವರೂ ತೀಡುತ್ತಿರುವರೆಂಬುದನ್ನು ವೀರಶೈವ ಸಿದ್ಧಾಂತವನ್ನು ಬಲ್ಲ ಪ್ರತಿಯೊಬ್ಬನೂ ಒಪ್ಪಬಹುದಾದ ಮಾತಾಗಿದೆ. ಇದಕ್ಕಾಗಿ ಭಗವಾನ ಬಸವಾಚಾರ್ಯನ ವಿಷಯದಲ್ಲಿ ಸಕಲ ವೀರಶೈವರು ಎಷ್ಟು ಧನ್ಯವಾದಗಳನ್ನರ್ಪಿಸಿದರೂ ಕಡಿಮೆಯಾದುದಲ್ಲವೆ?

ಈ ಜಗತ್ತಿನ ಎಷ್ಟೋ ಧರ್ಮ, ಮತ, ಪಂಥಗಳಲ್ಲಿರುವವರ ಆಚಾರ ವಿಚಾರ ತಪ್ಪಿರುವಂತೆ ಈ ನಮ್ಮ ವೀರಶೈವ ಮತೀಯರಲ್ಲಿಯೂ ಬಹು ಜನರ ಆಚಾರ ವಿಚಾರಗಳು ತಪ್ಪಿಹೋಗಿವೆ. ಅವುಗಳನ್ನು ಕ್ರಮಗೊಳಿಸಲು ಈಗ ಶರಣ ವಾದವು ಅಗತ್ಯವಾಗಿದೆ. ಏಕೆಂದರೆ "ಆಚಾರ ವಿಚಾರ ತಪ್ಪಿದಲ್ಲಿ ಶರಣರ ವಾದವಲ್ಲದೆ ಮತ್ತೊಂದಿರಲಿಲ್ಲ. ಶರಣರ ವಾದವೇ ಮೋಕ್ಷದ ಬೀಡು" ಎಂಬುದಾಗಿ ಕಾಳಿಂಗಯ್ಯನವರೆಂಬ ಶರಣರು ಹೇಳಿರುವರು. ಶ್ರೀ ಬಸವಾದಿ ಪ್ರಮಥರ ದಿವ್ಯ ವಚನಗಳು ಅನುಭವ ಮಂಟಪದ ವಾದದಲ್ಲಿಯೇ ವಿಶೇಷವಾಗಿ ಹೊರಬಿದ್ದವುಗಳಾಗಿರುವದರಿಂದ ಆ ಪವಿತ್ರ ವಚನಗಳು ನಮ್ಮಲಿಳ್ಳುವ ದುಷ್ಟ ಕಲ್ಪನೆಗಳನ್ನು ನಷ್ಟ ಮಾಡಲು ಈಗಲೂ ಸಾಮರ್ಥ್ಯವುಳ್ಳವುಗಳಾಗಿವೆ. ಆ ಶರಣರ ಉಜ್ವಲವಾದ ವಾದಗಳು ನಮ್ಮ ಈಗಿನ ಕ್ಷುದ್ರ ಆಚಾರ

ವಿಚಾರಗಳನ್ನು ತಿದ್ದಲು ಬಹು ಸಹಾಯ ಮಾಡುವವು. ಆದುದರಿಂದ ಪ್ರಾಚೀನ ಶಿವಶರಣರ ಧಾರ್ಮಿಕ, ಸಾಮಾಜಿಕ, ನೈತಿಕ ಮತ್ತು ಔದ್ಯೋಗಿಕ ತತ್ವಗಳಿಗನುಸರಿಸಿ ಚರ್ಚಿಸಲು ಅನುಭವ ಮಂಟಪದ ಶಾಖೆಗಳು ಪ್ರತಿಯೊಂದು ಗ್ರಾಮದಲ್ಲಿಯೂ ಉದಯವಾಗಬೇಕು.

ಬಸವಾದಿ ಪ್ರಮಥರ ಅವತಾರ ಕಾಲದಲ್ಲಿ ಅನುಭವ ಮಂಟಪ ದೊಳಗೆ ಧಾರ್ಮಿಕ ವಿಷಯವಾಗಿ ಆಚಾರ ವಿಚಾರ ತಪ್ಪಿದಾಗ ಯಾವ ರೀತಿಯಾಗಿ ಚರ್ಚೆ ನಡೆಯುತ್ತಿತ್ತೆಂಬ ವಿಷಯವಾಗಿ ನುಲಿಯ ಚಂದ್ರಯ್ಯನವರ ಸಂಭಾಷಣೆಯೊಂದನ್ನು ಉದಾಹರಿಸಿ ಈ ಬರವಣಿಗೆಗೆ ವಿರಾಮಕೊಡಲಾಗುವದು.

ಶ್ರೀ ಮಡಿವಾಳ ಮಾಚಯ್ಯನವರು — ಲಿಂಗಮೂರ್ತಿಯೇ, ಇದೇನು ! ಈ ರೂಪದಲ್ಲಿ ಇತ್ತ ದಯಮಾಡೋಣವಾಯಿತು.

ಜಂಗಮರೂಪದಲ್ಲಿದ್ದ ಲಿಂಗಮೂರ್ತಿಯು:— ಮಾಚಯ್ಯ ಏನು ಹೇಳಲಿ ? ನುಲಿಯ ಚಂದಯ್ಯನು ಮಹಾ ಜಂಗಮ ದಾಸೋಹಿಯಾ ಗಿದ್ದನಷ್ಟೇ. ಆತನಲ್ಲಿ ಲಿಂಗಪ್ರೇಮ ಎಷ್ಟಿದೆ ಎಂಬುದನ್ನು ನೋಡು ವದಕ್ಕೋಸ್ಕರ ಆತನು ಕಂಣಿಯ ಕಾಯಕಕ್ಕಾಗಿ ಮೆವೆಯ ಹುಲ್ಲನ್ನು ಕೊಯ್ಯುತ್ತಿರುವಾಗ ಆ ಹಳ್ಳದ ಮಡುವಿನಲ್ಲಿ ನಾನು ಮುಳುಗಿದೆನು. ಆಗ ಚಂದಯ್ಯನು ನನ್ನನ್ನು ಕರೆಯಬಾರದೆ ? ಅದು ಹಾಗಿರಲಿ, ನಾನಾಗಿಯೇ ಈ ರೂಪದಿಂದ ಮೇಲಕ್ಕೆ ಬಂದು ನನ್ನನ್ನು ಕರೆದುಕೋ ಎಂದರೆ ಕರೆದು ಕೊಳ್ಳದೆ ನನ್ನನ್ನು ಬಿಟ್ಟು ಜಂಗಮ ದಾಸೋಹಕ್ಕೆ ಹೋಗುತ್ತಿರುವನಲ್ಲಾ ! ನೀನಾದರೂ ಬಂದು ಆತನಿಗೆ ಬುದ್ಧಿ ಹೇಳ ಬಾರದೇ ಮಾಚಯ್ಯ ?

ಮಾಚಯ್ಯ:— ಇದೇನು ವಿಪರೀತ ? ಲಿಂಗವನ್ನು ಬಿಟ್ಟು ಜಂಗಮ ದಾಸೋಹವುಂಟೇ ? ಚಂದಯ್ಯನವರ ಇಂಗಿತವೇನೆಂಬು ದನ್ನು ತಿಳಿದುಕೊಳ್ಳುವಾ ! ಲಿಂಗಮೂರ್ತಿ ದಯಮಾಡಿಸಿ ಎಂದು ಜಂಗಮರೂಪದಲ್ಲಿದ್ದ ಲಿಂಗಮೂರ್ತಿಯನ್ನು ಕರೆದುಕೊಂಡು ಮಾಚಯ್ಯ ನವರು. ಜಂಗಮ ದಾಸೋಹಕ್ಕೆ ಹೊರಟ ನುಲಿಯ ಚಂದಯ್ಯನವ ರನ್ನು ಕರೆದು;

ಮಾಚಯ್ಯ:— ಚಂದಯ್ಯನವರೇ, ಇದೇನು ? ಲಿಂಗಮೂರ್ತಿಯು ತಾನಾಗಿಯೇ ಬರುತ್ತಿರುವಾಗ ಬೇಡವೆಂಬುವದೇಕೆ ? ಬಂದಿಹೆನೆಂಬ

ಸುಖವ ನೆರೆಹಿಂಗಿದವರುಂಟೆ ಕಂಡ ನಿಧಾನವನಡೆ ಎಂದವರುಂಟೆ ಸುಖಕ್ಕೆ ಸುಖ ಒದಗಿಸಿದೊಡೆ ವಲ್ಲೆಂಬುವರುಂಟೆ! ಕಲಿದೇವಯ್ಯ ಬಂದಿಹನೆಂದಡೆ ಬೇಡವೆನಲೇಕೆ?'' ಚಂದಯ್ಯ, ಲಿಂಗಮೂರ್ತಿಯನ್ನು ಕರೆದು ಕೊಳ್ಳಿರಿ.

ನುಲಿಯ ಚಂದಯ್ಯನವರುಃ— ಓಹೋ! ಮಾಚಯ್ಯನವರೇ ಲಿಂಗ ಹೋಯಿತೆಂಬ ಸಂದೇಹ ಎನಗುಂಟಾದೊಡೆ ಅಂಗ ಉಳಿಯ ಬಲ್ಲುದೆ! ಆತ್ಮ ಹೋದಲ್ಲಿ ಘಟವೆಷ್ಟು ದಿನ ಉಳಿಯುವದು? ಜಂಗಮ ನುಳ್ಳನ್ನಕ್ಕರ ಚಂದೇಶ್ವರ ಲಿಂಗಕ್ಕೆ ಸಂದಿಲ್ಲಕಾಣಾ'' ಜಂಗಮದಲ್ಲಿ ಲಿಂಗ ಬೆರೆತಿದೆ ಜಂಗಮ ದಾಸೋಹದಿಂದ ಲಿಂಗಪೂಜೆಯು ತಾನಾ ಗಿಯೇ ಆದಂತಾಗುವದು! ಮತ್ತೆ ಲಿಂಗವನ್ನು ಧರಿಸಿ ಪೂಜಿಲೇಕೆ, ಮಾಚಯ್ಯನವರೇ?

ಮಾಚಯ್ಯಃ— ಇದೇನು ಚಂದಯ್ಯನವರೇ? ಜಂಗಮಸೇವೆಗೆ ಲಿಂಗಸಹಿತವಾಗಿರಬೇಕು. ಲಿಂಗವೆಂಬುದು ಜಂಗಮದಂಗ. ಲಿಂಗ ವಿಲ್ಲದೆ ಪ್ರಾಣವುಂಟೇ? ಹಂಣಿಲ್ಲದೆ ರುಚಿಬಯಸುವಂತೆ ನಿಮ್ಮ ಕಾಯ ಕದ ಕ್ರಿಯೆಯಲ್ಲವು. ಆದ ಕಾರಣ ನಿಮ್ಮ ಜಂಗಮ ದಾಸೋಹವು ಫಲಕಾರಿಯಾಗಬೇಕಾದರೆ ಈ ಲಿಂಗಮೂರ್ತಿಯು ಬೇಕೇಬೇಕು.

ಚಂದಯ್ಯಃ— ಮಾಚಯ್ಯನವರೇ, ನೀವು ಹೇಳಿದಂತೆಯೇ ಆಗಲಿ ಜಂಗಮ ದಾಸೋಹಕ್ಕೆ ಬೇಕಾಗಿರುವ ಕೆಂಣಿಯ ಕಾಯಕವನ್ನು ಲಿಂಗ ಮೂರ್ತಿಯು ಮಾಡಲು ಸಿದ್ಧವಿದ್ದರೆ ನನ್ನಸಂಗಡ ಬರಲಿ.

ಲಿಂಗಮೂರ್ತಿಃ— ಯಾಕಾಗಲೊಲ್ಲದು, ಬರುತ್ತೇನೆ

ಹೀಗೆ ಚಂದಯ್ಯನವರು ಲಿಂಗಮೂರ್ತಿಯು ಮಾಡಿದ ತಪ್ಪಿಗೆ ಕೆಂಣಿ ಕಾಯಕ ಒಪ್ಪಿಸಲು ಅದಕ್ಕೆ ಲಿಂಗಮೂರ್ತಿಯು ಒಪ್ಪಿಕೊಂಡು ದಿನಾಲು ಕಂಣಿಯಕಾಯಕ ಮಾಡುತ್ತಿರಲಾಗಿ ಕೆಲವು ದಿನಗಳ ತರು ವಾಯ ಕಂಣಿಯನ್ನು ಮಾರಿಬಂದು ಅದರ ಕ್ರಮವನ್ನು ಚಂದಯ್ಯ ನವರಿಗೆ ಒಪ್ಪಿಸುವಾಗ.

ಲಿಂಗಮೂರ್ತಿ:— ಚಂದಯ್ಯ? ನೀನು ಕೊಟ್ಟ ಕಣ್ಣಿಯನ್ನು ಕೆಲವರು ಅರ್ಧ ಹಾಗಕ್ಕೆ ಕೇಳಿದರು. ನಾನು ಕೊಡದೆ ಈ ಕಲ್ಯಾಣ

ಪಟ್ಟಣದ ಎಲ್ಲ ಮಾರ್ಗಗಳಲ್ಲಿ ಸಂಚರಿಸಲು ಕಡೆಗೆ ಬಸವಣ್ಣನು ಆ ಕಣ್ಣಿಯನ್ನು ತೆಗೆದುಕೊಂಡು ಇಗೊ ಈ ಒಂದು ಸಾವಿರ ಹೊನ್ನನ್ನು ಕೊಟ್ಟಿದ್ದಾನೆ ತೆಗೆದುಕೋ ?

ಚಂದಯ್ಯನವರುಃ— ಲಿಂಗಮೂರ್ತಿಯೇ ಇದೇನು ? ಈ ಹಣವನ್ನು ಕಳವು ಮಾಡಿ ತಂದಿರಾ? ಛೇ ! ಛೇ ! ಜಂಗಮ ದಾಸೋಹಕ್ಕೆ ಇಂಥ ಹಣವು ಸಲ್ಲದು ಸಲ್ಲದು ನಿತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತ ಸ್ವಚ್ಛಂದವಾಗಿರಬೇಕು. ನಿಯಮದ ಕೂಲಿಯು ಬಿಟ್ಟು ಹೋಮದಾಸೆಗೆ ಕಾಮಿಸಿ ದ್ರವ್ಯವಹಿಡಿದರೆ ತಾಮಾಡುವ ಸೇವೆ ನಷ್ಟವಯ್ಯ. ಅನ್ಯಂಗೆ ಕೈಯೊಡ್ಡದೆ ನನ್ನ ಕೈಕೂಲಿಯಿಂದ ಕಾಯಕವನ್ನು ಮಾಡಿ ಒಂದೇ ಹಾಗವನ್ನು ಗಳಿಸಿ ಅದರಿಂದಲೇ ಜಂಗಮ ದಾಸೋಹವನ್ನು ಮಾಡುವೆನಲ್ಲದೆ ಈ ಪರಿ ಹಣವ ಗಳಿಸಿ ದಾಸೋಹವ ಮಾಡುವೆನೇ ? ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕಂಡ ಕಂಡವರ ಬೇಡಿ ತಂದು ಜಂಗಮಲಿಂಗಕ್ಕೆ ಮಾಡಿಹನೆಂಬ ದಂದುಗದ ಮಾಟ ಲಿಂಗಕ್ಕೆ ನೈವೇದ್ಯ ಸಲ್ಲದು ತನುಕರಿಗೆ, ಮನಬಳಲಿ ಬಂದತೆರದನರಿತು ಸಂದಿಲ್ಲದೆ, ಸಂಶಯವಿಲ್ಲದೆ, ಜಂಗಮಲಿಂಗಕ್ಕೆ ದಾಸೋಹವೇ ಮಾಟ. ಕಾರೆಯು ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ, ರುಚಿದುರಾಶೆಯಿಂದ ಬಂದುದು ಅನಾರ್ಪಿತ. ಇದು ಕಾರಣ ನಿತ್ಯ ಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರಲಿಂಗಕ್ಕೆ ನೈವೇದ್ಯ ಸಂದಿತ್ತು ಲಿಂಗಮೂರ್ತಿಯೇ, ಮೊದಲು ಗುರುವಿನಾಜ್ಞೆಯ ಮೀರಿ ನನ್ನನ್ನು ಬಿಟ್ಟು ಹೋದದೊಂದು ತಪ್ಪು. ಆ ತಪ್ಪಿಗಾಗಿ ಒಡೆಯರ ಸೇವೆ ಮಾಡಲಿಕ್ಕೆ ಬಂದು ಈ ಪಾದದ ರಾಶಿಯನ್ನು ಹೊತ್ತುಕೊಂಡು ಬರಬಹುದೇ ? ಹೊಣೆಗಾರರಾದ ಮಾಚಯ್ಯನವರ ಬಳಿಗೆ ಬನ್ನಿ. ಎಂದು ಮಾಚಯ್ಯನವರ ಹತ್ತಿರ ಕರೆದುಕೊಂಡು ಹೋಗಿ.

ಚಂದಯ್ಯ—ಮಾಚಯ್ಯನವರೇ, ಕಂಣಿಯನ್ನು ಒಂದು ಹಾಗಕ್ಕೆ ಮಾರಿಕೊಂಡು ಬರಬೇಕೆಂದು ಈ ಲಿಂಗಮೂರ್ತಿಯನ್ನು ಕಳುಹಿಸಿದರೆ, ಇಗೋ ! ಸಾವಿರ ಹೊನ್ನನ್ನು ತರಬಹುದೇ ? ಶಿವಶರಣರಿಗೆ ಇಂದಿನದು ನಾಳಿಗೆ ತಂಗುಳವಲ್ಲವೇ ? ಇಂದುಕೊಟ್ಟ ಶಿವನು ನಾಳಿಗೆ ಇರುವದಿಲ್ಲವೇ ? ಹಣದ ಆಸೆಗೆ ಕೈಯೊಡ್ಡಿ ಈ ಪರಿ ತೆಗೆದುಕೊಂಡು

ಬರಬಹುದೇ ? ಶಿವಶರಣರಿಗೆ ಇಂಥ ಹಣವು ಹೆಣಕ್ಕೆ ಸಮಾನವಾದುದಲ್ಲವೇ ? ಛೇ ! ಛೇ? ಈ ಹಣವು ಬೇಡ. ಇದನ್ನು ತೆಗೆದುಕೊಂಡುಬಂದ ಲಿಂಗಮೂರ್ತಿಯೂ ಬೇಡ.

ಮಾಚಯ್ಯ:— ಚಂಪಯ್ಯನವರೇ, ಕೋಪಿಸಬೇಡಿರಿ. ಕಾಯಕದಲ್ಲಿನಿಂದ ಶರಣಂಗೆ ಸೇವೆಯವರ ತಪ್ಪು ಹಿಡಿದಿಪನೆಂದರೆ ಕಾಯಕವೆಂತು ನಡೆವುದಯ್ಯ ? ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬಹುದೇ ? ಮುಕ್ಕುರಿಸಿದ ತುರುಗವ ಕಾಲುಕತ್ತರಿಸಿದವರುಂಟೇ ಕಚ್ಚಿದ ತಿಗುಣಿಗಾಗಿ ಮನೆಯ ಸುಟ್ಟವರುಂಟೇ ಲಿಂಗಮೂರ್ತಿಯು ಇದೊಂದು ಸಾರೆ ಮಾಡಿದ ತಪ್ಪನ್ನು ಮನ್ನಿಸಿ ಕರೆದುಕೊಳ್ಳಿರಿ.

ಚಂದಯ್ಯ:— ಛೇ! ಛೇ! ಅದೆಂದಿಗೂ ಆಗದು ಮಾಚಯ್ಯನವರೇ, ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗನೋಡಾ, ನಡೆನುಡಿ ಶುದ್ಧವಿಲ್ಲದಿದ್ದರೆ ಚಂದೇಶ್ವರ ಲಿಂಗವಾದರೂ ತಪ್ಪಿನೊಳುಕಾಣಾ, ಮಾಚಯ್ಯನವರೇ, ಈ ಪರಿ ನಡೆನುಡಿ ಶುದ್ಧವಿಲ್ಲದವರನ್ನು ಇಟ್ಟುಕೊಳ್ಳಲಾಗುವದಿಲ್ಲ.

ಮಾಚಯ್ಯ;— ಚಂದಯ್ಯನವರೇ, " ಗುರು ಪೂಜೆಯನರಿದೆನೆಂದು ಲಿಂಗ ಪೂಜೆಯ ಬಿಡಲಾಗದು. ಲಿಂಗಪೂಜೆಯ ನರಿದೆನೆಂದು ಜಂಗಮ ಪೂಜೆ ಮರೆಯಲಾಗದು. ಜಂಗಮ ಪೂಜೆಯ ನರಿದಿಹನೆಂದು ಶರಣರ ಸಂಗವ ಮರೆಯಲಾಗದು ಇದುಕಾರಣ ಶರಣರ ಸಮ್ಯಜ್ಞಾನದಲ್ಲಲ್ಲದೆ ಕಲಿದೇವಯ್ಯನ ಕಾಣಬಾರದು. ಆದಕಾರಣ ಶಿವಾನುಭವ ಮಂಟಪಕ್ಕೆ ಹೋಗಿ ಅಲ್ಲಿಶರಣರಿಗೆ ಈಸಂಗತಿಯನ್ನು ಬಿನ್ನಯಿಸಿ ಕೊಳ್ಳೋಣ ಬನ್ನಿ

ಹೀಗೆ ಲಿಂಗಮೂರ್ತಿಯನ್ನು ಮತ್ತು ನುಲಿಯ ಚಂದಯ್ಯನವರನ್ನೊಳಗೊಂಡು ಮಾಚಯ್ಯನವರು ಕಲ್ಯಾಣದಲ್ಲಿ ದಿನಾಲು ನಡೆಯುತ್ತಿದ್ದ ಧಾರ್ಮಿಕ ಪಾರ್ಲಮೆಂಟ ಅರ್ಥಾತ್ " ಶಿವಾನುಭವ ಮಂಟಪ " ದತ್ತಸಾಗಿದರು.

(ಮುಂದುವರಿದುದು.)

ವದು. ರಾಜಯೋಗವೆಂದರೆ ಅಷ್ಟಪ್ರಕಾರಗಳ ಸಾಧನಗಳಿಂದ ಕೂಡು ವದು. ಧ್ಯಾನದಿಂದ ಕೂಡುವದು. ಬರೇ ಜಪದಿಂದ ಕೂಡುವದು. ಜಪಯೋಗ ಹೀಗೆ ಒಂದೊಂದು ಯೋಗಗಳು ಒಂದೇತರದ ಸಾಧನ ಗಳನ್ನು ಹೇಳಿ ಅದೊಂದರಿಂದಲೇ ಕೂಡಿ ಒಂದನ್ನೇ ಶುದ್ಧಗೊಳಿಸಿ ಕೊಳ್ಳುವ ಯೋಗಗಳಿವು ಆಗಿವೆ. ಆದರೆ ಶಿವಯೋಗ ಅಥವಾ ಪರಿ ಪೂರ್ಣಯೋಗವು ಸಾಧಕನ ಎಲ್ಲ ಅಂಗೋಪಾಂಗ. ಇಂದ್ರಿಯ, ಮನ, ಬುದ್ಧಿ, ಚಿತ್ತ, ಅಂತರಿಂದ್ರಿಯ, ಬಹಿರಿಂದ್ರಿಯ ಎಲ್ಲವುಗಳನ್ನು ಶುದ್ಧ ಗೊಳಿಸಿ ಎಲ್ಲದರಲ್ಲಿ ಶಿವಚಿತ್ ಕಳೆಯು ಪ್ರಕಟವಾಗಿ ಅವುಗಳಲ್ಲಿ ಚೈತನ್ಯ ಪರಿಪೂರ್ಣ ತುಂಬಿಕೊಂಡು ಹೋಗಲು ಬಹು ಸರಸಾದ ಸತ್ಯ ಸುಂದರವಾದ ರಾಜಮಾರ್ಗವಾಗಿರುವದೆಂದು ಹೇಳಬಹುದು. ಅದಕ್ಕಂತೇ ಇದಕ್ಕೆ ಪರಿಪೂರ್ಣಯೋಗಿಯಾಗುವ ಪರಿಪೂರ್ಣಯೋಗವೆಂದೂ ಶಿವ ಯೋಗವೆಂದೂ ಹೇಳಬಹುದು. ಇಂಥವರ ಪೂರ್ಣಯೋಗ ಇನ್ನೊಂದಿಲ್ಲ. ಉಳಿದ ಯೋಗಗಳು ಒಂದಿಲ್ಲ ಇನ್ನೊಂದು ರೀತಿಯಲ್ಲಿ ಕುಂದುಕೊರತೆ ಗಳಿಂದ ಕೂಡಿರುವವೆಂದು ಇದರಮೇಲಿಂದ ಸಹಜ ಎಲ್ಲರಿಗೂ ಹೊಳೆ ಯದೆ ಇರಲಾರದು.

ಈ ಮಹತ್ವದ ಎಲ್ಲ ಯೋಗಗಳನ್ನು ಸಹಜ ಸಾಧಿಸಿ ಕೊಡುವ ಹೆಚ್ಚಿಗೆ ಲಾಭದಾಯಕ ಫಲಗಳನ್ನು ಸಹಜ ನೀಡುವ ಈ ಇಷ್ಟಲಿಂಗ ವನ್ನು ನಮ್ಮ ಆದ್ಯರು ಪ್ರಮಥರು ಕಂಡುಹಿಡಿದು ಎಲ್ಲರ ಎದೆಗೆ ಕಟ್ಟಿ ಅದರ ನೆರವಿನಿಂದ ಎಲ್ಲ ಯೋಗಗಳ ಸಾಧನೆಯನ್ನು ನಿತ್ಯ ಒಳ್ಳೇ ಸುಲಭ ರೀತಿಯಲ್ಲಿ ಸಾಧಿಸಲೆಂದು ಹಾರೈಸಿದ್ದಾರೆ. ಇದರ ಮೇಲಿಂದ ಅವರು ಎಂಥ ಅನುಭವಿಗಳು ಎಂಥ ತತ್ವವೇತ್ತರು ಎಂಬುದನ್ನು ವಿಚಾ ರಿಸಿರಿ. ಅದಕ್ಕಂತೆಯೇ ಮಹಾಯ (ಬಯಲ ಸ್ವರೂಪದ ಕಾಯ) ವನ್ನು ಹೊಂದುವತನಕ ಅಲ್ಲಮಪ್ರಭುದೇವರು ಈ ಪರಿಪೂರ್ಣಯೋಗದಿಂದ ಅದರಂತೆ ನೀಲಾಂಬಿಕೆ ತನ್ನ ಲಿಂಗದಲ್ಲಿ ಬಯಲಾದಳು. ಅಕ್ಕನು ಅದರಂತೆ ಬಯಲಾದಳು. ಬೊಂತಾದೇವಿ ತನ್ನ ಬೊಂತೆ (ಕೌದಿ) ಯನ್ನು ಬಯಲುಗೊಳಿಸಿ ತಾನೂ ನೋಡನೋಡುತ್ತ ಬಯಲಾದಳು ಹೀಗೆ ಅನೇಕ ಶರಣರು ಸಾಧಿಸಿದರು. ಕಾಯವೆರಿಸಿ ಕೈಲಾಸಕ್ಕೆ ಹೋದರೆಂದು ಅನೇಕ ಶರಣರಿಗೆ ಹೇಳಿದ್ದಾರೆ. ಇದರ ಅರ್ಥ ಕಾಯ್ಯ ವನ್ನು ಸಾಮಾನ್ಯರಂತೆ ಮಣ್ಣಿನಲ್ಲಿ ಇವರು ಹಾಕಲಿಲ್ಲ. ಕಾಯವನ್ನು

ಬಯಲಿನಂತೆ ಬಯಲು ಮಾಡಿದರು. ಇದನ್ನೆಲ್ಲ ಸಾಧಿಸಬೇಕಾದರೆ ಈ ಪರಿಪೂರ್ಣಯೋಗದ ಹೊರತು ಎಂದೂ ಶಕ್ಯವಿಲ್ಲ. ಜಗತ್ತಿನಲ್ಲಿ ಇವರ ಹೊರತು ತಮ್ಮ ಇಷ್ಟ ದೇವರನ್ನು ಸಕಲ ಯೋಗಗಳ ಸಾಧನದ ಸಲುವಾಗಿ ಶರೀರದ ಮೇಲೆ ಧರಿಸಿದ್ದಾರೆ. ಆದರೆ ಜಗತ್ತಿನಲ್ಲಿ ಧರಿಸಲಾರದವರು ಯಾರೂ ಇದರಂತೆ ಧರಿಸಿಲ್ಲೆಂದು ವಿಚಾರಿಸಿದರೆ ಇವರ ಯೋಗ್ಯತೆಯು ಕಲ್ಪನೆ ಬರುವದು. ಹೀಗೆ ಧರಿಸಿದ್ದರೂ ಇದರಲ್ಲಿ ಜಾತಿ ಇಲ್ಲ ಸ್ತ್ರೀಪುರುಷರೆಂಬ ಭೇದ ಇಲ್ಲ. ದೇಶ, ಕಾಲ ಪರಿಸ್ಥಿತಿಗಳಿಗೂ ಆಧೀನಕ್ಕೆ ಒಳಗಾಗಿಲ್ಲ. ವರ್ಣ ಆಶ್ರಮ ಬಣ್ಣಗಳ ಭೇದವಿಲ್ಲ. ಎಲ್ಲರಿಗೂ ಸಮಾನ ಹಕ್ಕುಬಾಧ್ಯತೆಗಳು ಧರಿಸಲಿಕ್ಕೆ ಇರುವವು ಅಲ್ಲದೆ ಅದನ್ನು ಧರಿಸಿದವರು ಸರಿಸಮಾನ ಹಕ್ಕುಬಾಧ್ಯತೆಗಳನ್ನು ರಾಜಕಾರಣದಲ್ಲಿ ಧಾರ್ಮಿಕ ಕಾರಣದಲ್ಲಿ ಸಾಮಾಜಿಕ ಕಾರಣದಲ್ಲಿ ಆರ್ಥಿಕ ಕಾರಣದಲ್ಲಿ ಔದ್ಯೋಗಿಕ ಕ್ಷೇತ್ರದಲ್ಲಿ ಹೀಗೆ ಎಲ್ಲದರಲ್ಲಿ ಇರುವದೆಂದು ಲಕ್ಷಿಸತಕ್ಕಂಥದಿರುವದು. ಲಿಂಗಧಾರಿಗಳೆಲ್ಲ ಬಂಧುಬಾಂಧವರು ಬಂಧುಭಗಿನಿಯರು ಬೀಗಬಿಜ್ಜರು ಆಪ್ತಇಷ್ಟರೆಂದು ಉದಾತ್ತ ಭಾವ ನೆಲಗೊಳ್ಳುವದರಲ್ಲಿ ಸಂದೇಹವಿಲ್ಲ. ಈ ಪರಿಪೂರ್ಣಯೋಗದಲ್ಲಿ ಇಂಥ ಅಬೇಧತವಾದ ಸಂಬಂಧವಿರುವದು. ಶಿವಶರಣರ ಪರಿಪೂರ್ಣಯೋಗದಂತೆ ನಡೆಯುಹತ್ತಿದರೆ ಎಲ್ಲರಲ್ಲಿ ಸಮತೆ ನೆಲಗೊಳ್ಳಹತ್ತುವದು- ಅದರ ಅನುಭವವೂ ಆಗುವದು ಹೀಗಾಗುವದರಿಂದ ವನವೆಲ್ಲ ನೀವೆ, ವನದೊಳಗಿನ ದೇವತರುಗಳೆಲ್ಲ ನೀವೆ. ತರುವಿನೊಳಗಾಡುವ ಖಗಮೃಗಗಳೆಲ್ಲ ನೀವೆ, ಚನ್ನಮಲ್ಲಿಕಾರ್ಜುನಾ ಸರ್ವಭರಿತನಾಗಿ ಮುಖದೋರಾ ಈಪ್ರಕಾರ ಪರಿಪೂರ್ಣಯೋಗಿಯಲ್ಲಿ ಸರ್ವಭರಿತ ಜಗಮಯ ಶಿವಭಾವ ಬಂದು ದೃಷ್ಟಿಗೋಚರವು ಅದರಂತೆ ಆಗುವದು. ಸಮಸ್ತ ಭೂತಗಳಲ್ಲಿ ತನ್ನನ್ನು ತನ್ನಲ್ಲಿ ಸಮಸ್ತ ಭೂತಗಳನ್ನು ನೋಡಿ ಸಕಲ ವಿಶ್ವದಲ್ಲಿ ತಾನೇ ಸಮ್ಮಿಳಿತನಾಗಿರುವನೆಂದು ಈ ಪರಿಪೂರ್ಣಯೋಗದಿಂದ ಸಾಧಿಸುವನು. ಜೀವಾತ್ಮ ವಿಶ್ವಾತ್ಮವಾಗಿ ಕಾಣುವದು ಇಂಥ ಪರಿಪೂರ್ಣಯೋಗಿಗೆ ಯೋಗವಿಲ್ಲ, ಶೋಕವಿಲ್ಲ, ಮರಹು ಇಲ್ಲ; ಆದ್ದರಿಂದ ಪರಿಪೂರ್ಣತೆ ಆತ್ಮಶುದ್ಧಿ ಸಕಲ ಶಕ್ತಿಗಳನ್ನು ಇದು ತಂದು ಕೊಡುವದು ಅದಕ್ಕೆ ಇದು ಜೀವಂತ ಧರ್ಮವಾಗಿದೆ ಎಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಪರಿಪೂರ್ಣಯೋಗವು ಪುಸ್ತಕೀ ಪಾಂಡಿತ್ಯವನ್ನು ಹೇಳದೆ ಅನುಭವವೇರ್ಘವೆಂದು ಹೇಳಲ್ಪಡುವದು.

## ಪರಿಪೂರ್ಣಯೋಗದ ವೈಶಿಷ್ಟ್ಯ.

ಈ ಪರಿಪೂರ್ಣಯೋಗವು ಸಮನ್ವಯಯೋಗ ಅಥವಾ ಧರ್ಮವೆಂದೂ ಆದರ್ಶಪಂಥವೆಂದು ವಿಶ್ವಧರ್ಮವೆಂದೂ ಅನೇಕರು ಹೇಳಿದ್ದಾರೆ. ಸರ್ವಧರ್ಮದಸಾರ ಸರ್ವಸ್ವವು ಇದರಲ್ಲಿ ಅಡಕವಾಗಿದೆ. ಇದು ಎಲ್ಲರಿಗೂ ಇಡೀ ಮಾನವ ಕುಟುಂಬಕ್ಕೆ ಒಳ್ಳೇ ಪ್ರಯೋಜನಕಾರಿಯಾಗಿದೆ. ಇದು ಮಾನವ ಜಾತಿಯನ್ನೇ ಪರಿಪೂರ್ಣತೆಗೆ ಕೊಂಡೊಯ್ಯುವ ದಿವ್ಯ ಭವ್ಯ ಮಾರ್ಗವಾಗಿದೆ. ಈ ಪರಿಪೂರ್ಣಯೋಗವನ್ನು ಆಚರಿಸುವವನಿಗೆ ಅದರ ಫಲಗಳು ಅವನಿಗಷ್ಟೇ ಸಿಗುವದಿಲ್ಲ. ಆದರೆ ಆದರಿಂದ ಲೋಕಕಲ್ಯಾಣವೂ ಸಹಜ ತಾನೇ ಆಗುವದು. ಈ ಪರಿಪೂರ್ಣಯೋಗದ ಶರಣನು ಶರೀರ ಧಾರಣಮಾಡಿದ ದೇವರೇ ಸರಿ. ಈ ಪರಿಪೂರ್ಣಯೋಗವು ಎಲ್ಲದರ ಸಾರಸರ್ವಸ್ವವನ್ನು ಹೀರಿಕೊಂಡು ಒಂದು ಸ್ವತಂತ್ರ ಪರಿಪೂರ್ಣಯೋಗವಾಗಿ ಎಂದೋ ನಿಂತಿದೆ. ಇದೆಂದೂ ಹಳೆಯದೇ ಆಗುವದಿಲ್ಲ ಸದಾ ಹೊಸದಾಗಿಯೇ ಇರುವದು. ಯಾಕಂದರೆ ಇದಕ್ಕಿಂತಲೂ ಹೆಚ್ಚಿನ ಯೋಗ ಮುಂದೆಬಂದರೆ ಮಾತ್ರ ಇದು ಹಳೆಯದಾಗಬಹುದಲ್ಲವೇ? ಇದೆಂದೂ ಶಕ್ಯವಿಲ್ಲೆಂದು ಧಾರಾಳವಾಗಿ ಹೇಳಬಹುದು. ಇದರಲ್ಲಿ ದೀಕ್ಷೆಹೊಂದಿ ಇದನ್ನು ಅನುಸರಿಸಲಿಕ್ಕೆ ಇಡೀ ಮಾನವಕುಲಕ್ಕೆ ಮುಕ್ತದ್ವಾರವನ್ನು ತೆರೆದಿಡಲಾಗಿದೆ. ಯಾರಿಗೂ ಇದು ಪ್ರವೇಶಕ್ಕೆ ಅಡ್ಡಿಆತಂಕವನ್ನೊಡ್ಡುವದಿಲ್ಲ.

ಪರಿಪೂರ್ಣಯೋಗವೆಂದರೆ ಬರೇ ಪುರುಷ ಪರಮ ಸಂಯೋಗದಲ್ಲಿ ಆದರೆ ಪುರುಷ ಪುರುಷರಲ್ಲಿ, ಪುರುಷ ಪರಮರಲ್ಲಿ, ಪುರುಷ ಪ್ರಕೃತಿಯಲ್ಲಿ, ಪ್ರಕೃತಿ ಪುರುಷರಲ್ಲಿ, ಪ್ರಕೃತಿ ಪರಮರಲ್ಲಿ, ಪ್ರಕೃತಿ ಪ್ರಕೃತಿಗಳಲ್ಲಿ ಸಹ ಮಿಲನ ಸಂಯೋಗವಾಗುವದೇ ಪರಿಪೂರ್ಣಯೋಗದ ವೈಶಿಷ್ಟ್ಯ. ಬರೇ ಪರಮಾತ್ಮನ ಪ್ರಾಪ್ತಿಯಾದರೆ ಅದು ಪರಿಪೂರ್ಣಯೋಗವೆಂದೂ ಅನ್ನಿಸಿಕೊಳ್ಳಲಾರದು. ಅವನ ದರ್ಶನವಾದರೂ ತೀರಲಿಲ್ಲ. ಬುದ್ಧಿಗೆ ಸುಜ್ಞಾನ, ಪ್ರಾಣಕ್ಕೆ ಶಕ್ತಿ, ಮನಕ್ಕೆ ಶಾಂತಿ, ಹೃದಯಕ್ಕೆ ಬೆಳಕು, ಶರೀರಕ್ಕೆ ಕಾಂತಿ, ಜೀವಕ್ಕೆ ಅನುಭವ, ಇಂದ್ರಿಯಗಳಿಗೆ ಸತ್‌ಚೈತನ್ಯ ಕೊಟ್ಟು ಸರ್ವಾಂಗಲಿಂಗಿ ಲಿಂಗಮಯ ಶರೀರವಾಗಬೇಕು ಅಂದರೆ ಅವನು ಪರಿಪೂರ್ಣ ಮಾನವ ಇಲ್ಲವೆ ದೇವ

ಮಾನವ ಇವನೇ ಪರಿಪೂರ್ಣಯೋಗಿ. ಹೀಗೆ ಮಾನವನು ಸಾಧಿಸಿದರೆ ಅವನಿಗೆ ಜನನ ಮರಣರಹಿತ ಮುಕ್ತಿ ಬೇಕಾಗುವದಿಲ್ಲ. ಇದು ಈ ಯೋಗದ ಗುರಿಯು ಅಲ್ಲ. ಇವನು ಜೀವನ್ಮುಕ್ತನು. ಮೋಕ್ಷ ಸ್ವರೂಪನು ಅಂದರೆ ಸಕಲತರದ ಸಕಲ ಶರೀರ ಇಂದ್ರಿಯುಗಳಲ್ಲಿ ಇರುವ ಮೋಹವನ್ನು ಕ್ಷಯ ಮಾಡಿದರೆ ತೀರಿತು ಮೋಕ್ಷ ಮುಕ್ತಿ ಆದಂತೆ ಸರಿ. ಮೋಹ ಮಾಯೆಗಳಿಂದ ಬಂಧಿಸಲ್ಪಟ್ಟ, ಶರೀರ ಇಂದ್ರಿಯ ಜೀವ ಪ್ರಾಣ ಮನ ಬುದ್ಧಿಗಳನ್ನು ಈ ಬಂಧನದಿಂದ ಬಿಡುಗಡೆ ಮಾಡಿದರೆ ಮುಕ್ತನೇ ಸರಿ. ಇದು ಜನನ ಮರಣರಹಿತವಲ್ಲ. ಇದರಿಂದ ಬಹಳಷ್ಟು ಮತ್ತಷ್ಟು ಶಕ್ತಿಬಂದು ಮತ್ತಷ್ಟು ಕಲ್ಯಾಣ ಕೆಲಸಗಳನ್ನು ಮಾಡಲಿಕ್ಕೆ ಬರುವದು. ಎಲ್ಲಿಯ ಮುಕ್ತಿ? ಬಂಧನವಿದ್ದರೆ ಮುಕ್ತಿಬೇಕಲ್ಲವೆ? ಈ ಪ್ರಪಂಚ ಮಿಥ್ಯವಿದ್ದರೆ ಬಂಧುವಾಗುವದು. ಇಲ್ಲವಾದರೆ ಇದೆಲ್ಲಿಯ ಬಂಧನ ಇದು ಮಾಯಾ ಜಾಲವೂ ಅಲ್ಲ. ಬ್ರಾಂತಿ ಭ್ರಮೆಯು ಅಲ್ಲ. ಶರೀರವೂ ಸುಳ್ಳಲ್ಲ. ಸತ್ಯವಿದೆ. ಈ ಪರಿಪೂರ್ಣಯೋಗ ಗೈಯ್ಯುವ ಸಲುವಾಗಿ ಈ ಶರೀರವು ಮಾತ್ರ ಒಳ್ಳೇ ಉತ್ತಮ ಪ್ರಯೋಗ ಶಾಲೆಯಾಗಿದೆ. ಈ ಶರೀರ ಇರದಿದ್ದರೆ ಪರಿಪೂರ್ಣಯೋಗದ ಪ್ರಯೋಗವಿಲ್ಲ. ಮಾಡಬೇಕು? ಬೇರೆ ಸ್ಥಾನವು ಅದಕ್ಕೆ ಇಲ್ಲವೇ ಇಲ್ಲ. ಅದರಂತೆ ಈ ಜಗವೂ ಕೂಡ ಸಾಮೂಹಿಕ ಪರಿಪೂರ್ಣಯೋಗ ಮಾಡುವ ಪ್ರಯೋಗ ಶಾಲೆಯಾಗಿದೆ. ಇದು ಇಲ್ಲದೆ ನಡೆಯದು ಮಾನವ ಶರೀರ ವೈಯಕ್ತಿಕ ಪರಿಪೂರ್ಣಯೋಗದ ಪ್ರಯೋಗ ಶಾಲೆಯಾದರೆ ಈ ಜಗತ್ತು ಜೀವಕೋಟಿಯ ಸಾಮೂಹಿಕ ಪರಿಪೂರ್ಣಯೋಗದ ಪ್ರಯೋಗ ಶಾಲೆಯೇ ಹೌದು. ಶರೀರವು ಒಂದು ಕುರುಕ್ಷೇತ್ರವೆನಿಸಿದರೆ ಈ ಜಗತ್ತು ದೊಡ್ಡ ಕುರುಕ್ಷೇತ್ರವೆಂದು ಹೇಳಬೇಕು ಹೋರಾಟವಿಲ್ಲದೆ ಇಲ್ಲಿ ಏನೂ ನಡೆಯದು. ಹೋರಾಟದಿಂದಲೇ ಪರಿಪೂರ್ಣಯೋಗದಲ್ಲಿ ಜಯಲಭಿಸುವದು. ಹೋರಾಟಬಲ್ಲವನಿಗೇ ಈ ಜಗದಲ್ಲಿ ಸ್ಥಾನವಿದೆ. ಹೋರಾಟಕ್ಕೆ ಅಂಜಿ ಹಿಂಜರಿದವನಿಗೆ ಇಲ್ಲಿ ಜೀವಿಸಲು ಹಕ್ಕುಇಲ್ಲ. ಈ ಹೋರಾಟದಿಂದ ತಾನು ನಿತ್ಯ ಮುಕ್ತನಾದರೆ ಬಂಧನರಹಿತನಾದರೆ ತೀರಲಿಲ್ಲ. ಅವನು ತಾನೇ ದೇವರಾದರೆ ಮುಗಿಯಲಿಲ್ಲ. ಜೀವ ಜಗತ್ತು ಎಲ್ಲವೂ ದೇವರಾದಾಗ ಇದು ಪರಿಪೂರ್ಣ

ಯೋಗವಾಯಿತು. ತಾನು ಜಗದಲ್ಲಿ, ಜಗ ತನ್ನಲ್ಲಿ ತೋರಿ ತನ್ನಲ್ಲಿ ಸರ್ವದರಲ್ಲಿ ದೇವನ ದರ್ಶನವಾಗಬೇಕು. ಇದೇ ಪರಿಪೂರ್ಣಯೋಗದ ವೈಶಿಷ್ಟ್ಯ.

ಈ ಪರಿಪೂರ್ಣ ಯೋಗಿಯಾಗಲು ತಪಸ್ಸು ಅವಶ್ಯವಾದರೂ ಹಳೆಯ ತಾಮಸ ತಪವು ಬೇಕಾಗಿಲ್ಲ. ಅಹಂಕಾರ, ಸತ್ಯ ಅಹಿಂಸೆ ದುರಾಶೆ, ವ್ಯಭಿಚಾರ, ಲೋಭ, ಕಪಟ, ಸಿಟ್ಟು, ಮಮಕಾರ, ಅಂಧ ಶ್ರದ್ಧೆ ಇವುಗಳನ್ನು ಬಿಡುವದೇ ನಿಜವಾದ ತಪಸ್ಸು

> ಕಳಬೇಡ, ಕೊಲಬೇಡ, ಇದಿರು ಹಳಿಯಲುಬೇಡ, ತನ್ನ ಬಣ್ಣಿಸಬೇಡ, ಹುಸಿಯನುಡಿಯಲುಬೇಡ. ಮುನಿಯಬೆ ಡ, ಅನ್ಯರಿಗೆ ಅಸಹ್ಯಪಡಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲಸಂಗನ ಒಲಿಸುವಪರಿ.

ಎಂದು ಅಣ್ಣನು ಆಧಾರ ಶುದ್ಧಿಯ ಸರಳ ಪದ್ಧತಿ ನಪವನ್ನು ಹೇಳಿದ್ದಾನೆ.

> ಕಾಮವೇಕೋ ಲಂಗ ಪ್ರೇಮಿಗೆ ಕ್ರೋಧವೇಕೋ ಶರಣವೆಂದೆನಿಸುವಗೆ, ಲೋಭವೇಕೋ ಭಕ್ತಿಯ ಲಾಭ ಬಯಸುವವಗೆ, ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ, ಮದ ಮತ್ಸರ ಉಳ್ಳವಂಗೆ ಹೃದಯ ಶುದ್ಧವೆಲ್ಲಿಯದೋ ಹದುಳಿಗರಾದವರಲ್ಲಿಪ್ಪ ನಮ್ಮ ಕೂಡಲಸಂಗಮದೇವ.

ಇದೇ ನಿಜವಾದ ತಪವು. ಸತ್ಯ, ನೀತಿ, ಶೀಲ, ಭಕ್ತಿ, ನಿರಹಂಕಾರ, ಸೈರಣೆ, ಶಾಂತಿ, ಇಂದ್ರಿಯನಿಗ್ರಹ, ನಿಷ್ಠೆ, ಶ್ರದ್ಧೆ. ಮನೋನಿಗ್ರಹ, ವಿರಾಗಗಳಂತೆ ನಡೆಯುವದೇ ತಪವು. ಇದು ಲೋಕಕ್ಕೆ ಎಲ್ಲ ಮಾನವರಿಗೆ ಅವಶ್ಯಬೇಕಾದ ತಪವೇ ಸರಿ. ತಾಮಸ, ಶೀಲ, ವ್ರತ, ನಿಯಮಗಳು ಈ ಯೋಗದಲ್ಲಿ ಇಲ್ಲ. ಪರಿಪೂರ್ಣಯೋಗಿಯಾಗಲಿಕ್ಕೆ ತೀರ್ಥದಲ್ಲಿ ಮೀಯುವ ಕಾರಣವಿಲ್ಲ, ಕ್ಷೇತ್ರಗಳಿಗೆ ತಿರುಗುವ ಅವಶ್ಯಕತೆಯಿಲ್ಲ. ಕನಸು ಶಕುನಗಳನ್ನು ನಂಬಬೇಕಾಗಿಲ್ಲ. ಜ್ಯೋತಿಷ್ಯವನ್ನು ಕೇಳುವ ಕಾರಣವಿಲ್ಲ. ದುರ್ಜನರ ಸಂಗ ಅವಶ್ಯ ಬಿಡಬೇಕಾಗುವದು. ಸಜ್ಜನರ ಸಂಗ ಮಾಡುವದು ಅವಶ್ಯವಿದೆ. ತನ್ನ ಕರ್ತವ್ಯ ಕರ್ಮಗಳನ್ನು ತಪ್ಪದೆ ಶುದ್ಧ ಮನಸ್ಸಿನಿಂದ ಮಾಡಬೇಕು. ಯಾವ ಕೆಲಸಗಳು ಯಾವ ಉದ್ಯೋಗಗಳು ಕೀಳಲ್ಲ ಮೇಲೂ ಅಲ್ಲ ಅವೆಲ್ಲ ಸರಿ ಸಮಾನವೆಂದು ದೇವನ

ಕರ್ತವ್ಯವೆಂದು ನಂಬಿ ಮಾಡಬೇಕು. ಸದಾ ಕಾಯಕ ನಡಿಸಬೇಕು. ಸಿಕ್ಕ ಸಿಕ್ಕ ದೇವರಿಗೆ ಪೂಜಿಸಿ ನಮಿಸಬಾರದು. ಶಿವ ಶಕ್ತಿಯರ ಗುರುತಾದ ಲಿಂಗಕ್ಕೆ ಪೂಜಿಸಿ ನಮಿಸಿ ಅದರ ಜಪ ಧ್ಯಾನಗಳನ್ನೇ ಮಾಡಬೇಕು. ಇವರಲ್ಲಿ ತಾಮಸ ನಿಯಮವಾದ ಯಜ್ಞ, ಹೋಮ, ಹವನಗಳನ್ನು ಮಾಡಲೇಬಾರದು. ತನ್ನಲ್ಲಿಯ ದುರ್ಗುಣಗಳನ್ನು ಜ್ಞಾನಾಗ್ನಿಯಿಂದ ಕತ್ತರಿಸಿ ಹಾಕುವದೇ ಯಜ್ಞ ತನ್ನಲ್ಲಿದ್ದ ಎಲ್ಲವನ್ನೂ ದಾಸೋಹ ಭಾವದಿಂದ ದಾನ ಮಾಡುವದೇ ಯಜ್ಞ, ಅನ್ನ, ವಸ್ತ್ರ, ಧನ, ಭೂಮಿ, ಮನೆ, ವಿದ್ಯೆ, ಜ್ಞಾನ ಮೊದಲಾದವುಗಳನ್ನು ದಾಸೋಹ ಭಾವದಿಂದ ಅನ್ಯರಿಗೆ ಕೊಡಬೇಕು. ಇದು ನಿಜವಾದ ತಪವೇ ಸರಿ. ಸದಾಚಾರ ದಿಂದ ನಡೆಯುವದೇ ತಪಸ್ಸು. ಹೀಗೆ ನಡೆದು ಭಕ್ತಿ ಮಾಡಬೇಕು. ಹೀಗಾದರೆ ಈ ಪರಿಪೂರ್ಣಯೋಗಿಯು ಪರಮಾತ್ಮನ ಕಣ್ಣುಗೊಂಬೆ ಯಾಗುವನು. ಹೀಗೆ ತಪ, ಭಕ್ತಿಗಳು ಕೂಡಿಕೊಂಡು ಸಾಗುವವು. ಹಿಂದಿನ ಹಳೇ ಕತೆಗಳು ಈ ಪರಿಪೂರ್ಣಯೋಗಕ್ಕೆ ಮಾನ್ಯವಿಲ್ಲ. ಪಂಚಾಗ್ನಿ ಹಾಕಿ ನಡುವೆ ಕುಳಿತು ತಪ ಮಾಡುವದು ಕುತ್ತಿಗೆಯ ಮಟ ನೀರಲ್ಲಿ, ಛಳಿಯಲ್ಲಿ ನಿಂತು ಅಹೋರಾತ್ರಿ ಧ್ಯಾನ ಮಾಡುವದು ಮೈತುಂಬ ಬೂದಿ ಬಡಕೊಂಡು, ಅಡ್ಡ ತಿಡ್ಡ ಕೂದಲು, ಉಗುರು ಬೆಳಿಸಿ ಹುಚ್ಚನಂತೆ ತಿರಗುವ ತಪದಿಂದ ಈ ಪರಿಪೂರ್ಣಯೋಗವು ದೂರ ಇರುವದು. ಸನ್ಯಾಸಿಯಾಗಿ ಓಡಿ ಅರಣ್ಯದಲ್ಲಿ ಸೇರಿ ಯಾರಿಗೂ ಮುಖ ತೋರಿಸದಂತೆ ವಾಸಿಸಿ ಗಡ್ಡೆ, ಗೆಣಸು, ಬೇರು ತಿಂದು ಮೈ ಮೇಲೆ ಅರಿವೆ ಧರಿಸದೇ ಇರಬೇಕೆಂದು ಶಿವಶರಣರ ಪರಿಪೂರ್ಣಯೋಗ ಹೇಳುವದಿಲ್ಲ. ಸ್ತ್ರೀ ಎಂದರೆ ಹೊಲಸು ವಿಷವೆಂದು ಇದು ನಂಬಲಿಕ್ಕೆ ಹೇಳುವದಿಲ್ಲ. ಪುರುಷನಂತೆ ಸ್ತ್ರೀ ಸ್ತ್ರೀಯಂತೆ ಪುರುಷನೆಂದು ಇದು ಹೇಳಿ ಸಮತೆಯಿಂದ ಇರಲು ಹೇಳುವದು. ಸ್ತ್ರೀಯನ್ನು ಬಿಟ್ಟು ಓಡಿ ಹೋಗಲು ಈ ಯೋಗ ಹೇಳುವದಿಲ್ಲ. ಸ್ತ್ರೀಯರು ಸಂಗಡ ಇದ್ದರೂ ನಿರ್ವಿಷಯದಿಂದ ಬಳಸಿ ಬ್ರಹ್ಮಚಾರಿಯಾಗಿ ಇರಲು ಇದು ಹೇಳುವದು. ಇದೇ ನಿಜವಾದ ತಪಸ್ಸು. ವೇದಾಂತಿಯ ತಾಮಸ ತಪವು ಇದರಲ್ಲಿ ಇಲ್ಲ. ಅದಕ್ಕೆ ಈ ಪರಿಪೂರ್ಣಯೋಗದ ದೀಕ್ಷೆಯನ್ನು ಎಲ್ಲರಿಗೂ ಕೊಂದಲವಕಾಶವದೆ. ಹೆಣ್ಣು ಮಾಯೆಯಲ್ಲ ಹೊನ್ನು ಮಾಯೆಯಲ್ಲ ಮಣ್ಣು ಮಾಯೆಯಲ್ಲ ಮನದ ಮುಂದಿನ ಆಶೆಯೇ ಮಾಯೆಯೆಂದು

ಹೇಳಿದ್ದು ಇದನ್ನೇ ಸೂಚಿಸುವದು. ಸಂಸಾರ ಬಿಡಲು ಇದು ಹೇಳುದದಿಲ್ಲ. ಆದರೆ ಅದರಲ್ಲಿಯ ಆಸಕ್ತಿ, ಮೋಹ, ಲೋಲುಪತೆಗಳನ್ನು ಬಿಟ್ಟರೆ ಸಾಕೆಂದೂ, ಅವೇ ನಿಜವಾದ ವೈರಾಗ್ಯವೆಂದೂ ಇದು ಹೇಳುವದು. ಇದೇ ನಿಯಮವು ಇದೇ ತಪವೆನಿಸುವದು. ಧನವನ್ನು ಮುಟ್ಟಬೇಡ ಗಳಿಸಬೇಡೆಂದು ಈ ಪರಿಪೂರ್ಣಯೋಗ ಎಂದೂ ಹೇಳುವದಿಲ್ಲ. ಧನವನ್ನು ಸತ್ಯ, ಶುದ್ಧ, ನಿತ್ಯಕಾಯಕದಿಂದ ಗಳಿಸೆಂದೇ ಇದು ಹೇಳುವದು. ಆದರೆ ಅದರಲ್ಲಿ ಲೋಭಿಯಾಗಬೇಡ, ಅದರ ಅಧೀನವಾಗಬೇಡ, ಅದರ ದಾಸನಾಗಬೇಡ ಎಂದು ಹೇಳುವದು. ಆದರೆ ಅದೇ ನಿನ್ನ ಅಧೀನವಾಗಲಿ, ಅದೇ ನಿನ್ನ ದಾಸನಾಗಲಿ, ಅದರ ಯಜಮಾನ ನೀನಾಗೆಂದು ಈ ಪರಿಪೂರ್ಣಯೋಗ ಹೇಳುವದು. ಗಳಿಸಿ ಕೂಡ ಹಾಕಲು ಗಳಿಸುವದಲ್ಲ, ಗಳಿಸಿ ದಾಸೋಹ ಭಾವದಿಂದ ಬಳಿಸಲು ಈ ಯೋಗ ಹೇಳುವದು. ಆ ಧನ ನಿನ್ನದಲ್ಲ; ಅದೆಲ್ಲ ಶಿವಸ್ವರೂಪಿಗಳಾದ ಜೀವಿಗಳದೇ ಆಗಿರುವದು. ಇದರಿಂದ ಆರ್ಥಿಕ ಸಮತೆ ನೆಲಸಿ ಅನೀತಿ ಅನಾಚಾರಗಳು ನಿಲ್ಲುವವು. ಈ ಪರಿಪೂರ್ಣಯೋಗಿ ಧನದಿಂದ ಮುಖ ತಿರುವಿ ದೊರಕಿಸದೇ ಅದನ್ನು ತ್ಯಾಗಮಾಡಿ ಒಲ್ಲೆಂದು ಬಿಟ್ಟರೆ ಆ ಧನವನ್ನು ದುಷ್ಟರು, ದುರ್ಜನರು, ಕೊಲೆಗಡಕರು, ವ್ಯಭಿಚಾರಿಗಳು, ಗಳಿಸಿ ಧರ್ಮವನ್ನೂ ಸತ್ಯವನ್ನೂ ತುಳಿಯಲು ಬಳಸುವರು. ದುಷ್ಟ, ದುಚಟ, ವ್ಯಭಿಚಾರ ಚೈನಿಗಳಿಗಾಗಿ ಬಳಸುವದರಿಂದ ಅಧರ್ಮ ಹೆಚ್ಚು ಮಾಡಿದ, ಧರ್ಮದ ಕೊಲೆ ಮಾಡಿದ ಪಾಪ ಬಂದು ಸೇರುವದು. ಅದಕ್ಕೆ ಧನವನ್ನು ಗಳಿಸು ತೊರೆದು ಬಿಡಬೇಡ ಎಂದು ಈ ಪರಿಪೂರ್ಣ ಯೋಗ ಹೇಳುವದು. ಇದೇ ಸತ್ಯ ನಿಯಮವಾಗಿದೆ. ಸಂಸಾರ ಬಿಟ್ಟು ಹೋಗುವದೆಲ್ಲಿ; ಹೋದಲ್ಲೆಲ್ಲ ಸಂಸಾರ ಇದ್ದೇ ಇರುವದು. ದೊಡ್ಡ ಸಂಸಾರ, ಸಣ್ಣ ಸಂಸಾರ. ದೊಡ್ಡ ಬೆಂಕಿ, ಸಣ್ಣ ಬೆಂಕಿ. ಇಷ್ಟೇ ಇದರಲ್ಲಿ ಅಂತರ. ಎಲ್ಲವೂ ಸುಡತಕ್ಕದ್ದೇ ಸರಿ. ಆದರೆ ಸಂಸಾರದಲ್ಲಿ ಇದ್ದರೂ ಆಸಕ್ತನಾಗದೇ ಇರಬೇಕು. ನೀರತಾವರೆಯಂತೆ ಎಂದು ಈ ಪರಿಪೂರ್ಣಯೋಗ ಹೇಳುವರು. ಮುಟ್ಟಿಆಡಬೇಕು. ಈ ಕಣ್ಣುಮುಚ್ಚಣಿಯ ಆಟ ಬಿಟ್ಟಕುಳಿತರೆ ಕಳ್ಳಿಮುಟ್ಟುವಳು. ಅದಕ್ಕೆ ಜಾಗ್ರತನಾಗಿ ಶುದ್ಧನಾಗಿ ಪವಿತ್ರನಾಗಿ ದೇವರಭಕ್ತಿಯುಕ್ತನಾಗಿ ಆಟ ಆಡಲೇಬೇಕು. ಆಟ ಬಿಟ್ಟು ಕೂಡಲಿಕ್ಕೆ ಬರುವದಿಲ್ಲ. ಘಾಜಿ ಮುಟ್ಟಿದಾಗ

ವಿಶ್ರಾಂತಿ ಆದರೂ ಅದರಲ್ಲಿಯೂ ಸಂಕಲ್ಪಿತ ಕರ್ಮಗಳಿರುವವು. ಅದು ಸೂಕ್ಷ್ಮ ಆಟವೇ ಸರಿ. ಆಟದ ನಿಯಮವನ್ನು ಉಲ್ಲಂಘಿಸಲು ಬರುವದಿಲ್ಲ. ನಿಯಮ ಬದ್ಧನಾಗಿ ಆಟ ಆಡಿದರೆ ಸಾಕು. ವೈರಾಗ್ಯದಿಂದ ಆಟ ಆಡುವದನ್ನು ಈ ಪರಿಪೂರ್ಣಯೋಗ ಸೂಚಿಸುವದು.

ಸತ್ಯ ಪರಮಾತ್ಮನಿಂದ ಸತ್ಯ ಜಗತ್ತು ಹೊರಗೆ ಬಂದಿದೆ. ಇದೆಲ್ಲ ಪರಮಾತ್ಮನ ದಾನ- "ಇಳೆ ನಿಮ್ಮ ದಾನ, ಮಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ" ಇದೆಲ್ಲ ಪರಮಾತ್ಮನು ನಮಗೆ ಯೋಗಿ ಯಾಗೆಂದು ಕೊಟ್ಟ ಯೋಗ್ಯ ದಾನವೇ ಸರಿ. ಅದಕ್ಕೆ ಇದರಲ್ಲಿ ಯಾವದೂ ಕೆಟ್ಟಿಲ್ಲ ಎಲ್ಲವೂ ಪರಮಾತ್ಮನ ಸ್ವರೂಪ. ಅದಕ್ಕೆ ಇಲ್ಲಿಯು ಕೆಲವು ವಸ್ತುಗಳನ್ನು ವಿಷಯಗಳನ್ನು ಸಂಪೂರ್ಣ ಬಿಡಬೇಕು. ಕೆಲವುಗಳನ್ನು ಇತಿ ಮಿತಿಯಿಂದ ಬಳಸಬೇಕು. ಕೆಲವುಗಳ ಸಮೀಪ ಸಹ ಸುಳಿಯಬಾರದು. ಕೆಲವುಗಳ ನೆನೆಪನ್ನು ಕೂಡ ಮಾಡಬಾರದು. ಕೆಲವನ್ನು ಅತಿಯಾಗಿ ಬಳಸಿದರೂ ಬರುವದು. ಒಲ್ಲೆನೆಂಬ ವೈರಾಗ್ಯ ಬೇಡ. ಬೇಕೆಂಬ ಬಯಕೆಯೂ ಬೇಡ. ಸಾಕು ಬೇಕುಗಳ ಆಚೆಗೆ ಹೋಗಬೇಕು; ಇದನ್ನೇ ಪರಿ-ಪೂರ್ಣಯೋಗವು ಸಂಸಾರ, ಧನ, ಉದ್ಯೋಗ, ಆಹಾರ, ಆಶ್ರಯ, ಆಚ್ಛಾದನ, ಆರೋಗ್ಯ ಬಿಡಬೇಕೆಂದು ಎಂದೂ ಹೇಳುವದಿಲ್ಲ. ಆದರೆ ಅದನ್ನು ಸರಿಯಾಗಿ, ಶುದ್ಧವಾಗಿ, ಲೋಲುಪನಾಗದೆ, ಆಸಕ್ತನಾಗದೆ, ಮಾಡಲಿಕ್ಕೆ ಸರಿಯಾದ ಆಹಾರ ವಿಹಾರ ಆರೋಗ್ಯ ಹೊಂದಿ ಪರಿ-ಪೂರ್ಣಯೋಗ ಸಾಧನೆ ಮಾಡಲು ಇದು ವಿಧಿಸುವದು. ಎತ್ತ ಹೋದರೂ ತನ್ನ ನೆಳಲು ಹೇಗೆ ಬೆನ್ನಟ್ಟಿ ಬರುವದೋ ಅದರಂತೆ ಎಲ್ಲಿ ಹೋದರೂ ಸಂಸಾರ ಬೆನ್ನಟ್ಟಿ ಬಂದೇ ಬರುವದು. ಸಂಸಾರ ಈ ಪ್ರಪಂಚ ಬಿಟ್ಟು ಇನ್ನೆಲ್ಲಿ ಹೋಗಲು ಶಕ್ಯವಿದೆ. ಸ್ಥೂಲ ಪ್ರಪಂಚ ಸೂಕ್ಷ್ಮ ಪ್ರಪಂಚವಾಗಬೇಕು. ಸೂಕ್ಷ್ಮ ಪ್ರಪಂಚ ಕಾರಣ ಪ್ರಪಂಚವಾಗಿ ಮುಂದೆ ಮಹಾ ಕಾರಣ ಪ್ರಪಂಚವಾಗಿ ಮಾರ್ಪಡಬೇಕು. ಇವೇ ಪೂರ್ಣಯೋಗದ ಗೊತ್ತು ಗುರಿ. ಆದಕ್ಕಾಗಿ ಈ ಪರಿಪೂರ್ಣ ಯೋಗ ಸಾಧನೆಗಳಲ್ಲಿ ಹಳೇ ತರದ ಕಠಿಣ ತಾಮಸವೃತ ನಿಯಮ ಉಪವಾಸ, ದೇಹದಂಡನೆ ಮೊದಲಾದವುಗಳ ಅವಶ್ಯಕತೆ ಇಲ್ಲ. ಸುಲಭ ಸರಳ ಸಾತ್ವಿಕ, ಶುದ್ಧ ನಿಯಮ, ವೃತಶೀಲ, ಉಪವಾಸ, ದೇಹದಂಡನೆ

ವಾಸ ಇರುವಿಕೆಗಳು ಬೇಕೇಬೇಕು. ಅವುಗಳನ್ನು ಮೇಲೆ ವಿವರಿಸಿದ್ದಾಗಿದೆ. ಇಂದ್ರಿಯ ನಿಗ್ರಹ, ಮನೋನಿಗ್ರಹ ಮಾಡಿ ಈ ಯೋಗಕ್ಕೆ ಸಾಧಕವಾದ ವಿಷಯಗಳನ್ನು ರೀತಿಯಾಗಿ ಒಳಸಿ ಬಾಧಕವಾದ ವಿಷಯಗಳನ್ನು ಸಂಪೂರ್ಣ ತ್ಯಜಿಸಿ ಭಕ್ತಿ, ಜ್ಞಾನ, ಕರ್ಮ, ರಾಜಹಠ, ಲಯ, ಧ್ಯಾನ, ಜಪ ಮೊದಲಾದವುಗಳಿಂದ ಕೂಡಿದ ಪೂರ್ಣ ಯೋಗದ ಸಾಧನ ಮಾಡಬೇಕೆಂದು ಇದು ವಿಧಿಸುವದು. ಇದೇ ಸರಿ; ಪೂರ್ಣ ಯೋಗದ ವೈಶಿಷ್ಟ್ಯ. ಹಿಂದಿನ ಕಾಲದ ಕ್ರೂರ, ಕಠಿಣ, ತಾಮಸ, ವ್ರತೋಪವಾಸ, ದೇಹದಂಡನೆಯಿಂದ ಅಲ್ಪ ಸ್ವಲ್ಪ ಫಲ ಲಭಿಸಬಹುದು ಪೂರ್ಣಫಲವೆಂದೂ ಲಭಿಸುವದಿಲ್ಲ. ಅದಕ್ಕೆ ಅವುಗಳಲ್ಲಿಯ ದೋಷಗಳನ್ನು ಶಿವಶರಣರು ಕಂಡು ಹಿಡಿದು ರಾಜಮಾರ್ಗದಂತಿರುವ ಎಲ್ಲರಿಗೂ ಸಾಧಿಸಲಿಕ್ಕೆ ಒಳ್ಳೇ ಸುಲಭ ಅನುಕೂಲವಿರುವ ಪರಿಪೂರ್ಣ ಯೋಗ ಪದ್ಧತಿಯನ್ನು ಅನುಭವಗೊಂಡು ತಿಳಿಸಿದ್ದಾರೆ. ಈ ಯೋಗದಿಂದ ಸಾವಿರಕ್ಕೊಬ್ಬ ಶರಣ ಕೋಟಿಗೊಬ್ಬ ಸಿದ್ಧ; ಎನ್ನುವ ಹಳೇ ನುಡಿಕೆಯ ಮಾತು ಮಾಯವಾಗಿ ಹೋಗಿ ಸಾವಿರಗಟ್ಟಲೆ ಶರಣರು, ಕೋಟಿಗಟ್ಟಲೆ ಸಿದ್ಧರು ಎಂಬ ಮಾತು ಬಳಿಕೆಯಲ್ಲಿ ಬರುವದಾಗಿದೆ. ಅದಕ್ಕೆ ಈ ಪರಿಪೂರ್ಣಯೋಗವನ್ನು ಹೆಚ್ಚಾಗಿ ಪ್ರಚಾರ ಮಾಡಿ ಜನ ಸಾಮಾನ್ಯರ ಮನೆಮನೆಗೂ ಇದರ ಸಂದೇಶ ಮುಟ್ಟುವಂತಾದರೆ ಮಾತ್ರ ಈ ಹೊಸ ಬಳಿಕೆಯ ಮಾತು ನಿಜವಾಗುವದರಲ್ಲಿ ಸಂದೇಹವಿಲ್ಲ.

ಇಲ್ಲಿ ಎಲ್ಲರೂ ಅಲ್ಲಗಳೆಯುವ ಪರಶಕ್ತಿಯನ್ನು ಇವರು ಶರಣರು ಅಲ್ಲಗಳೆಯದೇ ಪರಶಿವನಷ್ಟೇ ಸ್ಥಾನವನ್ನು ಇವರಿಗೆ ಕೊಟ್ಟಿದ್ದಾರೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ತಂತ್ರ ಮೊದಲಾದವುಗಳು ಒಂದೇ ಒಂದು ತತ್ವ ಒಪ್ಪಿಕೊಂಡು ಮತ್ತೊಂದನ್ನು ಸಂಪೂರ್ಣ ಅಲ್ಲಗಳೆದಿದ್ದಾರೆ. ಆದರೆ ಶರಣರ ಈ ಪರಿಪೂರ್ಣಯೋಗದಲ್ಲಿ ಇವರೆಲ್ಲರ ಎಲ್ಲ ತತ್ವಗಳೂ ಸಮಾವೇಶವಾಗಿ ಒಂದೇ ಒಂದಾದ ಶಕ್ತಿ ವಿಶಿಷ್ಟಾದ್ವೈತ ತತ್ವವಾಗಿ ನಿಂತಿರುವದು. ದ್ವೈತಿಗಳಂತೆ ಸಾಧನಾವಸ್ಥೆಯ ಮೊದಲು ದ್ವೈತ, ಅದ್ವೈತಿಗಳಂತೆ ತುಟ್ಟ ತುದಿಗೆ ಸಾಧನೆಯ ತರುವಾಯ ಅದ್ವೈತ, ವಿಶಿಷ್ಟಾದ್ವೈತಿಗಳಂತೆ ಸಾಧನೆಯ ಮಧ್ಯದಲ್ಲಿ ವಿಶಿಷ್ಟತೆ, ತಾಂತ್ರಿಕರಂತೆ ಪರಶಕ್ತಿಯನ್ನು ಮೊದಲಿನಿಂದ ಕಡೆಯ ಮೆಟ್ಟಲಿನ ಪ್ರಾರಂಭದ ತನಕ ಒಪ್ಪಿಕೊಂಡು ಶಿವಶಕ್ತಿ ಸಮರಸವನ್ನು ಇದು ಬೋಧಿಸುವದು. ಅದ

ಕ್ಕಾಗಿ ಈ ಪರಿಪೂರ್ಣಯೋಗವು ಇಹ ಪರದಲ್ಲಿ ಎಳ್ಳಷ್ಟೂ ಭೇದ ವನ್ನು ಮನ್ನಿಸುವದಿಲ್ಲ. ಐಹಿಕವು ಅತಿ ಶುದ್ಧ ಸಿದ್ಧವಾಗಿ ಪಾರಮಾರ್ಥ ವಾಗಬೇಕು. ಅಂದರೆ ಭೂಲೋಕದಲ್ಲೇ ಸ್ವರ್ಗ ಇಳಿದು ಬರುವಂತೆ ಆಗಬೇಕು; ಆಗುವದು. ಇದೇ ಪೂರ್ಣಯೋಗದ ಪೂರ್ತಿಪಾಠವಿರು ವದು. ಪರಮಾತ್ಮನ ಸೃಷ್ಟಿ ಕಲ್ಯಾಣದ ಕಾರ್ಯದಲ್ಲಿ ಈ ಪೂರ್ಣ ಪರಿಪೂರ್ಣಯೋಗಿಯು ಅವರಿಗೆ ನೆರವಾಗುವನು. ಇದೇ ಅವನು ಮಾಡುವ ಪರಮಾತ್ಮನ ಸೇವೆ. ಅಂದರೆ ಸಕಲ ಜನರಿಗೆ ಬರೇ ಐಹಿಕ ಸುಖವನ್ನು ಕೊಡುವದಕ್ಕಾಗಿ ಅವನು ದುಡಿಯಲಾರ. ಆದರೆ ಪರಮಾ ರ್ಥದ ಹಿರಿಸುಖವನ್ನು ಕೊಡಲು ಅವರ ಸೇವೆ ಮಾಡುವನು. ಸಕಲ ರಿಗೆ ಲೇಸನೇ ಬಗೆಯುವನು ಶಿವಶರಣನು. ಪರಮಾತ್ಮನ ಇಚ್ಛೆಯಂತೆ ಈ ಪೂರ್ಣಯೋಗಿ ಶರಣನು ಸೇವೆ ಸಲ್ಲಿಸುವನು. ಅದರಿಂದ ಲೋಕಕ್ಕೆ ಲೇಸು ಆಗುವದರಲ್ಲಿ ಸಂದೇಹವಿಲ್ಲ. ಪ್ರತ್ಯಕ್ಷ ತನು, ಮನ ವಾಚ ದಿಂದ ಸೇವೆ ಸಲ್ಲುವದರಲ್ಲಿದೆ ಸದಾ ಲೇಸನೇ ಬಯಸುವನು. ಇದು ಅವನ ಸಂಕಲ್ಪ. ಈ ಅವನ ಸಂಕಲ್ಪ ಶಕ್ತಿಯಿಂದ ಅನೇಕ ಹೊಲ ಸನ್ನು ತೊಳೆಯಬಹುದು. ಇದರಿಂದ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ಸೇವೆ ಸಲ್ಲಿಸುವನೆಂದು ಹೇಳಿದಂತೆ ಆಗುವದು. ಇವನು ಪರಮಾತ್ಮನಿಗಾಗಿ ಸರ್ವಸಮರ್ಪಣ ಮಾಡುವನು ತನ್ನದೆಂದು ಯಾವುದನ್ನು ಹಿಡಿದಿಟ್ಟು ಕೊಳ್ಳುವದಿಲ್ಲ. ಇಡೀ ವಿಶ್ವವೇ ತನ್ನದಾದ ಬಳಿಕ ಒಡವೆಗಳನ್ನು ಹಿಡಿ ದಿಡುವದು ಹೇಗೆ ಶಕ್ಯವಿದೆ? ಅದಕ್ಕೆ ತನ್ನಲ್ಲಿ ಬಂದುದೆಲ್ಲ ಲೋಕದ ಆಸ್ತಿ ಪರಮಾತ್ಮನ ಸೊತ್ತು. ಅದಕ್ಕೆ ವಂಚನೆ ಇಲ್ಲದೆ ತ್ರಿವಿಧದಾಸೋಹಿ ಯಾಗುವನು. ಅದನ್ನು ಸಂರಕ್ಷಿಸುವ ಹೊಣೆ ತಪ್ಪುವದು ಅವನು ತನ್ನ ಭಾರವನ್ನು ಪರಮಾತ್ಮನ ಮೇಲೆ ಹಾಕನು. ಇವನು ಪರಮಾತ್ಮನ ಆಧೀನ ಸಂಪೂರ್ಣ ಆಗುವದರಿಂದ ಇವನಿಗೆ ಯಾವ ಹೊಣೆ ಚಿಂತೆಗೆ ಎಡೆಗೊಡದೆ ಎಲ್ಲರ ಸೇವೆ ಮಾಡುವನು. ಹೀಗಾಗಿ ಪರಿಪೂರ್ಣ ಸುಖವು ಈ ಪರಿಪೂರ್ಣಯೋಗಿಗೆ ಲಭಿಸುವದು.

ಆಗ ಇವನಿಗೆ ಸದ್ಭಕ್ತಿ, ಸುಜ್ಞಾನ, ಸದ್ಭಾವ, ವಿನಯ, ನಂಬ್ರತೆ, ಸತ್ಕ್ರಿಯೆ, ಶಾಂತಿ, ಶಕ್ತಿ, ಭಕ್ತಿ, ಮುಕ್ತಿಗಳು ಲಭಿಸುವದರಲ್ಲಿ ಸಂದೇಹ ವಿಲ್ಲ. ಶಿವಶಕ್ತಿಯರನ್ನು ಈ ಪರಿಪೂರ್ಣಯೋಗಿಯು ನಂಬಿ ಭಕ್ತಿ ಮಾಡುವದರಿಂದ ಅವರಿಗೆ ತಕ್ಕ 'ಓಂ ನಮಃ ಶಿವಾಯ' ಎಂಬ ಮಂತ್ರ

ವನ್ನು ಸದಾ ನುಡಿಯುವದರಿಂದ ಸಾಧಕನ ಸಕಲ ಅಡೆತಡೆಗಳು ಸಹಜ ಅನಾಯಾಸ ದೂರಾಗಿ ಎಲ್ಲ ರೀತಿಯಿಂದ ಸಾಧಕನಿಗೆ ನೆರವಾಗಿ ಮುಂದೆ ಮುಂದೆ ಅಡಿ ಇಡುವಂತೆ ನೆರವಾಗುವದು. ಹೀಗಾಗಿ ಯಾವ ಬಿಕ್ಕಟ್ಟೂ ಎಂದೂ ತೋರದು. ಒಬ್ಬರನ್ನು ಒಪ್ಪಿ ಒಬ್ಬರನ್ನು ಬಿಟ್ಟರೆ ಅಡೆತಡೆಗಳು ಸಹಜ ಉದ್ಭವಿಸುವವು. ಆದರೆ ಶರಣರು ಇಬ್ಬರನ್ನೂ ಒಪ್ಪಿಕೊಂಡು ಅವರನ್ನು ನಂಬಿ ಅವರ ಗುರುತಾದ ಇಷ್ಟ ಲಿಂಗವನ್ನು ಧರಿಸಿ ಇರುವದರಿಂದ ಯಾವ ಅಡೆತಡೆಗಳೇನೂ ಮಾಡಲಾರವು. ಯೋಗಕ್ಕೆ ವಿರೋಧವಾದುದೇ ಇವನ ಹತ್ತರ ಸುಳಿಯಲಾರವು. ಯಾಕಂದರೆ ಅವನ ಹೊಗಳಿಕೆಯನ್ನು ಅವನ ಭಾರವನ್ನು ಇವರಿಬ್ಬರೂ ಹೊತ್ತುಕೊಂಡಿರುವರು. ಅದಕ್ಕೆ ಯಾರು ಅಡ್ಡಿ ಮಾಡುವರು? ಒಬ್ಬರನ್ನು ನಂಬಿದರೆ ಇನ್ನೊಬ್ಬರು ಅಡ್ಡಿ ಮಾಡುವರು. ಅವರು ಈ ಪರಿಪೂರ್ಣಯೋಗಿಗೆ ಅಡ್ಡಿ ಆತಂಕದ ಬದಲು ನೆರವನ್ನು ಈಯುವರು ಮುಂದೆ ಮುಂದೆ ಕೊಂಡೊಯ್ಯುವರು. ಹೀಗಾಗಿ ಎಲ್ಲ ಹಳೆ ಈಗಿನ ಯೋಗಗಳಿಂದ ಶರಣರ ಪರಿಪೂರ್ಣಯೋಗವು ಎಲ್ಲವನ್ನು ಕೂಡಿಕೊಂಡು ಬಹು ಬಲಯುತವಾಗಿ ಶೋಭಿಸುವದು. ಅದನ್ನು ಹಿಂದೆ ಕೂಲಂಕಶವಾಗಿ ನೋಡಿಕೊಳ್ಳಬಹುದು. ಈ ಯೋಗವು ಆಧಾರ ಶುದ್ಧಿ, ತಾನು ದೇವನಾಗುವದು, ಚರಾಚರದಲ್ಲಿ ದೇವನನ್ನು ಕಾಣುವದು, ಅಖಂಡಾನಂದ ಭೂಮಿಯಲ್ಲಿ ಸ್ವರ್ಗತರುವದು, ಭಕ್ತಿಜ್ಞಾನ ಕರ್ಮಗಳ ಸುಂದರ ಸಮನ್ವಯಗಳನ್ನು ಒಳಗೊಂಡಿರುವದು.

## ಪರಿಪೂರ್ಣಯೋಗದ ಸಾಧನಗಳು.

### ೧ನೇ ಭಾಗ.

“ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು, ನಾನು ವ್ಯವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು, ನಾನಾವ ಕರ್ಮ ಮಾಡಿದಡೆಯೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದು ನಾನು ಅರಿತಿರ್ಪೆನಾಗಿ, ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ದಯಮಾಡೆನು, ನಿಮ್ಮ ಸೊಮ್ಮು ನಿಮಗೆ ಸಲ್ಲಿಸುವೆನು ನಿಮ್ಮಾಣೆ ಕೂಡಲಸಂಗಮದೇವ.

ಉದ್ಯೋಗ ವ್ಯವಹಾರ ಒಕ್ಕಲತನ, ನೌಕರಿ ಕೂಲಿ ಯಾವದೇ ಮಾಡಿದರೂ ಅದನ್ನು ಸತ್ಯ ನಿತ್ಯ ಶುದ್ಧವಾಗಿ ಮಾಡಿ ಶಿವಸ್ವರೂಪಿ ಗಳಾದ ಜೀವಿಗಳ ಸಲುವಾಗಿ ದಾನ ಮಾಡಬೇಕು. ಇದೇ ನಿಜವಾದ ಪ್ರಸಾದಿಸ್ಥಲ, ಇದೇ ನಿಜವಾದ ದಾಸೋಹ, ಇದೇ ಸರ್ವಾರ್ಪಣ ತತ್ವ, ಇದರಿಂದಲೇ ಈ ಪರಿಪೂರ್ಣಯೋಗದ ಸಾಧನ ಪ್ರಾರಂಭವಾ ಗುತದು. ಮೊದಲು ಸದ್ಗುರುವಿನಿಂದ ಮಂತ್ರತಕ್ಕೊಂಡು ಲಿಂಗದೀಕ್ಷೆ ಪಡಕೊಂಡು ಸಾಧಕನು ಈ ಪ್ರಕಾರ ಸಕಲ ಕಾರ್ಯಗಳನ್ನು ದಾಸೋಹ ಭಾವದಿಂದ ದೇವರಲ್ಲಿ ಮನವನ್ನು ನಿಲಿಸಿ ನಾಲಿಗೆಯಿಂದ ಸದಾ ಮಂತ್ರ ವನ್ನು ಜಪಿಸುತ್ತ ನಿರಾಳ ನಿಶ್ಚಿಂತನಾಗಿ ಹಸನ್ಮುಖದಿಂದ ಮಾಡುವನು. ಹೀಗೇ ಸದಾ ಸತ್ಯ ಶುದ್ಧ ಕಾಯಕ ಮಾಡುವನು.

ಇವನು ನಸುಕಿನಲ್ಲಿ ನಾಲ್ಕು ಗಂಟೆಗೆ ಎದ್ದು ಮುಖಮಾರ್ಜನೆ ಮಾಡಿ ಲಿಂಗದ ಧ್ಯಾನ ಸ್ವಲ್ಪ ಮಾಡಿ ಹಾಸಿಗೆಯಿಂದ ಎದ್ದು ತಂಬಿಗೆ ತಕ್ಕೊಂಡು ಹೋಗಿಬಂದು ಸ್ವಲ್ಪ ಶಿರಸಾಸನ ಹಾಕಿ ಸ್ನಾನ ತೀರಿಸಿ ಕೊಂಡು, ಲಿಂಗಾರ್ಚನೆ ಮಾಡಿ ತನ್ನ ಉದ್ಯೋಗಕ್ಕೆ ಹೋಗುವನು. ಮೇಲಿನಂತೆ ನಿತ್ಯ ಸತ್ಯ ಶುದ್ಧ ಕಾಯಕ ಮಾಡುವನು. ಊಟದ ಹೊತ್ತಿಗೆ ಊಟ ಮುಗಿಸಿಕೊಂಡು ಸ್ವಲ್ಪ ವಚನಗಳನ್ನು ಓದುವನು. ಬಳಿಕ ಪುನಃ ತನ್ನ ಉದ್ಯೋಗಕ್ಕೆ ಹೋಗುವನು. ಯಾವಾಗಲೂ ಕುಳಿತಾಗ, ನಿಂತಾಗ; ಊಟದಲ್ಲಿ; ಹೋದಲ್ಲಿ, ಬಂದಲ್ಲಿ, ಉದ್ಯೋ ಗದಲ್ಲಿ, ಯಾವಾಗಲೂ ಮಂತ್ರ ನಾಮಜಪವನ್ನು ಸದಾ ನಾಲಿಗೆ ಯಿಂದ ಮಾಡುವನು. ಹೃದಯದಲ್ಲಿ ಶಿವಶಕ್ತಿಯರನ್ನು ಸ್ಮರಣೆಯಿಂದ ತನ್ನಲ್ಲಿ ನೆಲಗೊಳಿಸುವನು. ಸತ್ಯ ವಚನ ವಿನಯದಿಂದ ಪರರಕೂಡ ವರ್ತಿಸುವನು. ಸಾಯಂಕಾಲ ಮನೆಗೆ ಬಂದು ಲಿಂಗಾರ್ಚನೆ ತೀರಿಸಿಕೊಂಡು ಪ್ರಸಾದ ಸ್ವೀಕರಿಸಿ ಕೆಲಹೊತ್ತು ವಚನಗಳನ್ನು ಓದು ವನು. ಬೇರೆ ವೇದಾಂತ ಅಧ್ಯಾತ್ಮದ ಪುಸ್ತಕಗಳನ್ನೂ ಸಹ ತುಲನಾ ತ್ಮಕವಾಗಿ ಅಭ್ಯಾಸ ಮಾಡುವನು. ಇದು ನಿತ್ಯ ಅವನ ಸಾಧನವಾ ಗಿದೆ. ೧೦ ಗಂಟೆಗೆ ಸರಿಯಾಗಿ ಮಲಗುವನು. ಸಂಸಾರಿಯಿದ್ದರೆ, ಅವನು ತನ್ನ ಸತಿಯ ಕೂಡ ರಾಮಕೃಷ್ಣ ಪರಮಹಂಸ, ಬಸವಣ್ಣ ಮೊದಲಾದವರಂತೆ ನಿಷ್ಕಾಮವಾಗಿ ಗೆಳತಿ, ದಾರಿಯಲ್ಲಿ ಸಂಗಾತಿಗ

ಕೆಂಬ ಭಾವದಿಂದ, ಸಹಜ ಇದ್ದರೆ ಬಹಳೇ ಉತ್ತಮ. ಅವನು ಬಹು ಹೆಚ್ಚಿನ ಸ್ಥಿತಿಗೆ ತೀವ್ರ ಹೋಗುವನು. ಆಗದಿದ್ದರೆ ಇಡೀ ಆಯುಷ್ಯದಲ್ಲಿ ಹೀಗೆ ಇರುವದು ಅವನಿಗೆ ಶಕ್ಯವಾಗದಿದ್ದರೆ ರಾಮ ಮೊದಲಾದವರಂತೆ ಇಡೀ ಆಯುಷ್ಯದಲ್ಲಿ ಒಂದುಸಲ ತನ್ನ ಸತಿ ಸಂಗ ಮಾಡಬಹುದು. ಇದೂ ಆಗದಿದ್ದರೆ ಮೋಳಿಗೆಯ ದೇವರದಾಸಿಮಯ್ಯ ನಂತೆ ವರ್ಷಕ್ಕೆ ಒಂದುಸಲ ತನ್ನ ಸತಿಸಂಗ ಮಾಡಬಹುದು ಇದೂ ಆಗದಿದ್ದರೆ ತಿಂಗಳಿಗೆ ಒಂದುಸಲ ಮಾಡಿದರೂ ಅಡ್ಡಿ ಇಲ್ಲ. ಇದ ರಿಂದ ಅವರವರ ಯೋಗ್ಯತೆಯು ಇಳಿಯುತ್ತ ಬರುವದು ನಿಜವೇ ಇದೆ. ಇದಕ್ಕಿಂತ ಹೆಚ್ಚಾದರೆ ಅವನು ಯೋಗಕ್ಕೆ ದೂರ ಆಗುವನು. ಸಾಮಾನ್ಯ ಮಾನವನಾಗುವನು. ಈ ವಿಷಯವನ್ನು ಎಷ್ಟು ಮಿತಿಯಿಂದ ಬಳಸು ವರೋ ಅಷ್ಟು ಅವರಲ್ಲಿ ಈ ಪರಿಪೂರ್ಣಯೋಗ ಅಳವಡುವದು. ಆದರೂ ಸಾಧನ ಬಲಿತಂತೆ ಎಲ್ಲ ವಿಷಯಗಳು ಹುಣ್ಣು ಮಾಯಿ ದಂತೆ ಅದರ ಮೇಲಿನ ಹಕ್ಕಳಿ ಹೇಗೆ ಕಳಚಿ ಬೀಳಹತ್ತುವದೋ, ಅದರಂತೆ ಅವನಿಂದ ಅವು ದೂರಸರಿಯಹತ್ತುವವು. ಇದು ಸಂಸಾರಿಯ ಸಾಧನದ ರೀತಿ. ಬಸವನು ಬಾಲ್ಯದಿಂದ ಸಾಧನ ಮಾಡಿ ಸಿದ್ಧಿಪಡ ಕೊಂಡು ಎರಡು ಸತಿಯರಿಂದ ಕೂಡಿಕೊಂಡಿದ್ದರೂ ಶ್ರೀ ರಾಮಕೃಷ್ಣ ಪರಮಹಂಸರಂತೆ ಬ್ರಹ್ಮಚಾರಿಯಾಗಿ ಇದ್ದನು. ಅದರಂತೆ ಪ್ರಭುದೇವರು ಒಂದು ವಚನವನ್ನು ಸಹ ಹೇಳಿದ್ದಾರೆ ನೋಡಿರಿ—

"ಸತಿಯ ಕಂಡು ಭೃತಿಯಾದ ಬಸವಣ್ಣ, ಭೃತಿಯಾಗಿ ಬ್ರಹ್ಮ ಚಾರಿಯಾಗಿ ಭವಗೆಟ್ಟನಯ್ಯ ಬಸವಣ್ಣ, ಗುಹೇಶ್ವರಾ ನಿಮ್ಮಲ್ಲಿ ಬಾಲಬ್ರಹ್ಮಚಾರಿಯಾದಾತ ಬಸವಣ್ಣನಯ್ಯ"

ಈ ಪ್ರಕಾರ ಇದ್ದರಂತೂ ಇವನು ಉತ್ತಮ ವಿರಕ್ತನೇ ಸರಿ. ಅವನೇ ನಿಜವಾದ ಬಾಲಬ್ರಹ್ಮಚಾರಿ; ಒಳ್ಳೇ ಯೋಗ್ಯತೆಯುಳ್ಳವನು ಸತಿ ಸಂಗಡ ಇದ್ದರೂ ವಿಷಯ ಇಲ್ಲದಂತೆ ಇರುವದು ಬಹು ಕಠಿ ಣವೇ ಸರಿ.

ಎಲ್ಲರಿಗೂ ಇದರಂತೆ ಇರಲು ಶಕ್ಯವಾಗುವದಿಲ್ಲ. ಅದಕ್ಕೆ ಬಾಲ್ಯ ದಿಂದ ಪರಿಪೂರ್ಣಯೋಗದ ಸಾಧನವನ್ನು ಮಾಡಿ ಸಂಸಾರದಲ್ಲಿ ಬಿದ್ದರೂ ಸಾಮಾನ್ಯವಾಗಿ ಮೇಲಿನಂತೆ ಸಂಸಾರ ಉದ್ಯೋಗ ದಾಸೋಹ

ಗಳನ್ನು ಮಾಡುತ್ತಿರಬೇಕು. ಒಂದುವೇಳೆ ವಿರಕ್ತನಾದರೆ ಸಿದ್ಧರಾಮ ಚನ್ನಬಸವ, ಅಲ್ಲಮಪ್ರಭು, ಅಕ್ಕಮಹಾದೇವಿ, ಬೊಂತಾದೇವಿಯರಂತೆ ಬ್ರಹ್ಮಚಾರಿ ಜೀವನವನ್ನು ಸಾಗಿಸಿ ಲೋಕಕಲ್ಯಾಣದ ಕಾರ್ಯಗಳಲ್ಲಿ ತೊಡಗುವದೂ ಉತ್ತಮವೇ ಸರಿ. ಆಯ್ದಕ್ಕಿಮಾರಯ್ಯ ಮೋಳಿಗೆಯ ಮಾರಯ್ಯ ಮೊದಲಾದವರೂ ಕೂಡ ಮೇಲೆ ಹೇಳಿದ ಬ್ರಹ್ಮಚಾರಿಯ ನಿಯಮದಂತೆ ಸತಿಯ ಕೂಡ ಇದ್ದರು. ಹರಳಯ್ಯ ಚನ್ನಯ್ಯ ಮೊದಲಾದವರೂ ಇದೇ ರೀತಿ ಸಂಸಾರ ಮಾಡುತ್ತಿದ್ದರು. ಯಾವ ಶರಣನೂ ಕಾಯಕ ಬಿಟ್ಟಿದ್ದಿಲ್ಲ. ಅವರೆಲ್ಲರೂ ತಮ್ಮ ಹೊಟ್ಟೆಬಟ್ಟೆ ದಾಸೋಹಗಳ ಪೂರ್ತಿಗಳಿಸುತ್ತಿದ್ದರು. ಬಸವಣ್ಣನಂತೂ ಕಲ್ಯಾಣದ ಮುಖ್ಯ ಮಂತ್ರಿಯಾಗಿದ್ದನು. ಶರಣರು ಎಲ್ಲತರದ ಸತ್ಯಶುದ್ಧ ನಿತ್ಯಕಾಯಕದಿಂದಲೇ ಈ ಪರಿಪೂರ್ಣಯೋಗದ ಸಾಧನ ಮಾಡುತ್ತಿದ್ದರು. ಕೆಲವರು ಬಾಲ್ಯದಿಂದ ಪ್ರಾಯ ಬರುವವರೆಗೆ ಸಾಧನ ಮಾಡಿ ಹಿಂದಿನಿಂದ ಕಾಯಕವನ್ನು ಪ್ರಾರಂಭಿಸಿದವರಿದ್ದಾರೆ. ಈ ಪ್ರಕಾರ ಶರಣರು ಕಾಯಕದಿಂದ ದಾಸೋಹ ಭಾವದಿಂದ ಸರ್ವಾರ್ಪಣ ಮಾಡುತ್ತಿದ್ದರು. ಸರ್ವಾರ್ಪಣವು ಇವರ ಸಾಧನದಲ್ಲಿ ಕೇಂದ್ರವಿದ್ದಂತೆ ಇತ್ತು. ಈ ಕೇಂದ್ರದ ಸುತ್ತು ಭಕ್ತಿ, ಜ್ಞಾನ, ಕರ್ಮ, ದಾಸೋಹ ಲಿಂಗಪೂಜೆ ಧ್ಯಾನ ಜಪಗಳನ್ನು ಮಾಡುತ್ತ ತಿರುಗುತ್ತಿದ್ದರು. ಸರ್ವಸಮರ್ಪಣ ತತ್ವವು ಇವರಲ್ಲಿ ಹಾಸುಹೊಕ್ಕಾಗಿತ್ತು. ಇದೇ ಸರ್ವಸಮರ್ಪಣ ತತ್ವದ ಮೇಲೆ ಸಕಲ ಇವರ ಪರಿಪೂರ್ಣಯೋಗವು ನಿಂತಿದೆ. ಸರ್ವಸಮರ್ಪಣವೇ ಈ ಯೋಗದ ಕಳಸು ಎಂದೂ ಹೇಳಬಹುದು. ಅದಕ್ಕಾಗಿ ಶರಣರು ದಾಸೋಹಮೂರ್ತಿಗಳೆನಿಸಿಕೊಂಡು ಸಕಲವನ್ನು ಅಂದರೆ ಜ್ಞಾನ, ತನು, ಮನ, ಧನ, ವಸ್ತ್ರ, ಭೂಮಿ, ಅನ್ನ, ಎಲ್ಲವನ್ನೂ ದಾಸೋಹ ಮಾಡಿ ದಾಸೋಹ ಮೂರ್ತಿಗಳಾಗಿದ್ದರು.

ಈಗ ಮೂಲುದ್ಯೋಗದ ಮುಖಾಂತರ ಶಿಕ್ಷಣವೆಂದು ಬಹು ಪ್ರಚಾರದಲ್ಲಿ ಬಂದು; ಒಂದು ಯಾವದಾದರೂ ಉದ್ಯೋಗದ ಮುಖಾಂತರ ವಿದ್ಯೆಯನ್ನು ಕಲಿಸುತ್ತಿರುವರು. ಈಗೀಗ ಪ್ರಚಾರದಲ್ಲಿ ಬಂದ ಈ ತತ್ವವನ್ನು ಶರಣರು ಬಳಕೆಯಲ್ಲಿ ಆಗ ತಂದು ಆದರ ಮುಖಾಂತರ ಪೂರ್ಣಯೋಗದ ಪೂರ್ಣ ಪಾಠವನ್ನು ಕಲಿತುಕೊಂಡು ಅನ್ಯರಿಗೂ ತಿಳಿಸಿಹೇಳುತ್ತಿದ್ದರು. ಇವರು ಕಷ್ಟಕರವಾದ ಕಠಿಣ ತಪಗಳನ್ನು ಹಿಂದಿ

ನವರಂತೆ ಹೇಳಲಿಲ್ಲ. ಅವುಗಳಿಂದ ಪರಿಪೂರ್ಣಯೋಗ ಸಾಧಿಸಲಾರ ದೆಂದು ಅವರು ಮನಗಂಡು ಮಾನವನ ವ್ರತ ಅಂಗೋಪಾಂಗ, ಇಂದ್ರಿಯ ಮನ, ಪ್ರಾಣ, ಬುದ್ಧಿ, ಚಿತ್ತ, ಜೀವ ಮೊದಲಾದವುಗಳು ಸರಿಯಾಗಿ ಸರಳಾಗಿ ವಿಕಾಸವಾಗಿ ಶುದ್ಧ ಪವಿತ್ರವಾಗಿ ದೇವನ ವಾಸಕ್ಕೆ ಯೋಗ್ಯ ದೇವಮಂದಿರವಾಗುವಂತೆ ಪರಇಹಕ್ಕೆ ಅತಿ ಯೋಗ್ಯವಾಗುವಂತೆ ಮಾಡುವ ಸಲುವಾಗಿ ಎಲ್ಲ ಯೋಗಗಳ ಎಲ್ಲ ತತ್ವ ಸಿದ್ಧಾಂತಗಳ ಸರಿಯಾದ ಜೋಡಣಿಯನ್ನು ಮಾಡಿ ಈ ಪರಿಪೂರ್ಣಯೋಗವನ್ನು ಕಂಡುಹಿಡಿದರು. ಆಗ ಅವರು ಈ ಪರಿಪೂರ್ಣಯೋಗಕ್ಕೆ ಶಿವಯೋಗವೆಂದರು. ಇದರಿಂದ ಶರೀರದ ಯಾವ ಭಾಗಕ್ಕೂ ಈ ಯೋಗವು ಬಂಧನಕಾರಿ ಯಾಗಲಾರದು. ಎಲ್ಲ ಭಾಗಗಳು ಇದಕ್ಕೆ ಸಹಜ ತಮ್ಮಿಂದ ತಾವೆ ಒಪ್ಪಿ ಒಲಿಯುವಂತೆ ಈ ಯೋಗವಿರುವದು. ಮುಖ್ಯವಾಗಿ ಸಂಪೂರ್ಣ ಅಹಂಕಾರದ ನಿವೃತ್ತಿಯು ಈ ಯೋಗದಲ್ಲಿ ಅವಶ್ಯವಿರುವದು. ಅಂದರೆ ಮಾತ್ರ ಸರ್ವಸಮರ್ಪಣಮಾಡಿ ದಾಸೋಹಿಯಾಗಲು ಶಕ್ಯವಿದೆ. ಈ ಕಾಯಕ ಕರ್ಮಯೋಗದಿಂದ ಅದೆಷ್ಟೋ ಅಹಂಕಾರದ ನಿವೃತ್ತಿಯಾಗುವದು. ಮೊದಲಿಗೆ ಒಮ್ಮೆಲೇ ಯಾರಿಗೂ ಈ ಸರ್ವಸಮರ್ಪಣದ ದಾಸೋಹ ಸಾಧಿಸಲಾರದು. ಇದು ಸಾಧಿಸದೆ ಅವನೆಂದೂ ಪರಿಪೂರ್ಣ ಯೋಗಿಯಾಗಲಾರನು. ಆದರೂ ಸಾಧನ ಬಲಿತಂತೆ ಮಾರ್ಗವು ನಿಚ್ಚಳ ವಾಗುತ್ತಹೋಗುವದು.

ಕಂದಿಸಿ ಕುಂದಿಸಿ ಬಂದಿಸಿ ನೋಯಿಸಿ ಕಂಡಕಂಡವರ ಬೇಡಿ ತಂದು ಮಾಡಿಹೆನೆಂಬುದು ದಂದುಗದೋಗರ. ಲಿಂಗ ನೈವೇದ್ಯಕ್ಕೆ ಸಲ್ಲದು. ತನುಕರಗಿ ಮನಕರಗಿ ಬಳಲಿ ಬೆಂದ ತೆರದನುವನರಿದು, ಸಂದಿಲ್ಲದೆ, ಸಂಶಯವಿಲ್ಲದೆ, ದಾಸೋಹವ ಮಾಡುವದೇ ಮಾಟ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ ಇದುಕಾರಣ ಸತ್ಯ ಶುದ್ಧ ಕಾಯಕ ದಿಂದ ನಿತ್ಯ ದ್ರವ್ಯ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಕೇಳಯ್ಯ." ಈ ಪ್ರಕಾರ ಕಾಯಕ ಮಾಡಿ ಅರ್ಪಿತಮಾಡಿ ದಾಸೋಹ ಮೂರ್ತಿ ಯಾಗಬೇಕು.

ತನ್ನ ಅಂಗಭೋಗ ಅನರ್ಪಿತ ಲಿಂಗಭೋಗ ಪ್ರಸಾದವಾಗು ವದು. ಅಂಗತ್ರಯಗಳು ಲಿಂಗತ್ರಯಂಗಳು ಸಮರಸವಾದ ಬಳಿಕ ಬಹಿರಂಗದ ಕ್ರಿಯೆಗಳನೆಲ್ಲವ ಬಿಟ್ಟು ಸ್ವಲೀಲಾನಂದ ಕ್ರಿಯಿಡಿದು ಆಚ ರಿಸಬೇಕು. ತ್ಯಾಗಾಂಗ ಭೋಗಾಂಗ ಯೋಗಾಂಗಗಳು, ಇಷ್ಟ ಪ್ರಾಣ, ಭಾವಲಿಂಗಗಳು ಸಮರಸವಾಗಲಾಗಿ ಬಹಿರಂಗದ ಅರ್ಪಿತಗಳು ಸಲ್ಲು ವದು. ಅವುಅರ್ಪಿತವಲ್ಲ. ಲೀಲಾಮೂರ್ತಿಯಾಗಿ ಬಹಿರಂಗದ ಅರ್ಪಿತ ಗಳು ಸಲ್ಲುವದಿಲ್ಲ. ಅವು ಅರ್ಪಿತವಲ್ಲ. ಲೀಲಾಮೂರ್ತಿಯಾಗಿ ಆನಂದ ದಿಂದ ಕ್ರಿಯೆಗಳನ್ನು ಲೋಕಕಲ್ಯಾಣಕ್ಕಾಗಿ ಮಾಡಿದರೆ ಅದೇ ಸರ್ವಾ ರ್ಪಣವಾಗುವದು ಇಲ್ಲಿ ತನು ಮನ ಧನ ಪ್ರಾಣ ಬುದ್ಧಿ ಎಲ್ಲ ಪರರಿ ಗಾಗಿ ದುಡಿಯುತ್ತಿರುವದನ್ನು ಕಾಣಬರಿ ಇದೇ ಅರ್ಪಿತ. ಅದಕ್ಕೆ ತನುಮುಟ್ಟಿಕೊಂಬುದು ಲಿಂಗಾರ್ಪಿತವಲ್ಲ. ಮನಮುಟ್ಟಿಕೊಂಬುವದು ಲಿಂಗಾರ್ಪಿತವಲ್ಲ. ಇವು ಬಾಹ್ಯ ವಿಷಯಗಳು ಲಿಂಗಕ್ಕೆ ಅರ್ಪಣ ಮಾಡುವ ರೀತಿಯಲ್ಲ; ಅವು ಆಗುವದಿಲ್ಲ. ಮೊದಲು ವಿಷಯ ತ್ಯಾಗ ದಿಂದ ತನು ಶುದ್ಧ ಮಾಡಿ ತ್ಯಾಗಾಂಗಿಯಾಗಬೇಕು. ಆಗ ಒಳಗಿ ನಿಂದ ಸುವಿಷಯಗಳು ಆಯಾ ಲಿಂಗಸ್ಥಲಗಳಲ್ಲಿ ಪ್ರಕಟವಾಗುವವು. ಇದೇ ಪ್ರಸಾದವೆನಿಸುವದು. ಅದರಿಂದ ಆನಂದ ತೃಪ್ತಿಗಳು ಉಂಟಾ ಗಲು ಅದೇ ಭೋಗಾಂಗವಾಗುವದು. ಮುಂದೆ ತಾನೇ ಲಿಂಗಾಂಗ ಸಮರಸ ಸರ್ವಾಂಗಲಿಂಗಿಯಾಗುವನು. ಇದೇ ನಿಜವಾದ ಅರ್ಪಿತ ಅದಕ್ಕೆ ತನ್ನದೆನ್ನುವ ಸಕಲವನ್ನು ದಾಸೋಹಭಾವದಿಂದ ಅಂದರೆ ನಿರಹಂಕಾರದಿಂದ ಶಿವಸ್ವರೂಪಿಗಳಾದ ಜೀವಿಗಳಿಗೆ ಅರ್ಪಣ ಮಾಡಿ ನಿರ್ವಿಷಯಿಯಾದಾಗ ಸಂಪೂರ್ಣ ತ್ಯಾಗಾಂಗವಾಗುವದು. ಆಗ ಅರ್ಪ ಣವು ಸರಿಯಾಗಿ ಆಗುವದು. ಹೀಗೆ ಸರ್ವಸಮರ್ಪಣಭಾವದಿಂದ ಕಾಯಕಮಾಡಿ, ದೇವನನ್ನು ಕೂಗಿಕೊಂಡರೆ ಮಾತ್ರ ಅಂದರೆ ಭಕ್ತಿ ಪ್ರೇಮದಿಂ ಅವನಿಗೆ ಧ್ಯಾನ ಪೂಜೆ ಜಪಗಳನ್ನು ಸಲ್ಲಿಸಿದರೆ ನಮ್ಮೊ ಳಗೇ ಅವನು ಪ್ರಕಟವಾಗಿ ಪ್ರಕಾಶಕ್ಕೆ ಬರುವನು. ಅವನೇನು ಹೊರ ಗಿನಿಂದ ಮೇಲಿನಿಂದ ಇಳಿದುಬರುವದಿಲ್ಲ.

ಅದಕ್ಕಾಗಿ ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲ. ಕಿವಿ ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ. ಜಿಹ್ವೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ. ತನು ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ.

**R. B. N. 2554**

From
*Shivanubhava*
*Office*
BIJAPUR

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
ಮು— ಬನ್ನಟ್ಟಿ
ತಾ— ಜಮಖಂಡಿ

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ನಂ.
೧೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮು
ಅಲ್ಲಿಯೇ ಪ್ರಸಿದ್ಧಿಸಿದರು.

ಸಂಚಿಕೆ ೧೨.　　　　ಸಂಪುಟ ೩೪

# ಶಿವಾನುಭವ

✳

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.

●

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ಡಿಶಂಬರ ೧೯೬೦.

ಓಂ ನಮಃ ಶಿವಾಯ

# ವಿಷಯಾನುಕ್ರಮಣಿಕೆ


೧ ಹಡಪದ ಅಪ್ಪಣ್ಣನ ಚರಿತ್ರೆ. ೩೭೩

— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ

೨ ಲಿಂಗದ ಮಹಿಮೆ. ೩೯೭

— ಶ್ರೀ ಬಳವಂತ ಧಡುತಿ, ಮಹಾಲಿಂಗಪೂರ.

೩ ಮಾನವನಲ್ಲಿ ಅಂತರಂಗ ಶುದ್ಧಿ ಬೆಳೆಯಬೇಕು. ೩೯೯

— ಶ್ರೀ ಎಸ್. ಡಿ. ಮೋಟಗಿ, (ಅಥಣಿ)

೪ ಶಿವಲಿಂಗ ವಿಮರ್ಶೆಯು. ೪೦೦

— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)

೫ ಸರ್ವೋದಯ. ೪೧೫

— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ ಹೆಲಗೂರು.

೬ ಶಿವಶರಣರದೇ ಪರಿಪೂರ್ಣ ಯೋಗ ೮೯-೯೩

— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.



# ಹಡಪದ ಅಪ್ಪಣ್ಣನ ಚರಿತ್ರೆ.

(ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ,
ತಾಲೂಕ-ಇಂಡಿ)

ಕಾಯಕವೇ ಕೈಲಾಸವೆಂದು ಬೋಧಿಸಿ ನಡೆದು ನುಡಿದು ಹೋದ ಶರಣರೆಲ್ಲರೂ ಒಳ್ಳೇ ಆದರ್ಶ ಮಹಾತ್ಮರಾಗಿದ್ದರು. ಆಗ ಕಲ್ಯಾಣದಲ್ಲಿ ಅಸಂಖ್ಯ ಶರಣ ಶರಣೆಯರಿದ್ದರು. ಅವರಲ್ಲಿ ೭೭೦ ಅಮರ ಗಣಂಗಳು ಶ್ರೇಷ್ಠರೆಂದು ಹೇಳಬಹುದು. ಇವರಲ್ಲಿ ಯಾರು ಸಣ್ಣವರು ಯಾರು ದೊಡ್ಡವರು ಎಂದು ಹೇಳುವದು ಬಹು ಕಠಿಣವಾಗಿದೆ. ಒಂದೊಂದು ಬಗೆಯಿಂದ ವಿಚಾರಿಸಿದರೆ ಎಲ್ಲರೂ ಶ್ರೇಷ್ಠರೆಂದೇ ಹೇಳಬೇಕು. ಶರಣರೆಲ್ಲರೂ ಸಾಮಾನ್ಯವಾಗಿ ಒಂದಿಲ್ಲೊಂದು ಉದ್ಯೋಗವನ್ನು ನಿತ್ಯ ಸತ್ಯ ಶುದ್ಧವಾಗಿ ಮಾಡಿ ಗಳಿಸಿ ದಾಸೋಹ ಮಾಡಿ ಸಾದಾ ಜೀವನವನ್ನು ಸಾಗಿಸಿ ಉದಾತ್ತ ವಿಚಾರ ಮಾಡುವ ಮಹಾತ್ಮರಾಗಿದ್ದರು ಎಲ್ಲರೂ ಸ್ವಾವಲಂಬಿಗಳು. ಶಾಂತ ಸ್ವಭಾವದವರು.

ತೃಪ್ತಿ ಜೀವಿಗಳು, ಇಂದಿನಂು ನಾಳೆ ಎಂಜಲವೆಂದು ಬಗೆದವರು ಯಾರೂ ಕೂಡಹಾಕುತ್ತಿರಲಿಲ್ಲ. ಗರಜಿನ ಪೂರ್ತೆ ಗಳಿಸಿ ದಾಸೋಹಕ್ಕೆ ಬಳಸಿ ಉಳಿದುದನ್ನು ಪ್ರಸಾದರೂಪದಿಂದ ಭೋಗಿಸಿ ಶರಣರಾಗಿ ಬಾಳಿದರು. ಅಪ್ಪಣ್ಣನ ಶರಣರ ಅರ್ಥವನ್ನು ವಿಚಾರಿಸಿದರೆ ಅವರ ಜೀವನದ ಮರ್ಮ ಹೊಳೆಯುವದು— "ಯೋಗದಿಂದರಿದಿಹೆನೆಂಬಿರಿ, ಓದಿನಿಂದರಿದಿಹೆನೆಂಬಿರಿ, ವೇದದಿಂದರಿದಿಹನೆಂಬಿರಿ ಶಾಸ್ತ್ರದಿಂದರಿದಿಹೆನೆಂಬಿರಿ. ಕೇಳಿರಣ್ಣಾ. ಯೋಗದಂತದು ಅಲ್ಲ, ಓದಿನಂತದು ಅಲ್ಲ, ವೇದದಂತದು ಅಲ್ಲ, ಶಾಸ್ತ್ರದಂತದು ಅಲ್ಲ, ಶರಣಸ್ಥಲ ಬೇರೆ ಅದೆಂತೆಂನೊಡೆ ಗಂಡಳಿದು ಹೆಣ್ಣಾಗಬೇಕು, ಹೆಣ್ಣಳಿದು ಗಂಡಾಗಬೇಕು, ಉಂಡೆನುಟ್ಟೇನೆಂಬ ಹಂಗಳಿದು. ಈ ಲೋಕದ ಸಂದೇಹವಳಿದ ಶರಣಂಗೆ ನಮೋ ನಮೋ ಎನುತಿರ್ದೆನಯ್ಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ. ಎಂದು ಹೇಳಿದ್ದನ್ನು ವಿಚಾರಿಸಿದರೆ ವೇದಗಳನ್ನು ಓದಿದರೆ ಶರಣರಲ್ಲೆಂದು ಹೇಳಿದ್ದಾನೆ. ಗಂಡಿನ ಗುಣಗಳು ಅಳಿದು ಹೆಣ್ಣಿನ ಗುಣಗಳು ಗಂಡನಲ್ಲಿ; ಹೆಣ್ಣಿನ ಗುಣಗಳಳಿದು ಗಂಡಿನ ಗುಣಗಳು ಹೆಣ್ಣಿನಲ್ಲಿ ಬರಬೇಕು. ಅಂದರೆ ಹೆಣ್ಣು ಗಂಡು ಭೇದವಿಲ್ಲದಂತೆ ಇರಲಿಕ್ಕೆ ಬಂದಾಗ ಮಾತ್ರ ಶರಣನು. ಅದರಂತೆ ಅವರ ಕಾಯಕಗಳೂ ಸಹ ಅದೇ ರೂಪಧಾರಣೆ ಮಾಡಬೇಕು. ಉಡುತೊಡುವ ಉಣ್ಣುತಿನ್ನುವ, ಭೋಗಗಳ ಹಂಗಳಿಯಬೇಕು. ಉಂಡಉಪವಾಸಿ ಬಳಸಿ ಬ್ರಹ್ಮಚಾರಿಯಂತೆ ಅಂದರೆ ಉಣದೆ ಉಡದೆ ಭೋಗಿಸದೆ ಇದ್ದರೂ ಕೂಡ ಸದಾ ಸಂತೃಪ್ತನಾಗಿಯೇ ಇರಬೇಕೆಂದು ಇದರ ಭಾವ ಅಂದಾಗ ಸಕಲ ಸಂದೇಹಗಳು ಹೋಗಿ ಎಲ್ಲ ಕಡೆಗೂ ಶಿವಸ್ವರೂಪದ ಅನುಭವಬರುವದು. ಆಗಮಾತ್ರ ಶರಣನೆಂದು ಹೇಳಬೇಕೇಹೊರತು ಉಳಿದ ಸೋಗುಗಾರರಿಗೆ ಶರಣರೇದೆನಬಾರದೆಂದು ಅಪ್ಪಣ್ಣನು ನಿಷ್ಠುರವಾಗಿ ಹೇಳಿದ್ದಾನೆ. ಅದನ್ನು ಅವನ ವಚನದಲ್ಲಿ ನೋಡಿರಿ— "ಶರಣು ಶರಣೆಂದು ನುಡಿದಾಡುವರು ಶರಣಸ್ಥಲವೆಂತಿಪ್ಪುದೆಂದರಿಯರು ಅನ್ನವನಿಕ್ಕಿದವರೆಲ್ಲ ಶರಣರೇ? ಹೊನ್ನ ಕೊಟ್ಟವರೆಲ್ಲ ಶರಣರೇ? ಹೆಣ್ಣು ಹೊನ್ನು ಮಣ್ಣು ಕೊಟ್ಟವರೆಲ್ಲ ಶರಣರೇ? ಅಲ್ಲ, ಅಲ್ಲ. ಅದಕ್ಕೆ ಪುಣ್ಯದ ಫಲ ಉಂಟು. ಅದಂತಿರಲಿ ಶರಣನಾದಡೆ ತನ್ನ ಮರಣ ಬಾಧೆಯಗೆಲ್ಲಬೇಕು. ಮರಣಬಾಧೆಯ ಗೆದ್ದ ಶರಣರ ಅನುವೇ ಅಂಗ, ಮನವೇ ಸುಸಂಗ ಅವರು ಹಿಡಿದ

ಧನವೇ ಪದಾರ್ಥ, ಇದೀಗ ನಮ್ಮ ಮುನ್ನಿನ ಶರಣರ ನಡೆ ನುಡಿ ಮಾಟ ಕೂಟ ಇದನರಿಯದೆ ಮನೆಮನೆಗೆ ಶರಣರು. ತನತನಗೆ ಶರಣ ರೆಂದು ನುಡಿದಾಡುವ ಈ ಬಿನುಗರ ನುಡಿಯು ಮೆಚ್ಚುವನೆ ನಮ್ಮ ಬಸವಪ್ರಿಯ ಕೂಡಲಚನ್ನ ಬಸವಣ್ಣ."

ಈಪ್ರಕಾರ ಅಪ್ಪಣ್ಣನು ಶರಣರ ಮಹಿಮೆಯನ್ನು ಅದರ ಅರ್ಥ ವನ್ನು ಹೇಳಿದ್ದು ನೋಡಿದರೆ ಅವನು ನಿಜವಾದ ಶರಣನಾಗಿದ್ದನೆಂದು ಹೇಳಲಿಕ್ಕೆ ಸಂದೇಹವಿಲ್ಲ. ಆಗ ಎಲ್ಲರೂ ಶರಣರು ಶರಣರೆಂದು ಕುಣಿ ದಾಡುತ್ತ ನಡೆದಿದ್ದರು. ಇದನ್ನು ಕಂಡೇ ಅಪ್ಪಣ್ಣನು ಹೀಗೆ ಹೇಳಿರ ಬೇಕೆಂದು ಅನಿಸುವದು. ಅಪ್ಪಣ್ಣನೂ ಕೂಡ ಬಸವಣ್ಣನಂತೆ—

"ನ್ಯಾಯನಿಷ್ಠುರ ದಾಕ್ಷಿಣ್ಯಪರನಾನಲ್ಲ, ಲೋಕ ವಿರೋಧಿ ಶರಣನಾರಿಗಂಜುವವನಲ್ಲ. ಕೂಡಲಸಂಗಮದೇವರ ರಾಜತೇಜ ದಲ್ಲಿಪ್ಪನಾಗಿ''

ಎಂಬಂತೆ ಇದ್ದನೆಂದು ಅವನ ಈ ವಚನಗಳಿಂದ ಸಹಜ ಅನಿ ಸುವದು. ಹೀಗೆ ಇರುವದೂ ಸಹ ಸಹಜ ಸ್ವಾಭಾವಿಕವೆಂದು ಅನಿಸು ವದು. ಯಾಕಂದರೆ ಅಪ್ಪಣ್ಣನು ಬಸವನ ಅತ್ಯಂತ ಏಕನಿಷ್ಠ ಸೇವ ಕನೂ ಆಪ್ತಮಿತ್ರನೂ ಸಲಹೆಸಲ್ಲಾಗಾರನೂ ಸ್ವಾಮಿಭಕ್ತನೂ ಅಪ್ತ ಕಾರ್ಯದರ್ಶಿಯೂ ಆಗಿದ್ದನು. ಅದಕ್ಕಂತೆ ಬಸವನ ನಡೆ ನುಡಿ ಗುಣ ಶೀಲಗಳು ಅಪ್ಪಣ್ಣನಲ್ಲಿ ಸಹಜವಾಗಿ ಬಂದಿದ್ದವು. ಬಸವನ ನ್ಯಾಯ ನಿಷ್ಠುರತೆ, ಸತ್ಯ, ನಿರ್ಭೀತತನ, ನಿರ್ದಾಕ್ಷಿಣ್ಯವೃತ್ತಿ ಮೊದಲಾದವು ಅಪ್ಪಣ್ಣನಲ್ಲಿ ಸಹ ನೆಲಸಿದ್ದವೆಂದು ಹೊಳೆಯುವದು. ಅಪ್ಪಣ್ಣನು ಬಸವನನ್ನು ಸದಾ ನೆರಳಿನಂತೆ ಬೆಂಬತ್ತಿದ್ದನು. ಬಸವನ ಸುಖ ದುಃಖಗಳಲ್ಲಿ ಲಾಭಹಾನಿಗಳಲ್ಲಿ ಯೋಗಕ್ಷೇಮಗಳಲ್ಲಿ ಜಯಾಪಜಯ ಮೊದಲಾದವುಗಳಲ್ಲಿ ಅಪ್ಪಣ್ಣನು ಸಮಭಾಗಿಯಾಗಿದ್ದನು. ಅದಕ್ಕಂತೇ ಬಸವನು ಅಪ್ಪ+ಅಣ್ಣ ಎಂದು ಅನ್ವರ್ಥಕನಾಮದಿಂದ ಅವನಿಗೆ ಕರೆ ದಂತೆ ತೋರುವದು. ಇಂಥ ಶರಣರ ಚರಿತೆಯನ್ನು ಅರಿಯುವದು ಬರೆಯುವದು ಸುಲಭ ಕೆಲಸವಲ್ಲ. ಬರೆಯುವವರಿಗೂ ಸಮ್ಯಕ್ ದೃಷ್ಟಿ ಅವಶ್ಯಬೇಕು. ಇದಿಲ್ಲದಿದ್ದವರಿಗೆ ಅಕ್ಕನು ಹಾಡಿಕೊಂಡಂತೆ ಶರಣರ ಚಾರಿತ್ರ್ಯ ಮರುಳಾಗಿ ಕಾಣುವವು.

"ಪುರುಷರ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿಹುದು. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿಹುದು. ಲೋಕವೆಂಬ ಮಾಯೆಗೆ ಶಿವಶರಣರ ಚರಿತ್ರ ಮರುಳಾಗಿ ತೋರಿಹುದು. ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯೂ ಇಲ್ಲ, ಮರಹೂ ಇಲ್ಲ, ಅಭಿಮಾನವೂ ಇಲ್ಲ."

ಎಂದು ಹೇಳಿದ ಪ್ರಕಾರ ವ್ಯಾವಹಾರಿಕ ವಿಷಯಲಂಪಟದ ಐಹಿಕ ಜೀವಿಗಳಿಗೆ ಶರಣರೆಲ್ಲರೂ ಮರುಳರಂತೆ ತೋರುವರು. ಯಾಕಂದರೆ ಶರಣರು ಇಹದಲ್ಲಿಯೇ ಪರದಂತೆ ಜೀವನವನ್ನು ಸಾಗಿಸುವರು. ಇವರಿಗೆ ಅವರದೆಲ್ಲವೂ ಹುಚ್ಚರ ಆಸ್ಪತ್ರೆಯಲ್ಲಿಯ ಹುಚ್ಚರ ಜೀವನದಂತೆ ಅನಿಸುವದು. ಅದಕ್ಕೆ ಅಪ್ಪಣ್ಣನವರ ಜೀವನವನ್ನು ಅರಿಯಬೇಕೆನ್ನುವವರು ಮೊದಲು ಮಾಯಾಪರದೆಯನ್ನು ತಮ್ಮ ದೃಷ್ಟಿಯಿಂದ ಸರಿಸಿ ನೋಡಬೇಕು. ಅಂದರೆ ಮಾತ್ರ ಅಪ್ಪಣ್ಣನ ಜೀವನ ಬಹು ಒಳ್ಳೇದೆಂದು ಅನಿಸುವದು. ಅರ್ಥಾತ್ ಶರಣ ಅಪ್ಪಣ್ಣನನ್ನು ಅರಿಯಬೇಕಾದರೆ ಶರಣರೇಬೇಕು. ಅವರಿಗೆ ಇದೆಲ್ಲ ಸಾಧ್ಯ ಶಕ್ಯವೆಂದು ಹೇಳಬಹುದು. ಆದರೂ ನಾನು ತಿಳಿದಷ್ಟನ್ನು ಈಗ ಬರೆಯುವೆನು.

೧೨ನೇ ಶತಮಾನದ ಪೂರ್ವದಲ್ಲಿ ಉದ್ಯೋಗಗಳಲ್ಲಿ ಮೇಲು ಕೀಳೆಂದು ಬಗೆದು ಉಚ್ಚ ನೀಚ ಜಾತಿಗಳನ್ನು ಕಲ್ಪಿಸಿ ಮೇಲಿನ ಜಾತಿಯವರು ಕೆಳಗಿನ ಜಾತಿಯವರನ್ನು ಸದಾ ಒಂದಿಲ್ಲೊಂದು ರೀತಿಯಿಂದ ತುಳಿದು ಅವರ ಮೇಲೆ ದಬ್ಬಾಳಿಕೆ ನಡಿಸಿದ್ದರು. ಅವರ ಕೂಡ ನೀರ ಬಳಕೆ ಇರಲಿಲ್ಲ. ಏಕ ಪಂಕ್ತಿಯಲ್ಲಿ ಸಹ ಭೋಜನವಿರಲಿಲ್ಲ. ಲಗ್ನವೆಂದೂ ಅವರಲ್ಲಿ ಆಗುತ್ತಿರಲಿಲ್ಲ. ಅವರ ಮುಖ ನೋಡಲು ಹೇಸುತ್ತಿದ್ದರು. ಹೀನರೆಂದು ಬಗೆದು ಕಾಡುತ್ತಿದ್ದರು. ಹೀಗಾಗಿ ಅನೇಕ ಜಾತಿವಿಜಾತಿಗಳಾಗಿ ಸದಾ ಜಗಳ ಭೇದಗಳಾಗಿ ಬಹುವಾಗಿ ಕೀಳ ಜಾತಿಗಳನ್ನು ಯಾರೂ ಕೇಳುತ್ತಿರಲಿಲ್ಲ. ಅವರಿಗೆ ಯಾತರಲ್ಲಿಯೂ ಸ್ಥಾನಮಾನಗಳಿರಲಿಲ್ಲ. ಈ ಸಮಯದಲ್ಲಿ ಬಸವನ ಅವತಾರವಾಯಿತು. ಆಗ ಬಸವನೊಬ್ಬನೇ ಅವತರಿಸದೆ ಸಕಲ ಜಾತಿಗಳಲ್ಲಿಯೂ ಕೂಡ ಅಂದರೆ ಬೇರೆ ಬೇರೆ ಉದ್ಯೋಗದವರಲ್ಲಿ ಸಹ ಅಸಂಖ್ಯ ಶರಣರು ಉದಿಸಿದರು. ಅವರಲ್ಲಿ ಹಡಪಿಗರ ಕಾಯಕದವರಲ್ಲಿ ಅಪ್ಪಣ್ಣನು

ಜನಿಸಿದನು. ಅಲ್ಲದೆ ರೇಚಣ್ಣನು ಸಹ ಜನಿಸಿದನು. ಮಂಗಳವಾಡದಲ್ಲಿ ಶುಭಸಮಯದಲ್ಲಿ ಪರಮಶಿವಭಕ್ತರಾದ ತಾಯಿತಂದೆಗಳ ಉದರದಿಂದ ಅಪ್ಪಣ್ಣನೆಂಬ ಶಿಶು ಜನಿಸಿತು. ಅವನು ಬೆಳೆದು ದೊಡ್ಡವನಾಗಹತ್ತಿದನು. ಸಾಮಾನ್ಯ ಕೂಸಿನಂತೆ ಆಟ ಊಟ ನೋಟ ಕೂಟಗಳಲ್ಲಿ ಕಾಲಕಳೆಯದೆ ಶಿವಧ್ಯಾನ ಶಿವಪೂಜೆ ಶಿವಜಪ ಮೊದಲಾದವುಗಳಲ್ಲೇ ಸದಾ ಕಾಲಕಳೆಯುವದು, ಊಟದ ಪರಿವೆ ಇಲ್ಲದೆ ಏಕಾಂತದಲ್ಲಿ ಸದಾ ಕೂಸು ಕೂಸು ಕೂಡ್ರುವದು, ಮೌನ ಧ್ಯಾನ ಜಪಗಳನ್ನು ಸದಾ ಮಾಡುವದು, ಯಾವ ಐಹಿಕ ವಸ್ತುವಷವೆಗಳಲ್ಲಿ ಕೂಸು ಎಂದೂ ಮನಸ್ಸನ್ನು ಹಾಕುತ್ತಿರಲಿಲ್ಲ. ಶಾಲೆಯನ್ನು ಓದಬರಹದ ಪೂರ್ತೇ ಮಾತ್ರ ಕಲಿತುಕೊಂಡು ಮುಂದೆ ತನ್ನ ತಂದೆಯ ಕಾಯಕವಾದ ಹಡಪಿಗತನವನ್ನೇ ನಿತ್ಯ ಸತ್ಯ ಶುದ್ಧವಾಗಿ ಮಾಡಹತ್ತಿದನು. ಕಾಯಕದಲ್ಲಿ ನಿರತನಾದಾಗ ಸದಾ ಶಿವಮಂತ್ರ ಜಪವನ್ನು ಮನಸ್ಸಿನಲ್ಲಿ ನಡಿಸುತ್ತಿದ್ದನು. ಹೀಗೆ ಮಂಗಳವಾಡದಲ್ಲಿ ಒಳ್ಳೇ ಗುಣವಂತ ಸುಶೀಲ ಸಂಪನ್ನನೆಂದು ಖ್ಯಾತಿಪಡೆದನು.

ಆಗ ಮಂಗಳವಾಡದಲ್ಲಿ ಜೈನರ ಅರಸನಿದ್ದನು. ಈ ಅರಸನಿಗೆ ನಿರ್ವಾಣ ಸನ್ಯಾಸಿಗಳೆಂಬ ರಾಜಗುರುಗಳಿದ್ದರು. ಲಿಂಗಜಂಗಮರಲ್ಲದೆ ಇನ್ನೊಬ್ಬರಿಗೆ ತನ್ನ ಶಿರವನ್ನೇ ಬಾಗಿಸದ ಕಣ್ಣೆತ್ತಿ ಸಹ ನೋಡದ ಈ ಅಪ್ಪಣ್ಣಗಳನ್ನು ಕಂಡು ಸೈರಿಸದೆ ಮತ್ಸರವನ್ನು ತಾಳಿ ತಾವು ಕಷ್ಟಪಟ್ಟು ಸಂಪಾದಿಸಿದ ಕಾಕು ಪೋಕು ವಿದ್ಯೆಗಳಿಂದ ಕೂಡಿದ ಕುಹಕ ಮಂತ್ರಗಳನ್ನು ಅಪ್ಪಣ್ಣಗಳ ಮೇಲೆ ಪ್ರಯೋಗಿಸಿದರು. ಅವರು ತಮ್ಮ ಹೊಟ್ಟೆಯುರಿಯಿಂದ ತನ್ನ ಮೇಲೆ ಪ್ರಯೋಗ ಮಾಡಿದ ಮಂತ್ರಗಳ ನಿಜವನ್ನರಿತ ಶಿವಶರಣರು ಮನದಲ್ಲಿ ಮಹಾಲಿಂಗವನ್ನು ನೆನೆದು ತನ್ನ ಗುರುಗಳನ್ನು ಧ್ಯಾನಿಸಿ ಮಂತ್ರಗಳೆಲ್ಲಕ್ಕೂ ರಾಜನೆಂದೆನಿಸಿದ ಮತ್ತು ಸಕಲ ಅನಿಷ್ಟಗಳೆಂಬ ಪಾಪಗಳನ್ನು ಸುಟ್ಟು ಬೂದಿಯನ್ನಾಗಿ ಮಾಡುವ ಪಂಚಾಕ್ಷರ ಮಂತ್ರವನ್ನು ಅವರ ಮೇಲೆ ಪ್ರಯೋಗ ಮಾಡಿದರು. ಪಾಪಿಗಳ ಸಮೂಹಕ್ಕೆ ಪ್ರಳಯಾಗ್ನಿ ಸ್ವರೂಪವಾದ ಆ ಪಂಚಾಕ್ಷರ ಮಂತ್ರದಕ್ತಿಯು ಆ ನಿರ್ವಾಣ ಸಂನ್ಯಾಸಿಗಳನ್ನು ಎಳೆದು ತಂದು ಅಪ್ಪಣ್ಣಗಳ ಮುಂದೆ ಕಲ್ಲಿನ ಪ್ರತಿಮೆಗಳಂತೆ ಕಣ್ಣಿದ್ದರೂ

ನೋಡದೆ, ಬಾಯಿದ್ದರೂ ಮಾತಾಡದೆ ಕೈ ಕಾಲು ಮೊದಲಾದ ಅವಯವಗಳನ್ನು ಅಲುಗಾಡಿಸದಂತೆ ನಿಶ್ಚೇತನರನ್ನಾಗಿ ಮಾಡಿ ನಿಲ್ಲಿಸಿತು. ಈ ವಿಷಯವನ್ನು ತಿಳಿದ ಮಂಗಳವಾಡದ ಮಹರಾಜನು ತನ್ನ ಗುರುಗಳಿಗಾದ ಪರಿಸ್ಥಿತಿಯನ್ನು ನೆನೆದು ಅಪ್ಪಣ್ಣಗಳಲ್ಲಿಗೆ ಬಂದು ಈ ರೀತಿಯಾಗಿ ಸ್ತೋತ್ರ ಮಾಡಿದನು.

ಅರಿಯದಜ್ಞಾನಿಗಳ್ನಿಮ್ಮ ಶ್ರೀ ಚರಣಾರವಿಂದ ಮಹಿಮೆಯ—
ನೆತ್ತ ಬಲ್ಲರೇ । ದುರುಳವಗುಣಶತವ ನೋಡದೆ ದಯಾಂಬು
ಧಿಯೊಳಾಳಿಸು ಮಹಾಮಹಿಮನೆ ॥ ಅರಿಯದವರರಿಯುವರೇ
ಪರಮಾತ್ಮರೂಪ ನಿನ್ನರವೇನ ಬಲ್ಲರಿ ಪಾಮರರ್ ಕರುಣಿಸೆಂದೆ
ರಗಲ್ಕೆ । ಕರುಣದಿಂದವರ ಭಯಕರಾಂಬುಜವನವರ ।
ಮಂರಯೊಳಗಿಡಲು ಮುಕ್ಕೊಂಡು । ಸಂತೋಷ ರಸಮಂಡ
ಲಿದು ಕಂಡೆವು । ಕಳಾನಿಧಿಯೇ ನಿನ್ನ ಹಸ್ತಾಂ। ಭೋಜ
ಸ್ಪರ್ಶದಿಂ ಹರ್ಷೋದಯು ॥

ಈ ಪ್ರಕಾರ ರಾಜನು ಅನಂತ ರೀತಿಯಾಗಿ ಶಿವಶರಣರ ಸ್ತೋತ್ರವನ್ನು ಮಾಡಲಾಗಿ ಆತನಿಗೆ ಕರುಣೆ ಉದ್ಭವಿಸಿ ತಮ್ಮ ವರದ ಹಸ್ತವನ್ನು ಆ ನಿರ್ವಾಣ ಸಂನ್ಯಾಸಿಗಳ ತಲೆಯ ಮೇಲಿಟ್ಟ ತಕ್ಷಣವೇ ಅವರ ತಾಮಸ ಅಹಂಕಾರದಿಂದ ಬೆಳೆದು ಬಂದ ಅಜ್ಞಾನವೆಲ್ಲ ಮಾಯವಾಗಿ ಒಳ್ಳೇ ದಿವ್ಯ ಜ್ಞಾನಿಗಳಾಗಿ ಅಪ್ಪಣ್ಣಗಳನ್ನು ಅನೇಕ ರೀತಿಯಾಗಿ ಸ್ತೋತ್ರ ಮಾಡುವಂತವರಾಗಿದ್ದಾರೆ. ಇದನ್ನು ಕಂಡ ರಾಜನು ತನ್ನ ಗುರುಗಳನ್ನು ಕುರಿತು ಇಂಥಾ ಮಹಾತ್ಮರಿವರೆಂದರಿಯದೆ ರಾಜಗುರುಗಳಾದ ತಾವು ಅಲ್ಪ ಬುದ್ಧಿಗೆ ಮನಸೆಳಿಸುವದು ಯೋಗ್ಯವೆ ? ಮಹದೀಯರಾದವರು ನೋಡುವವರ ದೃಷ್ಟಿಯಲ್ಲಿ ನರದೇಹಿಗಳಾಗಿ ಕಂಡರೂ ಅವರು ಮನುಷ್ಯ ಮಾತ್ರರಲ್ಲ, ಅವರು ದೇವತಾ ಸ್ವರೂಪಿಗಳು. ಸಾಕ್ಷಾತ್ ಪರಮಾತ್ಮನೇ ಈ ರೂಪದಿಂದ ಬಂದು ನಮ್ಮೆಲ್ಲರನ್ನು ಪರೀಕ್ಷಿಸಿ ನಮ್ಮನ್ನು ಉದ್ಧಾರ ಮಾಡಿದನೆಂದು ನವರತ್ನ ನಿಮಿರ್ತವಾದ ಸುವರ್ಣ ಕಿರೀಟದಿಂದ ಶೋಭಾಯಮಾನವಾಗಿ ಬೆಳಗುವ ತನ್ನ ಶಿರವನ್ನು ಶಿವಶರಣರಾದ ಅಪ್ಪಣ್ಣಗಳ ಪವಿತ್ರ ಪಾದಾರವಿಂದಗಳ ಮೇಲಿಟ್ಟು ಅವರ ಆಶೀರ್ವಾದಗಳೆಂಬ ಅಮೃತ ವಚನಗಳಿಂದ ಪವಿತ್ರ ಮಾನವನಾಗಿ ಅವರ ಕೀರ್ತಿಗಳನ್ನು ಹೊಗಳುತ್ತ

ಯಉಲ್ಲಾಸುಕ ಜನಗಳೊಂದಿಗೆ ಅರಮನೆಯನ್ನು ಸೇರಿ ಅಪ್ಪಣ್ಣಗಳಲ್ಲಿ ಅನನ್ಯ ಭಕ್ತಿಯಿಂದ ನಡೆಯುವಂಥವನಾದನು. ಈ ಪ್ರಕಾರ ಕೆಲವು ದಿವಸಗಳ ವರೆಗೂ ಅಪ್ಪಣ್ಣಗಳು ಮಂಗಳವಾಡದಲ್ಲಿಯಿದ್ದು ತಮ್ಮ ಮಹಿಮೆಯಿಂದ ಅನಂತ ಪವಾಡಗಳನ್ನು ಮೆರೆಸಿ ಇತ್ತ ಕಲ್ಯಾಣದಲ್ಲಿ ಬಸವೇಶ್ವರನ ಮಹಿಮಾ ಪ್ರಕಾಶವನ್ನು ಕೇಳಿ ಕಲ್ಯಾಣಕ್ಕೆ ನಡೆ ತಂದು ಬಸವಾದಿ ಗಣಕುಲಕೆ ವಂದನೆಗೈದು ಅವರ ಕೃಪಾಶೀರ್ವಾದವನ್ನು ಪಡೆದು ಶರಣರ ಉನ್ನತಿಯ ಮಾರ್ಗವನ್ನು ಸಾಧಿಸುವ ಹಡಪದ ಕಾಯಕವನ್ನು ಕೈಕೊಂಡು ಹಡಪದ ಅಪ್ಪಣ್ಣನೆಂಬ ಅಭಿದಾನದಿಂದ ಶರಣಗುಣಮಣಿಯೆನಿಸಿ ಬಸವಣ್ಣನವರ ಅನುಮತಿಯ ಪ್ರಕಾರ ಕಲ್ಯಾಣದಲ್ಲಿ ಕಲ್ಯಾಣದ ಮಾರ್ಗವೇನೆಂಬುದನ್ನು ತನ್ನ ವಚನಗಳ ಮೂಲಕ ಬೆಳಗಹತ್ತಿದನು. ಹೀಗಿರಲು ಒಂದಾನೊಂದು ದಿವಸ ಬಸವಣ್ಣನವರ ಮುಖಕ್ಷೌರವನ್ನು ಮಾಡುತ್ತಿರಲು ೧೨ ಸಾವಿರ ವಿಟಜಂಗಮರು ಬಸವಣ್ಣನಲ್ಲಿಗೆ ಬಂದು ಬಸವರಾಜ ನಾಳೆ ಸೋಮವಾರ ತ್ರಿಪುರಾಂಚಕೇಶ್ವರ ಯಾತ್ರೆಯಿದೆ. ಆದದ್ದರಿಂದ ೩ ತಾಸು ಹೊತ್ತೇರುವದರೊಳಗಾಗಿ ನಮಗೆ ಈತನಿಂದಲೇ ಕ್ಷೌರವಾಗಬೇಕೆಂದು ಹೇಳಿದರು. ಆಗ ಬಸವಣ್ಣನವರು ನಿಮ್ಮಿಷ್ಟದಂತೆಯೇ ಆಗಲಿ ಎಂದು ಅಪ್ಪಗಳಿಗೆ ನಾಳೆ ೩ ತಾಸು ಹೊತ್ತೇರುವದರೊಳಗಾಗಿ ಇವರ ಕಾರ್ಯವನ್ನು ಮುಗಿಸೆಂದು ಹೇಳಿದರು. ಅಷ್ಟರಲ್ಲಿ ೧೨ ಸಾವಿರ ನಿರಾಭಾರಿ ದೇಶಿಕರು ನಾಳೆ ಅದೇ ವೇಳೆಗೆ ನಮ್ಮಗಳ ಮಠಕ್ಕೆ ಕಳಿಸಿ ಕ್ಷೌರವನ್ನು ಮಾಡಿಸಬೇಕೆಂದು ಹೇಳಿದರು. ನಿಮ್ಮದೂ ಸಹ ಆಗಲಿ ಮಾಹೇಶರೆಂದೆನುವಷ್ಟರಲ್ಲಿ ಲಕ್ಷಚಿದ್ಘನ ಜಂಗಮವು ನಮ್ಮದಾಗಲಿ; ಅದೇ ಅವಸರದಲ್ಲಿ ಕ್ಷೌರವೆಂದು ನುಡಿದರು. ಈ ರೀತಿಯಾಗಿ ಎಲ್ಲರೂ ಆಹಾಕಾರವನ್ನು ಮಾಡುತ್ತಿರಲು ಬಸವಣ್ಣನವರು ಇವರೆಲ್ಲರನ್ನು ಸಮಾಧಾನಗೊಳಿಸಿ ಅಪ್ಪಣ್ಣಗಳನ್ನು ನೋಡಿ ಅಪ್ಪಣ್ಣ ಶಿವನು ಕರುಣಿಸುವ ಪರೀಕ್ಷೆಯ ದಿನವು ಇಂದು ಬಂದಿದೆ. ಇದರಿಂದವನು ನೀನೆ ಬಲ್ಲಿಯಲ್ಲದೆ ನನಗೇನೂ ತಿಳಿಯದೆಂದು ಅಂದಿನ ಭಾರವೆಲ್ಲವನ್ನು ಬಸವಣ್ಣನವರು ಅಪ್ಪಣ್ಣಗಳ ಮೇಲೆಯೇ ಹಾಕಿದರು. ಆಗ ಅಪ್ಪಣ್ಣಗಳು ಬಸವಣ್ಣನವರಿಗೆ ವಂದಿಸಿ ನಾವು ಬಂದಿರುವದು ಆದಕ್ಕಾಗಿಯಲ್ಲವೆ ಜಂಗಮರ ಸೇವೆಯಲ್ಲದೆ ಇನ್ನೊಂದೆಣಿಸದ ನಮಗೆ ಶಿವನು ಕರುಣಿಸಿದ ವೇಳೆಯನ್ನು ನಿರರ್ಥಕ

ಮಾಡಿಕೊಳ್ಳುವದುಂಟೆ ? ಎಂದು ಬಂದಿರುವ ಗಣ ಸಮೂಹಕ್ಕೆಲ್ಲಾ ನಮಿಸಿ ನಾಳೆ ತಪ್ಪದೆ ನಿಮ್ಮ ನಿಮ್ಮ ಮಠಗಳಿಗೆ ಬರುತ್ತೇನೆಂದು ಹೇಳಿ ಇಂದು ನಿಮ್ಮ ನಿಮ್ಮ ಮಠಗಳಿಗೆ ಹೋಗಿರೆಂದು ಅವರನ್ನು ಕಳಹಿ ಅಪ್ಪಣ್ಣಗಳು ಬಸವಣ್ಣನವರಿಂದ ಅಪ್ಪಣೆ ಪಡೆದು ತಮ್ಮ ಕುಟೀರಕ್ಕೆ ಬಂದು ಶುಚಿರ್ಭೂತರಾಗಿ ಗುರುಲಿಂಗ ಜಂಗಮಾವಳಿಯ ತೀರ್ಥ ಪ್ರಸಾದವನ್ನು ಸವಿದು ಆ ರಾತ್ರಿಯೆಲ್ಲವನ್ನು ಶಿವಧ್ಯಾನ ಪೂಜಾದಿಗಳಲ್ಲಿ ಕಾಲ ಕಳೆದನು. ಆಗ ಶರಣರೆಲ್ಲರೂ ಅಪ್ಪಣ್ಣನನ್ನು ಮನ್ನಿಸಿ ಅವನಿಗೆ ಅಲ್ಲಿ ಯೋಗ್ಯ ಸ್ಥಾನವನ್ನು ಕೊಟ್ಟರು. ಕಲ್ಯಾಣ ದಲ್ಲಿಯೂ ಅಪ್ಪಣ್ಣನು ನಿತ್ಯ ಕಾಯಕವಾದ ಹಡಪಿಗತನವನ್ನೇ ಮಾಡು ತ್ತಲಿದ್ದನು.

ಈ ಪ್ರಕಾರ ಕೆಲವು ಕಾಲ ಗತಿಸಿದ ಬಳಿಕ ಅಪ್ಪಣ್ಣನೇ ಬಸವನ ಕ್ಷೌರವನ್ನು ಮಾಡುತ್ತಲಿದ್ದನು. ಬಸವಣ್ಣನು ಅಪ್ಪಣ್ಣನ ಕಾಯಕ ನಿಷ್ಠೆ ಅವನ ಭಕ್ತಿ ವಿರಕ್ತಿ ಸಚ್ಚರಿತ್ರೆಗಳನ್ನು ಕಂಡು ಅವನನ್ನು ತನ್ನ ಆಪ್ತ ಕಾರ್ಯದರ್ಶಿಯನ್ನಾಗಿ ಮಾಡಿಕೊಂಡನು. ಆದರೂ ನಿತ್ಯ ಕೆಲವು ವೇಳೆ ಹಡಪದ ಕಾಯಕವನ್ನು ಮಾಡುತ್ತಲೇ ಇದ್ದನು. ನಾಳೆ ನೀನು ಬಸವನ ಆಜ್ಞೆಯಂತೆ ಎಲ್ಲರ ಕ್ಷೌರವನ್ನು ಮುಗಿಸುವಂತೆ ಶಕ್ತಿಯನ್ನು ದಯಪಾಲಿಸೆಂದು ಬೇಡಿಕೊಂಡನು. ಮುಂಜಾನೆ ಎದ್ದು ಸ್ನಾನ ತೀರಿಸಿ ಕೊಂಡು ಲಿಂಗಪೂಜೆಯನ್ನು ಮುಗಿಸಿಕೊಂಡು ಸೂರ್ಯೋದಯಕ್ಕೆ ಸರಿಯಾಗಿ ಕಾರ್ಯಕ್ಕೆ ಅಣಿಯಾದನು. ಆಗ ವಿಶ್ವಭರಿತನಾದ, ವಿಶ್ವ ಧಾರನಾದ, ವಿಶ್ವವ್ಯಾಪಿಯಾದ ವಿಶ್ವೇಶ್ವರನನ್ನು ಧ್ಯಾನಿಸುತ್ತಿರಲಾಗಿ ಅಸಂಖ್ಯಾತ ಹಡಪದ ಅಪ್ಪಣ್ಣಗಳು ಉದ್ಭವಿಸಿದರು. ಹೀಗೆ ಸಕಲ ಜಂಗಮರ ಮನೆಯಲ್ಲಿ ಒಬ್ಬೊಬ್ಬ ಅಪ್ಪಣ್ಣನು ಕಾಣಿಸಿಕೊಂಡು ಆ ಜಂಗಮರ ಕ್ಷೌರವನ್ನು ಮಾಡಲಿಕ್ಕೆ ಹತ್ತಿದನು. ಹೀಗೆ ನಿಯಮಿತ ವೇಳೆಯೊಳಗಾಗಿ ಎಲ್ಲರ ಕ್ಷೌರವನ್ನು ಅಪ್ಪಣ್ಣನು ಮಾಡಿ ಮುಗಿಸಿದನು. ಇದನ್ನು ನೋಡಿ ಎಲ್ಲರಿಗೆ ಆಶ್ಚರ್ಯವಾಯಿತು ಆಗ ಸಕಲರು ಅಪ್ಪಣ್ಣನ ಸುತ್ತು ನೆರೆದು ಅವನನ್ನು ಕೊಂಡಾಡಹತ್ತಿದರು. ಆಗ ಈ ಸುವಾರ್ತೆ ಯನ್ನು ಕೇಳಿ ಬಸವರಸನು ಅಲ್ಲಿಗೆ ಬಂದು ಅಪ್ಪಣ್ಣನ ಪಾದಗಳಿಗೆ ನಮಿಸಿದನು. ಆಗ ಅಪ್ಪಣ್ಣನು ಭಯ ವಿನಯ ಭಕ್ತಿಯಿಂದ ಎದ್ದು ಬಸವಣ್ಣನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ತಾವು ಹೀಗೆ

ನನಗೆ ನಮಿಸುವದು ಸರಿಯಲ್ಲ ನಾನು ನಿಮ್ಮ ಸೇವಕನೆಂದು ಅಪ್ಪಣ್ಣನು ಭಯಭಕ್ತಿಯಿಂದ ನಯ ವಿನಯದಿಂದ ಕೈಜೋಡಿಸಿ ನಿಂತುಕೊಂಡು ಬೇಡಿಕೊಂಡನು —"ಇದೆಲ್ಲ ನನ್ನ ಮಹಿಮೆಯಲ್ಲ ಬಸವಣ್ಣ ತಂದೆಯೇ ಇದು ನಿಮ್ಮ ಮಹಿಮೆ; ನಾನು ನಿಮ್ಮ ಪಾದ ಸೇವಕನೆಂದನು.

ಆಗ ಅಣ್ಣನು- 'ಹೀಗೆ ಹೇಳುವದು ಶರಣರ ಶೀಲಕ್ಕೆ ಒಪ್ಪ ಲಿಕ್ಕೆ ಮಾತ್ರ ಸರಿ' ಎಂದು ಅಪ್ಪಣ್ಣನನ್ನು ಸಂತೈಸಿ ಅವನ ಮನೆಗೆ ಬಿಳ್ಕೊಟ್ಟನು. ಹೀಗೆ ಅಪ್ಪಣ್ಣನು ಕಲ್ಯಾಣದಲ್ಲಿ ಒಳ್ಳೇ ಮಹಿಮೆ ಯನ್ನು ತೋರಿದನು. ಇದರಿಂದ ಅಪ್ಪಣ್ಣನ ಜೀವನವು ಬಹು ಪವಿತ್ರ ಶುದ್ಧವೆಂದು ಸಹಜಗೊತ್ತಾಗುವದು.

ಅಪ್ಪಣ್ಣನು ಚನ್ನಮಲ್ಲೇಶ್ವರನನ್ನು ಗುರುವಾಗಿ ಮಾಡಿಕೊಂಡಿದ್ದನು. ಆದರೂ ಬಸವೇಶ್ವರನಲ್ಲಿ ಬಹು ಪೂಜ್ಯ ಬುದ್ಧಿಯನ್ನು ತಳೆದಿದ್ದನು. ಅವನನ್ನು ಬಿಟ್ಟು ಒಂದು ಗಳಿಗೆ ಸಹ ಅಗಲಿ ಇರುತ್ತಿದ್ದಿಲ್ಲ. ಬಸವೇಶ್ವರನ ಪ್ರತಿಯೊಂದು ಕೆಲಸಕ್ಕೆ ಅಪ್ಪಣ್ಣನೇ ಮೊದಲಿಗನಂತೆ ನಡಕೊಂಡು ಅವರ ಕಾರ್ಯಗಳನ್ನು ಬಹು ದಕ್ಷತೆ ವಹಿಸಿ ಭಯ ಭಕ್ತಿಯಿಂದ ಮಾಡುತ್ತಿದ್ದನು. ಬಸವೇಶ್ವರನಿಗೆ ವೀಳೆಯನ್ನು ತಯಾರಿಸಿಕೊಡುವನು. ಅಲ್ಲದೆ ಅವರ ಪಾದಹಸ್ತಗಳಿಗೆ ನೀರನ್ನು ಕೊಡುವನು. ಹೀಗೆ ಬಸವನ ಅನೇಕ ಕಾರ್ಯಗಳನ್ನು ಸದಾ ತಪ್ಪದೆ ಮಾಡುವನು.

ಲಿಂಗಮ್ಮನು ಅಪ್ಪಣ್ಣನ ಹೆಂಡತಿ. ಅವಳು ಹೆಸರಿಗೆ ತಕ್ಕಂತೆ ಲಿಂಗಮ್ಮನೆಂದರೆ ಲಿಂಗಕ್ಕೆ ತಾಯಿಯಂತಿದ್ದಳು. ಅಂದರೆ ಲಿಂಗದ ಜ್ಞಾನ ಅವಳಿಗೆ ಬಹು ಚನ್ನಾಗಿ ಆಗಿ ಅದರ ಅನುಭವ ಪೂರ್ಣವಾಗಿತ್ತು. ಇದನ್ನು ಅವಳ ವಚನಗಳಿಂದ ಚನ್ನಾಗಿ ತಿಳಿದುಕೊಳ್ಳಬಹುದು— "ಅಂತರಂಗ ಬಹಿರಂಗ ಶುದ್ಧವಿಲ್ಲದೆ ನುಡಿದರು ಸಂತೆಯ ಸೂಳೆಯರಂತೆ. ಅಂತರಂಗ ಬಹಿರಂಗವೆಂಬುದಿಲ್ಲ. ನಮ್ಮ ಶಿವಶರಣರ ಅಂತರಂಗವೆಲ್ಲ ಅರುಹಾಯಿತ್ತು. ಬಹಿರಂಗವೆಲ್ಲ ಲಿಂಗವಾಯಿತ್ತು. ಆ ಲಿಂಗದಲ್ಲಿ ನುಡಿದು, ಲಿಂಗದಲ್ಲಿ ನಡೆದು, ಲಿಂಗದಲ್ಲಿ ಮುಟ್ಟಿ, ಲಿಂಗದಲ್ಲಿ ವಾಸಿಸಿ ಲಿಂಗದಲ್ಲಿ ಕೇಳಿ ಲಿಂಗವಾಗಿ ನೋಡಿ, ಸರ್ವಾಂಗವು ಲಿಂಗವಾಗಿ ಆ ಲಿಂಗವ ನೋಡುವ ಕಂಗಳಲ್ಲಿ ಐಕ್ಯ ಕಂಡೆಯಾ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ." ಎಂದು ಸರ್ವಾಂಗ ಲಿಂಗಿಯಾಗುವ ರೀತಿ

ನೀತಿಗಳನ್ನು ಚನ್ನಾಗಿ ಹೇಳಿದ್ದಾಳೆ. ಮತ್ತೂ ಲಿಂಗಮ್ಮನು ಹೀಗೆ ನುಡಿಯುವಳು-"ಆಗದಾಗದು ಮರ್ತ್ಯದ ಮನುಜರಿಗೆ ಶಿವಸುಖ ಅದೆಂತೆಂದರೆ, ಕಾಳ ವಿಷಯದಲ್ಲಿ ಬಿದ್ದು ನುಡಿವುತ್ತ, ಮರವೆ ನಡೆವುತ್ತ, ಮರವೆ ಮುಟ್ಟುತ್ತ, ಮರವೆ ಕೇಳುತ್ತ, ಮರವೆ ನೋಡುತ್ತ, ಇಂತು ಮರಹಿನೊಳಿರ್ದು ಅರುಹ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ! ನಮ್ಮ ಶರಣರ ನಡೆ ಎಂತೆಂದರೆ ಐದು ಗುಣವನೆ ಅಳಿದು, ಐದು ಗುಣವನೆ ಹಿಡಿದು, ನಡೆವುತ್ತ ಲಿಂಗವಾಗಿ ನಡೆವರು, ಕೇಳುತ್ತ ಲಿಂಗವಾಗಿ ಕೇಳುವರು, ನೋಡುತ್ತ ಲಿಂಗವಾಗಿ ನೋಡುವರು, ಸರ್ವಾಂಗವು ಲಿಂಗವಾಗಿ ಅಂಗಲಿಂಗವೆಂಬ ಉಭಯವಳಿದು, ಮಂಗಳದ ಮಹಾ ಬೆಳಗಿನಲ್ಲಿ ಲಿಂಗವೇ ಗೂಡಾಗಿರ್ದ ಕಾರಣ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ" ಎಂದು ಲಿಂಗದ ನಡೆನುಡಿಗಳೆಲ್ಲ ಸರ್ವಾಂಗದಲ್ಲಿ ಅಳವಡಿಸಿಕೊಂಡು ವಿಷಯ ತ್ಯಾಗವನ್ನು ಬಹು ಚನ್ನಾಗಿ, ಸ್ಪಷ್ಟವಾಗಿ ಹೇಳಿದ್ದಾಳೆ. ಈ ಕಾರಣಕ್ಕಾಗಿ ಅವಳಿಗೆ ಲಿಂಗದ ಜ್ಞಾನ ಸಂಪೂರ್ಣ ಆಗಿ ಸರ್ವಾಂಗಲಿಂಗಿಯಾಗಿ ಸದಾ ಅದರ ಬೆಳಗಿನಲ್ಲಿ ಬೆಳಗುತ್ತಿದ್ದುದರಿಂದ ಲಿಂಗಮ್ಮನೆಂಬ ಹೆಸರು ಬಂದಿರಬೇಕೆಂದು ಅನಿಸುವದು. ಇವಳ ಗುರುವು ಸಹ ಚನ್ನಮಲ್ಲೇಶ್ವರನೇ ಇದ್ದನು. ಅದಕ್ಕಂತೇ ಸತಿ ಪತಿಗಳಿಬ್ಬರೂ ಪಾರಮಾರ್ಥ ಸಂಸಾರವನ್ನು ಈ ಇಹದಲ್ಲಿಯೇ ಸಾಗಿಸುತ್ತಿದ್ದರು. ಅದು ಅವರಿಗೆ ಬಲು ಸರಳ ಸುಲಭವಾಗಿತ್ತು. "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ, ಸತಿ ಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷವ ಬೆರಸಿದಂತೆ ಕಾಣಾ ರಾಮನಾಥ" ಎಂದು ಹೇಳಿದಂತೆ ಅಪ್ಪಣ್ಣ ಲಿಂಗಮ್ಮನವರ ಭಕ್ತಿಪರ ಸಂಸಾರಗಳಿದ್ದವು. ಇವರು ಬಹು ಆನಂದದಲ್ಲಿ ಸದಾ ನಿತ್ಯ ಸುಖದಲ್ಲಿಯೇ ಇದ್ದರೆಂದು ಇವರು ಹಾಡಿಕೊಂಡ ವಚನಗಳಿಂದ ಸಹಜ ಗೊತ್ತಾಗುವದು. ಲಿಂಗಮ್ಮನ ವಚನಗಳು ಬಹಳ ಮಿಗಿಲಾದವುಗಳಿರುವವು. ಅನುಭವಪೂರ್ಣವಾದ ವಚನಗಳಿರುವವು. ಪ್ರಾಣಲಿಂಗದ ಆಚೆಗಿರುವ ಭಾವಲಿಂಗ ಅಥವಾ ನಿರವಯಸ್ಥಿತಿ ಅಥವಾ ಬೆಳಗು ಇವುಗಳನ್ನು ಹೇಗೆ ಸಾಧಿಸಬೇಕೆಂದು ವಚನದಲ್ಲಿ ಚನ್ನಾಗಿ ವಿವರಿಸಿದ್ದಾಳೆ. "ಶರಣರು ಸುರಲೋಕವನ್ನು, ನರಲೋಕವನ್ನು ತೃಣವೆಂದು ಭಾವಿಸಿ ಭವವ ದಾಂಟಿ ತಮ್ಮ ತಮ್ಮ ಹುಟ್ಟನರಿದು ಮಹಾಬೆಳಗನೆ ಕೂಡಿ

ಬೆಳಗಿನಲ್ಲಿ ಬಯಲಾದರಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ" ಮತ್ತೂ ಇನ್ನೊಂದು ವಚನ ನೋಡಿರಿ— ಸಾಯದ ಮುನ್ನ ಸತ್ತ ಹಾಗೆ ಇರುವರು. ಆರಿಗೆ ವಶವಲ್ಲ ನಮ್ಮ ಶರಣರಿಗಲ್ಲದೆ. ಅದು ಹೇಗಂದರೆ, ಹಗಲಿರುಳೆಂಬ ಹಂಬಲ ಹರಿದರು, ಜಗದಾಟವ ಮರೆದರು, ಆಡದ ಲೀಲೆಯನೆ ಆಡಿದರು, ಆರು ಕಾಣದ ಘಟನೆಯನೆ ಕಂಡರು. ಮಹಾ ಬೆಳಗಿನಲಿ ಲೋಲಾಡಿ ಸುಖಿಯಾದೆನೈಯ್ಯ ನಮ್ಮ ಅಪ್ಪಣ್ಣ ಪ್ರಿಯ ಚನ್ನ ಬಸವಣ್ಣ ಎಂದು ಹೇಳಿದ್ದನ್ನು ವಿಚಾರಿಸಿದರೆ ಲಿಂಗಮ್ಮನ ಭಾವಲಿಂಗದ ಜ್ಞಾನ ಎಷ್ಟಿತ್ತೆಂದು ಹೊಳೆಯುವದು. ಇವಳೂ ಕೂಡ ಗಂಡನಂತೆ ನ್ಯಾಯ ನಿಷ್ಠುರಿ ಸತ್ಯದಂಥಳೇ ಆಗಿದ್ದಳೆಂದು ಹೇಳಬಹುದು. ಅದನ್ನು ಕೆಳಗಿನ ವಚನದಲ್ಲಿ ನೋಡಬಹುದು.— "ನರರ ಬೇಡೆನು ಸುರರಹಾಡೆನು. ಕರಣಂಗಳ ಹರಿಯ ಬಿಡೆನು. ಕಾಮನ ಬಲಿಗೆ ಸಿಲ್ಕೆನು ಮರವೆಗೊಳಗಾದೆನು. ಪ್ರಣವ ಪಂಚಾಕ್ಷರಿಹುನೆ ಜಪಿಸಿಹೆನೆಂದು ತನುವ ಮರೆದು ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ." ಹೀಗೆ ಅನೇಕ ವಚನಗಳನ್ನು ಹಾಡಿದ್ದಾಳೆ. ಕುಂಡಲಿನಿ ಜಾಗ್ರತವಾದುದರ ಬಗ್ಗೆಯೂ ವಚನಗಳನ್ನು ಹೇಳಿದ್ದಾಳೆ.— ಆಧಾರ ಬಲಿಯ, ಬೇಗ ಉರಿಯಿತ್ತು, ಆ ಕಿಚ್ಚು ಆವರಿಸಿ ಊರ್ಧ್ವಕ್ಕೇರಿತ್ತು. ಸಾಸಿರದ ದಳ ಅಮೃತ ಕೆಡಕಾಯಿತ್ತು ತೃಷೆಯಡಗಿತ್ತು ನಿದ್ರೆ ಅರತಿತ್ತು. ಅಂಗ ಗುಣವಳಿಯಿತ್ತು. ಲಿಂಗಗುಣನಿಂದಿತ್ತು. ಸಂಗಸುಖ ಹಿಂಗಿ ಅಂಗ ಲಿಂಗವೆಂಬ ಉಭಯವಳಿದು ಮಂಗಳ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ." ಇದರಲ್ಲಿ ಕುಂಡಲಿನಿ ಜಾಗ್ರತವಾಗಿ ಸಹಸ್ರಾರದಲ್ಲಿ ಸೇರಲು ಶರೀರದ ಮೇಲೆ ಏನೇನು ಪರಿಣಾಮಗಳಾಗುತ್ತವೆಂಬುದನ್ನು ಸಹ ತನ್ನ ಅನುಭವದೊಂದಿಗೆ ಹೇಳಿದ್ದಾಳೆ. ಹಸಿವೆ ತೃಷೆ ನಿದ್ರೆಗಳಲ್ಲಿ ಹೋಗುವವು. ಅಂಗ ಗುಣಗಳೆಲ್ಲ ತಾವೇ ಹೋಗಿ ಅದರಲ್ಲಿ ಲಿಂಗಗುಣಗಳು ಸಂಪೂರ್ಣ ಅಳವಡುವವೆಂದು ಹೇಳಿರುವಳು. ಅಂಗವೇ ಲಿಂಗ ಲಿಂಗವೇ ಅಂಗವಾಗಿ ಬಿಡುವವೆಂದು ತಿಳಿಸಿದ್ದಾಳೆ. ಹೀಗೆ ಲಿಂಗಮ್ಮನ ವಚನಗಳು ಬಹು ಶ್ರೇಷ್ಠ ತರಗತಿಯ ವಚನಗಳೆಂದು ಧಾರಾಳವಾಗಿ ಹೇಳಬಹುದು. ಇವಲ್ಲದೆ ಮುಂಡಿಗೆಯ ವಚನಗಳನ್ನು ಸಹ ಹಾಡಿದ್ದಾಳೆ. ಅವೆಲ್ಲ ಒಗಟಿನ ಸ್ವರೂಪದವೇ ಇರುವವು. ಅರ್ಥಪೂರ್ಣವಾದವುಗಳಿರುವವು.— ಒಂದು

ಹುತ್ತಕ್ಕೆ ಒಂಭತ್ತು ಬಾಗಿಲು ಇರುವವು. ಒಂದು ಸರ್ಪ ಒಂಭತ್ತು ಬಾಗಿಲಲ್ಲಿಯು ನೋಡುತಿಪ್ಪುದು. ಒಂಭತ್ತು ಬಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದನಿಕ್ಕಿ ಬಲಿಯಲು ತಿರುಗುವದಕ್ಕೆ ರಾವ ಕಾಣದೆ ಇರುವದಕ್ಕೆ ಇಂಬುಕಾಣದೆ ನಿಲುವದಕ್ಕೆ ಎಡೆಯು ಕಾಣದೆ ಉರಿ ಎದ್ದು ಊರ್ಧ್ವಕ್ಕೇರಲು ಶರಧಿ ಬತ್ತಿತ್ತು ಅಲ್ಲಿದ್ದ ಖಗಮೃಗವೆಲ್ಲ ದಹನವಾದವು. ಸರೋವರವೆಲ್ಲ ಉರಿದುಹೋದವು. ಕತ್ತಲೆಹರಿಯಿತ್ತು. ಮುಂದೆ ದಿಟ್ಟಿಸಿ ನೋಡುವನ್ನಕ್ಕೆ ಇಟ್ಟೆಡೆಯ ಬಾಗಿಲು ಸಿಕ್ಕಿತ್ತು. ಆ ಇಟ್ಟೆಡೆಯ ಬಾಗಿಲಹೊಕ್ಕು ಪಶ್ಚಿಮದ ಕದವ ತೆಗೆದು ಒಟ್ಟಬಯಲಲ್ಲಿ ನಿಂದು ನಾನೆತ್ತ ಹೋದೆನೆಂದರಿಯನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ" ಇಂಥ ಅನೇಕ ಮುಂಡಿಗೆಯ ವಚನಗನ್ನು ಹಾಡಿದ್ದಾಳೆ. ಇದನ್ನು ನೋಡಲಾಗಿ ಲಿಂಗಮ್ಮನು ಮಹಾ ಅನುಭಾವಿ ಎಂದು ಕೈ ಎತ್ತಿ ಹೇಳಬಹುದು. ಆಕೆಯ ಜ್ಞಾನ ನಿಧಿ ಅಗಮ್ಯವಾಗಿತ್ತೆಂದು ಸಹಜ ಅನಿಸುವದು. ಇದ್ದರೆ ಇಂಥ ಹೆಂಡತಿ ಇರಬೇಕು ಅಂದರೆ ನಿಜಸುಖಕ್ಕೆಸಾರುವದು.

ಅಪ್ಪಣ್ಣನು ಬಸವಣ್ಣನ ಏಕನಿಷ್ಠ ಸೇವಕನಾಗಿದ್ದನು. ಅವನ ಆಜ್ಞೆಯುಂದರೆ ಸ್ವತಃ ಪರಮಾತ್ಮನ ಆಜ್ಞೆಯೆಂದೇ ತಿಳಿದು ಅಪ್ಪಣ್ಣನು ಬಸವನ ಆಪ್ತಕಾರ್ಯದರ್ಶಿಯೂ ಆಗಿದ್ದನು. ಪ್ರತಿಯೊಂದು ಕೆಲಸದಲ್ಲಿ ಬಸವನು ಅಪ್ಪಣ್ಣನ ಸಲಹೆಗಳನ್ನು ಕೇಳುತ್ತಿದ್ದನು. ಬಸವನಿದ್ದಲ್ಲಿ ಅಪ್ಪಣ್ಣ, ಅಪ್ಪಣ್ಣನಿದ್ದಲ್ಲಿ ಬಸವನು ಇರುತ್ತಿದ್ದನು. ಉದ್ಯೋಗದಿಂದ ಹಡಪಿಗನಾದರೂ ಅವನನ್ನು ಬಸವನು ತನ್ನ ಬಂಧುಬಾಂಧವನಂತೆ ಕಾಣುತ್ತಿದ್ದನು. ಯಾವತರದ ಭೇದವನ್ನೆಂದೂ ಮಾಡಲಿಲ್ಲ. ಬಸವನ ಪ್ರತಿಯೊಂದು ಕೆಲಸದಲ್ಲಿ ಅಪ್ಪಣ್ಣನು ಇರತಕ್ಕವನೇ ಸರಿ. ಲಿಂಗಾರ್ಚನೆಗೆ ಬಸವನು ಕುಳಿತಾಗ ಸಹ ಅಪ್ಪಣ್ಣನೇ ಆ ವೇಳೆಯಲ್ಲಿ ಒಳಗೆ ಹೋಗುವ ಅಧಿಕಾರವನ್ನು ಪಡೆದಿದ್ದನು. ಆದಕ್ಕಂತೇ ಒಮ್ಮೆ ಬಸವನು ಲಿಂಗಪೂಜೆಯಲ್ಲಿ ಕುಳಿತಾಗ ಅಪ್ಪಣ್ಣನು ಒಳಗೆ ಹೋಗಿ ಬಸವಣ್ಣನಿಗೆ ಬಿನ್ನವಿಸಿಕೊಳ್ಳುವನು—

ಅಪ್ಪಣ್ಣ— ದೇವ ದೇವ ಮಹಾಪ್ರಸಾದ ಕಂಗಳಲ್ಲಿ ಕರುಳಿಲ್ಲ. ಕಾಯದಲ್ಲಿ ಹೊರೆಇಲ್ಲ ನುಡಿಯಲ್ಲಿ ಕಡೆಇಲ್ಲ. ನಡೆಯಲ್ಲಿ ಗತಿಇಲ್ಲ. ಇದೆಂತಹ ಸುಳುಹು ಎಂದರಿಯೆ ಇದೆಂತಹ ನಿಲವೆಂದು ತಿಳಿಯಬಾರದು.

ಮರುಳಿಲ್ಲದ ಮರುಳು ಅರುವಿಲ್ಲದ ಅರಿವು ಬಸವಪ್ರಿಯ ಕೂಡಲ ಚನ್ನ ಸಂಗಯ್ಯನ ಬರವು ಕೌತುಕವಾಯಿತ್ತು ಚಿತ್ತೈಸಯ್ಯ ಸಂಗನಬಸವಣ್ಣಾ" ಹೀಗೆ ಎನ್ನುತ್ತ ಪ್ರಭುದೇವರು ಬಂದು ಮಹಾದ್ವಾರದಲ್ಲಿ ನಿಂತಿರುವ ದನ್ನು ತಿಳಿಸಿದನು.

ಬಸವಣ್ಣ— ಕಾಯದ ಕೈಯಲ್ಲಿ ಕರಸ್ಥಲ, ಪ್ರಾಣದ ಕೈಯಲ್ಲಿ ಜಂಗಮಸ್ಥಲ ಈ ಉಭಯ ಭಾವ ಶಿವಲಿಂಗಾರ್ಚನೆಯ ಪರಮಾ ನಂದ ಸುಖಸ್ಥಲ ಕಾಯ ಭಕ್ತ, ಪ್ರಾಣ ಜಂಗಮ. ಆವುದು ಘನ ವೆಂಬೆ ಆವುದು ಕಿರಿದೆಂಬೆ ಕೂಡಲಸಂಗನ ಶರಣರು ಬಂದರೆ ಉಪ ಚಾರಕ್ಕೆ ಇಂಬಿಲ್ಲ ಕರುಣದಿಂದ ಬರಹೇಳಾ ಅಪ್ಪಣ್ಣಾ.

ಅಪ್ಪಣ್ಣ ಬಂದು ಪ್ರಭುದೇವರಿಗೆ ಇಂತೆಂದನು— "ಮನ ಮನ ವೇಕಾರ್ಥವಾಗಿ ಕಾಯಕ್ಕೆ ಕಾಯ ಸಂಬಂಧವಾಗಿ ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ ತೆರೆಮರೆ ಎಂಬುದಿಲ್ಲ. ನೋಡಯ್ಯ ಸಂಗ ನಿಸ್ಸಂಗವಾಗಿಪ್ಪವರಲ್ಲಿ ಉಪಚಾರಕ್ಕೆ ಇಂಬಿಲ್ಲ ನೋಡಯ್ಯ ಬಸವ ಪ್ರಿಯ ಕೂಡಲ ಚನ್ನಸಂಗಯ್ಯನ ಶರಣ ಬಸವಣ್ಣ ನಟ್ಟಿದನು ಕೃಪೆ ಮಾಡು ಪ್ರಭುವೇ" ಎಂದು ಅಪ್ಪಣ್ಣನು ಪ್ರಭುವಿಗೆ ಬರಹೇಳಿದನು. ಇದಕ್ಕೆ ಅವರು ಕೆಳಗಿನಂತೆ ಹೇಳಿದರು.

ಪ್ರಭು— ಮನ ಮನ ಒಂದಾಗಿ ತನು ತನು ಒಂದಾಗಿ ಬೆರ ಸಿದ ಬಳಿಕ ಕರೆಯಲಿಲ್ಲ. ಕಾಲುವಿಡಿಯಲಿಲ್ಲ ಎಂದರಿದರು ಉಪಚರಿಸಿ ಬರ ಹೇಳಿದರೆ ಅದೇ ಕೊರತೆ ನೋಡಾ" ಅಂಗಡೆ ಕೈಯಲ್ಲಿ ಕ್ರಿ ಇರಲು ಮಾತಿನ ಅದ್ವೈತವೆಂತಪ್ಪುದೋ? ಅನಾಗದ ಮುನ್ನವೇ ತಾನಾದೆ ನೆಂಬವರಲ್ಲಿಗೆ ನಮ್ಮ ಗುಹೇಶ್ವರ ಲಿಂಗವು ಅಡಿ ಇಡುವನಲ್ಲ ಎಂದು ಹೇಳಿ ಬರಲಿಕ್ಕೆ ಒಪ್ಪಲಿಲ್ಲ. ಆಗ ಅಪ್ಪಣ್ಣನು ಬಸವನ ಕಡೆಗೆ ಬಂದನು.

ಅಪ್ಪಣ್ಣ— ಅಂಗದ ಕಳೆ ಲಿಂಗದಲ್ಲಿ ಲಿಯ್ಯವಾಗದು. ಲಿಂಗದ ಕಳೆ ಅಂಗದಲ್ಲಿ ಲಿಯ್ಯವಾಗದು. ಮಾತಿನ ಮಾಲೆಯ ಬೊಮ್ಮವೇತ ರದೋ? ಕಾಯ ಭಕ್ತನಾದರೆ ಭೃತ್ಯಾಚಾರವಿರಬೇಕು. ಪ್ರಾಣ ಜಂಗಮವಾದರೆ ಅರಿವಿರಬೇಕು. ಇಂತೀ ಭಕ್ತಿ ಜ್ಞಾನವುಳ್ಳವರಲ್ಲದೆ ಭಕ್ತ ರಲ್ಲ ಶರಣರಲ್ಲ. ಹಿರಿಯರು ಬಂದರೆ ಇದಿರೆದ್ದು ಬಾರದವರ ಮನೆಗೆ ಅಡಿಯಿಡೆವೆಂದು ಬಸವಪ್ರಿಯ ಕೂಡಲ ಚನ್ನಸಂಗನ ಶರಣರು ಕಾಡಿ ಹರು ಕೇಳಾ ಸಂಗನಬಸವಣ್ಣಾ.

ಈ ಪ್ರಕಾರ ಬಸವನಿಗೆ ಅಪ್ಪಣ್ಣನು ಪ್ರಭುವಿನ ಅಭಿಪ್ರಾಯವನ್ನು ತಿಳಿಸಿದನು.

ಬಸವಣ್ಣ— ಭಕ್ತನ ಕಾಯವ ಜಂಗಮ ಧರಿಸಿಪ್ಪ ನೋಡಾ! ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ! ಭಕ್ತನಲ್ಲಿಯು ಭಕ ಜಂಗಮವೆರಡು ಸನ್ನಿಹಿತ ಜಂಗಮದಲ್ಲಿಯು ಜಂಗಮಭಕ್ತನೆಂಬೆರಡು ಸನ್ನಿಹಿತ ಜಂಗಮಕ್ಕಾದರು ಭಕ್ತಿಯೇಬೇಕು. ಭಕ್ತಂಗೆ ಭಕ್ತಿಸ್ಥಲ ಬೇಕು. ಭಕ್ತನ ಅರ್ಥ ಪ್ರಾಣಾಭಿಮಾನಕ್ಕೆ ತಾನೆ ಕರ್ತನೆಂದು, ಜಂಗಮ ಆ ಭಕ್ತನ ಮನೆಗೆ ತಾನೆ ಕರ್ತನಾಗಿ ಹೊಕ್ಕು ತನು ಮನ ಧನಂಗಳನೆಲ್ಲವನೊಳಕೊಂಡು, ಭಕ್ತನ ಪಾವನವ ಮಾಡಬಲ್ಲರೆ ಆತ ಜಂಗಮವೆಂಬೆ. ಆ ಜಂಗಮದ ಗಳಗರ್ಜನೆಗೆ ಸೈರಿಸಿ ಮುಡುಹಿಂಗೆ ಮುನ್ನೂರು ಪಟ್ಟವ ಕಟ್ಟಿದರೆ ಆತ ಭಕ್ತನೆಂಬೆ ತನ್ನ ಮತಕ್ಕೆ ತಾ ಬಾಹರೆ ಮುನಿಸುಂಟೆ? ಕೂಡಲಸಂಗನ ಶರಣರ ಮನೆಯ ಬಾಗಿಲು ಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ ಎಂದು ಹೇಳಿ ಪುನಃ ಅಪ್ಪಣ್ಣನನ್ನು ಕರೆಯಕಳಿಸಿದನು. ಆಗ ಅವನು ಪ್ರಭುವಿನ ಕಡೆಗೆ ಬಂದು ಇಂತೆಂದನು.

ಅಪ್ಪಣ್ಣ— ನಿಮ್ಮ ತನು ನಿಮ್ಮ ಮನ ನಿಮ್ಮ ಧನ ನಿಮ್ಮದಲ್ಲದೆ ಅನ್ಯವೆಂದಣುಮಾತ್ರವಿಲ್ಲ ನೋಡಯ್ಯ. ಭಕ್ತನ ಮಠವೆಂದು ಮುನ್ನವೆ ಅರಿದರಿದು ಬಂದು ಮತ್ತೊಂದ ನೆನೆವರೆ ಬಸಪ್ರಿಯ ಕೂಡಲಚನ್ನಸಂಗಯ್ಯನ ಶರಣ ಬಸವಂಗೆ ಸ್ವತಂತ್ರ ಭಾವವುಳ್ಳಡೆ ನಿಮ್ಮ ಪಾದದಾಣೆ ಎಂದು ಹೇಳಲು ಪ್ರಭು ಮತ್ತೆ ನುಡಿದನು.

ಪ್ರಭು:— ಭಕ್ತ ಜಂಗಮದ ಸಕೀಲ ಸಂಬಂಧವನಾರು ಬಲ್ಲರು ಹೇಳಾ, ಅರ್ಥವನೊಪ್ಪಿಸದಾತ ಭಕ್ತನಲ್ಲ. ಪ್ರಾಣವನೊಪ್ಪಿಸದಾತ ಭಕ್ತನಲ್ಲ. ಅಭಿಮಾನವನೊಪ್ಪಿಸದಾತ ಭಕ್ತನಲ್ಲ. ಅದೇನು ಕಾರಣವೆಂದರೆ ಸತ್ಯ ಸದಾಚಾರಕ್ಕೆ ಸಲ್ಲನಾಗಿ. ಆ ಭಕ್ತನ ಮನೆಯ ಹೊಕ್ಕು ಪಾದಾರ್ಚನೆಯ ಮಾಡಿಸಿಕೊಂಡು ಒಡಲಕಕ್ಕುಲತೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ, ಕೊಡದಿರ್ದೊಡೆ ದೂರಿಕೊಂಡು, ಹೋದಾತ ಜಂಗಮನಲ್ಲ. ಆದಿ ಅನಾದಿಯಿಂದತ್ತತ್ತ ಮುನ್ನ ಮಹಾಘನವ ಬೋಧಿಸಿ ಕಂಡರಿದು. ಕಾಯದ ಜೀವದ ಹೊಲಿಗೆಯ ಬಿಚ್ಚಿ ಬಿಸಾಡಿ ತನ್ನನೆ ಅರ್ಪಿಸಿ ಇರಬಲ್ಲಾತ ಭಕ್ತ. ಸುಳುಹಿನ ಸೂತಕ ವೈದೋರದೆ ಒಡಲ

ಕಳವಳದ ರುಚಿಗೆ ಹಾರೈಸದೆ, ಅರಿವೆ ಅಂಗವಾಗಿ ಆಪ್ಯಾಯನವೆ ಭಕ್ತಿಯಾಗಿ ಕಿಂಕುರ್ವಾಣವೆಂಬ ಶಿವಮಂತ್ರಕ್ಕೆ ನಮೋ ನಮೋ ಎನ ಬಲ್ಲರೆ ಆತ ಜಂಗಮು. ಆ ಜಂಗಮದ ಆ ಭಕ್ತನ ಸಮ್ಮೇಳವೇ ಸಮ್ಮೇಳ. ಮಿಕ್ಕಿನ ಅರೆ ಭಕ್ತರೊಡನೆ ಆ ಸಂಗ ಗುಹೇಶ್ವರಲಿಂಗಕ್ಕೆ ಸೊಗಸದು. ಎಂದು ಪ್ರಭುದೇವರು ನುಡಿಯಲು ಅಪ್ಪಣ್ಣನು ಅದಕ್ಕೆ ಕೆಳಗಿನಂತೆ ಉತ್ತರಕೊಟ್ಟನು.

ಅಪ್ಪಣ್ಣ:— ಲಿಂಗ ಜಂಗಮು, ಜಂಗಮು ಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು! ಜಂಗಮಮುಖ ಲಿಂಗವೆಂಬುದನರಿದು, ತನ್ನನರ್ಪಿಸಿ ಇದಿರ ತಪ್ಪಿಸಿ ಇರಬಲ್ಲನಯ್ಯ ಬಸವಣ್ಣನು. ಅಂಗಮುಖವೆಲ್ಲ ನಷ್ಟವಾಗಿ ಭೃತ್ಯಾ ಚಾರವೆ ತನುವಾಗಿರಬಲ್ಲನಯ್ಯ ಬಸವಣ್ಣನು. ಪ್ರಾಣಕಳೆಯರಡು ಅಂತು ಜಂಗಮುವೆ ಪ್ರಾಣವಾಗಿ ಹಂಗುಹರಿ ಇಲ್ಲದಿರಬಲ್ಲನಯ್ಯ ಬಸವಣ್ಣನು. ಉಪಾಧಿ ಎಂಬ ಕೀರ್ತಿವಾರ್ತೆಯನು ಜರಿದು. ನಿರುಪಾಧಿಕವೆಂಬ ವಿವೇ ಕಕ್ಕೆ ಅತೀತನಾಗಿ ಸಹಜ ದಾಸೋಹಿಯಾಗಿರಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲ ಚನ್ನಸಂಗನ ಶರಣ ಬಸವಣ್ಣನೆ ನಿಮಗೆ ಭಕ್ತ ನಲ್ಲದೆ ಮತ್ತಾರನು ಕಾಣೆನಯ್ಯ. ಎಂದು ಅಪ್ಪಣ್ಣನು ಹೇಳಲು ಪ್ರಭು ಅದಕ್ಕೆ ಉತ್ತರ ಕೊಟ್ಟದ್ದು ಕೆಳಗಿನಂತೆ.

ಪ್ರಭು:— ನಿಮ್ಮಲ್ಲಿ ಭಕ್ತಿಯುಂಟು, ತಮ್ಮಲ್ಲಿ ಭಕ್ತಿಯುಂಟು, ಎಮ್ಮಲ್ಲಿ ಭಕ್ತಿಯುಂಟೆಂದರೆ ಶಿವಶರಣರು ಮೆಚ್ಚುವರೆ? ಹುಸಿ ಹುಂಡನ ಮಾಡಿ ಬಾಯ ಸವಿಯ ನುಡಿವರೆಲ್ಲ ಭಕ್ತರೇ? ಮಾತಿನ ಅದ್ವೈತವ ಕಲಿತು ಮಾರಗೋಲ ಬಿಡುವರೆಲ್ಲ ಭಕ್ತರಪ್ಪರೇ? ಬೆಳ್ಳಿಗೆಯ ಮುಕ್ಕ ಳೆಂದರೆ ಬಳ್ಳವಾಲ ಕರೆವುದೆ ಮರುಳೇ? ಸಂಗನ ಬಸವಣ್ಣನೆಂದರೆ ಮಾತಿನ ಮಾತಿಂಗೆ ಭಕ್ತಿಯುಂಟೆ? ಬಂದ ಜಂಗಮದ ಇಂಗಿತಾಕಾ ರವನರಿದು ಇದಿರೆದ್ದು ವಂದಿಸಿ ಕೈಮುಗಿದು ನಡನಡುಗಿ ಕಿಂಕರನಾಗಿ ಭಯಭೀತಿ ಭೃತ್ಯಾಚಾರವಾಗಿರಬಲ್ಲರೆ ಅದು ಭಕ್ತಿ. ಅದು ಮಾರ್ಗ ಬಂದವರಾರೆಂದರಿಯದೆ ನಿಂದ ನಿಲವನರಿಯದೆ ಕೆಮ್ಮನೆ ಅಹಂಕಾರವ ಹೊತ್ತುಕೊಂಡು, ಇಪ್ಪವರಿಗೆ ನಮ್ಮ ಗುಹೇಶ್ವರಲಿಂಗನೊಲ್ಲ ನೋಡ. ಎಂದು ಹೇಳಲು ಅಪ್ಪಣ್ಣನು ಬಸವನಲ್ಲಿ ಬಂದು ಹೇಳಿದನು.

ಅಪ್ಪಣ್ಣ— ದೇವ ದೇವ ಮಹಾಪ್ರಸಾದ ನಿಮ್ಮ ಶರಣರ ಮನೆಯ ಸಲುಗೆ ಭಂಟನಾನಲ್ಲಯ್ಯಾ! ತನು ಮನ ಧನವ ಹಿಂದಿಕ್ಕಿಕೊಂಡಿಪ್ಪ ವಂಚಕ ನಾನಯ್ಯ! ನಿಮ್ಮ ಶರಣರು ಎನ್ನಿಚ್ಛೆಗೆ ಬಪ್ಪರೇ ? ಚಕಿತ ಮಭಿಧತ್ತೆ ಶ್ರುತಿರಪಿ ಎನಲು ಎಮ್ಮ ನುಡಿ ನಿಮ್ಮ ಶರಣರ ತ್ಯಾಗ ಬಲ್ಲುದೇ ? ಹಣೆಯ ಹೊಣೆಯ ತೋರಿ ಉದರವ ಹೊರೆವ ನಿಮ್ಮ ಮರೆಯಲಡಗಿಪ್ಪ ಹಡಪಿಗ ನಾನಯ್ಯ ಬಸವಪ್ರಿಯ ಕೂಡಲ ಚನ್ನ ಸಂಗನ ಶರಣರು ಎನ್ನ ಮಾತಿಂಗೆ ಬಾರದು ನೀವೆಹೋಗಿ ಬಿಜಯಂಗೈಸಿಕೊಂಡು ಬಾರಾ ಸಂಗನಬಸವಣ್ಣ. ಎಂದು ಹೇಳಿದನು;

ಅಪ್ಪಣ್ಣ— ನಿನ್ನಳವಲ್ಲ ಎನ್ನಳವಲ್ಲ ಇದಾರಳವಲ್ಲದ ಘನವು ನೋಡಯ್ಯ. ಕಾಂಬರಿಗೆ ಕಂಗಳಿಗಸಾಧ್ಯ ಮುಟ್ಟುವರೆ ಸೋಂಕಿಂಗ ಸಾಧ್ಯ. ಮಾತನಾಡಿದರೆ ವಾಙ್ಮನಕ್ಕತೀತ ನಿಂದರೆ ನೆಳಲಿಲ್ಲ. ಸುಳಿದರೆ ಹೆಜ್ಜೆ ಇಲ್ಲ. ಪ್ರಭುದೇವರೆಂಬ ಭಾವ ತೋರುತ್ತಿದೆ ಬಸವಪ್ರಿಯ ಕೂಡಲ ಚನ್ನಸಂಗಯ್ಯನ ಶರಣರ ಚರಣವಿಡಿವರೇ ಹೇಳಾ ಸಂಗನಬಸವಣ್ಣಾ. ಹೀಗೆ ಅಪ್ಪಣ್ಣನು ಹೇಳಿ ತನಗೆ ಪ್ರಭು ಬಾರರು ನೀವೆ ಹೋಗಿ ಕರೆತರಬೇಕೆಂದು ವಿನಂತಿಸಿಕೊಂಡರು,

ಅಪ್ಪಣ್ಣ ಬಸವಣ್ಣ ಪ್ರಭುದೇವರ ನಡುವೆ ನಡೆದು ಈ ಸಂಭಾಷಣೆಯಿಂದ ಅಪ್ಪಣ್ಣನ ಅಂತರ್ಜ್ಞಾನ, ಅನುಭವ, ಸಮ್ಯಕ್‌ದೃಷ್ಟಿ ಎಷ್ಟಿದೆ ಎಂದು ಸಹಜ ಹೊಳೆಯುವದು. ಅವರಲ್ಲಿ ವಿನಯ, ಜಾಣ್ಮೆ, ಸತ್ಯ, ನ್ಯಾಯ, ನಿಷ್ಠುರತೆಗಳಂತೂ ಇರುವವೆಂಬುದು ಸರಿಯೇ ಸರಿ. ಬಸವಣ್ಣನ ಆಪ್ತಕಾರ್ಯದರ್ಶಿ ಏಕನಿಷ್ಠ ಸೇವಕನೆಂದು ಈ ಸಂಭಾಷಣೆಯಿಂದ ಸಹಜ ತಿಳಿಯುವದು. ಇದರಲ್ಲಿ ಭಕ್ತ ಜಂಗಮದ ಅರ್ಥಗಳು ಬಹು ಸರಸಾಗಿ ಈ ಮೂವರಿಂದಲೂ ಹೇಳಲ್ಪಟ್ಟಿರುವವು. ಇದರಿಂದ ಈ ಮೂವರಲ್ಲಿ ಸರಿಯಾಗಿ ಅರಿವು ಸಾಧ್ಯವಾಗಿರುವದೆಂದು ಹೇಳಬಹುದು. ಬಸವಣ್ಣನು ಹೇಳಿದ ವಚನದ ಇಂಗಿತವನ್ನೇ ಅಪ್ಪಣ್ಣನು ತನ್ನದಾದ ಹೊಸ ಸುಂದರ ಶೈಲಿಯಲ್ಲಿ ವಚನಗಳನ್ನು ನುಡಿದು ಅದೇ ಸಂಗತಿಯನ್ನು ಬಸವನಿಗೂ ಪ್ರಭುವಿಗೂ ತಿಳಿಸಿದ್ದಾನೆ. ಇದರಿಂದ ಅಪ್ಪಣ್ಣನೂ ಶ್ರೇಷ್ಠತರಗತಿಯ ವಚನಕಾರನೂ ಅನುಭವಿಯೂ ಆಗಿದ್ದನೆಂದು ಹೇಳಬಹುದು ಪ್ರಭುದೇವರು ಮೊಟ್ಟಮೊದಲಿಗೆ ಕಲ್ಯಾಣಕ್ಕೆ ಬಂದು ಮಹಾ

ದ್ವಾರದಲ್ಲಿ ನಿಂತು ತನ್ನ ಬರವನ್ನು ಅಪ್ಪಣ್ಣನಿಂದ ಬಸವಣ್ಣನಿಗೆ ತಿಳಿಸಿದಾಗ ಅವರನ್ನು ಕರೆತರಲು ಬಸವನು ಅಪ್ಪಣ್ಣನನ್ನು ಕಳಿಸಿದಾಗ ನಡೆದ ಸಂಭಾಷಣೆ ಇದಾಗಿದೆ.

ಇದೇ ಪ್ರಕಾರ ಪ್ರಭುದೇವರು ಕಲ್ಯಾಣದಿಂದ ಮತ್ತೆ ದೇಶ ಸಂಚಾರಕ್ಕೆ ಹೋದರು. ಹೀಗೆ ಹನ್ನೆರಡು ವರ್ಷ ಸಂಚಾರ ಮಾಡಿ ಪುನಃ ಕಲ್ಯಾಣಕ್ಕೆ ಪ್ರಭುದೇವರು ಬಂದರು. ಅಷ್ಟರಲ್ಲಿ ಬಸವಣ್ಣನು ಶೂನ್ಯಸಿಂಹಾಸನವನ್ನು ನಿರ್ಮಿಸಿ ಪ್ರಭುವಿನ ದಾರಿಯನ್ನು ಬಸವನು ಕಾಯುತ್ತಲಿದ್ದನು. ಆಗ ಈ ಸಮಯದಲ್ಲಿಯೂ ಕೂಡ ಎಲ್ಲರ ಕೂಡ ಅಪ್ಪಣ್ಣನು ಕರೆಯಲಿಕ್ಕೆ ಬಂದಿದ್ದನು ಆಗ ಅವನೇ ಮೊದಲು ನುಡಿದನು.

ಅಪ್ಪಣ್ಣ:— ಅಷ್ಟದಳ ಕಮಲದ ಹೂಗಲ್ಲಪಿಡಿದು, ಶೂನ್ಯ ಸಿಂಹಾಸನ ಧವಳಾಲಯವೆತ್ತಿತ್ತು. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮ ದ್ವಾರವಂ ತೆಗೆದು ನೋಡುವರೆ ವಿಪರೀತ ಏಕೋಭಾವವೆಂಬುದೊಂದು ಕಂಭ ಅದಕ್ಕೆ ಅನೇಕ ಚಿತ್ರಂಗಳಡಗಿದ ಆ ಪ್ರಭೆಯೊಳಗೆ ಬ್ರಹ್ಮ ರಂಧ್ರವೆಂಬ ಮಸ್ತಕದ ಮೇಲೆ ಪಂಚಮೌಕ್ತಿಕದ ಮಾಲೆಯನಿಳವಿಟ್ಟು ಮೂಲೆ ಮೂಲೆಗಳ ನಡುವೆ ಕಟ್ಟಿದವು ನವರತ್ನದ ಗೊಂಡೆಯಂಗಳು ಕಾಳಿಕೆಯು ಕಪ್ಪಡವದೆ ಮೇಲು ಹೊದಕೆ. ಉಲುಹಿನ ಅರಳೆಲೆಯ ಬಳಸುದೋರಣವ ಕಟ್ಟಿ ದಶವಾಯುವನೆಲ್ಲವನೊಂದು ಮಾಡಿ, ಲಿಂಗ ಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ ಲಂಬಿಸಿದ ಮಂದಾನಿಲನಂ ಮಲಗಂ ಮಾಡಿ ಹರುಷವನೆ ವಸಂತನ ಬೇಕದ ಆಸನವಟ್ಟಿಗೆಯು ಮಾಡಿ ನವನಾಳದೊಳು ಮೊರೆವ ಶಬ್ದಮಂ ಶುಕಪಿಕ ಭ್ರಮರಂಗಳ ವಿನೋದವಮಂ ಮಾಡಿ! ಪರಮಶಾಂತಿ ಎಂಬ ಶೈತ್ಯಾಕಾರದ ಸೋಂಕಿನ ಚೂತ ಪಲ್ಲವಂಗಳಂ ಹಾಸಿ, ಉತ್ತರ ದ್ವಾರವೆಂಬ ನುಸುಳು ಗಂಡಿಯು ರಚಿಸಿ ಪೂರ್ವಯೋಗವೆಂಬ ಸೋಪಾನಮಂ ಮಾಡಿ ಪಶ್ಚಿಮದ್ವಾರ ವೆಂಬ ನಿಜದ್ವಾರವಟ್ಟವಂ ಮಾಡಿ, ಸಪ್ತ ವ್ಯಸನ ಪಂಚೇಂದ್ರಿಯಂಗ ಳೆಂಬ ಪೌಳಿಗವಾಕ್ಷಿಯನಿಕ್ಕಿ ಆಶೆಯಾಮಿಷಮಂ ಕೆಡಿಸಿ, ಊರ್ಧ್ವಚಕ್ರ ವೆಂಬ ಮೇಲುಪ್ಪರಿಗೆಯುಂ ಮಾಡಿ, ಚಂದ್ರ ಸೂರ್ಯರೆಂಬ ದೀಪಮಂ ಬೆಳಗಿ ಸೋಹಂ ಎಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶ ವೆಂಬ ಹೊನ್ನ ಕಲಶಮಂ ಮಾಡಿ ನಿಃಶೂನ್ಯ ನಿರಾಳವೆಂಬ ಶೂನ್ಯ ಸಿಂಹಾಸನಮಂ ಮಾಡಿದ ಬಸವಪ್ರಿಯ ಕೂಡಲಚನ್ನಸಂಗಯ್ಯನಲ್ಲಿ ಎನ್ನ ಪರಮಗುರು ಸಂಗನಬಸವಣ್ಣನು.

ಅಪ್ಪಣ್ಣ— ಅಂಗದ ಪ್ರಕೃತಿಯು ಲಿಂಗದಲ್ಲಿ ಅಳಿದು, ಮನದ ವಿಕೃತಿಯು ಅರಿವಿನಲ್ಲಿ ಅಳಿದು ಜೀವ ಭ್ರಾಂತಿಯು ನಿಶ್ಚಿಂತ ಪದದಲ್ಲಿ ಅಳಿದು, ನಿಃಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರುಗಲ್ಲನಿಕ್ಕಿ, ಸರ್ವಾಚಾರ ಸಂಪತ್ತೆಂಬ ಹೊಗಲ್ಲ ಮುಚ್ಚಿ, ಅಂತಃಕರಣ ಚತುಷ್ಟಯವೆಂಬ ನಾಲ್ಕು ಕಂಬಗಳನ್ನು ನಿಲ್ಲಿಸಿ, ಜ್ಞಾತ್ರವೆಂಬ ಬಿತ್ತಿಯಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ, ಜ್ಞೇಯವೆಂಬ ಹೊನ್ನ ಕಳಸಮಂ ಶೃಂಗಾರವುಂ ಮಾಡಿ ಬ್ರಹ್ಮರಂಧ್ರದ ಊರ್ಧ್ವ ದ್ವಾರವೆಂಬ ನಿಜ ದ್ವಾರವುಂ ಮಾಡಿ ನಿರ್ಮಯಲಲ್ಲಿ ನೆಲೆಗೊಳಿಸಿ ಬಸವಪ್ರಿಯ ಕೂಡಲ ಚನ್ನ ಸಂಗಯ್ಯನ ಶರಣ ಪ್ರಭುದೇವರ ಬರವಿಂಗೆ ಶೂನ್ಯಸಿಂಹಾಸನವುಂ ರಚಿಸಿ ಬರವ ಹಾರೈಸುತ್ತಿರ್ದರೆನ್ನ ಪರಮ ಗುರು ಬಸವಣ್ಣನು.

ಅಪ್ಪಣ್ಣ— ಉಪ್ಪರಗುಡಿ ತೋರಣಗಟ್ಟಿತ್ತು, ಕಲ್ಯಾಣದಲ್ಲಿ ಅಷ್ಟ ದ್ವಾರದಂಗಡಿ ರಾಜಬೀದಿಯೊಳೆಲ್ಲ ವ್ಯಾಸನ ಬಾಹುಗಳುಪ್ಪರಿಸಿದವು. ಎಂಟು ಬಾಗಲಲ್ಲಿ ನಡೆ, ಮಡೆಯ ಹಾಸಿ, ಸಂಕಲ್ಪ ಸಂತೋಷವ ಮಾಡಿದನು. ವೃಷಭೇಶ್ವರನು ಬಸವಪ್ರಿಯ ಕೂಡಲ ಚನ್ನ ಸಂಗಯ್ಯ ಬಂದಿಹನೆಂದು ||

ಈ ಪ್ರಕಾರ ಮುಂಡಿಗೆಯನ್ನು ಹೇಳಿದ್ದಾನೆ. ಶರೀರದೊಳಗಿನ ಶೂನ್ಯ ಸಿಂಹಾಸನಕ್ಕೆ ಕಲ್ಯಾಣದ ಆ ಅನುಭವ ಮಂಟಪದಲ್ಲಿಯ ಶೂನ್ಯ ಸಿಂಹಾಸನವನ್ನು ಹೋಲಿಸಿ ಈ ವಚನಗಳನ್ನು ಹೇಳಿದ್ದಾನೆ. ಘಟ ಚಕ್ರಕ್ಕೆ ಇದನ್ನು ಚನ್ನಾಗಿ ಹೋಲಿಸಿದ್ದಾನೆ. ಅಲ್ಲದೆ ಬಸವನು ತನ್ನಲ್ಲಿಯ ಶೂನ್ಯ ಪೀಠವನ್ನು ಕಂಡದನ್ನು ಈ ವಚನ ಸೂಚಿಸುವದು. ಎರಡನೇ ವಚನದಲ್ಲಿ ಶೂನ್ಯ ಸಿಂಹಾಸನವು ಎಂದು, ಯಾವಾಗ, ಯಾವ ಸಾಧನ ಸಿದ್ಧಿಗಳ ತರುವಾಯ ಸಾಧಿಸುವದೆಂಬುದನ್ನು ಅಪ್ಪಣ್ಣನು ಬಹು ಚನ್ನಾಗಿ ವಿವರಿಸಿದ್ದಾನೆ. ಇದನ್ನೂ ಶರೀರಕ್ಕೆ ಹೋಲಿಸಿ ಹೇಳಿದ್ದಾನೆ. ಇವನ ಜ್ಞಾನವು ಅಗಮ್ಯವಾದದೆಂದು ಸಹಜ ಅನಿಸುವದು. ಈ ಪ್ರಕಾರ ಒಗಟನಂತಿರ್ದ ಮುಂಡಿಗೆಗಳನ್ನು ಅಪ್ಪಣ್ಣನು ಹೇಳಿ ಪ್ರಭುವಿಗೆ ಬರಲಿಕ್ಕೆ ವಿನಂತಿಸಿ ಕೊಂಡಿದ್ದಾನೆ. ಬಸವಣ್ಣನು ಪ್ರಭುದೇವರ ಬರವನ್ನು ಒಳ್ಳೇಕಾತರದಿಂದ ಹಾರೈಸಿಕೊಂಡು ಕುಳಿತಿದ್ದಾನೆಂದು ಈ ವಚನಗಳು ಸೂಚಿಸುವವು. ಇಡಿ ಕಲ್ಯಾಣವೇ ಪ್ರಭು

ವಿನ ಬರವನ್ನು ನಿರೀಕ್ಷಿಸುತ್ತಿದ್ದಿತೆಂದು ಗೊತ್ತಾಗುವದು. ಹೀಗೆ ಪ್ರತಿಯೊಂದು ಬಸವನ ಕೆಲಸಗಳನ್ನು ಅಪ್ಪಣ್ಣನೇ ಮಾಡುತ್ತಿದ್ದನೆಂದು ಗೊತ್ತಾಗುವದು. ಅಪ್ಪಣ್ಣನು ಮಹಾ ಜ್ಞಾನ ಸಂಪನ್ನನಿದ್ದದರಿಂದ ಬಸವನು ಇಂಥ ಕೆಲಸಗಳಿಗೆ ಅಪ್ಪಣ್ಣನನ್ನೇ ಕಳಿಸುತ್ತಿದ್ದನು. ಅಪ್ಪಣ್ಣನು ಉಳಿದ ಚನಬಸವಣ್ಣ, ಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಿದೇವ, ಸೊಡ್ಡಳ ಬಾಚರಸ, ಮೋಳಿಗೆಯ ಮಾರಯ್ಯ ಮೊದಲಾದವರೊಂದಿಗೆ ಪ್ರಭುದೇವರನ್ನು ಬರ ಮಾಡಿಕೊಳ್ಳಲಿಕ್ಕೆ ಹೋಗಿದ್ದನು. ಈ ಎಲ್ಲರಲ್ಲಿ ಅಪ್ಪಣ್ಣನೇ ಪ್ರಭುದೇವರಿಗೆ ಶೂನ್ಯ ಸಿಂಹಾಸನದ ಪರಿಚಯವನ್ನು ಮೇಲಿನಂತೆ ಮಾಡಿಕೊಟ್ಟ ಬಳಿಕ ಉಳಿದವರು ಮಾತನಾಡಿ ಬರಬೇಕೆಂದುಬಿನ್ನವಿಸಿ ಕೊಂಡಿದ್ದಾರೆ. ಮೊದಲಿನ ಪ್ರಸಂಗದಲ್ಲಿಯಂತೆ ಈ ಪ್ರಸಂಗದಲ್ಲಿ ಒಬ್ಬನೇ ಹೋಗಿರಲಿಲ್ಲ. ಅಪ್ಪಣ್ಣನು ಸ್ವಾಗತ ಅಧ್ಯಕ್ಷರಂತೆ ವಚನದಿಂದ ಭಾಷಣ ಮಾಡಿ ಪ್ರಭುದೇವರನ್ನು ಹೃತ್ಪೂರ್ವಕ ಸ್ವಾಗತಿಸಿದ್ದಾನೆ. ಆ ಮೇಲೆ ಉಳಿದವರ ಭಾಷಣಗಳಾಗಿರುವವು. ಇದರ ಮೇಲಿಂದ ಅಪ್ಪಣ್ಣನ ಯೋಗ್ಯತೆಯನ್ನೂ, ಬಸವನು ಅವನಿಗೆ ಕೊಟ್ಟ ಸ್ಥಾನ ಮಾನಗಳನ್ನೂ ವಿಚಾರಿಸಿದರೆ ಅಪ್ಪಣ್ಣನ ಯೋಗ್ಯತೆ ಅಲ್ಪ–ಸ್ವಲ್ಪ ನಮ್ಮಂಥವರಿಗೂ ಸಹ ಹೊಳೆಯದಿರಲಾರದು. ಸತಿ–ಪತಿಗಳಿಬ್ಬರೂ ಪ್ರಥಮ ದರ್ಜೆಯ ಶರಣರಿದ್ದರೆಂಬುದಕ್ಕೆ ಯಾವ ಸಂದೇಹವೇ ಇಲ್ಲ. ವಚನಗಳ ಮೇಲಿಂದ ಅವರ ಯೋಗ್ಯತೆ ಸಹಜ ಹೊಳೆಯುವಂತಿದೆ. ಎಲ್ಲರೂ ಪ್ರಭುವನ್ನು ತಮ್ಮ ತಮ್ಮ ಅಭಿಪ್ರಾಯದಂತೆ ಸ್ವಾಗತಿಸಿದ್ದಾರೆ. ಅಪ್ಪಣ್ಣನು ತನ್ನ ವಚನದಲ್ಲಿ— "ಬಯಸುವ ಬಯಕೆ ಕೈಸಾರುವಂತೆ, ನಿಧಿ ನಿಧಾನ ಮನೆಗೆ ಬಪ್ಪಂತೆ, ಪರಿಮಳವನರಿಸಿ ಬಪ್ಪ ಭ್ರಮರನಂತೆ, ಚಿಂತಾಮಣಿಯ ಪುತ್ಥಳಿ ನಡೆಗಲಿವಂತೆ, ಬಸವಪ್ರಿಯ ಕೂಡಲ ಚನ್ನ ಸಂಗನಲ್ಲಿ ಪ್ರಭುದೇವರ ಬರವು ಕಾಣುತ್ತಿದೆ ನೋಡಾ ಸಂಗನ ಬಸವಣ್ಣಾ" ಎಂದು ಅಲಂಕಾರಗಳಿಂದ ಉಪಮಾನ ಉಪಮೇಯಗಳಿಂದ ವಚನಗಳನ್ನು ಸಮಯೋಚಿತವಾಗಿ ಹಾಡಿದ್ದಾನೆ. ಇದನ್ನು ನೋಡಿದರೆ ಅಪ್ಪಣ್ಣನು ರಸಋಷಿಕವಿ ಎಂದೇ ಹೇಳಬೇಕು. ವರಕವಿ, ಪರಕವಿ ಎನಿಸಿದ್ದಾನೆ.

ಇನ್ನೊಂದು ಪ್ರಸಂಗದಲ್ಲಿ ಅಪ್ಪಣ್ಣನು ಏನು, ಎಂತು, ಹೇಗೆ ಇರುವದೆಂಬುದನ್ನು ಅರಿಯಬಹುದು. ಪ್ರಭುದೇವರಿಗೆ ಆರೋಹಣೆ

ಮಾಡುವ ಪ್ರಸಂಗ ಬಂದಿತ್ತು. ಆಗ ಎಲ್ಲ ಶರಣರು ಪ್ರಭುವಿಗೆ ಆರೋಹಣೆ ಮಾಡುವ ರೀತಿಯನ್ನು ಹೇಳಿದ್ದಾರೆ. ಅದರಲ್ಲಿ ಅಪಣ್ಣನು ಆರೋಹಣೆ ಮಾಡುವ ರೀತಿಯನ್ನು ತನ್ನ ವಚನದಿಂದ ಹಾಡಿದ್ದನ್ನು ಇಲ್ಲಿ ನೋಡಿರಿ— ಹೆಡಗೆ ಹಾರ, ಮೊರಹಾರ, ಹೆರಸಿ ಹಾರ, ಮಡಿಕೆ ಹಾರ ದೆಶೆ ದೆಶೆಯಲ್ಲಿ ತಂದು ನೀಡುತ್ತಿರಲು ಹೊಸ ಪರಿಯದಾರೋಹಣೆಯನವ ಧರಿಸುತ್ತಿದ್ದನು ಆವ ದೆಶೆ ದೆಶೆಯಲ್ಲಿ ತಂದು ನೀಡುತ್ತಿದ್ದರೆ ಆ ದೆಶೆಗಳಲ್ಲಿ ಬಾಯಾ ಕೇಳುತಿರ್ದನು. ಎತ್ತೆತ್ತ ನೋಡಿದಡೆತ್ತತ್ತ ಮುಖವಾಗೆ ಎವ ಹೋಯದಂತೆ ತೆರಹಿಲ್ಲದೊಂದು ನಿಮಿಷ ಒಡಹಿದರೆ ಅಕ್ಕಿಗಚ್ಚು, ನುಚ್ಚು, ತವಡು ಮೊದಲಾಗಿ ಹೆಚ್ಚಿದವು. ನಿಮಿಷದೊಳು ಭಕ್ತಿ ಬಂಧುಗಳೆಲ್ಲ ತಮ್ಮಟ್ಟದ ಸಯಿ ಧಾನವ ತಂದು ಸಾರಿಗಟ್ಟಿ ನೀಡುತ್ತಿರೆ ಅದ್ಭುತದ ಆರೋಗಣೆಯು ಕಂಡು ಹೆರಿಹೆರಿದು ಸಾಕು ಪ್ರಯತ್ನಮಂ ಮಾಡಿ ಎನ್ನುತ್ತೆ ಬಸವಪ್ರಿಯ ಕೂಡಲ ಚನ್ನ ಸಂಗಯ್ಯನಲ್ಲಿ ಸಂತೋಷದಲ್ಲಿ ಲೋಲಾಡುತಿರ್ದನು ಎನ್ನ ಪರಮ ಗುರು ಬಸವಣ್ಣನು ||

ಈ ಪ್ರಕಾರ ಅಪ್ಪಣ್ಣನು ಪ್ರತಿಯೊಂದು ಕಾರ್ಯದಲ್ಲಿ ಭಾಗಿಯಾಗುತ್ತಿದ್ದನು. ಪ್ರಮುಖರಾದ ಸಿದ್ಧರಾಮ, ಚನ್ನಬಸವಣ್ಣ, ಬಸವಣ್ಣ, ಮಡಿವಾಳ ಮಾಚಯ್ಯ, ಸೊಡ್ಡಳ ಬಾಚರಸ ಮೊದಲಾದ ಪ್ರಮುಖ ಶರಣರಲ್ಲಿ ಅಪ್ಪಣ್ಣನು ಸಹ ಇರುತ್ತಿದ್ದನೆಂದು ಅವನ ಸಕಲ ಪ್ರಸಂಗಗಳಿಂದ ಗೊತ್ತಾಗುವದು. ಪ್ರಭುದೇವರ ಆರೋಗಣೆಯು ಮುಗಿದ ಬಳಿಕ ಅಪ್ಪಣ್ಣನು ಎಲ್ಲ ಶರಣರಂತೆ ಪ್ರಭುದೇವರನ್ನು ಸ್ತುತಿಗೈದ ವಚನವನ್ನು ನೋಡಿರಿ—

ಅನುಮಿಷನಾದ ನಿಬ್ಬೆರಗಿನ ಲಿಂಗೈಕ್ಯ ಭಾವ ನಿರ್ಭಾವವನ್ನೆದಿ, ಜ್ಞಾನವೇ ಪರಮಾಶ್ರಯವಾಗಿಪ್ಪ ಲಿಂಗೈಕ್ಯವನು ಮಹವನೊಳಕೊಂಡ ಮಹಾ ಮಹಿಮೆಯ ಲಿಂಗೈಕ್ಯನು ಬಸವಪ್ರಿಯ ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಪ್ರಭುದೇವರಿಗೆ ನಮೋ ನಮೋ ಎನುತಿರ್ದೆನು'' ಮತ್ತೂ ಹೇಳುವನು— ನಿರಾಕಾರದ ಶಕ್ತಿಯಲ್ಲಿ ನಿರಾಳವೆಂಬ ತನು, ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಘನವಾಗಿ ತೊಳಗಿ ಬೆಳಗುತಿರ್ದನು. ದೆಶೆಯಲ್ಲಿ ಮುಖವಾಗಿ, ಮುಖವೆಲ್ಲ ಜನವಾಗಿ, ಅಖಂಡ ಪರಿಪೂರ್ಣ ಪರಬ್ರಹ್ಮ ತಾನಾದನು. ಈ ಮಹಿಮನ ನೆನೆದರೆ ಮನೋಮುಕ್ತಿ.

ಕಂಡರೆ ರೂಪಮುಕ್ತಿ, ನುಡಿದರೆ ಶಬ್ದಮುಕ್ತಿ, ಸಂಗವ ಮಾಡಿದರೆ ಸರ್ವಾಂಗ ಲಿಂಗೈಕ್ಯ ಬಸವಪ್ರಿಯ ಕೂಡಲ ಚನ್ನಸಂಗಯ್ಯ ನಿಮ್ಮ ಪ್ರಭುವಿನ ಶ್ರೀ ಪಾದಕ್ಕೆ ಶರಣೆಂದು ಬದುಕಿದೆನು. ಈ ಸ್ತೋತ್ರಗಳೂ ಕೂಡ ಒಳ್ಳೇ ಅರ್ಥಪೂರ್ಣ, ಭಾವಪೂರ್ಣ, ಅನುಭವಪೂರ್ಣವಾದ ವುಗಳಿರುವವೆಂದು ಸಹಜ ಅನಿಸುವದು. ಇದರ ಮೇಲಿಂದ ಅಪ್ಪಣ್ಣನು ಮಹಾ ಜ್ಞಾನದ ಬೆಳಗಿನಲ್ಲಿ ದಿವ್ಯ ಜೀವನವನ್ನು ಸದಾ ಅನುಭವಿಸುತ್ತಿದ್ದನೆಂದು ಹೇಳಬಹುದು. ಬಸವನು ಈ ಅಪ್ಪಣ್ಣನಿಗೆ ಶರಣಗಣದಲ್ಲಿ ಉಚ್ಚ ಸ್ಥಾನಮಾನಗಳನ್ನು ಕೊಟ್ಟು ಮನ್ನಿಸಿದ್ದನೆಂದು ತಿಳಿದು ಬರುವದು.

ಶರಣರವಸಾನ ಪರಾಮರಿಕೆಯ ಪ್ರಸಂಗದಲ್ಲಿ ಅನೇಕ ಶರಣರು ತಮ್ಮ ತಮ್ಮ ಅವಸಾನದ ಸ್ಥಿತಿ, ರೀತಿ, ನೀತಿಯನ್ನು ಹೇಳಿದ್ದಾರೆ. ಅದರಂತೆ ಅಪ್ಪಣ್ಣನೂ ಸಹ ತನ್ನ ಅವಸಾನ ಪರಾಮರಿಕೆಯನ್ನೂ ವಚನಗಳಿಂದ ಹಾಡಿದ್ದಾನೆ. ಅದನಷ್ಟು ನೋಡುವಾ— ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು, ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು, ಎನ್ನರಿವು ನಿಮ್ಮ ಘನದಲ್ಲಿ ಸವೆದು ನಿಶ್ಚಲ ನಿಜೈಕ್ಯವಾಗಿ ಬಸವಪ್ರಿಯ ಕೂಡಲ ಚನ್ನಸಂಗಯ್ಯ ನಾ ನೀ ನೆಂಬುದು ಏನಾಯಿತ್ತೆಂದರಿಯೆ ‖ ಎಂದು ಎಲ್ಲ ತನು, ಮನ, ಅರಿವುಗಳನ್ನೆಲ್ಲ ಬಸವಣ್ಣನಿಗಾಗಿ ಸವೆಸಿದೆನೆಂದು ಅಪ್ಪಣ್ಣ ಹೇಳಿದ್ದನ್ನು ನೋಡಿದರೆ ಬಸವನಿಗೂ ಅಪ್ಪಣ್ಣನಿಗೂ ಎಷ್ಟು ಎಂಥ ನಿಕಟ ಸಂಬಂಧವಿತ್ತೆಂದು ತೋರುವದು. ಇನ್ನೂ ಅಪ್ಪಣ್ಣನು ಹೇಳಿದ್ದೇನಂದರೆ— ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತವಾದವು. ಎನ್ನ ಅವಧಾನ ಅನುಭಾವ ಬಸವಣ್ಣಂಗರ್ಪಿತವಾದವು; ಎನ್ನ ಸರ್ವಾಚಾರ ಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು; ಬಸವಪ್ರಿಯ ಕೂಡಲ ಚನ್ನಸಂಗಮ ದೇವರಲ್ಲಿ ನಿಜ ನಿವಾಸಿಯಾಗಿರ್ದೆನು.

ಈ ಪ್ರಕಾರ ಅಪ್ಪಣ್ಣನು ಬಸವಣ್ಣನಿಗೆ ಸರ್ವಾರ್ಪಣ ಮಾಡಿದ್ದ ಮಹಾ ಶರಣನಾಗಿದ್ದನು. ಯಾವ ತೆರದ ಅಂತರಂಗ ಬಹಿರಂಗದಲ್ಲಿ ಎಳ್ಳಷ್ಟು ವಂಚನೆಯಿಲ್ಲದೆ ಸರ್ವಾರ್ಪಣ ಮಾಡಿ ಶರಣು ಹೋದಾಗ ಮಾತ್ರ ಅವನು ಶರಣನಾಗುವನಲ್ಲದೆ ಬಾಯಿಂದ ಅರ್ಪಣವೆಂದರೆ ಎಂದೂ ಶರಣನಾಗಲರಿಯನು. ಅಪ್ಪಣ್ಣನು ಇದನ್ನರಿತೇ ತನ್ನದೆಲ್ಲವನ್ನೂ ಅಂದರೆ ಆಚಾರ, ವಿಚಾರ, ಅನುಧಾನ, ಅನುಭಾವ ಮೊದಲಾದ

ಸರ್ವಾಚಾರ ಸಂಪತ್ತನ್ನೂ ಸಹ ಅಂತರಂಗ ಬಹಿರಂಗವನ್ನೂ ಸಹ ಬಸವಣ್ಣನಿಗೆ ಅರ್ಪಿಸಿದ್ದರಿಂದೆ ಅಪ್ಪಣ್ಣನಿಗೆ ಇಂಥ ಸ್ಥಾನ ಶರಣ ಸಮೂಹದಲ್ಲಿ ಬಸವಣ್ಣನು ಕೊಟ್ಟಿದ್ದನೆಂದು ತಿಳಿಯುವದು. ಹೀಗಾಗಿ ಬಸವಣ್ಣನಲ್ಲಿಯೇ ಅಪ್ಪಣ್ಣನು ನಿಜ ನಿವಾಸಿಯಾಗಿದ್ದನೆಂದು ಭಯ ಭೀತಿ ಇಲ್ಲದೆ ಹೇಳಿದ್ದನ್ನು ವಿಚಾರಿಸಿದರೆ ಅಪ್ಪಣ್ಣನ ಅರ್ಪಣವು ಎಂಥ ದೆಂದು ಹೊಳೆಯುವದು. ಕಡೆಗೆ ಇನ್ನೂ ಹೇಳುವದನ್ನು ನೋಡಿರಿ— ಹರಿದು ಹತ್ತಿ ಮುಟ್ಟಲಿಲ್ಲ ಮುಟ್ಟಿ ಮರಳಿ ಇಳಿಯಲಿಲ್ಲ. ಬೆರಸಿದೆ ನೆಂದು ನೆನೆಯಲಿಲ್ಲ ಬಸವಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಶಬ್ದಕ್ಕೆ ಇಂಬಿಲ್ಲದೆ ಇದ್ದೆನು ॥ ಎಂದು ಅಪ್ಪಣ್ಣನು ಬಸವನಲ್ಲಿ ಅತಿ ಸಮ ರಸವಾದುದನ್ನು ಸರಸಾಗಿ ಹೇಳಿದ್ದಾನೆ. ಹೀಗಂತೇ ಅಪ್ಪಣ್ಣನಲ್ಲಿ ಬಸ ವನಿಗೆ ಬಹು ಬಲವಾದ ನಂಬಿಗೆ ವಿಶ್ವಾಸಗಳಿದ್ದವು. ಬಸವನ ಎಡಗೈ ಬಲಗೈಯಂತೆ ಅಪ್ಪಣ್ಣನಿದ್ದನೆಂದು ಇವುಗಳ ಮೇಲಿಂದ ಸಹಜ ಅನಿ ಸುವದು.

ಹೀಗೆ ಅನೇಕ ಪ್ರಸಂಗಗಳನ್ನು ವಿಮರ್ಶಿಸಿದರೆ ಬಸವನೆಂದರೆ ಅಪ್ಪಣ್ಣ, ಅಪ್ಪಣ್ಣನೆಂದರೆ ಬಸವನೆಂಬ ಭಾವ ಓದುಗರಿಗೆ ಬರದೆ ಇರ ಲಾರದು. ಹೀಗೆ ಇವರಿಬ್ಬರಲ್ಲಿ ಅತಿ ನಿಕಟ ಸಂಬಂಧ ಅತಿ ನಿಕಟ ಬಾಂಧವ್ಯಗಳಿದ್ದವೆಂದು ತಿಳಿದುಬರದೆ ಇರಲಾರದು. ಬಸವನು ಅಪ್ಪಣ್ಣನ ಇಷ್ಟ ದೇವರಾಗಿದ್ದರೆ ಅಪ್ಪಣ್ಣನು ಬಸವನ ಅಭಿವ್ಯಕ್ತ ಭಕ್ತ ಶ್ರೇಷ್ಠ ನಾಗಿದ್ದನೆಂದು ಅನಿಸುವದು. ದೇವಭಕ್ತರಲ್ಲಿ ಯಾವದು ಹಿರಿದು ಯಾವದು ಕಿರಿದೆಂದು ಹೇಳಬೇಕು ? ಭಕ್ತನ ಹೃದಯದಲ್ಲಿ ದೇವನ ವಾಸ ಸದಾ ಇರುವದು. ಅದಕ್ಕೆ ಶಿವನಿಗಿಂತ ಶಿವಭಕ್ತರೇ ಅಧಿಕವೆಂದು ತಿಳಿದು ಬರುವದು. ಶಿವನು ಭಕ್ತರ ಪರಾಧೀನನು. ಅದಕ್ಕೆ ಅಪ್ಪಣ್ಣನ ಪರಾ ಧೀನನು ಬಸವಣ್ಣನಾಗಿದ್ದನು. ಹೀಗೆಂದ ಬಳಿಕ ಬಸವನಿಗಿಂತ ಅಪ್ಪಣ್ಣನೇ ಅಧಿಕವೆಂದಂತಾಗುವದಿಲ್ಲವೇನು ? ಹೀಗೆ ಗುರು-ಶಿಷ್ಯ, ದೇವ-ಭಕ್ತ ಇವರ ಸಂಬಂಧವು ಅತಿ ನಿಕಟವರ್ತಿಯಾಗಿರುವದು. ಅದರಂತೆ ಬಸವಣ್ಣ ಅಪ್ಪಣ್ಣ ಇವರ ಸಂಬಂಧವೂ ಕೂಡ ಬಹು ಸುಮಧುರವಾಗಿದೆ ಎಂದು ಹೇಳಬಹುದು.

ಇನ್ನೊಂದು ಇಂಥ ಮಧುರ ಸಂಬಂಧವನ್ನು ಸೂಚಿಸುವ ಕೊನೆಯ ಪ್ರಸಂಗವನ್ನು ಹೇಳಿ ಅಪ್ಪಣ್ಣನ ಚರಿತೆಯನ್ನು ಮುಗಿಸೋಣ. ಹರಳಯ್ಯ

ಮಧುವರಸರ ವಧೆಯಾದ ಬಳಿಕ ಬಸವಣ್ಣನು ಅಪ್ಪಣ್ಣನಿಂದೊಡಗೂಡಿ ಕೂಡಲಸಂಗಮಕ್ಕೆ ಬಂದನು. ಬಸವಣ್ಣನು ಗಂಗಾಂಬಿಕೆ ನೀಲಾಂಬಿಕೆಯರನ್ನು ಕಲ್ಯಾಣದಲ್ಲಿ ಚನ್ನಬಸವಣ್ಣ, ನಾಗಲಾಂಬಿಕೆಯರ ಹತ್ತರ ಬಿಟ್ಟುಬಂದಿದ್ದನು. ಬಂದಬಳಿಕ ಕಲ್ಯಾಣದ ಹಾವಳಿಯನ್ನು ಕೇಳಿ ಮಹಾಮಹಿಮಳಾದ ನೀಲಾಂಬಿಕೆಯನ್ನು ಕೂಡಲಸಂಗಮಕ್ಕೆ ಕರಕೊಂಡು ಬರುವದಕ್ಕಾಗಿ ಅಪ್ಪಣ್ಣನನ್ನೇ ಬಸವಣ್ಣನು ಕಳುಹಿಸಿಕೊಟ್ಟನು. ಅಪ್ಪಣ್ಣನು ನೀಲಾಂಬಿಕೆಯನ್ನು ಕರಕೊಂಡು ಬಂದು ಕೃಷ್ಣಾನದಿಯ ದಂಡೆಯ ಮೇಲಿರುವ ತಂಗಡಗಿ ಗ್ರಾಮಕ್ಕೆ ಬಂದನು. ಅಷ್ಟರಲ್ಲಿ ಬಸವಣ್ಣನು ಲಿಂಗೈಕ್ಯನಾದನೆಂದು ಇವರಿಗೆ ಸುದ್ದಿ ತಲುಪಿತು. ಕೂಡಲೇ ನೀಲಾಂಬಿಕೆಯು ಅಪ್ಪಣ್ಣನ ಮುಂದೆ ಕೆಳಗಿನಂತೆ ವಚನಗಳನ್ನು ಹೇಳಿದಳು—

"ನಾನಾರ ಸಾರುವೆನೆಂದು ಚಿಂತಿಸಲೇಕಯ್ಯಾ ? ನಾನಾರ ಹೊಂದುವೆನೆಂದು ಭ್ರಮೆಬಡಲೇಕಯ್ಯ ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ ? ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದಬಳಿಕ ಸಂಗಯ್ಯನ ಹಂಗು ನಮಗೇಕೆ ಅಪ್ಪಣ್ಣಾ."

ಅದಕ್ಕೆ ಅಪ್ಪಣ್ಣನೂ ಒಂದು ವಚನವನ್ನು ಹೇಳಿದ್ದಾನೆ.— ಧ್ಯಾನದಲ್ಲಿ ಕುಳ್ಳಿರ್ದು ಜ್ಞಾನದಲ್ಲಿ ನೋಡಿ, ಮೌನಮುಗ್ಧವಮಾಡಿ, ಸ್ವಾನುಭಾವದಿಂದರಿದು ಮತ್ತೇನನು ಹೊದ್ದಲೀಯದೆ ತಾನು ತಾನಾಗಿ ಜ್ಞಾನಕ್ಕೆ ಲೇಪನಾಗಿ ಧ್ಯಾನ ಧಾರಣ ಸಮಾಧಿಯ ಮೆಟ್ಟನಿಂದ ನಿಜಲಿಂಗೈಕ್ಯಂಗೆ ನಮೋ ನಮೋ ಎಂಬೆ ಇದೆನ್ನ ಭವ ನಷ್ಟವಾಗಿ ಹೋದವು ಶಾಣಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ ॥ ಎಂದು ಹೇಳಿ ನೀಲಾಂಬಿಕೆ ತನ್ನ ಲಿಂಗದಲ್ಲಿ, ಅಪ್ಪಣ್ಣನು ತನ್ನ ಲಿಂಗದಲ್ಲಿ ಬಯಲಾದರು.

ಈ ಪ್ರಕಾರ ಅಪ್ಪಣ್ಣನು ಬಸವನ ಶರೀರ ಪ್ರಾಣಗಳಿಗೆ ಇರುವ ಸಂಬಂಧದಂತೆ ಇರ್ದನು. ಅದನ್ನೇ ಅಪ್ಪಣ್ಣನ ವಚನದಲ್ಲಿ ನೋಡಿರಿ—

ಅಯ್ಯ ಎನಗೆ ಬಸವ ಪ್ರಿಯನೆಂದರೆ ನೀನೆ, ಕೂಡಲ ಚನ್ನ ಬಸವಣ್ಣನೆಂದರೂ ನೀನೆ, ಗುರುವೆಂದರೂ ನೀನೆ, ಲಿಂಗವೆಂದರೂ ನೀನೆ, ಜಂಗಮವೆಂದರೂ ನೀನೆ, ಅದೇನು ಕಾರಣವೆಂದರೆ ನೀ ಮಾಡಲಾಗಿ ಅವೆಲ್ಲವು ನಾಮರೂಪಿಗೆ ಬಂದವು. ಅದು ನಾನೆಂದರೆ ಅಂಗ ನೀನೆಂದರೆ ಪ್ರಾಣ ಈ ಉಭಯವನು ನೀವೆ ಅರುಹಿದಿರಾಗಿ ಇನ್ನು ಭಿನ್ನವಿಟ್ಟು ನೋಡಿದೆನಾದರೆ ಚನ್ನ ಮಲ್ಲೇಶ್ವರ ನೀವೆ ಬಲ್ಲಿರಿ ಎನ್ನು ಬಸವಪ್ರಿಯ ಕೂಡಲ ಚನ್ನ ಬಸವಣ್ಣನಲ್ಲಿ ಏಕವಾದ ಕಾರಣ ಎನಗೆ ಭಯವಿಲ್ಲ ಬಂಧನ ವಿಲ್ಲ ಅದಕ್ಕೆ ನೀವೆ ಸಾಕ್ಷಿ.

ಎಂದು ಅಪ್ಪಣ್ಣನು ತನ್ನ ಹೃದಯದ ಇಂಗಿತವನ್ನೇ ಬಿಚ್ಚಿದ್ದಾನೆ. ಇನ್ನಲ್ಲಿ ಸಕಲವೂ ಬಸವನೆಂದೇ ಪೂರ್ಣ ನಂಬಿಗೆ ವಿಶ್ವಾಸಗಳಾಗಿವೆ. ಈ ಪ್ರಕಾರ ಅಪ್ಪಣ್ಣನು ಬಸವನ ಹೃದಯವನ್ನು ಅಲಂಕರಿಸಿದ್ದನು. ಅಂತೇ ಬಸವನು ನಿರ್ಬಯಲಾದ ಸುದ್ದಿಯನ್ನು ಕೇಳಿದ ಕೂಡಲೇ ಆವ ವಿಚಾರವಿಲ್ಲದೆ ಅಪ್ಪಣ್ಣನೂ ಕೂಡ ನಿರ್ಬಯಲಾಗಿ ಬಸವನ ಸೂಕ್ಷ್ಮ ಶರೀರವನ್ನು ಕೂಡಿಕೊಂಡು ಬಸವನಲ್ಲಿ ಬೆಳಗಿದನು. ಅಪ್ಪ ಣ್ಣನು ಬಸವನಲ್ಲಿ ಎಂಥ ದಿವ್ಯ ಭವ್ಯ ಅಚಲ ಶ್ರದ್ಧೆ, ಭಕ್ತಿ, ಪ್ರೀತಿ, ವಿಶ್ವಾಸ, ನಂಬಿಗೆ, ವಾತ್ಸಲ್ಯಗಳನ್ನಿಟ್ಟಿದ್ದನೆಂಬುದನ್ನು ವಾಚಕರು ವಿಚಾ ರಿಸಿ ನೋಡಿರಿ. ಹೀಗಂತಲೇ ಬಸವನು ನಿರ್ಬಯಲಾದ ಸುದ್ದಿ ಕೇಳಿದ ಕೂಡಲೆ ಅಪ್ಪಣ್ಣನೂ ನಿರ್ಬಯಲಾದರು. ಇವರ ಗುಡಿಗಳು ಈಗ ತಂಗಡಿಗಿಯಲ್ಲಿರುವವು. ಅವುಗಳ ಜಾತ್ರೆ ಈಗಲೂ ಆಗುತ್ತಿರುವದು. ನೀಲಾಂಬಿಕೆಯೂ ಲಿಂಗಮ್ಮನೂ ಸಹ ಅದರಂತೆ ಬಯಲಾದರು. ಇದೇ ನಿಜವಾದ ಸತಿ-ಪತಿಯರ ಪ್ರೀತಿ ಎಂದು ಹೇಳಬಹುದು. ಇಷ್ಟಕ್ಕೆ ಲೇಖಣಿಗೆ ವಿರಾಮ ಕೊಡುವೆನು.

# ಲಿಂಗದ ಮಹಿಮೆ.

(ಲೇಖಕಃ— ಶ್ರೀ ಬಳವಂತ ಧಡುತಿ, ಮಹಾಲಿಂಗಪೂರ.)

---

ಈ ಕೆಳಗಿನ ಪದ್ಯದಲ್ಲಿ ಜೀವನಿಗೆ "ತಂಗಿ" ಎಂಬ ಸಂಬೋಧನೆ ಮಾಡಲ್ಪಟ್ಟಿದೆ. ಆ ತಂಗಿಯನ್ನು ಕುರಿತು—

ತಂಗಿ ಪೇಳುವೆನೀಗ ಲಿಂಗದಾಮಹಿಮೆಯನು ।
ಲಿಂಗವೆ ಜಗದಾಧಾರ ಮಹಾಮಣಿಯು ॥
ಶ್ರೇಷ್ಠ ಸದ್ಗುರುವಿಂದ ಅರಿತಂಥ ಮಂತ್ರವು ।
ಅದುವೆ ತನುಮನಗಳಲ್ಲಿ ಎಡನುಡಿಸಿ ತನ್ಮಯವು ॥
ಜ್ಯೋತಿ ಮಹಾಲಿಂಗನನು ಯನಿಸಿಕೊಂಡಿಹನು ॥೧॥
ಬೇರೊಂದು ಸ್ಥಲದಲ್ಲಿ ಪುತ್ರದರ ಮಹಿಮೆಯು ।
ಯೋಗದಾ ಮಹಿಮೆಯು ಶಿವಯೋಗವೆಂದರಿದು ॥
ತಾನೆ ಅದರಲ್ಲಿ ಅಡಕವಾಗಿಹುದೆಂದು । ತಾನಾಗಿಹುದು ॥
ತಿಳಿದು ನೋಡಲು ಅರವೆ ಮಹಾಲಿಂಗ ಮಹಿಮೆಯು ॥೨॥
ಜೀವ ಭಾವವು ಲಿಂಗದೊಳ್ಳೈಕ್ಯವು । ಅದುವೆ ಶಿವಯೋಗ
ವೆಂದೆನಿಸಿ ಸಾರಿಹುದು ॥೩॥
ಗುರುವಿನಿಂದೊಲಿದುದು ಪ್ರಥಮ ಲಿಂಗಾಚರಣೆ ।
ಯಂದಿಹುದದನು ಪೇಳುವೆನೀಗ ತಂಗಿ ನಿನಗೆ ॥
ಬೆಳಗಿನೊಳು ಬೇಗೆದ್ದು ತತ್ವಮಸಿ ಮಂತ್ರವನು ।
ಪಠಿಸುತಿರಲದು ತೋರೆ ಕಾಯದಾ ಮಹಿಮೆಯು ॥೪॥
ಗಂಗೆ ಯಮುನೆಯರೆಂಬ ಸಮದೃಷ್ಟಿಯಲಿ ತಾನು ।
ಆನು ಇಹೆನೆಂಬುದು ಭಸಿತ ಕರ್ಪೂರ ಹೊಗೆಯು ॥೫॥
ಧಿಮಿಧಿಮಿಸಿ ಉರಿಯುತಿರೆ ಜ್ಯೋತಿ ತಾನೆಂದುದು ।
ಕಾಯದಾ ಹೊಗೆಯಂದರಿದು ಚನ್ನಬಸವಾರ್ಯರನು ॥೬॥
ನುತಿಸಿ ಪಾದಂಗಳನು ಪಿಡಿದು ನಮಿಸಿರ್ದುದು ।
ಅದುವೆ ಲಿಂಗಾಚಾರ ಪದುಳದಿಂ ಮಾಳ್ಪರನು ॥೭॥

---

# "ಮಾನವನಲ್ಲಿ ಅಂತರಂಗ ಶುದ್ಧಿ ಬೆಳೆಯಬೇಕು."

ಲೇಃ— ಎಸ್. ಡಿ. ಮೋಟಗಿ, (ಅಥಣಿ) ಬಿ. ಎ; ಬಿ. ಇ ಡಿ.
ಟೀಚರ, ಎಸ್. ಎ. ಹಾಯಸ್ಕೂಲ, ಅಣ್ಣಿಗೇರಿ.

---

ಅನೇಕ ಜನ್ಮಗಳನ್ನು ದಾಟಿ ಈ ಮಾನವ ಜನ್ಮಕ್ಕೆ ಬಂದಿರುತ್ತೇವೆ. ಅದರ ಸದುಪಯೋಗವನ್ನು ಮಾಡಿಕೊಳ್ಳುವದು ನಮ್ಮನಿಮ್ಮೆಲ್ಲರ ಆದ್ಯ ಕರ್ತವ್ಯ. ಕೇವಲ ಡಂಬಾಚಾರಕ್ಕೆ ಪ್ರಧಾನ್ಯ ಕೊಟ್ಟು, ನಮ್ಮ ಕರ್ತವ್ಯವನ್ನು ಮರೆತರೆ, ನಾವು ನಮ್ಮ ಪಾಲಿನ ಕರ್ತವ್ಯವನ್ನು ಚನ್ನಾಗಿ ನೆರವೇರಿಸಿದಂತೆ ಆಗುವದಿಲ್ಲ. ನಾವು ಯಾವದೇ ಕೆಲಸವನ್ನು ಕೈಕೊಂಡರೂ, ಅದು ಯಾವಾಗಲೂ ವಿಧಾಯಕವಿರಬೇಕೇ ವಿನಃ, ವಿನಾಯಕವಿರಬಾರದು.

ಕಳವು ಮಾಡುವದಾಗಲಿ, ಹಿಂಸೆ ಮಾಡುವದಾಗಲಿ, ಅಸತ್ಯ ನುಡಿಯುವದಾಗಲಿ ಅಥವಾ ಇನ್ನೊಬ್ಬರ ಮನಸ್ಸು ನೋಯಿಸುವದಾಗಲಿ ಇವೆಲ್ಲವುಗಳು ಅಂತರಂಗ ಶುದ್ಧಿಗೆ ವಿರೋಧವಾದವುಗಳು. ಅಂತೇ ಬಸವಣ್ಣನವರು ಹೀಗೆ ಹೇಳಿದ್ದಾರೆ—

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ಅನ್ಯರಿಗೆ ಅಸಹ್ಯಬಡಬೇಡ, ತನ್ನ ಬಣ್ಣಿಸಬೇಡ, ಇದಿರು
ಹಳಿಯಲುಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ
ಶುದ್ಧಿ, ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ."

ಇದನ್ನೋದಿದಾಗ ಸುಲಭದಲ್ಲಿ ಮುಕ್ತಿ ಮಾರ್ಗದ ಕಲ್ಪನೆಯು ಬಾರದಿರದು. ಅನೇಕ ಮಹಾಪುರುಷರು ಆ ಆ ಕಾಲದಲ್ಲಿ ತಾತ್ವಿಕ, ನೀತಿಪರ ಹಾಗೂ ವಿಚಾರಪರ ವಿಚಾರಗಳನ್ನು ತಿಳಿಹೇಳಿ, ವಾಮ ಮಾರ್ಗದಿಂದ ನಡೆಯುವ ಜನರನ್ನು ಸತ್‌ಪಥಕ್ಕೆ ಹಚ್ಚಿಸಲು ಸಾಕಷ್ಟು ಯತ್ನಿಸಿದ್ದಾರೆ.

ನಾವು ಅನೇಕ ಪದವಿಗಳನ್ನು ಅನೇಕ ವಿಶ್ವವಿದ್ಯಾಲಯಗಳಿಂದ ಪಡೆದಿರಬಹುದು; ಆದರೆ ಅಂತರಂಗವನ್ನು ಒಳ್ಳೇ ರೀತಿಯಿಂದ ಇಟ್ಟು

ಕೊಳ್ಳದೆ ಯಾವ ಪ್ರಯೋಜನವೂ ಇಲ್ಲ. ಮಾನವನಿಗೆ ಒಂದು ಪ್ರಧಾನ್ಯ ಅಥವಾ ಪ್ರಾಮುಖ್ಯತೆ ಬರಬೇಕಾದರೆ ಅವನಲ್ಲಿ ಹುದಗಿದ ಅಂತರಂಗ ಶುದ್ಧಿಯೇ ಕಾರಣವೆಂದು ಎದೆತಟ್ಟಿ ಹೇಳಬಹುದು. ಮನುಷ್ಯನು ತನಗೆ ಸಹಾಯ ಮಾಡಲು ಆಗದಿದ್ದರೂ, ಇನ್ನೊಬ್ಬರ ಸಹಾಯಕ್ಕೆ ಅಡ್ಡಿ ಆತಂಕಗಳನ್ನು ತರದಿದ್ದರೆ ಎಷ್ಟೋ ಉಪಕಾರ ಮಾಡಿದಂತಾಗುವದು. ಇದನ್ನೆಲ್ಲವನ್ನೂ ನೋಡಲಾಗಿ ಮಾನವನು ತಾನೂ ಬೆಳಗಿ, ತನ್ನ ಸುತ್ತಲಿನ ಜನರನ್ನು ಬೆಳಗಿಸಿ ಬಾಳುವದು ಶ್ರೇಯಸ್ಕರವಲ್ಲವೇ ? "Live and let live poliey" ಇದನ್ನೇ ಹೇಳುತ್ತದೆ. ನಾವೂ ಬದಕೋಣ ಹಾಗು ಇನ್ನೊಬ್ಬರನ್ನೂ ಬದುಕಿಸೋಣ.

ನಾವು ಏನೇ ಮಾಡಿದರೂ ಪ್ರಾಮಾಣಿಕ ಕಾರ್ಯ ಇಲ್ಲವೆ ವಂಚನೆಕಾರ್ಯ ಆ ಶಿವನಿಗೆ ಗೊತ್ತೇ ಇರುತ್ತದೆ. ಅವನನ್ನು ಮೋಸ ಮಾಡುವದು ಯಾರಿಂದಲೂ ಶಕ್ಯವಿಲ್ಲ. ಅಂತೇ ಶ್ರೀ ಸರ್ಪಭೂಷಣ ಶಿವಯೋಗಿಗಳು ಈ ರೀತಿ ಹೇಳಿದ್ದಾರೆ—

"ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಹನೇ ।
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ
ಚಿನುಮಯ ಶಿವನೆಲ್ಲ ಅರಿಯನೆ ಮರುಳೇ" ॥

ಜನರು ಮೆಚ್ಚಿದರೆ ಅವರೇನು ನಿನ್ನನ್ನು ಕೈಲಾಸಕ್ಕೆ ಕರೆದು ಕೊಂಡು ಹೋಗುವರೇ ? ಜನರು ಮೆಚ್ಚದಿದ್ದರೂ ಶಿವನು ನಿನ್ನನ್ನು ಬಿಡುವದಿಲ್ಲ. ಜನರು ನಿನ್ನನ್ನು ಈ ಭೂಮಿಯ ಮೇಲೆ ದೊಡ್ಡವನು, ದೊಡ್ಡ ಮನುಷ್ಯನು ಅಂದ ಮಾತ್ರಕ್ಕೆ ಶಿವನಿಗೆ ಇದು ಗೊತ್ತಿರುವದಿಲ್ಲವೇ ? ಅಂದಮೇಲೆ ಶಿವನು ಮೆಚ್ಚುವ ಹಾಗೆ ನಡೆದು ಕೊಳ್ಳಿರೆಂದು ಇದರ ತಾತ್ಪರ್ಯ.

ಈ ರೀತಿ ವಿಚಾರ ಮಾಡಿದಲ್ಲಿ ಮನುಷ್ಯನು ಪ್ರೇಮದಿಂದ ಬಾಳಿ ಜನರನ್ನು ಸನ್ಮಾರ್ಗಕ್ಕೆ ಹಚ್ಚಿ, ಇಹದಲ್ಲಿ ಹಾಗೂ ಪರದಲ್ಲಿ ಹೌದೆನ್ನುವ ಹಾಗೆ ನಡೆದುಕೊಳ್ಳುವದರಲ್ಲಿ ತನ್ನ ಜೀವನದ ಸಫಲತೆ ಅದೆ ಅನ್ನುವ ಮಾತು ಯಾರೂ ಅಲ್ಲಗಳೆಯಲಾರರು.

———

ಒಬ್ಬ ಜಿಜ್ಞಾಸುವಿನ

# ಶಿವಲಿಂಗದ ವಿಮರ್ಶೆಯು.

(ಬರೆದವರುಃ— ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ)

ಲೇಖಗಳು ಸರಿಯಾದವುಗಳಿದ್ದರೆ ಒಬ್ಬರ ಮನ ನೋಯದಿದ್ದರೆ ಆ ಲೇಖಗಳಿಗೆ ತಮ್ಮ ಹೆಸರನ್ನು ಕೊಡುವದು ಸಹಜ ಸ್ವಾಭಾವಿಕವಾಗಿದೆ. ಈತ ಗುಪ್ತ ಹೆಸರಿನಿಂದ ಲೇಖ ಬರೆದದ್ದು ನೋಡಿದರೆ, ಒಂದು ದೊಡ್ಡ ಸಮಾಜದ ಧರ್ಮದ ಟೀಕೆ, ನಿಂದೆ ಮಾಡಬೇಕೆಂದೇ ಹಾಗೆ ಮಾಡಲಾಗಿದೆ ಎಂದು ತಿಳಿಯುವದು. ಈ ಪ್ರಕಾರ ಅಂಜುವ ಕಾರಣವೇ ತಮ್ಮ ಲೇಖದಲ್ಲಿ ಅನ್ಯರ ನಿಂದೆ, ಟೀಕೆ ಮಾಡುವ ಉದ್ದೇಶವಿದ್ದಂತೆ ಅನಿಸುವದು. ಸತ್ಯವನ್ನು ಪ್ರಕಟಿಸಬೇಕಾಗಿದ್ದರೆ ಬಯಲಿಗೆಳೆಯಬೇಕಾಗಿದ್ದರೆ ಯಾರೂ ಅಂಜುವ ಕಾರಣವೇ ಇಲ್ಲ. ನೀವು ಬರೆಯುವದು ಸತ್ಯಸಂಗತಿ ಅಲ್ಲೆಂದು ತಿಳಿದೇ ಹಾಗೆ ಮಾಡಿದ್ದೀರಿ ಎಂದು ಅನಿಸುವದು. ಇಂಥ ಲೇಖಗಳನ್ನು ಪ್ರಕಟಿಸಬೇಕಾದರೆ ಮುಂದೆ ಅದರ ಪರಿಣಾಮವೇನಾಗುವದೆಂದು ಸ್ವಲ್ಪ ವಿಚಾರಿಸಬೇಕು? ಹಾಗೇ ಎಂದೂ ಈ ಪ್ರಸಂಗದಲ್ಲಿ ದುಡುಕಬಾರದು.

ಅನೇಕ ದೇವದೇವತೆಯರ ಚಿತ್ರಗಳನ್ನು ಕಲ್ಪಿಸಿದ್ದಾರೆ. ಪುರಾಣದಲ್ಲಿಯ ದೇವದೇವತೆಯರ ವರ್ಣನೆ ನೋಡಿ ಚಿತ್ರಕಾರರು ಅದರಂತೆ ಚಿತ್ರಗಳನ್ನು ಬರೆದರು. ಇಂಥ ಚಿತ್ರಗಳನ್ನು ನೋಡಿ ಅನೇಕರು ಅನೇಕ ಬಗೆಯ ಅರ್ಥಗಳನ್ನು ಮಾಡುವರು. ತಮ್ಮ ತಮ್ಮ ಬುದ್ಧಿ ಹೃದಯಗಳಿದ್ದಂತೆ ಅವುಗಳಿಗೆ ಅರ್ಥವನ್ನು ಮಾಡುವರು. ಉ—

ಅಮಾವಾಸಿಯ ಕಾಳಕತ್ತಲೆಯಲ್ಲಿ ಒಂದು ಮೋಟ ಜಾಲಿಯ ಗಿಡವನ್ನು ಕಂಡು ಅನೇಕರು ಅನೇಕ ಅರ್ಥಗಳನ್ನು ಮಾಡುವರು. ಅಂಜುಗುಳಿ (ಪುಕ್ಕನು) ಅದಕ್ಕೆ ದೆವ್ವ ಭೂತ ಎಂದೆನ್ನುವನು. ಸ್ವೈರವೃತ್ತಿಯ ಸ್ತ್ರೀ ಅದಕ್ಕೆ ತನ್ನ ವಿಟಪುರುಷನೇ ಬಂದನೆನ್ನುವಳು. ಒಬ್ಬ

ವಿಟನು ಅದಕ್ಕೆ ತನ್ನ ಪ್ರೀಯ ಸ್ತ್ರೀ ಬಂದಳೆನ್ನುವನು. ತುಡುಗನು ಅದಕ್ಕೆ ಪೋಲೀಸನೆನ್ನುವನು. ಪೋಲೀಸನು ಅದಕ್ಕೆ ಸ್ತ್ರೀಯನ್ನುವನು. ತುಡುಗನೆನ್ನುವನು, ಆದರೆ ಅದನ್ನು ಸರಿಯಾಗಿ ನೋಡಿದವನು ಜೀಲಿಯ ಮೋಟ ಮರವೆನ್ನುವನು. ಹೀಗೆ ತರತರದ ಅರ್ಥ ಆ ಒಂದೇ ಕೊರಡಿಗೆ ಹೀಗೆ ಅರ್ಥ ಮಾಡುವದನ್ನು ನೋಡಿದರೆ ಅವರ ಅಂತರಾಳದಲ್ಲಿ ಏನೇನು ಇರುವದೋ ಅದೇ ಅರ್ಥವನ್ನು ಅದಕ್ಕೆ ಹಚ್ಚಿಕೊಂಡರು. ಇದೇನು ಐತಿಹಾಸಿಕವಲ್ಲ. ಇದಕ್ಕೆ ಐತಿಹಾಸಿಕವೂ ಬೇಕಾಗಿಲ್ಲ. ಇದರಂತೆ ಜಗತ್ತಿನ ಪ್ರತಿಯೊಂದಕ್ಕೂ ತಮ್ಮಲ್ಲಿಯ ಅರ್ಥವನ್ನು ಪ್ರತಿಯೊಬ್ಬನು ಹಚ್ಚುವನು. ರಾಮಾಯಣ, ಮಹಾಭಾರತ, ಗೀತೆ, ಶಿವಪುರಾಣ, ವಿಷ್ಣುಪುರಾಣ, ಬಸವಪುರಾಣ, ದೇವಿಪುರಾಣ, ನಿಜಗುಣ ಶಿವಯೋಗಿಗಳ ವೇದಾಂತ ರತ್ನಾವಳಿ ಮೊದಲಾದವುಗಳಿಗೆ ಸಹ ತಮ್ಮ ತಮ್ಮ ಅರ್ಥ ಹಚ್ಚಿ ಹೇಳುವರು. ಬಹುತರ ಎಲ್ಲರೂ ತೋರಿಕೆಯ ಅರ್ಥವನ್ನು ಹೇಳುವರು. ಅದರ ಗೂಢಾರ್ಥ ಇಂಗಿತಾರ್ಥ ಮೊದಲಾದ ಹೆಚ್ಚಿನ ಅರ್ಥಗಳನ್ನು ಹಚ್ಚುವದಿಲ್ಲ. ಹೀಗಾದರೆ ಅವೆಂದೂ ಸರಿಯಾದ ಅರ್ಥ ಕೊಡಲಾರವು. ಅದರಂತೆ ಮಾಹೇಶ್ವರಿ, ಮಹಾಕಾಲಿ, ಮಹಾಲಕ್ಷ್ಮಿ, ಮಹಾಸರಸ್ವತಿ, ಶಿವ, ಲಿಂಗ, ವಿಷ್ಣು' ಬ್ರಹ್ಮ, ರುದ್ರ. ಮಹಾದೇವ, ಕೃಷ್ಣನ ರಾಸಲೀಲೆ, ಕಾಲಿಯಾಮರ್ಧನ, ತ್ರಿಪುರ ಸಂಹಾರ ಅಮೃತಮಥನ, ಗಂಗಾವತರಣ ಹೀಗೆ ಅನೇಕ ಚಿತ್ರಗಳನ್ನು ನೋಡಿ (~೦( ತೋರಿಕೆಯ ಅರ್ಥವನ್ನು ಮಾತ್ರಬಾರದು. ಹೀಗಾಗಿ ನಿಜವಾದ ಅರ್ಥ ಹೊಳೆಯಲಾರದಕ್ಕಾಗಿ ಜನ ಮಾರ್ಗ ಬಿಟ್ಟು ಚರಿಸುತ್ತಿರುವದು. ಹೀಗೆ ಎಲ್ಲರು ಮತಧರ್ಮ ದೇವರ ಹೆಸರಿನಿಂದ ಕಡಿದಾಡಿ ಸಾಯುತ್ತಿರುವರು. ನಿಜವಾದ ಗೂಢಾರ್ಥವನ್ನು ಹಚ್ಚಿದರೆ ಅವೆಲ್ಲ ನಮ್ಮಲ್ಲೇ ನಮ್ಮೊಳಗೇ ಇರುವವೆಂದು ಅನಿಸುವದು ಆಗ ಈಗಿನ ಜಗಳ ಮತ್ಸರ ಶ್ರೇಷ್ಠ ಕನಿಷ್ಠ ಮೊದಲಾದ ಭೇದಗಳು ಸಹಜ ಹೋಗುವವು. ಅದರಂತೆ ಈ ಲೇಖಕ್ಕೆ ಸಂಬಂಧಿಸಿದ 'ಶಿವಲಿಂಗ'ದ ಅರ್ಥ ತಿಳಿಯಲಾರದಕ್ಕಾಗಿ ಈ ಜಿಜ್ಞಾಸು ಎಲ್ಲರನ್ನೂ ಅಡ್ಡದಾರಿಗೆ ಹಚ್ಚಲೆತ್ನಿಸುವನು. ಅನೇಕರಿಗೆ ಕೋಪ ತಾಪಗಳಾಗುವಂತೆ ಬರೆಯುವನು. ಇದು ಇವನಿಗೆ ಭೂಷಣವಲ್ಲ ಇಂಥ ಲೇಖಗಳನ್ನು ಸಮ್ಯಕ್ ದೃಷ್ಟಿ

ಪಡೆದು ಬರೆಯುಬೇಕು. ಚಿತ್ರ ನೋಡಿ ಅದರ ಐತಿಹಾಸಿಕತೆ ಪುರಾಣ ಕಾದಂಬರಿ ಓದಿ ಅವುಗಳ ಐತಿಹಾಸಿಕತೆಯನ್ನು ಶೋಧಿಸಿದರೆ ಸರಿಯಾಗಲಾರದು.

ಈಗ "ಶಿವಲಿಂಗ" ಎಂಬ ಸಂದರ್ಶನ ವಾರ ಪತ್ರಿಕೆಯಲ್ಲಿಯ ಲೇಖದ ಪ್ರತಿಯೊಂದು ಶಬ್ದದ ಪ್ರತಿಯೊಂದು ವಾಕ್ಯದ, ಪ್ರತಿಯೊಂದು ಪ್ಯಾರಾದ ವಿಮರ್ಶೆ ಮಾಡಹತ್ತಿದರೆ ಲೇಖ ದೊಡ್ಡದಾಗುವದು ಅಲ್ಲದೆ ಶಿವಲಿಂಗ ಅಂದರೆ ಬೇರೆ ಶಿವ ಅಂದರೆ ಬೇರೆ ಇವುಗಳ ಚಿತ್ರ ನೋಡಿ ಅರ್ಥವನ್ನು ಮಾಡಬಾರದು. ಸಾಮಾನ್ಯವಾಗಿ ಇಡೀ ಲೇಖದ ಸಾಮಾನ್ಯ ವಿಮರ್ಶೆ ಮಾಡಿ ಶಿವಲಿಂಗದ ನಿಜ ಅರ್ಥವನ್ನು ನಾವು ಮಾಡುವೆವು. ಶಿವನ ಚಿತ್ರವನ್ನು ನೋಡಿ ಅವನು ಧರಿಸಿದ ಕೆಲವು ಪದಾರ್ಥಗಳ ಮೇಲಿಂದ ತಮಗೆ ಹೊಳೆದಂತೆ ಅರ್ಥಮಾಡಿ ಅದನ್ನೆ ಐತಿಹಾಸಿಕತೆಗೆ ತಂದಿದ್ದಾರೆ. ವಿಷ್ಣುವಿನ ಚಿತ್ರವನ್ನು ನೋಡಿ ಏನು ಮಾಡುವಿರಿ? ಅದರಂತೆ ಎಲ್ಲ ಚಿತ್ರಗಳ ಅರ್ಥಗಳು ಏನೇನು ಅವರ ಮೂಲ ವಂಶವೇನೆಂದು ಐತಿಹಾಸಿಕವಾಗಿ ಕಂಡುಹಿಡಿಯಿರಿ. ಪುರಾಣದ ತೋರಿಕೆಯ ಅರ್ಥದಿಂದ ಎಂದೂ ಐತಿಹಾಸಿಕತೆಯು ಹೊರಡುವದಿಲ್ಲ. ಅಸಂಖ್ಯ ಪುರಾಣಗಳುಂಟು. ಯಾವ ಸಂಶೋಧಕನೂ ಇವುಗಳಿಂದ ಐತಿಹಾಸಿಕತೆಯನ್ನು ಕಾಣಬೇಕೆಂದು ಬಯಸಿಲ್ಲ. ಪುರಾಣ ಕಾದಂಬರಿಗಳಿಂದ ಅದನ್ನು ಶೋಧಿಸುವೆನೆಂದು ಹೇಳುವದು ಸರಿಯಾದ ಮಾರ್ಗವೂ ಅಲ್ಲ. ಯಾಕಂದರೆ ಪುರಾಣ ಕಾದಂಬರಿಗಳೆಲ್ಲ ನಾಳಿನಿಂದ ಅದ್ಭುತ ವರ್ಣನೆಗಳಿಂದ ಕಾಲ್ಪನಿಕವಾಗಿ ಹೆಣೆಯಲ್ಪಟ್ಟಿರುವವು. ಅದಕ್ಕೆ ಅವೆಲ್ಲವುಗಳು ಸತ್ಯದಿಂದ ಬಹು ದೂರ ಇರುವವು.

ಶಿವನೆಂದರೆ ಅವನೊಬ್ಬ ಮನುಷ್ಯನಲ್ಲ. ಅದೊಂದು ಸ್ಥಿತಿ; ಮನುಷ್ಯನಲ್ಲ, ಎಂದಬಳಿಕ ಕಾಡುಬೇಟೆಗಾರನಲ್ಲ. ಕಾಡುಬೇಟೆಗಾರನಲ್ಲೆಂದ ಬಳಿಕ ಕಾಡುಜನರ ಗುಂಪಿನ ಮುಖಂಡನೂ ಅಲ್ಲ ನಿಮ್ಮ ಲೇಖ ಹೀಗಾಗಿ ಇಡೀಯಾಗಿ ತಪ್ಪಾಗಿರುವದು. ಶಿವನೆಂದರೆ ಒಬ್ಬ ಮನುಷ್ಯನೆಂದು ತಿಳಿದುಕೊಂಡದ್ದರಿಂದ ಇಷ್ಟೆಲ್ಲ ಪ್ರಮಾದವಾಗಿದೆ. ಶಿವನೆಂದರೆ ಯೋಗ, ಪುಣ್ಯ, ಆನಂದ, ಕಲ್ಯಾಣ, ಮಂಗಲ, ಮಹದೇವ (ನಿರಾಕಾರ), ಸುಖ, ಅದ್ವೈತಬ್ರಹ್ಮ, ಲಿಂಗ, ವೇದ, ಮೋಕ್ಷ ಎಂದು ಅನೇಕ

ಅರ್ಥಗಳುಂಟು. ಇವುಗಳನ್ನು ವಿಚಾರಿಸಿದರೆ ಇವೆಲ್ಲ ಪಾರಮಾರ್ಥವನ್ನು ಬೋಧಿಸುವ ಶಬ್ದಗಳಿರುವವು. ಪ್ರತಿಯೊಬ್ಬನಿಗೂ ಶಿವನಾಗಲಿಕ್ಕೆ ಬರುವದು. ಪೋಷಾಕುಹಾಕಿಕೊಂಡಲ್ಲ. ಹಾಗೆ ಗುಣಗಳನ್ನು ಗಳಿಸಿದರೆ ಮಾತ್ರ ಶಿವನಾಗುವನು.

ಈ ಜಿಜ್ಞಾಸು ಕೇವಲ ಕೆಲವು ತನ್ನ ಅರ್ಥಕ್ಕೆ ಅನಕೂಲವಾಗುವಂಥ ಶಿವನ ಆಭರಣಗಳನ್ನಷ್ಟೇ ತಕ್ಕೊಂಡು ಅವುಗಳಿಗೆ ತೋರಿಕೆಯ ವಿಪರೀತ ಅರ್ಥವನ್ನು ಹಚ್ಚಿದ್ದಾನೆ. ಇದು ಸರಿಯಲ್ಲ. ಶಿವನ ಎಲ್ಲ ಆಭರಣಗಳು ಶಿವನಾಗುವವನು ಹೊಂದಬೇಕಾದ ಗುಣಶೀಲಗಳನ್ನು ಹೇಳುವವು. ಅದನ್ನೇ ಈಗ ಇಲ್ಲಿ ವಿಚಾರಿಸುವೆವು— ಚಂದ್ರಧರ=ಚಂದ್ರನೆಂದರೆ ಶಾಂತಗುಣ ಶಾಂತಿ ಸಂಪೂರ್ಣ ನೆಲಸಿದರೆ ಶಿವನಾಗುವನು. ಶಾಂತಿಯಲ್ಲಿ ಶುದ್ಧ ಪ್ರಕಾಶವಿರುತ್ತದೆ. ಅದೇ ಜ್ಞಾನ ಪ್ರಕಾಶವು. ತ್ರಿನೇತ್ರಧರ=ಇದು ಜ್ಞಾನದ ಕಣ್ಣು ಜ್ಞಾನವು ಸರಿಯಾಗಿ ಬಂದರೆ ಶಿವನಾಗುವನು. ತ್ರಿಶೂಲಧಾರಿ=ಮೂರು ಶೂಲಗಳೆಂದರೆ ಸತ್ವ, ರಜ, ತಮಗಳು ಇವುಗಳನ್ನು ಹಿಡಿದು ಆಳಿದರೆ ಅಂದರೆ ಗೆದ್ದರೆ ಅವನೇ ತ್ರಿಶೂಲಧರ. ತ್ರಿಗುಣಾತೀತನೆಂದರೂ ಶಿವನೇ. ಈ ಮೂರು ಗುಣಗಳೇ ಈ ಜಗತ್ತಿಗೆ ಕಾರಣ. ಈ ಗುಣಗಳಿಗೆ ಅತೀತನಾದರೆ ಅವನೇ ತ್ರಿಗುಣಾತೀತ. ತ್ರಿಶೂಲಧಾರಿ. ಅವನೇ ಶಿವನು. ತ್ರಿಪುರ ಸಂಹಾರಕ ಇವೇ ಮೂರು ಗುಣಗಳನ್ನು ಗೆದ್ದರೆ ಶಿವನಾಗುವನು. ಕಾಮಾರಿ – ಕಾಮನನ್ನು ಸಂಪೂರ್ಣ ಕೊಂದವರೆಲ್ಲರೂ ಶಿವನಾಗುವರು. ಕಾಲಾರಿ – ಯಮನನ್ನು ಗೆದ್ದವನು ಸಕಲ ಭಯಭೀತಿಗಳನ್ನು ಗೆದ್ದವನು ಶಿವನಾಗುವನು. ಉರುಗಾಭರಣ – ಈ ಸಂಸಾರವೆಂಬ ಉರುಗವನ್ನು ಆಭರಣ ಮಾಡಿಕೊಂಡವನು. ಅಂದರೆ ಸಂಸಾರದಲ್ಲಿಯ ಹೊನ್ನು, ಹೆಣ್ಣು, ಮಣ್ಣುಗಳಿಂದ ಕಡಿಸಿಕೊಳ್ಳದೆ, ವಿಷಯದ ನಂಜು ಇಲ್ಲದೆ ಅವುಗಳ ಮಧ್ಯದಲ್ಲಿ ಸಹಜ ಇರಲಿಕ್ಕೆ ಬಂದರೆ ಅವನೇ ಶಿವನಾಗುವನು. ಶ್ರೀ ರಾಮಕೃಷ್ಣ ಪರಮಹಂಸ ದೇವರು ಮತ್ತು ಬಸವೇಶ್ವರ ಮೊದಲಾದವರಂತೆ ಇವುಗಳಲ್ಲಿ ಇದ್ದರೂ ಅವುಗಳ ವಿಷಯದ ನಂಜು ಇಲ್ಲದೆ ಇದ್ದರು. ಅದರಂತೆ ಇದ್ದವರೆಲ್ಲರೂ ಶಿವನಾಗುವರು. ನೀಲಕಂಠ – ಪರರ ಕಲ್ಯಾಣಕ್ಕಾಗಿ ವಿಷ ಕುಡಿದು ಬಾಳುವದು ಸಕಲ ಕೇಡಿನಿಂದ ಪರರನ್ನು ಪಾರು ಮಾಡುವದಲ್ಲದೆ ತಾನೂ

ಪಾರಾದರೆ ಮಾತ್ರ ಶಿವನಾಗಬಲ್ಲ. ಗಂಗಾಧರ – ಗಂಗಾ ಅಂದರೆ ಪವಿತ್ರ. ಪವಿತ್ರರಾದರೆ ಎಲ್ಲರೂ ತಲೆಯ ಮೇಲೆ ಕೂಡ್ರಿಸಿಕೊಳ್ಳುವರು. ಗಂಗಾ ಪ್ರವಾಹವಾಗಿ ಹರಿಯುತ್ತಿದೆ. ಪವಿತ್ರತೆಯ ಕೀರ್ತಿ ಹೊನ ಲಾಗಿ ಹರಿಯಬೇಕೆಂದು ಸೂಚಿಸುವದು. ಹಾಗಾದರೆ ಶಿವನಾಗುವನು. ಡಮರೂಹಧಾರಿ – ಇಹ ಪರ ಒಂದೇ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಎಂಬಂತೆ ನಡೆದು ತೋರಿಸಿದರೆ ಅವನೇ ಶಿವನಾಗುವನು. ಪರದಲ್ಲಿಯಂತೆ ಇಹದಲ್ಲಿ ನಡೆಯಬೇಕೆಂದು ಸೂಚಿಸುಗದು. ಮೃಗ ಧರ – ಚಿಗರಿಯಂತಿರುವ ಮನಸ್ಸನ್ನು ಚನ್ನಾಗಿ ಹಿಡಿದರೆ ಶಿವನಾಗು ವನು. ರುಂಡಮಾಲಾಧರ – ರುಂಡ=ತಲೆ, ತಲೆಯಲ್ಲಿ ಜ್ಞಾನವಿರು ವದು. ಜ್ಞಾನ ಸಂಪೂರ್ಣ ಇದ್ದವರೆಲ್ಲರನ್ನು ಎಲ್ಲರೂ ಕಂಠಮಾಲೆ ಯನ್ನಾಗಿ ಮಾಡಿಕೊಳ್ಳುವರೆಂದು ಇದರ ಭಾವ. ವಿಭೂತಿ ಲೇಪಿತ – ಮಹಾಪುರುಷನಾಗೆಂದು ಸೂಚಿಸುವದು. ರುದ್ರಾಕ್ಷಿಮಾಲಾನ್ವಿತ – ಶಿವನ ಮೂರನೇ ಕಣ್ಣನ್ನು ಹೊಂದೆಂದು (ಜ್ಞಾನ ನೇತ್ರಗಳನ್ನು ಪರ ಮಾಡಿ ಹಾಕಿಕೋ) ಎಂದು ಸೂಚಿಸುವದು. ಶಿವನು ಸಂಹಾರ ಕರ್ತನು. ಸಕಲ ವಿಷಯಗಳನ್ನು ಸಂಹಾರ ಮಾಡಿ ಸಂಪೂರ್ಣ ನಿರ್ವಿಷಯಿ ಯಾದರೆ ಶಿವನಾಗುವನು. ಕೈಲಾಸಪತಿ ಮೋಕ್ಷಕ್ಕೆ ಅಧಿಪತಿ ಆದ ವನೇ ಶಿವನಾಗಬಲ್ಲ. ಅಂದರೆ ಸಂಪೂರ್ಣ ಮೋಹವನ್ನು ಕ್ಷಯ ಮಾಡಿ ಇಹದಲ್ಲಿಯಂತೆ ಪರದಲ್ಲಿ ಪರದಲ್ಲಿಯಂತೆ ಇಹದಲ್ಲಿ ಇರಲಿಕ್ಕೆ ಬಂದರೆ ಮಾತ್ರ ಮೋಕ್ಷವೆನಿಸುವದು, ಆಗ ಅವನೇ ಕೈಲಾಸಪತಿ ಶಿವನಾಗಬಲ್ಲ. ನಂದಿವಾಹನ – ಮುದಿ ಎತ್ತಿನ ಮೇಲೆ ಕೂಡ್ರುವವನು ಎಂದರೆ ಭವಳೀ ಶಂಕರ ತೀವ್ರ ಪ್ರಸನ್ನನಾಗುವವನು. ಹೀಗೆ ಪ್ರತಿ ಯೊಬ್ಬರಲ್ಲಿ ಶಿವ, ವಿಷ್ಣು, ಬ್ರಹ್ಮ, ಶಕ್ತಿ, ಲಕ್ಷ್ಮಿ, ಸರಸ್ವತಿಯರೂ ಇದ್ದಾರೆ. ಇದರ ವಿವರಣೆ ನೋಡಿರಿ—

ಸರಸ್ವತಿ+ಬ್ರಹ್ಮ— ನೆಂದರೆ ಹುಟ್ಟಿಸುವವನು. (ಸೃಷ್ಟಿಕರ್ತ) ಎಲ್ಲವೂ ಬುದ್ಧಿಯಿಂದ ಹುಟ್ಟುವದು. ಬ್ರಹ್ಮನ ಹೆಂಡತಿ ಸರಸ್ವತಿ. ಅಂದರೆ ವಿದ್ಯೆಯಿದ್ದರೆ ಬುದ್ಧಿಗೆ ಬಹಳ ಬಲ ಬಂದು ಬೇಕಾದದ್ದು ಹುಟ್ಟುವದು. ಸರಸ್ವತಿ ನವಲಿನ ಮೇಲೆ ಕೂತಿರುವಳು. ನವಿಲಿಗೆ ಅನೇಕ ಗರಿಗಳೆಂಬ ಕಣ್ಣುಗಳಿರುವವು. ಅದರಂತೆ ವಿದ್ಯಗಳು ಅನೇಕ ವಿರುವವು. ಬ್ರಹ್ಮನು ಹಂಸಿನ ಮೇಲೆ ಕೂತಿರುವನು. ವಿಂದುಳು

ಬೆಳ್ಳಗಿರುವದು. ಅಲ್ಲಿ ಬ್ರಹ್ಮನ ಅಂದರೆ ಬುದ್ಧಿಯ ವಾಸ. ಬ್ರಹ್ಮನು ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದ್ದಾನೆ. ಮಣಿಪುರ ಚಕ್ರವೇ (ಹೊಕ್ಕಳು) ವಿಷ್ಣುವಿನ ಸ್ಥಾನ. ಅಲ್ಲಿಂದ ಮೇಲೆ ಶಿರಕಮಲವಿರುವದು. ಈ ಶಿರಕಮಲದಲ್ಲೇ ಬ್ರಹ್ಮನ ವಾಸ. ಬ್ರಹ್ಮನಿಗೆ ನಾಲ್ಕು ಕೈಗಳು ಅಂದರೆ ಬುದ್ಧಿ ಇದ್ದರೆ ನಾಲ್ಕು ಬಗೆಯಿಂದ ಅಂದರೆ ತರ್ಕ, ವಿಚಾರ, ಯುಕ್ತಿ, ಅಧಿಕಾರಗಳಿಂದ ಕೆಲಸ ಮಾಡಬಲ್ಲನೆಂದು ಸೂಚಿಸುವದು. ಬ್ರಹ್ಮನಿಗೆ ನಾಲ್ಕು ಮುಖಗಳು. ಅಂದರೆ ನಾಲ್ಕು ವೇದಗಳಲ್ಲಿ (ಬ್ರಹ್ಮನ) ಬುದ್ಧಿಯ ಎಲ್ಲ ಕಸರತ್ತು ಇರುವದು. ಬ್ರಹ್ಮನು ಐದನೇ ತಲೆಯುವನಾಗಬಯಸಿದನು; ಶಿವನು ಅದನ್ನು ಚಿವುಟಿದನು. ಅಂದರೆ ವೇದಗಳಿಗೆ ಅತೀತನಾಗುವದು ಅಂದರೆ ತೂರ್ಯಾತೀತನಾಗುವದು ಬುದ್ಧಿಯ ಕೆಲಸವಲ್ಲ. ಸರಸ್ವತಿಯು ಕೈಯಲ್ಲಿ ವೀಣೆ ಹಿಡಿದಿದ್ದಾಳೆ. ನಿನ್ನ ಜ್ಞಾನದ ತಂತಿಯನ್ನು ಮೀಟಿದರೆ ಮಹಾಜ್ಞಾನ ಸಿಗುವದೆಂದು ಸೂಚಿಸುವದು. ಜಪಮಣಿ ಒಂದು ಕೈಯಲ್ಲಿ ವಿದ್ಯೆಯನ್ನು ಸರಸ್ವತಿಯನ್ನು ಜಪಿಸಿದರೆ ಸಿಗುವಳೆಂದು ಭಾವ. ಇದೇ ಎಲ್ಲರಲ್ಲರುವ ಬ್ರಹ್ಮ ಸರಸ್ವತಿಯರ ಗುಟ್ಟು.

ವಿಷ್ಣು+ಲಕ್ಷ್ಮಿಯರು– ವಿಷ್ಣು – ಸಂರಕ್ಷಕ – ಪಾಲನ ಪೋಷಣ ಮಾಡುವವನು. ಇದನ್ನು ಮಾಡಬೇಕಾದರೆ ಅಂತಃಕರುಣ ಬೇಕು. ಇದು ಇದ್ದರೆ ಪಾಲನ ಪೋಷಣ ನಡೆಯುವದು. ವಿಷ್ಣುವಿನ ಹೆಂಡತಿ ಲಕ್ಷ್ಮಿ. ಅಂದರೆ ಧನ; ಧನವಿದ್ದರೆ ಎಲ್ಲರನ್ನೂ ಪಾಲನ ಪೋಷಣ ಮಾಡುವನು. ಅದಕ್ಕೆ ವಿಷ್ಣುವಿಗೆ ಧನಬಲಬೇಕು. ಇವರ ಮಗ ಅಂದರೆ ಆಶೆ; ವಾಸನೆ. ಇವು ಇದ್ದರೆ ಅಂದರೆ ಮನೆ, ಜನ, ಸತಿ, ಸುತರೆಂಬ ವಾಸನೆ ಇದ್ದರೆ ಅವರನ್ನು ಪಾಲನ ಮಾಡುವನು. ವಿಷ್ಣು ಹಾವಿನ ಮೇಲೆ ಮಲಗಿರುವನು. ಕುಳಿತಿರುವನು. ಅಂದರೆ ನಮ್ಮಲ್ಲಿ ಸಣ್ಣ ಕರಳು ಇಪ್ಪತ್ತೆರಡು ಫೂಟು, ದೊಡ್ಡ ಕರಳು ಆರು ಫೂಟು ಇರುವದು. ಅದರ ಮೇಲೆ ಅಂತಃಕರುಣದ ಸ್ಥಾನವಿದೆ. ಲಕ್ಷ್ಮಿ ಕಮಲದಲ್ಲಿ ವಾಸ ಮಾಡಿದ್ದಾಳೆ. ನಾಭಿಕಮಲ (ಮಣಿಪುರ) ದಲ್ಲಿ ಆಕೆಯ ವಾಸ. ಲಕ್ಷ್ಮಿ (ಧನ) ವಿಲ್ಲದಿದ್ದರೆ ವಿಷ್ಣುವಿಗೆ ಬಲವಿಲ್ಲ. ವಿಷ್ಣು ಒಂದು ಕೈಯಲ್ಲಿ ಗದೆ, ಕೆಲಸದ ಸಾಧನ- ಕರ್ಮ ಭೂಮಿಯಲ್ಲಿ ಕಾರ್ಯ ಮಾಡಬೇಕೆಂದು ಸೂಚಿಸುವದು. ಇದರಿಂದಲೇ

ಧನ ಸಿಗುವದು. ಪಾಲನ ಪೋಷಣ ನಡೆಯುವದು. ಚಕ್ರಧರ ಸಂಸಾರ ಚಕ್ರದಲ್ಲಿ ಸಿಕ್ಕಿರುವನು. ಯಾಕಂದರೆ ಕಾಮ, ಆಶೆ, ಪ್ರೀತಿ. ಧನಗಳಿಂದ ಸಂಸಾರಚಕ್ರ ತಿರುಗುವದು. ಅಲ್ಲದೆ ಈ ಸಂಸಾರಚಕ್ರ ದಿಂದಲೇ ಜ್ಞಾನದ ಗಂಧ ಹೊರಡುವದೆಂಬುದರ ಗುರುತಿಗಾಗಿ ಕಮಲ ಧರಿಸಿದ್ದಾನೆ. ಶಂಖಧರ – ಸಂಸಾರವು ಕಡೆಯಲ್ಲಿ ಶಂಖವೇ ಇರುವದು. ಅದಕ್ಕೆ ಸದಾ ಓಂಕಾರ ನುಡಿಯೆಂದು ಶಂಖ ಸೂಚಿಸುವದು. ಶಂಖ ಊದಿದರೆ ಓಂಕಾರ ನಾದ ಹೊರಡುವದು. ಅಲ್ಲದೆ ಶಂಖ ಅಂದರೆ ಶೂನ್ಯ ಅದಕ್ಕೇ ಶೂನ್ಯ ಸಂಪಾದನೆ ಮಾಡಿಕೋ ಎಂದು ಹೇಳುವದು. ಇದೇ ಎಲ್ಲರಲ್ಲಿರುವ ವಿಷ್ಣು ಲಕ್ಷ್ಮಿಯರ ಗುರುತು. ಇದನ್ನೆಲ್ಲ ಬಿಟ್ಟು ಹೊರಗಿನ ತೋರಿಕೆಯ ಅರ್ಥಗಳನ್ನು ಮಾಡಿ ಜನರು ಮತಗಳ ಹೆಸರಿನಿಂದ, ದೇವರ ಹೆಸರಿನಿಂದ ಬಡಿದಾಡಿ ಹಾಳಾಗುತ್ತಿದ್ದಾರೆ. ಹೀಗಾಗಿ ಜಾತಿಗಳಾಗಿ, ಬಣಗಳಾಗಿ, ಮತಗಳಾಗಿ, ಪಂಥಗಳಾಗಿ ದೇಶ ನಾಡು ಹಾಳಾಗುತ್ತಿರುವವು ಹೀಗೆ ಅರ್ಥ ಮಾಡದೆ ತೋರಿಕೆಯ ವಿಪರೀತ ಅರ್ಥ ಮಾಡಿದರೆ ಬುದ್ಧಿಯ ಆಳವು ಗೊತ್ತಾಗುವದು. ಇಂಥ ಅರ್ಥ ಮಾಡುವವರೇ ಸಮಾಜದಲ್ಲಿ ವಿಷಬೀಜ ಬಿತ್ತುವರು. ಸರಿಯಾದ ಗೂಢ ಇಂಗಿತ ಅರ್ಥದಿಂದ್ಲೆ ಎಲ್ಲರಿಗೂ ಸುಖ ಶಾಂತಿ ತಾನೇ ಲಭಿಸುವದು.

ಶಿವ+ಶಕ್ತಿಯರು:— ನಿಸ್ನಲ್ಲಿ ಶಿವ+ಶಕ್ತಿಯರು ಇದ್ದಾರೆ. ಶಿವ ನೆಂದರೆ ಸಂಹಾರ ಕರ್ತ. ಅಹಂಕಾರ ಬಂದರೆ ಸಂಹಾರವಾಗುವದು. ಅದಕ್ಕೆ ಶಿವನೆಂದರೆ ಅಹಂಕಾರ ಸಾತ್ವಿಕ ಅಹಂಕಾರವಿದ್ದರೆ ಶಿವದೂತರು ಬರುವರು. ರಾಜಸ ಅಹಂಕಾರವಿದ್ದರೆ ದೇವದೂತರು ಬರುವರು. ತಾಮಸ ಅಹಂಕಾರವಿದ್ದರೆ ಯಮದೂತರು ಬರುವರು. ಸತ್ತಬಳಿಕ ಇವರು ಬಂದು ತಕ್ಕೊಂಡು ಹೋಗುವರೆಂದು ಹೇಳುವದರ ಸಾರವಿದು. ಅಹಂಕಾರ ಬರಬೇಕಾದರೆ ಒಂದಿಲ್ಲ ಇನ್ನೊಂದು ರೀತಿಯ ತರಗತಿಯ ಶಕ್ತಿ ಇದ್ದರೆ ಮಾತ್ರ ಅಹಂಕಾರ ಬರುವದು. ಶಿವನ ಹೆಂಡತಿ ಶಕ್ತಿ ಅಂದರೆ ಈಕೆಯಿಂದ ಎಲ್ಲರಿಗೂ ಅಹಂಕಾರ ಬರುವದು. ಶಿವನಿಗೆ ತಂದೆ ತಾಯಿ ಇಲ್ಲ. ಜನನವಿಲ್ಲ. ಅಂದರೆ ಈ ಅಹಂಕಾರ ಬೇಕಾದ ವಿಷಯದ ಬಗ್ಗೆ ಗುಣಗಳ ಬಗ್ಗೆ ಅಷ್ಟೈಶ್ವರ್ಯದ ಬಗ್ಗೆ ಬೇಕಾದ್ದರ ಮೇಲೆ ಅಹಂಕಾರ ಬೀಳುವದು. ರೂಪ ಚಂದವಿದ್ದರೆ ಮೂಗು ಉತ್ತಮವಿದ್ದರೆ

ಬಣ್ಣ ಉತ್ತಮವಿದ್ದರೆ ಬೇಕಾದಂಥ ಚಿಕ್ಕಪುಟ್ಟ ದೊಡ್ಡ ವಿಷಯದ ಬಗ್ಗೆ ಅಹಂಕಾರ ಬೀಳುವದು. ಅದಕ್ಕೆ ಸ್ಥಾನವನ್ನು ಹೇಳಲಿಕ್ಕೆ ಬರುವದಿಲ್ಲ. ಅದಕ್ಕೆ ಜನನವಿಲ್ಲ. ತಂದೆ ತಾಯಿ ಇಲ್ಲೆಂದು ಹೇಳುವರು. ಮುದಿಯೆತ್ತಿನ ಮೇಲೆ ಕೂಡ್ರುವನು. ಭೋಳೆ ಶಂಕರ ಸಂಭಾವಿತ ಸಮಾಧಾನ ಶಾಂತಿಗಳಿದ್ದವನು. ಸೈರಿಸಿ ತಾಳಿ ಕ್ಷಮಿಸಿ ಸಂಹರಿಸುವವನು. ಶಿವನ ಹೆಂಡತಿ ಶಕ್ತಿ—ನಾನಾತರದ ಬೇಕಾದ ಶಕ್ತಿ ಇದ್ದರೆ ಮಾನವನಿಗೆ ಅಹಂಕಾರ ಬರುವದು. ಅಹಂಕಾರಕ್ಕೆ ಶಕ್ತಿಯು ಬೆಂಬಲಬೇಕು. ಯಾವತರದ ಶಕ್ತಿ ಇಲ್ಲದವರಲ್ಲಿ ಅಹಂಕಾರವೇ ಇರುವದಿಲ್ಲ. ಈ ಶಕ್ತಿ ಎಲ್ಲ ಕ್ರೂರ ಪ್ರಾಣಿಗಳನ್ನು ಹತ್ತಿರುವಳು. ಸ್ತ್ರೀಯರು ಬೇಕಾದಂಥ ಪುರುಷರನ್ನು ಮಣಿಸುವಳು. ತನ್ನ ಮಾಯೆಯಲ್ಲಿ ಕೆಡವಿಕೊಳ್ಳುವಳು. ಹೆಣ್ಣಿಗೆ ಪುರುಷನು ಸದಾ ಬಾಗುವನು, ಮಣಿಯುವನು, ಬಗ್ಗುವನು ಶಕ್ತಿ ಎಲ್ಲರ ಆಯುಧ ಮೊದಲಾದವುಗಳನ್ನು ಧರಿಸಿರುವಳು. ಎಲ್ಲರೂ ಮಾಡುವ ಕೆಲಸಗಳನ್ನು ಶಕ್ತಿ ಮಾಡುವಳೆಂದು ಸೂಚಿಸಿದನು. ಉಳಿದ ಶಿವನ ಅರ್ಥ ಮೇಲೆ ಬಂದಿದೆ ನೋಡಿಕೊಳ್ಳಿರಿ. ಶಿವನಿಗೆ ಗಣಪತಿ ವೀರಭದ್ರ ಷಣ್ಮುಖರೆಂಬ ಮೂವರು ಮಕ್ಕಳಿದ್ದಾರೆ. ಲೆಕ್ಕ, ಬಲ ಧೃಡತೆ, ಆರು ಶಾಸ್ತ್ರಗಳ ಜ್ಞಾನಗಳನ್ನು ಅರಿತರೆ ಶಿವಶಕ್ತಿ ಸ್ವರೂಪರಾಗುವರೆಂದು ಸೂಚಿಸುವವು. ಹೀಗೆ ನಮ್ಮ ಶರೀರದ ಸಕಲ ಗುಣಗಳಿಗೆ ಅರ್ಥವಿರುವದು. ಇದಕ್ಕೆ ಐತಿಹಾಸಿಕ ಕಥೆ ಬೇಕಾಗಿಲ್ಲ ಇದೆಲ್ಲ ಅನುಭವದ ನಿಜವಾದ ಅರ್ಥ. ನಿರಾಕಾರ ಶಿವಶಕ್ತಿಯರಿಗೆ ಹೀಗೆ ಸಾಕಾರ ರೂಪಕೊಟ್ಟು ಜನಕ್ಕೆ ತಿಳಿಯುವ ಸಲುವಾಗಿ ಮಾಡಿದ್ದಾರೆ. ಅವೇನು ನಿಜವಾದ ಚಿತ್ರಗಳಲ್ಲ. ಗುಣಗಳಿಗೆ ಈಪ್ರಕಾರ ಸಾಕಾರ ಸ್ವರೂಪ ಕೊಟ್ಟು ಬೋಧಿಸುವರು. ಇಲ್ಲದಿದ್ದರೆ ಸಾಮಾನ್ಯರಿಗೆ ತಿಳಿಸಲೋಸುಗ ಹಾಗೆಲ್ಲ ಅವುಗಳ ಸ್ವರೂಪದ ಚಿತ್ರಗಳನ್ನು ಕಲ್ಪಿಸಿದ್ದಾರೆ. ಅದಕ್ಕೆ ತೋರಿಕೆಯ ಅರ್ಥ ಮಾಡಬಾರದು.

ಈ ಲೇಖಕನು ತನ್ನ ‘ಶಿವಲಿಂಗದಲ್ಲಿ’ ಶಿವನಿಗೆ ಬೇಡನೆಂದೂ ಬೇಡರ ಮುಖಂಡನೆಂದೂ ಅವನ ಭಕ್ತರೆಲ್ಲ ಬೇಡರ ಗಣಗಳೆಂದೂ ಹೇಳಿದ್ದು ಸರಿಯಲ್ಲ ಸಮಂಜಸವೂ ಅಲ್ಲ. ದುರುಳರ ದುರುಳತನಗಳನ್ನು ಬೇಟೆಯಾಡುವ ಬೇಟೆಗಾರನಿರಬಹುದು. ಯಾಕಂದರೆ ಅವನು ಸಂಹಾರ ಕರ್ತನೇ ಇದ್ದಾನೆ. ಶಿವನಿಗೆ ಅವಹೇಳನ ಮಾಡಿ ಲೇಖ ಬರೆದಂತೆ

ಬ್ರಹ್ಮ-ವಿಷ್ಣುವಿಗೂ ಅವಹೇಳನ ಮಾಡಿ ಲೇಖ ಬರೆಯಲಿಕ್ಕೂ ಬರು ವದು. ಇದು ಎಂದೂ ಸರಿಎನಿಸಲಾರದು. ಸರಿಯಾದ ಅನುಭವ ಪಡಕೊಂಡು ತೋರಿಕೆಯ ಅರ್ಥ ಮಾಡದೆ ಒಳಗಿನ ನಿಜವಾದ ಅರ್ಥ ಮಾಡಬೇಕು. ಗೀತಾಂಜಲಿಗೂ (ಟ್ಯಾಗೋರರು ಬರೆದದ್ದು) ಗೂಡಾ ರ್ಥವಿರುವದು. ಇದಕ್ಕೇನು ಐತಿಹಾಸಿಕತೆ ಬೇಕಾಗಿಲ್ಲ. ಮಹಾ ಮಹಾ ಕಾವ್ಯಗಳಿಗೆಲ್ಲ ಗೂಢಾರ್ಥಗಳೇ ಇರುವವು. ಇಪರಂತೆ ಎಲ್ಲ ಚಿತ್ರಗ ಳಿಗೂ ಗ್ರಂಥಗಳಿಗೂ ಅರ್ಥ ಮಾಡುತ್ತ ಹೋದರೆ ಸರಿಯಾದ ಕಲ್ಪನೆ ಬರುವದು. ರಾಮಾಯಣ, ಮಹಾಭಾರತ, ಗೀತೆ ಶಿವಪುರಾಣ ಮೊದ ಲಾದವುಗಳೆಲ್ಲ ನಮ್ಮ ಶರೀರದಲ್ಲೇ ಇರುವವೆಂದು ಆಗ ಗೊತ್ತಾಗು ವದು. ಇವುಗಳನ್ನು ಗುಣಗಳಿಗೆ ಹೋಲಿಸಿ ಬರೆದ ಉದ್ಗ್ರಂಥಗಳಾ ಗಿವೆ. ಮಹಾ ಕವಿಗಳೆಂದೂ ಹೊರಗಿನ ವಿಷಯಗಳ ಬಗ್ಗೆ ಆಸಕ್ತಿ ವಹಿಸುವದಿಲ್ಲ. ಅಲ್ಲದೆ ಬರೆಯುವದು ಬಹು ಕಡಿಮೆ, ಹೊರಗೆ ಆಗದೆ ಇದ್ದರೂ ಕಲ್ಪಿಸಿ ಒಳಗಿನದನ್ನೇ ತಿಳಿದುಕೊಳ್ಳಲು ಎಲ್ಲರಿಗೂ ಸುಲಭ ವಾಗುವ ಸಲುವಾಗಿ ಹೀಗೆ ಅವರು ಬರೆದಿದ್ದಾರೆ ಹೊರತು ಬರೇ ಮನರಂಜನೆಗಾಗಿ ಅವರು ಯಾವ ಗ್ರಂಥಗಳನ್ನು ಬರೆದಿಲ್ಲ. ಈಗಿನ ನರಕವಿಗಳು ಮಾತ್ರ ಯಾವ ಅನುಭವವಿಲ್ಲದೆ ಏನಾದರೂ ಲೇಖ ಗ್ರಂಥ ಕಾವ್ಯ ಮೊದಲಾದವುಗಳನ್ನು ಬರೆಯುವರು. ಇವರಿಗೆ ಮನ ರಂಜನೆಯೇ ಮಹತ್ವದ ಸಂಗತಿಯಾಗಿರುವದು,

ಇನ್ನು ಲಿಂಗದ ಬಗ್ಗೆ ವಿಚಾರಿಸೋಣ. ಪೆಂಡಿಕೆ ಪುರುಷನ ಜನನೇಂದ್ರಿಯದ ಗುರುತು. ಪೀಠವು ಯೋನಿಯ ಗುರುತು ಎಂದು ಸ್ತ್ರೀಪುರುಷ ಗುಪ್ತ ಇಂದ್ರಿಯಗಳ ಗುರುತೇ ಲಿಂಗ. ಅದೇ ಶಿವಶಕ್ತಿ ಯರ ಗುರುತು ಅದನ್ನೇ ಪೂಜಿಸುವರೆಂದು ಬರೆದದ್ದು ಸರಿಯಲ್ಲ. ಇದು ಅನುಭವದ ಮಾತೂ ಅಲ್ಲ. ನಿಮ್ಮ ಲೇಖವನ್ನು ವಿಮರ್ಶಿಸುತ್ತ ಹೋದರೆ ಬಹು ದೊಡ್ಡದಾಗುವದೆಂಬ ಭಯದಿಂದ ಅದರ ಗೊಡವೆಗೆ ಹೋಗದೆ ಲಿಂಗದ ಬಗ್ಗೆ ವಿಚಾರಿಸುವೆವು. ಲಿಂಗತತ್ವ ರಹಸ್ಯವೆಂದು ಒಂದು ಗ್ರಂಥವನ್ನು ನಾವು ಬರೆದಿದ್ದೇವೆ. ಅದನ್ನು ಬೇಕಾದರೆ ನೋಡ ಬಹುದು. ಈ ಲಿಂಗ ಶಬ್ದವು ಬಹು ವಿಶಾಲ ವ್ಯಾಪಕ ಈ ಬ್ರಹ್ಮಾಂಡ ಗಳನ್ನೆಲ್ಲ ತನ್ನಲ್ಲಿ ಒಳಗೊಂಡಿರುವದು.—

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳ
ದಿಂದತ್ತತ್ತ ನಿಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ
ಶ್ರೀ ಮುಕುಟ ಅಗಮ್ಯ ಅಗೋಚರ ಅಪ್ರಮಾಣ ಕೂಡಲಸಂಗಮ
ದೇವ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ.

ಈ ಲಿಂಗ ಈ ಬ್ರಹ್ಮಾಂಡದ ಚಿಕ್ಕ ಸ್ವರೂಪವಾಗಿದೆ. ಅಲ್ಲದೆ ಪಿಂಡಾಂಡದ ಚಿಕ್ಕ ಸ್ವರೂಪವೂ ಅಹುದು. ಈ ಬ್ರಹ್ಮಾಂಡ ಉತ್ಪತ್ತಿಯನ್ನು ಈ ಲಿಂಗ ಬೋಧಿಸುವದು.

ಲಿಂಗಮಧ್ಯೆ ಜಗತ್ ಸರ್ವಂ ತ್ರೈಲೋಕಂ ಸಚರಾಚರಂ । ಲಿಂಗ ಬಾಹ್ಯಾತ್ ಪರನ್ನಾಸ್ತಿ ತಸ್ಮೈಶ್ರೀ ಲಿಂಗಾಯನಮಃ ॥

ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಕಾರಣ. ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ । ಲಿಂಗವೆಂಬುದು ಪರಶಿವನ ಘನ ತೇಜ । ಲಿಂಗವೆಂಬುದು ಪರಶಿವನ ನಿರತರಯಾನಂದ ಸುಖವು । ಲಿಂಗ ವೆಂಬುದು ಪರಶಿವನ ಪರಮಜ್ಞಾನ । ಉತ್ಪತ್ತಿ ಸ್ಥಿತಿ ಲಯಗಳೆಲ್ಲಕ್ಕೂ ಈ ಲಿಂಗವೇ ಕಾರಣ.

ಲಿಂಗವು ಶಿವ ಶಕ್ತಿಯರ ನಡುವೆ ಅವಿರಳ ಬೆಸುಗೆಯನ್ನು ಸೂಚಿಸುತ್ತದೆ. ಈ ಸ್ವರೂಪದ ಇಷ್ಟಲಿಂಗವನ್ನು ರಚಿಸಿದ್ದಾರೆ. ಮೊದಲು ಜಗತ್ತಿನಲ್ಲಿ ಯಾವ ದೇವರ ಪೂಜೆ ಇರಲಿಲ್ಲ. ಅದರೆ ಎಲ್ಲರೂ ಮೊದಲು ಶಿವಶಕ್ತಿಯರ ಗುರುತಾದ ಸ್ಥಾವರ ಲಿಂಗಗಳನ್ನು ಪೂಜಿಸುವ ಪದ್ಧತಿ ಅಮಲಿನಲ್ಲಿ ಬಂದಿತು. ಉಳಿದ ದೇವರ ಹೆಸರು ಕನಸು ಮನಸಿನಲ್ಲಿ ಸಹ ಇರಲಿಲ್ಲ. ಜಗತ್ತಿನ ಎಲ್ಲ ದೇಶಗಳಲ್ಲಿ ಎಲ್ಲ ಖಂಡಗಳಲ್ಲಿ ಈ ಲಿಂಗಪೂಜೆ ಅಮಲಿನಲ್ಲಿ ಇತ್ತೆಂದು ಅನೇಕ ಪಂಡಿತರು ಸಂಶೋಧನ ಮಾಡಿ ಹೇಳಿದ್ದಾರೆ. ಈ ಲಿಂಗಾರಾಧನವು ಬರೇ ಭಾರತದಲ್ಲೇ ಅಲ್ಲ, ಇಜಿಪ್ತ, ಬಾಬಿಲೋನ, ಹೆಡ್ರಪೋ ಪೋಲಿಸ್, ಮಕ್ಕಾ, ಬ್ರಾಜಿಲ್, ಗಾಸ್ಕೊ, ವಿನಿರಾ, ಚಿತ್ರಾಲ್, ಕಾಬೂಲ, ಗ್ರೀಸ, ಆಸ್ಟ್ರಿಯಾ, ಹಂಗೇರ್‍ರಿ, ಅಸಿಲಿಯಾ, ಇರಾಕ, ಪೇರು, ಪ್ರೆಂಬುಕ್, ಥಿಸ್ಸಿ, ಅನ್ನಾಂ, ಕಾಂಬೋಜ, ಅಸ್ಸಾಂ, ಸುಮಾತ್ರಾ, ಬ್ರಹ್ಮದೇಶ, ಬೋರ್ನಿಯೋ, ಜಾವಾ, ಸೆಲಿಬಸ್, ಆಸ್ಟ್ರೇಲಿಯಾ, ಅಮೇರಿಕಾ, ಟಿಬೇಟ, ಚೀನಾ, ಜಪಾನ, ಸೆಬೇರಿಯಾ, ಪಿನಿಷಿಯಾ, ರೋಂ, ವಿಸ್ ಮಿಸ್, ಇಟಲಿ, ಲಂಡನ್, ಸಿರಿಯಾ, ಸ್ಕಾಟಲಂಡ, ಪ್ರಿಜಿಯನ್, ನಿನಿರಾ, ಅಪರದಿ

ಸ್ಥಾನ, ಭುಖಾರಾ, ಪೋರ್ಟಿಸಿ, ಅರೇಬಿಯಾ, ಬ್ಯಾಲೋನ್ ಮೊದಲಾದ ದೇಶಗಳಲ್ಲಿ ಇತ್ತು. ಇದನ್ನು ನಿರ್ಣಯಿಸಿದವರು ಪರದೇಶ ಈ ದೇಶದ ಸಂಶೋಧನಕಾರರು. ಅದನ್ನೆಲ್ಲ ಇಲ್ಲಿ ಬರೆದರೆ ಲೇಖ ದೊಡ್ಡದಾಗುವದೆಂದು ಬರೆದಿಲ್ಲ. ಭಾರತದ ಹಳೇ ವಿಷ್ಣು, ಕೃಷ್ಣ, ರಾಮ, ಲಕ್ಷ್ಮಿ, ಶಕ್ತಿ ಮೊದಲಾದ ಅನೇಕ ದೇವ ದೇವಿಯರ ಮೂರ್ತಿಗಳ ಕೈಯಲ್ಲಿ ಶಿರದಲ್ಲಿ ಲಿಂಗಮೂರ್ತಿಗಳಿರುವದು ಸಹ ಇದಕ್ಕೆ ಒಳ್ಳೇ ಬಲವಾದ ಆಧಾರವಾಗಿದೆ. ಅವರೆಲ್ಲರೂ ಲಿಂಗೋಪಾಸಕರೆಂದು ಸಹಜ ಅನಿಸುವದು. ಇಷ್ಟಲಿಂಗವನ್ನು ಭಾರತದಲ್ಲಿ ಅಲ್ಲದೆ ಭೂಮಧ್ಯ ಸಮುದ್ರದ ದಂಡೆಯ ದೇಶಗಳಲ್ಲಿಯ ಜನರು ಲಿಂಗಗಳನ್ನು ಕಂಠದಲ್ಲಿ ಧರಿಸಿ ಪೂಜಿಸುತ್ತಿದ್ದರೆಂದು ಆಧಾರಗಳು ದೊರೆತಿವೆ. ಇಂಥ ಪವಿತ್ರ ಲಿಂಗಕ್ಕೆ ಈ ಪ್ರಕಾರ ಹೀನ ಅರ್ಥವನ್ನು ಈ ಜಿಜ್ಞಾಸುಗಳು ಮಾಡಿ ಪ್ರವಾದ ಮಾಡಿದ್ದಾರೆ. ಶಿಶ್ನ ಯೋನಿ ಎಂದು ಹೇಳುವದು ಸಮಂಜಸವಲ್ಲ. ಸರಿಯಲ್ಲ. ಶಿವ-ಶಕ್ತಿ ತತ್ವದ ಮೇಲೆ ಲಿಂಗ ಹುಟ್ಟಿದೆ.— ಅಖಂಡ ಉದ್ವಯ ಸ್ವರೂಪನಾದ ಪರಾತ್ಪರ ಪರಶಿವನು ತನ್ನ ತಾನರಿಯದೆ ಅವನ ಪೂಜೆ ಧ್ಯಾನಾದಿಗಳಿಲ್ಲದೆ ಬಯಲಿಗನಂತೆ ಅನಂತ ಕಾಲ ಬಿದ್ದು ಬಿಟ್ಟಿದ್ದನು. ಅವನಲ್ಲಿ ಸಂಕಲ್ಪ ದೋರಲು ಆಗ ಮಹಾಕಾರಣ ಜನವೆನಿಸಿದ ಪರಾತ್ಪರ ಪರಶಿವನ ಗುರುತಾದ ಪೆಂಡಿಕೆಯಿಂದ (ಇದು ಬ್ರಹ್ಮಾಂಡದಂತೆ ತತ್ತಿಯ ಆಕಾರದ್ದೇ ಇರುವದು. ಶಿಶ್ನದಂತೆ ಉದ್ದಕ್ಕೆ ಇಲ್ಲ.) ಸತ್ – ಚಿತ್ – ಆನಂದ ರೂಪದಿಂದ ಪ್ರಕಟವಾಯಿತು. ಇವು ಸಮವಾಗಿರುವದರಿಂದ ಸಮಭುಜ ತ್ರಿಕೋಣದಿಂದ ಇದನ್ನು ತೋರಿಸುವರು. ಇದೇ ಗೋಳಕವೆನಿಸಿದೆ. ಇದೇ ಕಾರಣ ಜಗತ್ತು ಪರಾ ಪ್ರಕೃತಿ, ಚಿತ್ ಪ್ರಕೃತಿ, ಊರ್ಧ್ವಮುಖ ಇದೇ ನಮ್ಮ ಇಷ್ಟ; ಇದರಿಂದ ಸೂಕ್ಷ್ಮ ಜಗತ್ತು, ಅರುವಿ ಜಗತ್ತು, ಮನ ಬುದ್ಧಿಗಳ ಜಗತ್ತು ಪ್ರಕಟವಾಯಿತು. ಇದರಿಂದ ಸತ್ವ ರಜ ತಮಗಳಿಂದ ಕೂಡಿದ ಸ್ಥೂಲ ಜಗತ್ತು ಅಪರಾ ಪ್ರಕೃತಿ ಮಾಯಾ ಜಗತ್ತು ಅಧೋಮುಖಿ ಇದೇ ನಮ್ಮ ಅನಿಷ್ಟ. ಇವು ಕೂಡ ಸಮವಾಗಿರುವದರಿಂದ ಸಮಭುಜ ತ್ರಿಕೋಣದಿಂದ ಇದನ್ನು ತೋರಿಸಲಾಗಿದೆ. ಒಟ್ಟಿನಲ್ಲಿ ಈ ಲಿಂಗ ಮುದ್ರೆಯು ಈ ಪ್ರಕಾರ ಆಗುವದು. ಇದರ ಮೇಲೆ ಕಾಂತಿಯನ್ನು ಕೂಡಿಸಲಾಗಿ ಪುನಃ ಅದು ಬ್ರಹ್ಮಾಂಡದ ಆಕಾರವಾದ ತತ್ತಿಯಂತೆ ಆಗುವದು.

ಇದನ್ನೇ ಕೊರಳಲ್ಲಿ ಕಟ್ಟಿಕೊಂಡು ಪೂಜಿಸುವರು. ಪೆಂಡಿಕೆ ಕೂಡ್ರಿಸಿದಲ್ಲಿ ಮೇಲ್ಮೈಯು ತ್ರಿಕೋನವಿಲ್ಲ; ಗೋಲವಿರುವದು. ಯೋನಿ ತ್ರಿಕೋನವಿರುವದೆಂದು ಅವರು ಬರೆಯುವರು. ಈ ಎಲ್ಲ ತ್ರಿಕೋನಗಳಿಂದ ಕೂಡಿದ ಆಕಾರ ಇಡೀ ಮನುಷ್ಯನ ಆಕಾರದಂತೇ ಆಗುವದು. ಪೆಂಡಿಕೆಯು ತಲೆಯಂತೆ, ಕೆಳಗಿನ ತ್ರಿಕೋನ ಎದೆ, ಅದರ ಕೆಳಗಿನ ತ್ರಿಕೋನ ಹೊಟ್ಟೆ ಮೊದಲಾದ ಇಂದ್ರಿಯಗಳಿಂದ ಕೂಡಿದ್ದು ಹೀಗೆ ಲಿಂಗವು ಪೆಂಡಿಕೆ ಗೋಳಕ ಪೀಠಗಳಿಂದ ಕೂಡಿರುವದು. ಸಾಮಾನ್ಯವಾಗಿ ಮನುಷ್ಯನು ಕೈಗಳನ್ನು ಟೊಂಕದ ಮೇಲೆ ಇಟ್ಟುಕೊಂಡು ಕಾಲುಗಳನ್ನು ಅಗಲಾಗಿ ಮಾಡಿ ನಿಂತಾಗ ಕಾಣುವ ಆಕಾರದಂತೆ ಈ ಮುದ್ರೆಯ ಆಕಾರ ಕಾಣುವದು. ಆದರೆ ನಿಜವಾದ ಲಿಂಗವು ಹೀಗೆ ತ್ರಿಕೋಣಗಳಿಂದ ಕೂಡಿಲ್ಲ. ತಲೆ, ಎದೆ, ಹೊಟ್ಟೆಗಳುಳ್ಳ ಮನುಷ್ಯನ ಆಕಾರದಂತೆ ಅದೆ. ಸೊಂಟವು ಒಳ್ಳೇ ಬಡಕಾಗಿ ಇದ್ದ ಮನುಷ್ಯನ ಆಕಾರವನ್ನೇ ಹೋಲುವದು. ಇದಕ್ಕೆ ಒಂದು ಕಥೆಯನ್ನು ಹೇಳಬಹುದು. ಪರಮಾತ್ಮನು ಮೊದಲು ಅನೇಕ ಕಲೆಗಳನ್ನು ನಿರ್ಮಿಸಿ ಬಿಟ್ಟನಂತೆ ಅವು ಅವನ ಬೆನ್ನು ಬಿಡದೆ ಅವನ ಸುತ್ತಲೇ ಇರಹತ್ತಿದವಂತೆ. ಶಿವನು ಬೇಸತ್ತು ಅದರ ಕೆಳಗೆ ಹೃದಯವೆಂಬ ಗಡಿಗೆಯನ್ನು ಕಟ್ಟಿದನಂತೆ! ಆಗ ಅವು ಮೊದಲಿಗಿಂತ ಬಹಳೇ ಹೆಚ್ಚಾಗಿ ಶಿವನ ಸುತ್ತು, ಅವನ ಹತ್ತರ ಇರಹತ್ತಿದವಂತೆ! ಇದಕ್ಕೂ ಅವನು ಬೇಸತ್ತನಂತೆ; ಆಗ ವಿಚಾರಿಸಿ ಹೊಟ್ಟೆಯೆಂಬ ಎರಡು ತೂತಿನ ಗಡಿಗೆಯನ್ನು ಅದಕ್ಕೆ ಕಟ್ಟಿದನಂತೆ! ಆಗ ಆ ಗಡಿಗೆ ಹಸದು ಭಗ ಭಗ ಎಂದು ಉರಿಯ ಹತ್ತಲು ಇದನ್ನು ಶಾಂತಗೊಳಿಸಲು ಆಹಾರ ನೀರುಗಳನ್ನು ಹುಡುಕ ಹತ್ತಿ ಭೂಮಿಗೆ ಬಂದು ಇಳಿದವು. ದುಡಿಯ ಹತ್ತಿ ಹೊಟ್ಟೆಗೆ ತಂದು ಹಾಕ ಹತ್ತಿದವಂತೆ! ಮೇಲಿನ ತೂತಿನಿಂದ ಹಾಕಲು ಹನ್ನೆರಡು ತಾಸಿನಲ್ಲಿ ಕೆಳಗಿನ ತೂತಿನಿಂದ ಅದೆಲ್ಲ ಸೋರಿ ಹೋಗಿ ಪುನಃ ಕೂಳು ಬೇಕಾಯಿತು. ಇದೇ ಕ್ರಮ ನಡೆಯ ಹತ್ತಿ ಶಿವನನ್ನು ಅವು ಮರೆತು ಬಿಟ್ಟವು. ಇದನ್ನೇ ಈ ಇಷ್ಟಲಿಂಗವು ಬೋಧಿಸುವದು

ಇನ್ನೊಂದು ಅರ್ಥವನ್ನು ಲಿಂಗ ಬೋಧಿಸುವದು.— ಸೂರ್ಯೋದಯವನ್ನು ಪೂರ್ವ ಕಾಲದ ಜನರು ನಿತ್ಯ ನಿರೀಕ್ಷಿಸಿ ಅವನಿಗೆ ನಮಿಸ ಹತ್ತಿದರು. ಯಾಕಂದರೆ ಸೂರ್ಯನೇ ಜಗತ್ತಿನ ಜೀವಾಳ; ಪ್ರಾಣ

ಜಕತ್ತಿನ ಸಕಲ ಶಕ್ತಿ ಅವನಲ್ಲೇ ಇರುವದೆಂದು ಮೊದಲು ಜಗತ್ತಿನ
ಜನರು ಅರಿತರು. ಅದಕ್ಕಾಗಿ ಅವನನ್ನು ಸರಿಯಾಗಿ ಪೂಜಿಸಲೋಸುಗ
ಸೂರ್ಯನಂತೆ ಪೆಂಡಿಕೆಯನ್ನು ಪ್ರಕೃತಿ ಸ್ವರೂಪವಾದ ಭೂಮಿಯಂತೆ
ಪೀಠವನ್ನು ರಚಿಸಿ ಸ್ಥಾವರ ಲಿಂಗಗಳನ್ನು ಮಾಡಿ ಪೂಜಿಸಹತ್ತಿದರು.
ಇದೇ ಮುಂದೆ ಮಾರ್ಪಟ್ಟು ಇಷ್ಟಲಿಂಗವಾಯಿತು. ಜಗತ್ತಿನಲ್ಲಿ ಅಸಂಖ್ಯ
ವಸ್ತುಗಳೆಲ್ಲ ದುಂಡಗೆ ಇರುವವು. ಇದನ್ನು ಅರಿತೇ ಈ ಇಷ್ಟಲಿಂಗ
ವನ್ನು ರಚಿಸಿದರು. ಸ್ಥಾವರ ಲಿಂಗಕ್ಕೆ ಕಂತಿಯನ್ನು ಕೂಡಿಸಿದರೆ ಅದೇ
ಆಕಾರವಾಗುವದು. ಸ್ಥಾವರ ದೊಡ್ಡದು. ಇಷ್ಟಲಿಂಗ ಚಿಕ್ಕದು ಇಷ್ಟೇ
ಅಂತರ ತತ್ವದಲ್ಲಿ ಸಲ್ಪ ಅಂತರವೂ ಉಂಟು.

ಈ ಇಷ್ಟಲಿಂಗವು ತನ್ನ ಹಾಗೂ ಜಗತ್ತಿನ ಸಕಲರ ಅನಿಷ್ಟಗ
ಳನ್ನು ಹೊಡೆದೋಡಿಸಿ ತನ್ನಲ್ಲಿ ಹಾಗೂ ಜಗತ್ತಿನ ಸಕಲರಲ್ಲಿ ಇಷ್ಟ
ವನ್ನು ಸ್ಥಾಪಿಸುವದೇ ಈ ಇಷ್ಟಲಿಂಗ ಧರಿಸಿ ಪೂಜಿಸುವದರ ಉದ್ದೇಶ
ವಾಗಿದೆ. ಈ ಎಲ್ಲ ಕಾರಣಗಳಿಂದ ಇಷ್ಟಲಿಂಗವು ಮೂರ್ತಿಯಲ್ಲಿ ಇದನ್ನು
ಪೂಜಿಸುವದರಿಂದ ಮೂರ್ತಿ ಪೂಜೆಯೂ ಅಲ್ಲ. ಯಾಕಂದರೆ ಬೀಜ
ದಲ್ಲಿಯ ಮೊಳಕೆಯು ಗಿಡದಲ್ಲಿ ಆದರೆ ಗಿಡದ ಸಕಲ ಭಾಗಗಳು
ಅದರಲ್ಲಿ ಬಹು ಸೂಕ್ಷ್ಮವಾಗಿ ಇರುವವು. ಅದರಂತೆ ಬ್ರಹ್ಮಾಂಡದ
ಮೊಳಕೆಯಂತೆ ಇರುವ ಈ ಇಷ್ಟಲಿಂಗದಲ್ಲಿ ಸಕಲ ಬ್ರಹ್ಮಾಂಡದ
ಸೂಕ್ಷ್ಮ ಸ್ವರೂಪವು ಇರುವದು. ಅದಕ್ಕೆ ಮೊಳಕೆಯು ಹೇಗೆ ಎಂದೂ
ಗಿಡವೆನಿಸಲಾರದೋ ಅದರಂತೆ ಇಷ್ಟಲಿಂಗವು ಎಂದೂ ಮೂರ್ತಿ ಎನಿ
ಸಲಾರದು. ಈ ಪ್ರಕಾರ ಇನ್ನೂ ಲಿಂಗದ ಬಗ್ಗೆ ಅನೇಕ ಅರ್ಥ
ಗಳಿರುವವು. ಹೀಗಿದ್ದರೂ ಈ ಜಿಜ್ಞಾಸು ಇದಕ್ಕೆ ಶಶನ ಯೋನಿಗಳ
ಗುರುತೆಂದು ಹೇಳಿದರು. ಇದು ಸರಿಯಲ್ಲ. ಈ ಲಿಂಗವು ಪ್ರಕೃತಿ
ಪುರುಷರನ್ನು ಸೂಚಿಸುವದು. ಪೆಂಡಿಕೆಯೇ ಪುರುಷ; ಪೀಠ ಗೋಳಕ
ಗಳೇ ಪ್ರಕೃತಿ ಎತಿಸುವವು. ಇದು ಕುರುಡ+ಕುಂಟ ಕೂಡಿ ಹೊಳೆ
ದಾಟಿದ್ದರ ಗುರುತನ್ನು ಸೂಚಿಸುವದು. ಇದೇ ಶಿವ+ಶಕ್ತಿಯರ ಗುರು
ತನ್ನೇ ಸೂಚಿಸುವದು. ಶಿವ ಅಂದರೆ ಸ್ಥಿರ ಲಿಂಗ ಶಕ್ತಿ ಅಂದರೆ
ಚರ ಜಂಗಮವನ್ನು ಸೂಚಿಸುವದು. ಇದನ್ನೇ ಈ ಲಿಂಗ ಸೂಚಿಸು
ವದು. ಆದರೆ ಪೆಂಡಿಕೆ ಶಶನದಂತೆ ಉದ್ದಕ್ಕೆ ಇರುವದಿಲ್ಲ. ಗೋಳ
ಕವು ತ್ರಿಕೋನದಂತೆ ಇಲ್ಲ. ದೂರದಿಂದ ನೋಡಿದರೆ ಲಿಂಗದ

ಆಕಾರ ಮಾತ್ರ ಹಾಗೆ ಕಾಣುವದು. ಅದರೂ ಅದು ಇಡೀ ಮನುಷ್ಯರ ಸ್ವರೂಪವನ್ನೇ ಬೋಧಿಸುವದು. ಎರಡು ತ್ರಿಕೋನಗಳಿರುವವು. ಈ ಎರಡೂ ತ್ರಿಕೋನಗಳು ಎರಡು ಯೋನಿಗಳೆಂದು ಈ ಜಿಜ್ಞಾಸು ಹೇಳುವದೇನು ಅಂದರೆ ಇದರ ಅರ್ಥವನ್ನು ಅದಕ್ಕೆ ಉತ್ತರ ಬರೆಯಬೇಕು. ತ್ರಿಕೋನ ಇದ್ದಲ್ಲೆಲ್ಲ ಯೋನಿಯೆಂದೇ ಈ ಜಿಜ್ಞಾಸು ಅರ್ಥ ಮಾಡುವಂತೆ ಕಾಣುವದು ಇದೆಂದೂ ಸರಿ ಎನಿಸಲಾರದು.

ಶಿವನೆಂದರೆ ಮನುಷ್ಯನಲ್ಲ; ಅವನು ಬೇಡರವನೂ ಅಲ್ಲ. ಬೇಡರ ಪೋಷಾಕು ಹಾಕಿಲ್ಲ. ಆತನು ಧರಿಸಿದ ~~ವಸ್ತ್ರಗಳೆಲ್ಲ~~ ನಿರಾಕಾರ, ನಿರ್ಗುಣ ಪರಮಾತ್ಮನ ಗುಣಗಳನ್ನು ಸಾಕಾರದಲ್ಲಿ ಹೇಳಿದ್ದಾಗಿದೆ. ನಾವೂ ಅಂಥ ಗುಣಗಳನ್ನು ಹೊಂದಿದರೆ ನಾವೂ ಶಿವನಾಗುವೆವೆಂದು ಅವೆಲ್ಲ ಪಡವೆಗಳು ಸೂಚಿಸುವವು.

ಶಶಿನ ಯೋನಿಗಳ ಗುರುತು ಲಿಂಗವೆಂದು ಜಿಜ್ಞಾಸು ಅರ್ಥ ಮಾಡಿದರೆ ಜಗತ್ತಿನ ಎಲ್ಲ ದೇಶಗಳಲ್ಲಿ ಹೀಗೆಕೆ ಲಿಂಗವನ್ನು ಪೂಜಿಸುತ್ತಿದ್ದರು? ರಾಮ, ಕೃಷ್ಣ, ವಿಠಲ, ರಂಗನಾಥ, ಅರ್ಜುನ, ವ್ಯಾಸ, ವಸಿಷ್ಠ ಹೀಗೆ ಎಲ್ಲರೂ ಲಿಂಗಗಳನ್ನೇಕೆ ಪೂಜಿಸಿದರು. ಶಂಕರಾಚಾರ್ಯನೂ ಲಿಂಗವನ್ನೇ ಪೂಜಿಸಿದನು. ಶಾಲಿಗ್ರಾಮವೂ ಲಿಂಗದಲ್ಲಿಯ ಪೆಂಡಿಕೆಯಂತೇ ಇರುವದು. ಇದಕ್ಕೆ ಅವನೇನು ಅರ್ಥ ಮಾಡುವನು? ಅದಕ್ಕೆ ಈ ಜಿಜ್ಞಾಸುವಿನ ಶಿವಲಿಂಗದ ಅರ್ಥವು ಆರಂಭದಿಂದಲೂ ತಪ್ಪಾಗಿದೆ. ಕೊನೆಯ ವರೆಗೆ ಅದೆಂದೂ ಸರಿಯಾಗಲಾರದು. ಅದಕ್ಕೆ ಯಾವದಕ್ಕೂ ತೋರಿಕೆಯ ಅರ್ಥ ಮಾಡಬಾರದು. ತೋರಿಕೆಯ ಅರ್ಥಮಾಡಿ ಎಲ್ಲವ್ವನು ಮುಂಗಲಿಯನ್ನು ಕೊಂದ ಕಥೆಯಂತೆ ಆಗುವದು. ಇಂಗಿತದ ಕಡೆಗೆ ಹೋಗಬೇಕು.

ಈ ಪ್ರಕಾರ ಲಿಂಗದ ಮಹಿಮೆ, ವ್ಯಾಪಕತೆ ಹಿರಿಮೆಗಳಿರುವವು. ಅದಕ್ಕಾಗಿಯೇ ಲಿಂಗಪೂಜೆಯು ಅತಿ ಪುರಾತನ ಕಾಲದಿಂದಲೇ ಪ್ರಾರಂಭವಾಗಿದೆ. ಅದನ್ನು ಜಗತ್ತಿನ ಎಲ್ಲ ದೇಶಗಳಲ್ಲಿ ಮಾಡಿರುವರು. ಅದನ್ನು ಮೇಲೆ ಹೇಳಲಾಗಿದೆ. ಲಿಂಗದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಮೂರು ಪ್ರಕಾರಗಳು. ಈ ಇಷ್ಟಲಿಂಗ ಧಾರಣದಿಂದ ಅನೇಕ ರೋಗಗಳೂ ಕೂಡ ತಾನೇ ನಿವಾರಿಸಿ ಯಾಗುವವು. ಇದು ಧರಿಸುವವನಿಗೆ ಆರೋಗ್ಯ ಆಯುಷ್ಯ ತಂದು ಕೊಡುವದು.

ಆದಕ್ಕಂತೇ ಇಷ್ಟಲಿಂಗವನ್ನು ಶರೀರದಿಂದ ಅಗಲಿಸಬಾರದೆಂದು ಹೇಳು ವರು. ಶರೀರ ಶುದ್ಧಿಗೆ ಇಷ್ಟಲಿಂಗ. ಇದರ ಪೂಜೆ ಸರಿಯಾಗಿ ಬಂದರೆ ಪ್ರಾಣಲಿಂಗ ಪೂಜೆ ತಾನೇ ಬರುವದು. ಇದು ಹೃದಯದಲ್ಲಿ ಇರುವದು. ಹೃದಯದ ಬಯಲೇ ಅದು; ಅದರ ಆಕಾರ ಗೋಳಾ ಕಾರವಾದ ಆಕಾಶದಂತೇ ಇರುವದು. ಇದರಿಂದ ಪ್ರಾಣಶುದ್ಧಿಯಾಗು ವದು. ಅದರಂತೆ ಭಾವಲಿಂಗ ಜಗತ್ತಿನ ಭಾವ ಹೋಗಿ ಎಲ್ಲದರಲ್ಲಿ ವಲ್ಲದಕ್ಕೂ ಈ ಲಿಂಗ ಪರಮಾತ್ಮನ ಭಾವ ನೆಲೆಗೊಳ್ಳಬೇಕು. ಇದೇ ಭಾವಲಿಂಗ ಪೂಜೆ. ಹೀಗೆ ಹೊರಗಿನ ಬೇಡರ ಅರ್ಥವ ಶಿವನನ್ನು ಯಾರೂ ಪೂಜಿಸುವದಿಲ್ಲ ತನ್ನ ಸ್ವರೂಪನ್ನೇ ಲಿಂಗದ ಆಕಾರದಿಂದ ಪೂಜಿಸುವರು.—

"ಅಯ್ಯಾ ತನ್ನ ತಾನರಿದಡೆ ತಾನೇ ಚಿನ್ಮಯನಾದ ಪರಬ್ರಹ್ಮ
ನೋಡಾ। ತಾನೇ ಚಿನ್ನಾದ ಚಿದ್ಬಿಂದು ಚಿತ್ಕಳಾವ್ಯಾಪ್ತಿ
ನೋಡಾ। ತಾನೇ ಸಕಲ ಚೈತನ್ಯ ಚಿಚ್ಛಕ್ತ್ರಧಾರಿ
ತನ್ನಿಂದಧಿಕ ಪರದೈವವಿಲ್ಲ ನೋಡಾ। ತಾನೇ ಸಚ್ಚಿದಾನಂದ
ಚಿದ್ಘನಲಿಂಗ ನೋಡಾ। ಸ್ವರ್ಗಲೋಕ ತಾನಿದ್ದಲ್ಲಿ ಜ್ಯೋತಿ
ರ್ಮಯ ಲೋಕ ತಾನಿರ್ದಲ್ಲಿ ದೇಹವೇ ಶಿವಾಲಯವು॥

ಎಂದು ಶರಣರು ಹಾಡಿದ್ದನ್ನು ವಿಚಾರಿಸಿದರೆ ಶಿವನು ಹೊರಗಿಲ್ಲ. ಬೇಡನಲ್ಲ. ಬೇಡರ ಒಡೆಯನಲ್ಲ. ಅವನ ಭಕ್ತರೆಲ್ಲ ಬೇಡ ಗಣ ಗಳಲ್ಲ. ಇದೆಲ್ಲ ಅನುಭವದಿಂದ ತಿಳಿಯುವ ವಿಷಯ. ಓದಿದರೆ ಬರು ವದಿಲ್ಲ. ಇಂಥ ವಿಷಯಕ್ಕೆ ಐತಿಹಾಸಿಕತೆ ಬೇಕಾಗಿಲ್ಲ. ಶಿವನು ಐತಿ ಹಾಸಿಕ ಪುರುಷನಲ್ಲ, ಪುರಾಣ ಪುರುಷನಲ್ಲ ಅದೊಂದು ಉಚ್ಚ ಸ್ಥಿತಿ ಅನಿರ್ವಚನೀಯ ಸ್ಥಿತಿ. ಅದನ್ನೆಲ್ಲ ಅವನ ಚಿತ್ರದಲ್ಲಿ ಧರಿಸಿದ ಆಭರಣ ಗಳಿಂದ ಅವನ ಗುಣಗಳನ್ನು ನಾವು ಕಲ್ಪಿಸಬಹುದು. ಅದರಂತೆ ತಿಳಿದು ನಡೆದು ಆ ಶಿವಲಿಂಗದ ಸ್ಥಿತಿಯನ್ನು ಪಡೆಯಬಹುದು. ಈ ಮೂರು ಲಿಂಗದಲ್ಲಿ ಆಚಾರಲಿಂಗ+ಗುರುಲಿಂಗ+, ಶಿವಲಿಂಗ+ಜಂಗ ಮಲಿಂಗ, ಪ್ರಸಾದಲಿಂಗ+ಮಹಾಲಿಂಗಗಳೆಂದು ಆರು ಲಿಂಗಗಳು. ಅದರಿಂದ ಮುಂದೆ ೩೬ ಲಿಂಗಸ್ಥಲಗಳು ಹೀಗೆ ಬಹಳ ಅರ್ಥವಿರುವದು. ಇದಕ್ಕೆಲ್ಲ ಏನು ಅರ್ಥ ಮಾಡುವಿರಿ; ವಿಚಾರಿಸಿರಿ.

———

# ಸರ್ವೋದಯ.

(ಲೇಖಕರು:- ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು.)



ಪುಣ್ಯ ಭೂಮಿಯ ಮಹಾಜ್ಞಾನಿಗಳ ಅಮೃತವಾಣಿಯು ನಮ್ಮ ನಮ್ಮ ಜೀವನ ಸಂಸ್ಕಾರಕ ಸಾಮಗ್ರಿಯು ಚೇತೋಹಾರಿಯಾಗಿರುತ್ತದೆ. ವಿಶ್ವ ಕಲ್ಯಾಣವನ್ನು ಬಯಸಿ ಹೊರಹೊಮ್ಮಿಸಿದ ಅಮೃತವಾಣಿಯೊಂದು ಇಂತಿದೆ.

ಸರ್ವೇಚ ಸುಖಿನಃ ಸಂತು ।
ಸರ್ವೇಸಂತು ನಿರಾಮಯಾಃ ।
ಸರ್ವೇಭದ್ರಾಣಿ ಪಶ್ಯಂತು ।
ಮಾಕಶ್ಚಿತ್‌ದುಃಖ ಭಾಗ್‌ಭವೇತ್ ॥

ಸರ್ವರಿಗೂ ಈ ತ್ರಿಬಾಧೆಗಳಿಲ್ಲದೆ ಸುಖ ಶಾಂತಿಗಳಿಂದ ಸಾಗಿ ಹೋಗುತ್ತಿರುವ ಸಮಾಜದಲ್ಲಿ ಸಕಲ ಪ್ರಗತಿಯನ್ನು ಕಾಣುತ್ತೇವೆ. ಇದರ ಸ್ಥಿರ ಸಾಧನೆಗೆ ಮೂಲಭೂತವು 'ಸರ್ವೋದಯ.' ರಸ್ಕಿನ್ ಸಾಹಿತ್ಯಾವಲೋಕನ ಮಾಡಿದ ಗಾಂಧೀಜಿಯು ಈ ತತ್ವವನ್ನು ಮನಗಂಡು ಇದನ್ನು ತಮ್ಮ ದಿನಚರಿಯ ಜೀವದಲಿ ಜಾರಿಗೆ ತಂದರು. ಸಕಲರಿಗೂ ಉಚಿತ ಉದ್ಯೋಗವೂ, ಜೀವನವೂ ದೊರೆತು, ಸಮಾಜದ ಅಂಗಾಂಗಗಳೂ, ಉಪಾಂಗಗಳೂ, ಸುಖಮಯವೂ, ಸುಖಪುಷ್ಟವೂ ಆಗುವದೇ ಆರ್ಥಿಕ ದೃಷ್ಟಿಯಿಂದ 'ಸರ್ವೋದಯ.' ಕೇವಲ ವೈಜ್ಞಾನಿಕ ಸಂಪತ್ತಿನಿಂದ ಮಾತ್ರವೇ ಮಾನವನಿಗೆ ಶಾಂತಿಯು ಸಿಗಲಾರದು; ಆದರೆ ಪರಿಪೂರ್ಣ ಶಾಂತಿ ಸಿಗಲು ಆತನ ನೈತಿಕ ಮಟ್ಟವು ಹೆಚ್ಚಬೇಕು. ಇದಕ್ಕೆ ಮೂಲ , ಅಂತ ಸಂಪತ್ತಿನ ಸೌಭಾಗ್ಯವು. ಈ ತತ್ವವನ್ನು ಎತ್ತಿ ಸಾರುವ ಕಥೆ ಒಂದು. 'ಸೇಕುಂಗನು ಕನ್ಫ್ಯೂಷಿಯಸ್ಸಿ ಶಿಷ್ಯ ಒಮ್ಮೆ ಹಳ್ಳಿಯೊಂದರ ದಾರಿಯುದ್ದಕ್ಕೂ ಹೋಗುತ್ತಿರುವಾಗ ಪಕ್ಕದ ತೋಟದಲ್ಲಿ ವೃದ್ಧ ತೋಟಗಾರನು ಕೆಲಸ ಮಾಡುತ್ತಿರುವನ್ನು ನೋಡಿದನು. ತೋಟದ ಸುತ್ತಲೂ ಕಾಲುವೆಯನ್ನು ಅಗೆಯುತ್ತಿದ್ದನು.

ಬಾವಿಯಿಂದ ಗಡಿಗೆಯಲ್ಲಿ ನೀರು ತುಂಬಿ ಆ ಕಾಲುವೆಗೆ ಸುರಿಯುತ್ತಿದ್ದನು. ಶ್ರಮಕ್ಕೆ ಯೋಗ್ಯ ಫಲವು ಪರಿಪೂರ್ಣವಾಗಿ ಸಿಗದು ಎಂಬುದು ಎದ್ದು ಕಾಣುತ್ತಿತ್ತು.

"ತಾತಾ, ಯಂತ್ರವನ್ನು ನೀವು ಏಕೆ ಉಪಯೋಗಿಸುವುದಿಲ್ಲ. ಕೊಂಚಕಾಲದಲ್ಲಿಯೇ ಇದರ ಹತ್ತರಷ್ಟು ನೀರು ನಿಮಗೆ ಸಿಗುತ್ತದೆಯಲ್ಲ. ಪಕ್ಕದೂರಿನ ತೋಟಗಾರರು ಯಂತ್ರಗಳನ್ನು ಉಪಯೋಗಿಸಿದ ಕಾರಣವೇ ಹೆಚ್ಚಿಗೆ ಫಲವನ್ನು ಪಡೆಯುತ್ತಿದ್ದಾರೆ."

"ನಿನ್ನ ಮಾತನ್ನು ಹಿಂದೆಯೇ ಕೇಳಿದ್ದೇನೆ. ಆದರೆ ನನ್ನ ಗುರುವಿನ ಉಪದೇಶವೇನೆಂಬುದು ನಿನಗೆ ಗೊತ್ತೇ ! "

"ಅದೇನು!"

"ಈ ಬಗೆಯ ಉಪಕರಣಗಳನ್ನು ಉಪಯೋಗಿಸುವ ಜನ ವ್ಯವಹಾರದಲ್ಲಿ ಧೂರ್ತರಾಗಿರುತ್ತಾರೆ. ವ್ಯವಹಾರ ಧೂರ್ತರು ಆತ್ಮವಂಚಕರಾಗಿರುತ್ತಾರೆ. ಅಂತಹವರ ಹೃದಯವು ಪರಿಶುದ್ಧವಾಗಿರುವುದಿಲ್ಲ. ಆದ ಕಾರಣ ಅವರು ಅಸತ್ಯ, ಕಪಟ, ಮೋಸ ದಿಗಳನ್ನು ಮಾಡಲು ಉದ್ಯುಕ್ತರಾಗುತ್ತಾರೆ. ಅವರ ಗುರಿಯು ಲಾಭಾರ್ಜನೆಯೇ ಆಗಿರುತ್ತದೆ. ಯಾವ ಉಪಕರಣಗಳನ್ನು ಸಕಲರೂ ಉಪಯೋಗಿಸುವುದಕ್ಕೆ ಸಾಧ್ಯವಿಲ್ಲವೋ ಅಂತಹುದನ್ನು ಉಪಯೋಗಿಸಿದರೆ ಈ ರೀತಿಯ ಮೋಸಗಳು ನಮ್ಮ ಹಾದಿಯಲ್ಲಿ ಅಡ್ಡನಾಗಿ ಬರಲಾರವು."

ಇದನ್ನು ಕೇಳಿದ ಸೇಕುಂಗನು ನಾಚಿಕೊಂಡು ಯಂತ್ರದಿಂದ ಲಾಭಬಂದರೂ ಆತ್ಮಜ್ಞಾನದ ಅಭಾವಕ್ಕೆ ಅವಕಾಶವಾಗುತ್ತದೆಯೆಂಬ ಅರಿವು ಆತನಿಗಾಯಿತು.

ವೈಜ್ಞಾನಿಕ ಸಂಶೋಧನೆಯ ಫಲವಾಗಿ ಮಾನವನಿಗೆ ಅಪಾರವಾದ ಶಕ್ತಿಯು ಲಭ್ಯವಾಗಿದೆ. ತತ್ಫಲವಾಗಿ ಮಾನವನ ಜೀವನವೇ ಹೊಸ ರೂಪನ್ನು ಧರಿಸಿ, ಮಾನವನು ಪ್ರಗತಿಗಾಮಿಯಾಗಿ ಹೆಜ್ಜೆ ಹಾಕುತ್ತಿದ್ದಾನೆ ಎಂಬ ಭಾವನೆಯು ಬಂದಿದೆ. ಮಾನವ ಶಕ್ತಿ ಸಾಹಸಗಳಿಗನುಗುಣವಾಗಿ ಆತನ ಜೀವನದ ನೈತಿಕ ಮಟ್ಟವು ಉತ್ತಮಗೊಳ್ಳಲಿಲ್ಲವೆಂದೂ ಪ್ರಾಕೃತಿಕ ಶಕ್ತಿಗಳನ್ನು ವಶಪಡಿಸಿಕೊಂಡು ಸುಖ

ವನ್ನು ಕೊಡುವ ಉಪಭೋಗಗಳನ್ನು ಒದಗಿಸುವುದರಿಂದಲೇ ಮಾನವ ಕೋಟಿಗೆ ಶಾಂತಿ ಸಮಾಧಾನಗಳು ಸಿಗಲಾರದೆಂದೂ ಮನದಟ್ಟಾಗಿದೆ. ವಿಜ್ಞಾನಶಾಸ್ತ್ರದ ಅದ್ಭುತವಾದ ಅನ್ವೇಷಣೆಯ ಫಲವಾಗಿ ಜಗತ್ತೆಲ್ಲವೂ ಏಕಕುಟುಂಬದಂತಾಗಿ ದೂರ ಸಮೀಪವೆಂಬ ಅಂತರವು ಅಳಿಸಿಹೋಗಿ ನಿಕಟವಾದ ಸಂಬಂಧಗಳು ಏರ್ಪಟ್ಟಿದ್ದರೂ ಉದಾರಚರಿತೆಯು ಅಂತಃ ಕರಣ ಶುದ್ಧಿಯೂ, ಹೃದಯ ವೈಶಾಲ್ಯವೂ ಕಾಣಬರುತ್ತಿಲ್ಲ. ಎಷ್ಟೇ ನಿಕಟಕಯಿದ್ದರೂ ಅಂತರವಮಾತ್ರ ಅಳಿಯಲಿಲ್ಲ. ಇದಾಗಬೇಕಾದರೆ ಶ್ರಮ ಗೌರವ ಮನದಟ್ಟಾಗಬೇಕು.

ಸಮಾಜವು ತನ್ನ ಮೂಲ ಗರಿಯನ್ನೇ ಮರೆತಿದೆ. ಗೃಹ ನಿರ್ಮಾಪಕನು ಕುಂಬಾರನನ್ನು ಉಪೇಕ್ಷಿಸಿದ್ದಾನೆ. ಬಡಗಿಯು ತನ್ನ ಮೂಲೋದ್ದೇಶವನ್ನು ಮರೆತು ಕಮ್ಮಾರನಿಗೆ ಉದ್ಯೋಗವಿಲ್ಲದಂತೆ ಮಾಡಿದ್ದಾನೆ. ಯಂತ್ರದಿಂದ ತಯಾರಾದ ಎಣ್ಣೆಯು ಬಂದು ಎಣ್ಣೆಗಾಣಗಳ ಬಾಯಿಗೆ ಮಣ್ಣು ಹಾಕುತ್ತಿದೆ. ನೆಯ್ಗೆಯವನು ಯಂತ್ರದ ನೂಲಿಗೆ ಮನಸೋತು ರಾಟೆಗಳು ನಿದ್ದೆ ಮಾಡುಂತೆ ಮಾಡಿದ್ದಾನೆ. ತರುಣಿಯರು ವಾಯಿಲ್ ಸೀರೆಗಳಿಗೆ ಬೆರಗಾಗಿ ಬಾಯ್ಬಿಟ್ಟು ಕಾರ್ಯ ಮಾಡಿ ನೇಯ್ಗೆಯವನನ್ನು ನಿರಾಹಾರಿಯನ್ನಾಗಿ ಮಾಡುತ್ತಿದ್ದಾರೆ. ವಿದ್ಯಾವಂತನು ತನ್ನ ಕುಲ ಕಸಬಿಗೆ ಕೊಡಲಿಯಾಗಿದ್ದಾನೆ. ತನ್ನ ಸುತ್ತ ಮುತ್ತಣ ನಾಲ್ಕಾರು ಮಂದಿಗೆ ಬಾಧಿತರಾಗಿರುವ ಮಂದಿಯು ಅಲ್ಲಲ್ಲಿ ಕಾಣುತ್ತಿದ್ದಾರೆ. ಈ ಪರಸ್ಪರ ವಿಧ್ವಂಸಕ ವೃತ್ತಿಯು ತಾಂಡವವಾಡುತ್ತಿದೆ. ಯಂತ್ರಯುಗದ ಪರಿಣಾಮವು ಕೇವಲ ಸಂಪಾದನೆ, ಸ್ವಾರ್ಥವು ಸರಾಗವಾಗುವಂತೆ ಮಾಡಿದೆ. ಇದರ ಪರಮ ಪರಿಹಾರವು ಸರ್ವೋದಯವು. ಯಾಂತ್ರಿಕ ಸಮಾಜ ಜೀವನವು ನೀರಾವರಿ ಫಲವಾದರೆ ಸರ್ವೋದಯ ಸಮಾಜ ಜೀವನವು ಸೃಷ್ಟಿಸಲು ನೀರಾವರಿಯಲ್ಲಿ ಎಲ್ಲಿಯೋ ಕೆಲವರಿಗೆ ಮಾತ್ರ ಜೀವನ ಸಾಗುತ್ತಿದೆ. ಮುಗಿಲು ಮೊಳಗಿ ಮಳೆ ಬಿದ್ದು ಭೂಮಿಯ ಎಲ್ಲಡೆಯೂ ತೇವವಾಗಿ ತಂಪಾಗಿ ಸತ್ಯ ಸಮೃದ್ಧಿಯಾಗಿ ಸರ್ವರಿಗೂ ಸಮಾನ ಜೀವನವು ದೊರಕುತ್ತದೆ.

ಸರ್ವ ಸಮಾನ ಜೀವನವೇ ಸರ್ವೋದಯದ ತಾರಕ ಮಂತ್ರ. ಅಹಿಂಸಾ ಮಾರ್ಗದಲ್ಲಿ ಮುಂದುವರಿಯುವ ಸಮಾಜ ರಚನೆಯೇ

ಸರ್ವೋದಯದ ಗುರಿ. ಈ ಸಮಾಜದಲ್ಲಿ ವ್ಯಕ್ತಿಗಳ ಪರಿಪೂರ್ಣವಾದ ವಿಕಾಸಕ್ಕೂ ಸಮಾಜದ ವಿಕಾಸಕ್ಕೂ ಅವಕಾಶವಿರಬೇಕು. ಆಯಾ ಪ್ರದೇಶಗಳಲ್ಲಿ ಆದಷ್ಟು ಮಟ್ಟಿಗೆ ಜನರು ಸ್ವಾವಲಂಬಿಗಳಾಗಿರಲು ಯತ್ನಿಸಬೇಕು. ಪರಸ್ಪರ ಸಹಕಾರ ಸಹಾಯದಿಂದ ಸರ್ವರ ಹಿತ ಸಾಧನೆಯಲ್ಲಿ ನಿರತರಾಗಿರಬೇಕು. ಈ ಧ್ಯೇಯವನ್ನು ಸಾಧಿಸಬೇಕಾದರೆ ವ್ಯಕ್ತಿಗಳ ಇಲ್ಲವೆ ಗುಂಪುಗಳ ನಡುವಣ ಪರಸ್ಪರ ಸುಲಿಗೆಗೆ ಅವಕಾಶವಾಗದಂತೆ ವ್ಯವಸ್ಥೆಯಾಗಬೇಕು.

ಸರ್ವೋದಯ ಸಮಾಜದಲ್ಲಿ ವ್ಯಕ್ತಿಗಳು ಡಾಂಭಿಕ ಜೀವನಕ್ಕೆ ಹಾತೊರೆಯದೇ ಸರಳ ಜೀವನವನ್ನು ನಡೆಯಿಸಿ ತೃಪ್ತಿಯನ್ನು ಪಡೆಯಬೇಕಾಗಿದೆ. ಅವಶ್ಯವಾದ ಕಾಯಕ ಶ್ರಮಕ್ಕೆ ಸಿದ್ಧರಾಗಿರಬೇಕಾಗುತ್ತೆ. ಆದಷ್ಟು ಮಟ್ಟಿಗೂ ಗ್ರಾಮಗಳೂ ಪುಟ್ಟ ಪ್ರದೇಶಗಳೂ ತಮ್ಮ ದಿನಚರಿಯ ಜೀವನಕ್ಕೆ ಬೇಕಾಗುವ ಪದಾರ್ಥಗಳ ವಿಚಾರದಲ್ಲಿ ಸ್ವಯಂಪರಿಪೂರ್ಣರಾಗಿರಲು ಪ್ರಯತ್ನಿಸುವ ಮತ್ತು ಸಮಾಜವೆಲ್ಲವೂ ಒಂದು ದೊಡ್ಡ ಕುಟುಂಬವೆಂದು ಮನಗಂಡು ಬೇರೆ ಬೇರೆ ವ್ಯಕ್ತಿಗಳನ್ನು ಅವಲಂಬಿಸುವರು. ಮೇಲು ಕೀಳೆಂಬ ಭಾವನೆಯನ್ನು ಬಿಟ್ಟು ಸಕಲರೂ ಸಮಾಜದ ಹಿತಕ್ಕೋಸ್ಕರ ದುಡಿಯುವ ಸೇವಕರೆಂದು ಅರಿತು ಪರಸ್ಪರ ವಿಶ್ವಾಸದಿಂದ ವರ್ತಿಸುತ್ತಾರೆ. ಸರ್ವ ಜನರ ಪರಿಪೂರ್ಣ ಸಂಸ್ಕೃತಿ ಮತ್ತು ಶೀಲದ ವಿಕಾಸಕ್ಕೂ ಈ ಬಗೆಯ ಸಮಾಜದಲ್ಲಿ ನಿರಾತಂಕವಾದ ಅವಕಾಶವಿರುತ್ತದೆ.

ಈ ಬಗೆಯ ಸಮಾಜವು ರೂಪುಗೊಳ್ಳಬೇಕಾದರೆ ಆರ್ಥಿಕ ಕ್ಷೇತ್ರದಲ್ಲಿ ಎಂದರೆ ಕೈಗಾರಿಕೆಗಳೂ, ವಸ್ತುಗಳ ತಯಾರಿಕೆ ಇವುಗಳಲ್ಲಿ ವಿಕೇಂದ್ರೀಕರಣ ಪದ್ಧತಿಯನ್ನನುಸರಿಸುವುದೇ ಸಕಲಕ್ಕೂ ಪ್ರಧಾನವಾದ ಸುಧಾರಣೆ. ಸಮಾಜದಲ್ಲಿ ಅನಾದಿಯಿಂದಲೂ ನಡೆದುಬಂದಿದ್ದ ಗ್ರಾಮೋದ್ಯೋಗಗಳನ್ನು ಮೂಲೆಗೊತ್ತಿ ಗ್ರಾಮಗಳ ಶೋಷಣೆಗೆ ಕಾರಖಾನೆಗಳು ಕಾರಣವಾದವು ಈ ಹೊಡೆತಕ್ಕೆ ಸಿಕ್ಕಿದೆ. ಗ್ರಾಮಗಳು ಘೋರವಾದ ದಾರಿದ್ರ್ಯವನ್ನೇ ಅನುಭವಿಸಬೇಕಾಯಿತು. ಈ ಸಮಯದಲ್ಲಿ ಗಾಂಧಿ ಜಿಯವರು ಕೈಗೊಂಡ ಚರಕಾ ಪ್ರಚಾರವು ನಮ್ಮ ನಾಡಿನಲ್ಲಿ ಒಂದು ವಿಚಾರ ಕ್ರಾಂತಿಯನ್ನೇ ಉಂಟುಮಾಡಿತು. ಬಟ್ಟೆ ಬರಿ

ಮಾತ್ರವಲ್ಲದೆ ಇತರ ಉಪಯುಕ್ತ ವಸ್ತುಗಳನ್ನೂ ಕೂಡ ಗ್ರಾಮಗಳಲ್ಲಿ ಗ್ರಾಮೋದ್ಯೋಗಿಗಳ ಮೂಲಕ ತಯಾರಿಸಬಹುದೆಂದು ತೋರಿಸಿದರು. ದ್ರವ್ಯಾರ್ಜನೆ ದೃಷ್ಟಿಯಿಂದ ಮಾತ್ರವಲ್ಲದೆ ಗ್ರಾಮಗಳ ಆರೋಗ್ಯ, ಉದ್ಯೋಗಪ್ರವೃತ್ತಿ, ಚಟುವಟಿಕೆಯು ಉತ್ತಮಗೊಂಡು ಅವರ ಜೀವನದ ಮಟ್ಟವು ಸುಧಾರಿಸುವುದಕ್ಕೆ ಈ ಉದ್ಯಮಗಳು ಕಾರಣವಾಗುವವು. ವಿಪುಲಜನಸಂಖ್ಯೆಯುಳ್ಳ ಭಾರತ ದೇಶದ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಲು ದೊಡ್ಡ ಪ್ರಮಾಣದ ಉತ್ಪತ್ತಿ ಕೇಂದ್ರಗಳು ಸರ್ವಥಾ ಅಶಕ್ತವಾಗಿರುವವು. ಈ ಬಗೆಯ ದೊಡ್ಡ ಕೈಗಾರಿಕೆಗಳ ಮೇಲೆಯೇ ಹೆಚ್ಚು ಬಲವನ್ನಿಟ್ಟಿದ್ದ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರೇ ಗ್ರಾಮ ಕೈಗಾರಿಕೆಗಳ ಪುನರುದ್ಧಾರದಲ್ಲಿ ತೊಡಗಿರುವದು ಇದಕ್ಕೆ ಸಾಕ್ಷಿಯಾಗಿದೆ.

ಉತ್ಪತ್ತಿ ಕೇಂದ್ರಗಳನ್ನು ವಿಕೇಂದ್ರಿಕರಿಸಿ ಗ್ರಾಮವಾಸಿಗಳನ್ನು ಉದ್ಯೋಗಪರರನ್ನಾಗಿ ಮಾಡುವದು ಗಾಂಧೀಜಿಯ ಮಾರ್ಗ. ಪರಶೋಷಣೆಯಿಂದ ಬದುಕಬೇಕೆಂಬ ಮನೋವೃತ್ತಿಯನ್ನೇ ಮೂಲತಃ ಬದಲಾಯಿಸುವದೇ ಗಾಂಧೀಜಿಯ ಮಹದಾಶಯ; ಸುಖಕ್ಕೆ ಹೇತುವಾದ ಸ್ವಾವಲಂಬನ ಪ್ರವೃತ್ತಿಯನ್ನು ಬೇರುಗೊಳಿಸುವದೇ ಹಿರಿಯ ಗುರಿ. ಶಾಂತಿಯೇ ದೇವತೆಯಾಗಿ, ಕನಿಷ್ಠನ ಪ್ರಗತಿಯೇ ಬೀಜವಾಗಿ, ಸಮತೆಯೇ ತಿಲಕವಾಗಿ, ನಿಸ್ವಾರ್ಥ ಸೇವೆಯೇ ಶಕ್ತಿಯಾಗಿ, ಅಹಿಂಸೆಯೇ ಕವಚವಾಗಿ, ಖಾದಿಯೇ ಅಸ್ತ್ರವಾಗಿ ಗಾಂಧೀಜಿಯವರು ಸರ್ವೋದಯದ ಮಂತ್ರವನ್ನು ರಾಷ್ಟ್ರದ ಮುಂದೆ ಪಠಿಸಿದರು. ಖಾದಿಯು ಬಟ್ಟೆಯಾದರೂ ಖಾದಿ ತತ್ವವು ಗಾಂಧೀಜಿಯ ದೃಷ್ಟಿಯಿಂದ ಸಮಸ್ತ ಜೀವನಾವಶ್ಯಕ ವಸ್ತುಗಳಿಗೆ ಅನ್ವಯಿಸುತ್ತದೆ. ಜೀವನದ ಮೂಲಕ ಸರ್ವೋದಯದ ಸಾಧನೆಯಾಗಬೇಕಾಗಿದೆ. ಸರ್ವೋದಯ ಸಾಧನೆಯಾಗುವಂತೆ ಜೀವನದ ಸರ್ವಾಂಗ ರಚನೆಯಾಗುವದು ಭಾರತಕ್ಕೆ ಶ್ರೇಯಸ್ಕರ. ಸರ್ವೋದಯ ಸಾಧನೆಯು ಒಂದು ಅಖಂಡ ತಪಸ್ಸು ಗಾಂಧೀಜಿಯ ಜೀವನವು.

ಸಮಾಜ ಎನ್ನುವದು ವ್ಯಕ್ತಿಗಳ ಸಂಸ್ಕಾರ ಮನೋಧರ್ಮಗಳ ಸಮೂಹದಲ್ಲಿ ಮೂರ್ತಿಗೊಂಡಿದೆ. ವ್ಯಕ್ತಿಗಳ ಗುಣ ಶೀಲಗಳು ಸುಧಾರಿಸಿದಲ್ಲಿ ಸಮಾಜದ ಜೀವನವು ತಾನೇ ತಾನಾಗಿಯೇ ಸುಧಾರಿಸುವದು

ಎಂಬುದೇ ಸರ್ವೋದಯ ವಾದಿಗಳ ನಂಬಿಕೆ. ಈ ಬಗೆಯ ಸಾಮೂಹಿಕ ಸುಧಾರಣೆಯು ಬುದ್ಧ, ಕ್ರಿಸ್ತ, ಮಹಮದ ಪೈಗಂಬರ, ಬಸವೇಶ್ವರಾದಿ ಮಹಾ ವಿಭೂತಿಗಳ ಪ್ರಭಾವದಿಂದ ಉಂಟಾಗಿದೆ ಎನ್ನುವದು ಚಾರಿತ್ರಿಕ ಪ್ರಸಿದ್ಧ ಯಾರೇ ಆಗಲಿ ಪರರ ವಸ್ತುವನ್ನು ಅಪಹರಿಸದೆ ಮತ್ತೊಬ್ಬರ ಆಸರೆಯನ್ನು ಬಯಸದೆ ಇತರರ ಸ್ವಾತಂತ್ರ್ಯವನ್ನು ಕಸಿದುಕೊಳ್ಳದೆ ತಮ್ಮ ತಮ್ಮ ಜೀವನ ಮಾರ್ಗವನ್ನು ಸಾಗಿಸಿಕೊಂಡು ಹೋಗುತ್ತಾ ಸುಳ್ಳನ್ನು ಮೆಚ್ಚದೆ ಅಸತ್ಯಕ್ಕೆ ಮನ್ನಣೆ ಕೊಡದೆ ಕಲಹಕ್ಕೆ ಎಡೆಗೊಡದೆ ಶಾಂತಿಪ್ರಿಯರಾಗಿ ನಿಷ್ಪಕ್ಷಪಾತ ಬುದ್ಧಿಯಿಂದ ತಮ್ಮ ತಮ್ಮ ಕುಟುಂಬ ಜೀವನದ ನೌಕೆಯನ್ನು ನಡೆಯಿಸಿಕೊಂಡು ಹೋಗುತ್ತಾರೋ ಅಂತಹವರ ತತ್ವದ ಆಧಾರದ ಮೇಲೆಯೇ ಸಮಾಜವನ್ನು ರಚಿಸುವದು ಸರ್ವೋದಯದ ಪ್ರಧಾನ ಧ್ಯೇಯವು. ಈ ಗುರಿಯು ಮಹಾಜ್ಞಾನಿಗಳು ಅವತರಿಸಿದ ಈ ನಾಡಿನಲ್ಲಿ ಆದಿಯಿಂದಲೂ ಆಚಾರ ವಿಚಾರಾನುಗತವಾಗಿ ಬಂದಿರುವದು ತಿಳಿದು ಬರುತ್ತದೆ.

ಸಂಕಲ್ಪ ವಿಕಲ್ಪ ವಿರಹಿತನಾಗಿ ರೂಪ, ರುಚಿ, ಗಂಧ, ಸ್ಪರ್ಶ ಶಬ್ದವನು ಕೂಡಲಚನ್ನಸಂಗಯ್ಯಾ ನೀನರಿದಡೆ ಪ್ರಸಾದವೆನಗೆ ಇದೆಲ್ಲ ಮೇಲಿನದನ್ನೇ ತಿಳಿಸಿಕೊಡುವದು. ಅದಕ್ಕಾಗಿ ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬರು ಅದು ಲಿಂಗಾರ್ಪಿತವೇ ? ಅಲ್ಲ ಅಲ್ಲ. ಅರ್ಪಿತವ ಮಾಡದೆ ಅನರ್ಪಿತವ ಹೊದ್ದದೆ ಅರ್ಪಿಸಬೇಕು ಕೂಡಲ ಚನ್ನಸಂಗಯ್ಯಾ ಎಂದು ಹೇಳಿದ್ದು ಅದನ್ನೇ ತಿಳಿಸುವದು.

ಅಂಗಕ್ಕೆ ಆಚಾರವಳವಟ್ಟಲ್ಲಿ ಲಿಂಗಕ್ಕೆ ಆ ಅಂಗವೇ ಅರ್ಪಿತ, ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಲಿಂಗಕ್ಕೆ ಆ ಪ್ರಾಣವೇ ಅರ್ಪಿತ, ಮನ ಮಹವನಿಂಬುಗೊಂಡಲ್ಲಿ ಆ ಮಹಲಿಂಗಕ್ಕೆ ಮನವೇ ಅರ್ಪಿತ, ಭಾವಕ್ಕೆ ಭ್ರಮೆಯಳಿದಲ್ಲಿ ನಿಭ್ರಾಂತನಾದಲ್ಲಿ ಲಿಂಗಕ್ಕೆ ಆ ಭಾವವೇ ಅರ್ಪಿತ, ಜ್ಞಾತೃ ಜ್ಞಾನ ಜ್ಞೇಯ ಸಂಪುಟವಾದಲ್ಲಿ ಅವು ನಿರ್ಣಯ ನಿಃತ್ರಿಪ್ಟಯಾಗಿ ಕುರುಹುಗೆಟ್ಟಲ್ಲಿ ಆ ಲಿಂಗಕ್ಕೆ ಆ ಅರಿವೇ ಅರ್ಪಿತ ಇಂತು ಸರ್ವಾಂಗ ಅರ್ಪಿತವಾಗಿ ಲಿಂಗಕ್ಕೆ ಒಡೆತನವನಿತ್ತ ಕಾರಣ ಕೂಡಲಚನ್ನಸಂಗಯ್ಯನಲ್ಲಿ ನಾನೀನೆಂಬುದಿಲ್ಲದೆ ನಿಂದ ನಿಜದ ಮಹಾಪ್ರಸಾದಿ ಈ ವಚನವು ಒಳ್ಳೇ ಸರ್ವಾರ್ಪಣವನ್ನು ಹೇಳುವದು ಆ ಅರ್ಪಣದಿಂದ ಸಕಲ ಆಧಾರ ಶುದ್ಧಿಯಾಗಿ ಅದು ಪರಮಾತ್ಮನ ದಿವ್ಯ ಭವ್ಯ ಮಂದಿರವಾಗಿ ಬಿಡುವದೆಂದು ಬಹು ಚನ್ನಾಗಿ ಸಾಧಕನಿಗೆ ಸರ್ವಾರ್ಪಣದ ಸಾಧನವನ್ನು ಹೇಳಿದ್ದಾನೆ.

ಸದಾಚಾರಸಂಪನ್ನನಾದರೆ ಈ ಕಾಯ ಶುದ್ಧವಾಗಿ ಶಿವನ ಮಂದಿರವಾಗುವದು. ಸತ್ಯ ನಿಷ್ಕಾಮ ಶುದ್ಧ ಕಾಯಕದಿಂದ ಪ್ರಾಣಶುದ್ಧವಾಗಿ ಪ್ರಸಾದವಾಗುವದರಿಂದ ಅಲ್ಲಿ ಶಿವನು ವಾಸ ಮಾಡುವನು. ಮನದಲ್ಲಿ ಶಿವನ ನೆನಹು ಧ್ಯಾನ ಸ್ಮರಣೆ ನಿತ್ಯ ಹೆಚ್ಚಾದಲ್ಲಿ ಮನ ಶುದ್ಧ ಸಿದ್ಧವಾಗಿ ಅಲ್ಲಿ ಮಹಾದೇವನು ನೆಲೆಸಲು ಅನುಕೂಲವಾಗುವದು. ಭಾವಕ್ಕೆ ಹತ್ತಿದ ಮಮಕಾರ, ಅಹಂಕಾರ, ಅಭಿಮಾನ ಭ್ರಮೆ, ಭ್ರಾಂತಿಗಳು, ಅಳಿದಾಗ ಭಾವ ಶುದ್ಧವಾಗಲು ಪರಶಿವನು ಅಲ್ಲಿ ನೆಲೆಸುವನು. ಜೀವ ಶಿವ ಇವರ ಅನುಭವ ಇವು ಒಂದೇ ಆದಾಗ ಆ ಅರಿವೆ ಲಿಂಗಕ್ಕೆ ಅರ್ಪಿತವಾಗುವದು. ಈ ಪ್ರಕಾರ ಸರ್ವಾಂಗ ಅರ್ಪಿತವಾಗಿ ಸರ್ವಾಂಗ

ದಲ್ಲಿ ಲಿಂಗನೆಲಿಸಿದರೆ ಅಲ್ಲಿ ಅವನ ಒಡೆತನ ನಡೆದು ನಾನೀನೆಂಬ
ಉಭಯ ಅಳಿದು ತಾನೇ ತಾನಾಗಿ ಬಿಡುವನು ಇದೇ ನಿಜವಾದ
ಮಹಾಪ್ರಸಾದಿಯ ಲಕ್ಷಣ. ಇದನ್ನು ಸಾಧಿಸಬೇಕಾದರೆ ಮೊದಲಿಗೆ
ಸತ್ಯಶುದ್ಧ ಕಾಯಕ ಮಾಡಿ ಸಕಲ ಫಲವನ್ನು ದಾಸೋಹಭಾವದಿಂದ
ಅರ್ಪಿಸಿ ದೇವನನ್ನು ಸದಾ ಚಿಂತಿಸಿ, ನೆನಿಸಿ, ಧ್ಯಾನಿಸಿದರೆ ಎಲ್ಲ ಮೇಲೆ
ಹೇಳಿದ ಅರ್ಪಿತಗಳು ಕಾಲಕ್ರಮದಿಂದ ಜರಗುವವು. ಆಗ ಸರ್ವಾರ್ಪಿತ
ಭಾವಸಂಪೂರ್ಣ ಬಂದು ಬಿಡಲು, ಸಾಧನ ಮುಗಿಯುವದು. ಆದರೂ
ಸಾಧನದಲ್ಲಿ ಜಾಗ್ರತನಾಗಿರಬೇಕು.

ಪರಮಾತ್ಮನಿಗೆ ನಿತ್ಯ ಸಕಲವನ್ನು ಅರ್ಪಿಸುತ್ತಿದ್ದರೂ ಪ್ರತಿಯಾಗಿ
ಏನೂ ಬೇಡಕೂಡದು ಯಾವ ಆಶೆವಾಸನೆ ಆಕಾಂಕ್ಷೆಗಳು ಎಳ್ಳಷ್ಟೂ
ಹೊರಗೆ ಒಳಗೆ ಎಲ್ಲಿಯೂ ಇರಕೂಡದು. ಹೀಗಿದ್ದರೆ ಮಾತ್ರ ನಿಷ್ಕಾ
ಮ ಭಕ್ತಿ ಯಾಗುವದು ನಿಷ್ಕಾಮ ಸತ್ಯ ಶುದ್ಧ ಕಾಯಕದಿಂದ ಬಂದ
ಫಲಗಳನೆಲ್ಲ ಶಿವನಿಗೆ ಅರ್ಪಿಸುವದಲ್ಲದೆ ಒಳ್ಳೇ ನಿಷ್ಕಾಮ ಭಕ್ತಿಯನ್ನು
ಕೂಡ ಮಾಡಬೇಕೆಂದು ಪರಿಪೂರ್ಣಯೋಗದ ಸಾಧನೆಯಾಗಿದೆ. ಇದಕ್ಕೆ
ಅಭೀಪ್ಸೆ ಎಂದು ಹೇಳುವರು. ಪರಮಾತ್ಮನಬಗ್ಗೆ ಒಳ್ಳೇ ಸಾತ್ವಿಕ ಅಭಿ
ಪ್ಸೆಯು ಅತಿ ಅವಶ್ಯಬೇಕು. ಹೀಗಾಗಿ ನಾವು ಸದಾ ಅತಿ ನಿಷ್ಕಾಮ
ಭಕ್ತಿಯುದ ಪರಮಾತ್ಮನ ಭಕ್ತಿ ಮಾಡಿದರೆ ಸತ್ಯ ಶುದ್ಧ ನಿತ್ಯ ಕಾಯ
ಕದಿಂದ ಅವನನ್ನು ಚನ್ನಾಗಿ ಪೂಜಿಸಿದರೆ ಸಾಧನೆಯು ಉಚ್ಚಮಟ್ಟಕ್ಕೆ
ಏರಿದಂತೆ ಸರಿ. ಆಗ ಇದರಿಂದ ಶರೀರ ಮನ, ಬುದ್ಧಿ, ಪ್ರಾಣ,
ಚಿತ್ತಗಳು ಶುದ್ಧವಾಗಿ, ಅಹಂಕಾರ ಮಮಕಾರರಹಿತನಾಗಿ, ಆತ್ಮ
ಸೂರ್ಯನು ಬೆಳಗಹತ್ತಲು ಸರ್ವಅಂಗ ಉಪಂಗಗಳಲ್ಲಿ ಲಿಂಗಮಯ
ವಾಗಿ ಶಿವಚಿತ್‌ಕಳೆಯು ಎಲ್ಲ ಕಡೆಗೂ ಪ್ರಕಟವಾಗುವದು. ಆಗ ಸತ್
ಚಿತ್‌ಗಳ ಸುಂದರ ಮಿಲಿನ ಸಂಗಮವಾಗಿ ಮಹಾನಂದವಾಗುವದು.
ಆಗ ಸಾಧಕನಿಗೆ ಪೂರ್ಣತೆಯು ಕಡೆಗೆ ಹೋಗಲು ಬರುವದು. ಅದಕ್ಕೆ
ಜಗತ್ತಿನ ತಾಯಿತಂದೆಗಳಾದ ಶಿವಶಕ್ತಿಯರ ಕೃಪೆಗೆ ಸಂಪೂರ್ಣ ಪಾತ್ರ
ರಾಗುವದೇ ಸಾಧನದ ಗುರಿಯಾಗಿದೆ. ಅದಕ್ಕಾಗಿ ಸಕಲ ರೀತಿಯ
ಸಕಲ ಸಮರ್ಪಣವನ್ನು ಮಾಡಲಿಕ್ಕೆ ಸಾಧನೆ ಮಾಡಬೇಕಾಗುವದು.
ಯಾರು ಪರಮಾತ್ಮನಿಗೆ ಪರಮಾತ್ಮರೂಪದಲ್ಲಿರುವ ಜೀವಿಗಳಿಗೆ ಯಾರು
ಎಷ್ಟು ಕೊಡುವರೋ ಅಂದರೆ ಎಷ್ಟು ಧ್ಯಾನ, ಎಷ್ಟು ಜಪ, ಎಷ್ಟು

ಪೂಜೆ, ಎಷ್ಟು ಸತ್ಯ ಶುದ್ಧ ಕಾಯಕದಿಂದ ಬಂದ ಗಳಿಕೆ, ಎಷ್ಟು ದುರ್ಘಟ ದುರ್ಗುಣ, ಎಷ್ಟು ವಿಷಯ, ಎಷ್ಟು ಧನ, ಎಷ್ಟು ತನು, ಎಷ್ಟು ಪ್ರಾಣ, ಎಷ್ಟು ಮನ, ಎಷ್ಟು ಬುದ್ಧಿ ಹೀಗೆ ಎಷ್ಟು ಎಲ್ಲವನ್ನು ಶಿವನಿಗೆ ಪ್ರಾಣಿಗಳಿಗೆ ಕೊಡುವರೋ ಅಷ್ಟು ಪಡೆಯುವರು. ಯಾರು ಸಕಲವನ್ನು ಎಲ್ಲವನ್ನು ಸರ್ವಸ್ವವನ್ನು ಕೊಡುವರೋ ಅವರೇ ಸಕಲವನ್ನು ಎಲ್ಲವನ್ನು ಸರ್ವವನ್ನು ಪಡೆಯುತ್ತಾರೆ. ಎಷ್ಟು ನಿರ್ವಿಷಯರಾಗುವರೋ ಅಷ್ಟು ಪರಮಾತ್ಮನ ಕೃಪೆಪಡೆಯುವರು. ಮೋಹವನ್ನೆಲ್ಲ ಸಂಪೂರ್ಣ ತ್ಯಾಗ ಮಾಡಿದರೆ ಪರಮಾತ್ಮನು ನಮ್ಮಲ್ಲಿ ಸಂಪೂರ್ಣ ವ್ಯಾಪಿಸಿ ಬಿಡುವನು. ನಮ್ಮನ್ನು ನಾವು ಎಷ್ಟು ಐಹಿಕ ವಿಷಯದಿಂದ ತೆರವು ಮಾಡುವೆವೋ ಅಷ್ಟು ಪರಮಾತ್ಮನು ನಮ್ಮಲ್ಲಿ ಪ್ರಕಟವಾಗುವನು. ತೆರವು ಮಾಡುವುದೇ ಸಾಧಕನ ಸಾಧನ ಅಂದರೆ ಅದು ಸರ್ವಾರ್ಪಣವನ್ನೇ ದಾಸೋಹಭಾವದಿಂದ ಮಾಡಲು ಸೂಚಿಸುವದು, ಅರ್ಪಣ ಮಾಡಿದೆನು ತ್ಯಾಗ ಮಾಡಿದೆನೆಂದು ಹೇಳಕೂಡದು ಅಷ್ಟು ನಿರಹಂಕಾರದಿಂದ ಅರ್ಪಣ ಮಾಡಬೇಕು. ತ್ಯಾಗ ಮಾಡಿದ ಬಗ್ಗೆ ಅಹಂಕಾರ ಬಂದರೆ ಅದೆಂದೂ ತ್ಯಾಗ ಅರ್ಪಣವಾಗಲಾರದು. ಎಲ್ಲ ಅಹಂಕಾರಕ್ಕಿಂತ ತ್ಯಾಗದ ಅಹಂಕಾರವು ಹೆಚ್ಚು ಕಷ್ಟದಾಯಕ. ಬಹು ಕಠಿಣವಾದದ್ದು. ಹೀಗೆ ಸಂಪೂರ್ಣ ರೂಪದಲ್ಲಿ ಸಮರ್ಪಿಸುವದೇ ಸಾಧಕನ ಸಾಧನದ ಮುಖ್ಯ ತತ್ವವಾಗಿದೆ.

ಸಾಧಕನು ಇದನ್ನು ಸಾಧಿಸುವದಕ್ಕೆ ನಿತ್ಯ ಈ ಸಾಧನೆಯಂತೆ ಪ್ರಯತ್ನ ನಡಿಸಲೇಬೇಕು ಪ್ರಯತ್ನ ಬಿಡಲೇಬಾರದು. ಉರಿ ಬರಲಿ ಸಿರಿಬರಲಿ ಶಿರಹರಿಲಿ ಕೊರೆಕೊರೆದು ನೋಡಿದರು. ಸಾಧಕನು ತನ್ನ ಸಾಧನದಿಂದ ಎಂದೂ ಚ್ಯುತಿಯಾಗಬಾರದು. ಸಾಧನದಲ್ಲಿ ಮರಣ ಬಂದರೂ ಮಹಾನವಮಿ ಎಂದು ಆನಂದದಿಂದ ಪ್ರಾಣಾರ್ಪಣಮಾಡಬೇಕು. ಇದೇ ಸಾಧನದ ಅರ್ಪಣದ ತುಟ್ಟತುದಿಯೇ ಸರಿ. ಹೀಗೆ ಆನಂದವಾಗಬೇಕಾದರೆ ತನು, ಮನ, ಭಾವ, ಪ್ರಾಣ, ಜೀವಗಳನ್ನು ಅತಿ ಶುದ್ಧ ಪವಿತ್ರಗೊಳಿಸಿ ಅಂತರಂಗದಲ್ಲಿ ಪರಮಾತ್ಮನಿಗಾಗಿ ಒಳ್ಳೇ ಕಾತರನಾಗಿ ಆಶೆ ಆಕಾಂಕ್ಷೆಗಳ ಲವಲೇಶವಿಲ್ಲದೆ ಅತಿ ವಿಹ್ವಲನಾಗಿ ಭಕ್ತಿ ಪ್ರೀತಿಗಳಿಂದ ಅವನ ಧ್ಯಾನ ನೆನಹು ಪೂಜೆಗಳನ್ನು ಮಾಡುತ್ತಿದ್ದರೆ ಬೇಕಾದಂಥ ಕಷ್ಟ ತ್ರಾಸು ಸಂಕಟ ಬಂದರೂ ಒಳ್ಳೇ ಆನಂದವೇ

ಆಗುವದು. ಮರಣ ಬಂದರೂ ಕೂಡ ಅತಿ ಆನಂದವೇ ಆಗುವದು ಇಷ್ಟಾದರೆ ಮಾತ್ರ ಆಧಾರ ಶುದ್ಧಿ ಚನ್ನಾಗಿ ಆಯಿತೆಂದೂ ಸಾಧನವು ಸರಿಯಾಗಿ ಸಾಗಿರುವದೆಂದೂ ಸಾಧಕನು ತಿಳಿಯಬೇಕು.

ಹೀಗಾದದ್ದು ನಿತ್ಯ ನನುಗೆ ಅರಿವೆಯಾಗುವದು. ಅನುಭವವಾಗುವದು. ಆಗ ತನ್ನ ನಿಷ್ಪತ್ತಿಯೇ ತನಗೆ ಗುರುವಾಗಹತ್ತುವದು. ಈಗ ಹೊರಗಿನ ಗುರುವಿನ ಆವಶ್ಯಕತೆ ಇಲ್ಲ. ಆಗ ತನ್ನ ಅನುಭವದಿಂದ ಯೋಗ್ಯದಿಶೆಯಲ್ಲಿ ಸಾಧನ ನಡೆಯಹತ್ತುವದು. ಆಗ ನಮ್ಮಲ್ಲಿ ಸಕಲ ಶಕ್ತಿಗಳು ಸಕಲ ಸಿದ್ಧಿಗಳು ಕಾರ್ಯ ಮಾಡಹತ್ತುವವು. ಆದರೂ ಈಗ ಸಾಧನ ಮುಗಿಯಲಿಲ್ಲ ಇನ್ನು ಇದಕ್ಕೂ ಮುಂದೆ ಅಂದರೆ ಸಿದ್ಧಿಗಳ ಮುಂದೆ ಹೋಗಬೇಕು. ಆಗ ಯಾವ ವಿಧಿ ನಿಯಮ ಕಟ್ಟುನಿಟ್ಟುಗಳ ಅಧಿಪತಿಯಾಗುವನು. ಆದರೂ ಅನ್ಯರಸಲುವಾಗಿ ಅವುಗಳಂತೆ ಬಹಿರಂಗದಲ್ಲಿ ಆಚರಿಸಬೇಕಾಗುವದು. ಅದಕ್ಕಾಗಿ ಬಳಸದಿರದ್ವೈತವನು ಬಾಹ್ಯದಲಿ ಎಂದು ವಿಧಿಸಿದ್ದಾರೆ. ಆಧಾರ ಸಂಪೂರ್ಣ ಪರಿಪೂರ್ಣಸಿದವಾಗಿ ಬಿಟ್ಟಬಳಿಕ ತಪಸ್ಸು ಪ್ರಯತ್ನ ಮೊದಲಾದ ಸಾಧನ ಮುಗಿದಂತೇ ಸರಿ. ಇದರಿಂದ ಆ ಸಾಧಕನಲ್ಲಿ ಪ್ರಕಟವಾದ ಅನೇಕ ಶಕ್ತಿಗಳನ್ನು ತಾನು ಮನಬಲ್ಲಂತೆ ಉಪಯೋಗಿಸಿಕೊಳ್ಳಲಿಕ್ಕೆ ಬರುವದಿಲ್ಲ. ಆಗ ಅದರ ಕಾರ್ಯ ಖರೇ ಲೋಕಕಲ್ಯಾಣಕ್ಕೆ ಮಾತ್ರ ಸಂಬಂಧಪಡುವವು. ಭೂಲೋಕದಲ್ಲಿ ಸ್ವರ್ಗವನ್ನು ತರುವ ಸಲುವಾಗಿ ಅವನು ಆ ಶಕ್ತಿಗಳನ್ನು ಉಪಯೋಗಿಸಲಿಕ್ಕೆ ಬರುತ್ತದೆ. ಸಿಕ್ಕ ಸಿಕ್ಕಂತೆ ಶಕ್ತಿ ಬಂದಿದೆ ಎಂದು ಅಹಂಕಾರಿಯಾಗಿ ಮನಬಲ್ಲಂತೆ ಕೀರ್ತಿಗಾಗಿ ಪ್ರತಿಷ್ಠೆಗಾಗಿ, ಧನಕ್ಕಾಗಿ, ಮೆರವಣಿಗೆಗಾಗಿ ಅದನ್ನು ಉಪಯೋಗಿಸದೆ ಬಹು ಎಚ್ಚರಿಕೆಯಿಂದ ಅವನು ಇರಬೇಕಾಗುವದು. ಈಗ ಈ ಎಚ್ಚರದಿಂದ ಇರುವ ಸಾಧನವನ್ನು ಅವನು ಮಾಡಲೇಬೇಕಾಗುವದು. ಇವನು ಎಚ್ಚರಗೇಡಿಯಾದರೆ ತಾನು ಗಳಿಸಿದ ಶಕ್ತಿಹೋಗಿ ಮೊದಲಿನ ಅಹಂಕಾರ ಮಮಕಾರ ಮೊದಲಾದವುಗಳು ಬಂದು ಸೇರಿ ವಿಷಯಗಳ ಪ್ರವೇಶವೂ ಕೂಡ ಆಗುವದು. ಉಃ-- ಒಬ್ಬ ಸಿರಿವಂತನು ಅನೇಕ ವರ್ಷಗಳಿಂದ ತನ್ನ ಮನೆಯನ್ನು ಸರಿಯಾಗಿ ಕಾವಲು ಮಾಡುತ್ತಿದ್ದನು. ನಾಯಿಗಳನ್ನು ಇಟ್ಟಿದ್ದನು. ಬಂದೂಕು ಕೊಟ್ಟು ಒಳ್ಳೇ ಕಾವಲಗಾರರನ್ನೂ ಇಟ್ಟಿದ್ದನು. ಬಾಗಿಲು ಕಿಡಿಕೆಗಳನ್ನೂ ಹಾಕಿ ರಾತ್ರಿಯಲ್ಲಿ ಜಾಗರಣೆ

ಮಾಡಿ ಚನ್ನಾಗಿ ಕಾವಲು ಮಾಡುತ್ತಿದ್ದದರಿಂದ ಅವನ ಸಿರಿ ನಾಶ
ವಾಗದೆ ಹೆಚ್ಚಾಗಿತ್ತು. ಅವನು ಸುಖದಿಂದ ಇದ್ದನು. ಹೀಗೆ ಅನೇಕ
ವರ್ಷ ಹೋದಬಳಿಕ ಆ ಸಿರಿವಂತನು ಇಷ್ಟು ದಿನಗಳತನಕ ಯಾವ
ವೈರಿ, ತುಡುಗ ಒಳಗೆ ಪ್ರವೇಶಿಸಿಲ್ಲ. ತನ್ನ ಧನವನ್ನು ಇಲ್ಲಿಯತನಕ
ಯಾರೂ ದೋಚಿಕೊಂಡು ಹೋಗಿಲ್ಲ. ಎಲ್ಲವೂ ಸುರಕ್ಷಿತವದೆ ಈ ನಾಯಿ
ಕಾವಲುಗಾರರಿಗೆ ಸುಮ್ಮನೆ ಏಕೆ ಹೊಟ್ಟೆಗೆ ಹಾಕಿ ಪಗಾರ ಕೊಡು
ವದು ಇನ್ನು ಯೋಗ್ಯವಲ್ಲೆಂದು ವಿಚಾರಿಸಿ ಅವುಗಳನ್ನು ತೆಗೆದುಬಿಟ್ಟನು.
ಬಾಗಿಲುಗಳನ್ನೂ ಸಹ ತೆರೆದನು. ಇದನ್ನು ವೈರಿಗಳು ತುಡುಗರು
ಕಂಡು ಅದೇ ರಾತ್ರಿ ಅವನ ಮನೆಯಲ್ಲಿ ಪ್ರವೇಶಿಸಿ ಎಲ್ಲ ಧನಐಶ್ವ
ರ್ಯವನ್ನು ದೋಚಿಕೊಂಡರು. ಮತ್ತು ಆ ವಡೆಯನನ್ನು ಕಟ್ಟಿ ಬಂದಿಸಿ
ಬಿಟ್ಟು ಅವರೇ ಆ ಮನೆಯಲ್ಲಿ ಇರಹತ್ತಿದರು. ಈ ಶಿರಿವಂತನಂತೆ ಈ
ಸಾಧಕನ ಅವಸ್ಥೆಯಾಗುವದು. ಅದಕ್ಕೆ ಸದಾ ಜಾಗ್ರತವಾಗಿಯೇ ಇರು
ವದು ಸಾಧಕನ ಸಾಧನೆಯಾಗಿದೆ.

ಪರಮಾತ್ಮನ ಕೈಯೊಳಗಿನ ಯಂತ್ರದಂತೆ ಕೆಲಸ ಮಾಡಬೇಕು.
ಅಹಂಕಾರ ರಹಿತರಾಗಿ ಕೆಲಸ ಮಾಡಬೇಕು.—'ಗತಿ ಪದ ಮುಕ್ತಿ ವಿರ
ಹಿತ ಭಕ್ತ. ಹಮ್ಮು ಬಿಮ್ಮು ಗಮನ ನಾಸ್ತಿಯಾದಾತ ಜಂಗಮ.
ಪ್ರಾಣವಿಲ್ಲದಾತ ಭಕ್ತ. ರೂಹಿಲ್ಲದಾತ ಜಂಗಮ. ಮಾಡುವರೇ ಭಕ್ತ
ಮಾಟದೊಳಗಿಲ್ಲದಿರಬೇಕು. ಬೇಡುವಡೆ ಜಂಗಮ ಕೊಂಡುವದರೊಳಗಿ
ಲ್ಲದಿರಬೇಕು. ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಸಿರಿಕಾಡಿತ್ತು
ಶಿವನ ಡಂಗುರ ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡುವ ಭಕ್ತನು ನೀನೇ
ಮಾಡಿಕೊಂಬದೇಯನು ನೀನೇ, ಎಂದರಿದೆ. ಮಾಡುವವನು ಮಾಡಿಸಿ
ಕೊಂಬುವವನು ನೀನೇ ಅಯ್ಯ. ಕೂಡಲಸಂಗಮದೇವ. ಮಾತುವಲ್ಲಿ
ಎನ್ನನಾನರಿದು ಮಾಡಿದೆನಾದಡೆ, ನೀಡುವಲ್ಲಿ ಎನ್ನನಾನರಿದು ನೀಡಿದೆ
ನಾದಡೆ, ನೀಡುವಲ್ಲಿ ರುಚಿಗೇನುನ ಬೆಳಸಿ ಹಾರೈಸಿದೆನಾದಡೆ ನಿಮ
ಗಿಂದೆ ದ್ರೋಹವಯ್ಯ ಮಾಡುವಲ್ಲಿ ನೀಡುವಲ್ಲಿ ಶುದ್ಧನಲ್ಲದಿರ್ದಡೆ
ನೀನಿಂದೆ ಮೂಗ ಕೊಯ್ಯ ಕೂ. ಸ. ದೇ.

ಈ ವಚನಗಳ ಪ್ರಕಾರ ಶಿವನ ಕೈಯ್ಯಲ್ಲಿಯ ಯಂತ್ರದಂತೆ ಕೈಗೊ
ಲಿನಂತೆ ಕ್ರಿಯೆಗಳನ್ನು ಸದಾ ಮಾಡಬೇಕು. ಯಾವ ಫಲ ಪದವಿ
ಯಾಸೆ ಇರಕೂಡದು. ಅಹಂಕಾರದ ಸುಳಿವು ಕೂಡ ಇರಬಾರದು.

ಹೀಗೆ ಶರಣರು ಮಾಡಿದರು. ಇದೇ ಪರಿಪೂರ್ಣಯೋಗದ ಸಾಧನದ ಮೂಲ ಮಂತ್ರವೆಂದು ಹೇಳಬಹುದು. ಹೀಗೆ ಕಾಯಕ ಮಾಡುವದ ರಿಂದ ಮನ, ಚಿತ್ತ, ಪ್ರಾಣ, ಬುದ್ಧಿ ಶರೀರಗಳು ತಮ್ಮ ಮೊದಲಿನ ತರ್ಕ ಭಾವನೆ ವಾಸನೆ ವಿಚಾರ ತತ್ವಗಳನ್ನು ಬಿಡಲಿಕ್ಕೆ ಹತ್ತುವವು. ಅವುಗಳ ಸ್ಥಾನದಲ್ಲಿ ಹೊಸ ದೈವಿಕ ಪರಲೌಕಿಕ ತರ್ಕ ಭಾವನೆ ವಾಸನೆ ವಿಚಾರ ಚಟಗಳು ಬರಹತ್ತುವವು. ನಿತ್ಯ ಸಾಧನಗಳಿಂದ ಹೀಗೆ ಬದ ಲಾವಣೆಯಾಗಹತ್ತುವದು. ಆಗ ಸಾಧನೆ ಬಲಿತಂತೆ ಮನ, ಚಿತ್ತ, ಪ್ರಾಣ ಬುದ್ಧಿ, ಶರೀರ, ಹೃದಯಗಳೆಲ್ಲವೂ ಶುದ್ಧ ಸಿದ್ಧ ಪ್ರಸಿದ್ಧ, ಪವಿತ್ರ ಶಾಂತ ಆಗಹತ್ತುವವು. ಹೀಗೆ ಆಗುವತನಕ ಸಾಧಕನು ನಿತ್ಯ ಶುದ್ಧನಾಗಿ ಮೇಲೆ ಹೇಳಿದಂತೆ ಹೋರಾಡುತ್ತ ಇರಬೇಕಾಗು ವದು. ಮೊದಲಿನ ಗುಣ, ನಡತೆ, ವಾಸನೆ, ಚಟ ವಿಚಾರಗಳು ಸಹಜ ಹೋಗುವದಿಲ್ಲ. ಮೊದಲಿನಿಂದ ಅವು ಅಲ್ಲಿ ನೆಲೆಯೂರಿ ನಿಂತವುಗಳಿ ರುವವು. ಕಾರಣ ಅವುಗಳ ಕೂಡ ನಿತ್ಯ ಹೋರಾಡಿ ಹೊರದೂಡಬೇ ಕಾಗುವದು ಆಗ ಮಾತ್ರ ಸಾಧಕನು ಸಂಪೂರ್ಣ ಸಮರ್ಪಣ ಮಾಡ ಲಿಕ್ಕೆ ಶಕ್ತನಾಗುವನು. ಅನೇಕ ಆಪತ್ತು ಎಡರು ತೊಡರು ಕಷ್ಟ ಕಾರ್ಪಣ್ಯಗಳು ಸಾಧಕನಿಗೆ ಬರುವವು ಸಹಜ ಮಾಯೆಯು ಸದಾ ತನ ಕಡೆಗೆ ಜಗ್ಗಿ ಸಾಧನದಿಂದ ಹಿಂದೆಗೆಯುವಂತೆ ಮಾಡುತ್ತಲೇ ಇರುವಳು ಆದರೂ ಅಂಜುವ ಕಾರಣವಿಲ್ಲ. ಶಿವಶಕ್ತಿಯರಿಗೆ ಸಂಪೂರ್ಣ ಶರಣಾಗತನಾಗಲು ಯತ್ನಿಸಿದರೆ ಆದರೆ ಈ ಎಲ್ಲ ಎಡರು ತೊಡರಿನಿಂದ ಬಿಡುಗಡೆ ಮಾಡುವರು.

ನಮ್ಮಲ್ಲಿಯ ಪ್ರತಿ ರೋಮ ರೋಮ ಅಣುರೇಣು ಸಹ ಪರ ಮಾತ್ಮನ ವಾಸಕ್ಕೆ ಯೋಗ್ಯವನ್ನಾಗಿ ಮಾಡಬೇಕು. ಶರೀರದಲ್ಲಿ ಪ್ರತಿ ಯೊಂದು ಭಾಗವು ಶುದ್ಧವಾಗಬೇಕಾದರೆ ಕಾಯಾ ವಾಚಾ ಮನಸಾ ಪ್ರಾಮಾಣಿಕರಾಗಬೇಕು. ಪರಮಾತ್ಮನ ಕಣ್ಣು ತಪ್ಪಿಸಿ ನಾವು ಏನೂ ಮಾಡಲಾರೆವು. ಅದಕ್ಕೆ ಜಾಗ್ರ ಸ್ವಪ್ನ ಸುಷುಪ್ತಿಗಳಲ್ಲಿ ಸಹ ಕಾಯಾ ವಾಚಾ ಮನಸಾ ಪ್ರಾಮಾಣಿಕರಾಗಬೇಕು. ವಂಚನೆ ಮೋಸ ಎಳ್ಳಷ್ಟು ನಡೆಯದು. ಈ ಶರೀರದ ಭಾಗಗಳೆಲ್ಲ ಪರಮಾತ್ಮನ ಕಡೆಗೆ ಸ್ವಾಭಾ ವಿಕವಾಗಿ ಸಹಜ ಒಲಿಯಬೇಕು. ವಿಷಯಗಳನ್ನು ಎಳ್ಳಷ್ಟೂ ಎಂದೂ ಬಯಸಬಾರದು ಆಂದಾಗ ನಮ್ಮಲ್ಲಿಯ ಸುಪ್ತ ಶಕ್ತಿಗಳು ಜಾಗ್ರತ

ವಿರುವವು. ಬರೀ ಬಾಯಿಯಿಂದ ಬ್ರಹ್ಮ ನುಡಿದರೆ ಏನೂ ಆಗುವ ದಿಲ್ಲ. ಗ್ರಂಥಗಳಲ್ಲಿ ಓದಿದರೆ ಅದು ಸಿಗುವದಿಲ್ಲ. ಕೈ ಬಾಯಿ ಕಚ್ಚಿ ಗಳು ಸರಿ ಇದ್ದರೆ ಮಾತ್ರ ಅದೆಲ್ಲ ತಾನೇ ಸಾಧಿಸುವದು. ನುಡಿ ನಡೆ ಚನ್ನಾಗಿದ್ದು ಒಳ್ಳೇ ಶೀಲ ಸಂಪನ್ನನಿರಬೇಕೆಂದು ಇದು ಹೇಳುವದು. ಇವುಗಳನ್ನು ಸರಿಯಾಗಿ ಸಮತೋಲದಲ್ಲಿ ತರುವಸಲುವಾಗಿ ಸಾಧಕನು ಮೇಲಿನಂತೆ ಸಾಧನೆ ಮಾಡಬೇಕಾಗುವದು. ಸಾಧನೆ ಇಲ್ಲದೆ ಎಂದೂ ಸಿದ್ಧಿ ಲಭಿಸುವದೇ ಇಲ್ಲ. ಅದಕ್ಕೆ ಕ್ರಿಯಾಮೂಲಕ ಆತ್ಮವಿದ್ಯೆ ಎಂದು ಇವರು ಸಾರಿರುವರು. ಹೀಗೆ ದೇವತ್ವವನ್ನು ನಮ್ಮಲ್ಲಿ ಸಂಪೂರ್ಣ ಅಳ ವಡಿಸಿಕೊಳ್ಳಬೇಕಾದರೆ ನಾವು ಸತ್ಯ, ಶುದ್ಧ, ನಿತ್ಯ, ನಿಷ್ಕಾಮ ಕಾಯ ಕವನ್ನು ದೇವರ ಧ್ಯಾನ ಜಪಗಳೊಂದಿಗೆ ಅಹಂಕಾರ ರಹಿತರಾಗಿ, ಮಮಕಾರವಿಲ್ಲದೆ, ದೇವರಿಗೆ ಸಂಪೂರ್ಣ ಶರಣಾಗತರಾಗಿ, ಕಾರ್ಯ ಮಾಡುವದೇ ಮುಖ್ಯ ಸಾಧನವಾಗಿದೆ. ಕಾರ್ಯಕ್ಕೆ ಶಕ್ತಿಬೇಕು. ಧನವೂ ಬೇಕು; ಮನವೂ ಬೇಕು; ತನವೂ ಬೇಕು; ಬುದ್ಧಿಯೂ ಬೇಕು. ಸಕಲವೂ ಇದ್ದರೆ ಮಾತ್ರ ಕಾರ್ಯ ಒಳ್ಳೇ ಪವಿತ್ರತರದ್ದಾಗುವದು. ಆದರೆ ಎಲ್ಲದರಲ್ಲಿ ಒಳ್ಳೇ ನಿರ್ಲಿಪ್ತರಾಗಿ ಸಮಭಾವದಿಂದ, ಶಾಂತತೆ ಯಿಂದ ಯೋಗಮುಕ್ತರಾಗಿ ಕಾರ್ಯ ಮಾಡಬೇಕು. ತನ್ನ ಸ್ವಾರ್ಥ ಕ್ಕಾಗಿ ಕಾರ್ಯ ಮಾಡಕೂಡದು. ತನಗಾಗಿ ಕಾರ್ಯ ಮಾಡಕೂಡದು. ದೇವನಿಗಾಗಿ ದೇವನ ಮಕ್ಕಳಿಗಾಗಿ ಈ ಭೂಮಿಯಲ್ಲಿ ಕಲ್ಯಾಣ ರಾಜ್ಯ ಕಟ್ಟಲು ಕರ್ಮ ಮಾಡಬೇಕು. ಇದೇ ಸಾಧಕನ ಗುರಿಯಾಗಬೇಕು.

ಸಾಧಕನು ಈ ಸಾಧನಗಳನ್ನು ಮಾಡಿ ತೀವ್ರ ಫಲಗಳನ್ನು ಕಾಣಬೇಕೆಂದು ಬಯಸುವನು. ಅದೂ ಕೂಡ ಬಹು ತಪ್ಪು ಪದ್ಧತಿ. ಸಾಧನಗಳನ್ನೂ ಸಹ ನಿಷ್ಕಾಮವಾಗಿಯೇ ಮಾಡಬೇಕು. ಎಲ್ಲಕಡೆಗೂ ನಿಷ್ಕಾಮವಾಗಿ ಫಲಾಸಕ್ತಿ ಇಲ್ಲದೆ ಎಲ್ಲವನ್ನೂ ಮಾಡುವದೇ ಸಾಧಕನ ಮುಖ್ಯ ಕರ್ತವ್ಯವಾಗಿದೆ. ಅಹಂಕಾರ ಬಂದು ಇಣಿಕಿ ಹಾಕುವದ ರಿಂದ ಫಲದ ಆಶೆ ಏಳುತ್ತದೆ; ಹೊರತು ಅಹಂಕಾರ ರಹಿತನಾಗಿ ಮಾಡಿದರೆ ಅಲ್ಲಿ ಯಾವ ತರದ ಆಶೆ ವಾಸನೆಗಳು ಹುಟ್ಟುವದಿಲ್ಲ. ಸಾಧನದಲ್ಲಿ ಫಲಾಪೇಕ್ಷೆಯಾದರೆ ಅಲ್ಲಿ ಅಹಂಕಾರ ಬಂದಿದೆ ಎಂದು ಕೂಡಲೇ ತಿಳಿಯತಕ್ಕದ್ದು. ಕಾರಣ ಬಹು ಜಾಗರೂಕತೆಯಿಂದ ಸಾಧನ ಮಾಡಿ ಅಹಂಕಾರ ಮಮಕಾರ ಬರದಂತೆ ನೋಡಿಕೊಳ್ಳುವದೇ ಸಾಧಕನ ಮುಖ್ಯ

ಕರ್ತವ್ಯವಾಗಿದೆ. ಸರ್ವ ಸಮರ್ಪಣೆಯೇ ಎರಡನೇ ಕೆಲಸ. ದೇವರ ಕೈಯೊಳಗಿನ ಗೊಂಬೆಯಂತೆ ಕೆಲಸ ಮಾಡುವದೇ ಮೂರನೇ ಕೆಲಸ. ಈ ಮೂರರ ನೆರವಿನಿಂದ ನಿಷ್ಕಾಮ ಕರ್ಮ ಮಾಡಿದರೆ ಎಲ್ಲವೂ ತಾನೇ ಸಾಧಿಸುವದು. ಈ ಪ್ರಕಾರ ಕರ್ಮ ಮಾಡಿ ದಾಸೋಹ ಮಾಡಬೇಕಾಗುವದು.— "ಇಷ್ಟಲಿಂಗ ಗುರುವಿನ ಹಂಗು ಚಿತ್ಕಾಮ್ಯದ ಹಂಗು, ಪೂಜೆ ಪುಣ್ಯ ಮಹಾದೇವನ ಹಂಗು, ಎನ್ನ ದಾಸೋಹ ಆರ ಹಂಗೂ ಇಲ್ಲ. ಚನ್ನ ಬಸವಣ್ಣ ಪ್ರಿಯ ಚಂದೇಶ್ವರ ಲಿಂಗವೇ ಕಣ್ಣಿಯ ಮಾಡ ಬಲ್ಲರೆ ಬಾ ಎನ್ನ ತಂದೆ." ಈ ಪ್ರಕಾರ ನುಡಿಯ ಚಂದಯ್ಯನು ದುಡಿದು ದಾಸೋಹವನ್ನು ಒಳ್ಳೇ ನಿಷ್ಕಾಮವಾಗಿ ಮಾಡುತ್ತಿದ್ದನು. ದೇವರಿಗೆ ಸಹ ಭಿಡೆ ಮುರವತ್ತು ತೋರಿಸದೆ ಕಣ್ಣಿಯ ಮಾಡ ಬಾ ಎಂದು ಕರೆದಿರುವನು. ಸತ್ಯ ಶರಣರಿಗೆ ಯಾರದೂ ಭಯವಿಲ್ಲ. ಸುಳ್ಳಿದ್ದರೆ ಭಯವಿಲ್ಲವೇನು ?

ಈ ಪ್ರಕಾರ ಕಾಯಕ ಮಾಡಿ ಯಾರ ಹಂಗು ಇಲ್ಲದೆ ಪರಿಪೂರ್ಣ ಯೋಗಿಯಾಗದೆ ಇಲ್ಲದ್ದೆನ್ನು ಮಾಡ ಹೋಗುವರು.—

> ಆರುವನೊಲ್ಲೆಂದು ಅರಣ್ಯಕ್ಕೆ ಹೋಗುವದು ದುರುಳತನ,
> ಊರೊಳಗಿದ್ದೋಡೆ ಜನರ ಹಂಗು, ಅರಣ್ಯದೊಳಗಿದ್ದೋಡೆ
> ತರುಗಳ ಹಂಗು, ಬಂದ ಪದಾರ್ಥವ ಲಿಂಗಾರ್ಪಿತ ಮಾಡಿ
> ಕೊಂಬ ಶರಣನೇ ಜಾಣ ಸಕಳೇಶ್ವರ ||

ಈ ಪ್ರಕಾರ ಸಾಧಕನು ಪಂಚಾಚಾರ, ಸಪ್ತಾಚಾರ, ಅಷ್ಟಾವರಣ, ಷಡ್ಲಿಂಗ, ಷಟ್ಸ್ಥಲ, ಮುವತ್ತಾರುಸಲ ಏಕೋತ್ತರದ ಶತಸ್ಥಲ ಮೊದಲಾದವುಗಳಲ್ಲಿ ಹೇಳಿದಂತೆ ಗುರುವಿನ ಕಡೆಯಿಂದ ಉಪದೇಶ, ಮಂತ್ರ, ಲಿಂಗ ತಕ್ಕೊಂಡು ಎಲ್ಲವುಗಳ ಜ್ಞಾನ ಮಾಡಿಕೊಂಡು ಮೇಲೆ ಹೇಳಿದ ಸಾಧನೆಯಂತೆ ಎಲ್ಲವುಗಳನ್ನು ಸಮತೋಲದಲ್ಲಿ ಹೊಂದಾಣಿಕೆಯಾಗುವಂತೆ ಮಾಡಿಕೊಂಡು ನಿತ್ಯ ಲಿಂಗಾರ್ಚನೆ ಸತ್ಕ್ರಿಯಾಚರಣೆ ಸತ್‌ಶೀಲ ಸಂಪನ್ನನಾಗಿ ನಿಷ್ಕಾಮ ಕಾಯಕಗಳನ್ನು ಮಾಡುತ ದಾಸೋಹ ಮೂರ್ತಿಯಾಗಿ ಅಹಂಕಾರ ಮಮಕಾರ ಬಿಟ್ಟು ಸದಾ ನಾಮಜಪ ಧ್ಯಾನಗಳನ್ನು ಮಾಡುತ್ತ ಹೋಗಬೇಕು. ತ್ರಿವಿಧ ದಾಸೋಹಿಯಾಗಬೇಕು. ಅದೇಕೆ ಸರ್ವಸ್ವದ ದಾಸೋಹಿಯಾಗುವದೇ